ಸುವರ್ಣವರ್ಣೋದರಮಧ್ಯಲಗ್ನಾ
ಮನೋಜ್ಞರೋಮಾವಲಿರಿಂದಿರಾಯಾಃ ।
ಜಿಗಾಯ ವಕ್ಷೋಜಕರೀಂದ್ರಕುಂಭ-
ಯುಗಾವತೀರ್ಣಾಂ ಮುದವಾರಿಧಾರಾಮ್ ॥ ೨೧ ॥

ಸದ್ರೋಮಾವಲಿ ನೀಲರತ್ನಲತಿಕಾಂ ತನ್ನಾಭಿವಾಪೀತಟಾ-
ದುದ್ಯಾಂತೀಂ ವಿಲಸತ್‌ಕುಚಾಚಲ ತಟೀದ್ವಂದ್ವಾಂತರಪ್ರಾಪ್ತಯೇ ।
ಮಧ್ಯೇ ವ್ಯೋಮವಶಾತ್ ಅಲಬ್ಧಸರಣಿಂ ಧರ್ತುಂ ವಿಧಾತ್ರಾ ಕೃತಾಂ
ಸ್ನಿಗ್ಧಾಷ್ಟಾಪದಯಷ್ಟಿಮಬ್ಧಿದುಹಿತುರ್ಮಧ್ಯೇ ವಲಿಃ ಸ್ಪರ್ಧತೇ ॥ ೨೨ ॥

ಶ್ರೀಭೂಕಟಾಕ್ಷೋತ್ಪಲಮಬ್ಜಭೂದ್ವಿ-
ರೇಫಾಲಯಾಂಭೋರುಹಮಚ್ಯುತಸ್ಯ ।
ನಾಭಿಹ್ರದಂ ವೃತ್ತಮಗಾಧಮಚ್ಛ
ಶೋಭಾಂಬುಪೂರ್ಣಂ ವಿಶಚಿತ್ತಮೀನ ॥ ೨೩ ॥

ಉದ್ದೀಪ್ತಹಾರಾಂತರರತ್ನಕಾಂತ್ಯಾ
ಹೃದ್ಯಂ ಮನೋಜ್ಞೋದರಬಂಧಬದ್ಧಮ್ ।
ತದ್ವಿಶ್ವಪಿತ್ರೋಸ್ತ್ರಿವಲಿತ್ರಿಕಾಲಂ
ಶರ್ಮಾಣಿ ನಿರ್ಮಾತು ಕೃಶೋದರಂ ನಃ ॥ ೨೪ ॥

ಗರ್ಭಸ್ಥಸರ್ವಭುವನಾವಪಿ ತಾವಿದಾನೀಂ
ಪ್ರದ್ಯುಮ್ನಮುಖ್ಯಜನಕಾವಿತಿ ಸೂಚನಾಯ ।
ವಿಶ್ವೈಕಮಂದಿರಮಪಿ ಸ್ಮ ದಧತ್ತದೀಯಂ
ಮಧ್ಯಂ ಮುದೇ ಭವತು ಮನ್ಮಥಗಾತ್ರಪಾತ್ರಮ್ ॥ ೨೫ ॥

ಸತ್ತರ್ಕಮಾತ್ರಕಲಿತಂ ಸಕಲಾಪವರ್ಗಂ
ಮಧ್ಯಂ ಮುದೇಽಸ್ತು ಮಧುಕೈಟಭಮರ್ದನಸ್ಯ ।
ತದ್ರಮ್ಯನಾಭಿವಿವರಾಭ್ಯುದಿತಾಂಬರಸ್ಯ
ಪದ್ಮೋಪಭೋಗ್ಯ ಪರಿಣಾಮ ಇವೋಪರಿಷ್ಟಾತ್ ॥ ೨೬ ॥

ಲಕ್ಷ್ಮೀಮುಕುಂದತನುವೃತ್ತಮನೋಜ್ಞಮಧ್ಯ-
ಮುದ್ವೀಕ್ಷ್ಯ ಶಿಕ್ಷಿತಧಿಯಃ ಕವಯೋಽಪಿ ಯಸ್ಮಾತ್ ।
ಕಿಂಚಾಸ್ತಿ ನೇತಿ ಖಲು ಸಂದಿಹತೇಽಧುನಾಪಿ
ಸಂದೇಹಸಂಜ್ಞಿತಮಭೂದತ ಏವ ಮಧ್ಯಮ್ ॥ ೨೭ ॥

ಮಧ್ಯಂ ಮನೋಜ್ಞಂ ಮೃದುಲಂ ಸುವೃತ್ತಂ
ಬುದ್ಧೌ ಸದಾ ತಿಷ್ಠತು ಯತ್ಕೃಶತ್ವಮ್ ।
ಉದ್ವೀಕ್ಷ್ಯ ತತ್ಪೂರ್ತಿವಿಧಿತ್ಸಯೇವ
ಪದ್ಮಾ ಕರಾಬ್ಜೇನ ಸದಾಲಿಲಿಂಗೇ ॥ ೨೮ ॥

ವಕ್ಷಃ ಸುರಕ್ಷಾಂ ಕುರುತಾನ್ಮುರಾರೇಃ
ಸದ್ವರ್ಣ್ಯಲಾವಣ್ಯ ಗುಣೈಕಧಾಮ ।
ತತ್ಯಾಜ ಯನ್ನೈವ ಚಿರಂ ಸಪತ್ನೀ
ವಕ್ಷೋಜಲಬ್ಧಾಂಕಮಪಿ ಸ್ಮ ಲಕ್ಷ್ಮೀಃ ॥ ೨೯ ॥

ಆಲಿಂಗಿತಪ್ರಿಯತಮಾಕುಚಕುಂಕುಮಾಂಕ-
ಲಕ್ಷ್ಯಂ ಜಿಗಾಯ ವಸುದೇವಸುತಸ್ಯ ವಕ್ಷಃ ।
ಮತ್ತಸ್ಫುರತ್ಪರಿಣತದ್ವಿಪಧಾತುರಕ್ತ-
ಕುಂಭಾಂಕ ಜೃಂಭಿಹರಿನೀಲ ವಿಶಾಲವಪ್ರಮ್ ॥ ೩೦ ॥

ವಕ್ಷೋ ವಿಶಾಲಂ ಹರಿನೀಲನೀಲಂ
ಲಕ್ಷ್ಮೀಗೃಹಂ ಚಂದನಚರ್ಚಿತಂ ತತ್ ।
ಸತ್ಕೌಸ್ತುಭೋದ್ಭಾಸಕಮಸ್ತು ಚಿತ್ತೇ
ವಿಸ್ತೀರ್ಣಭೂಷಾವಲಿ ವಿಠ್ಠಲಸ್ಯ ॥ ೩೧ ॥

ಸೌವರ್ಣರಮ್ಯಕಲಶೋಪಮಿತಂ ಮನೋಜ್ಞಂ
ವಕ್ಷೋಜಕುಡ್ಮಲಯುಗಂ ಜಯತೀಂದಿರಾಯಾಃ ।
ಯಚ್ಚರ್ಚಿತೋಽಪಿ ನವಕುಂಕುಮರಾಶಿರಾಸೀ-
ದ್ವಕ್ಷೋನುಲೇಪನಮಣೇಃ ಪುರುಷೋತ್ತಮಸ್ಯ ॥ ೩೨ ॥

ಆಚ್ಛಾದಿತೋರಃಸ್ಥಲಮೂಲದೇಶಂ
ಜಾತಸ್ಯ ಯಸ್ಯಾಖಿಲಧರ್ಮಗೋಪ್ತಾ ।
ಶೌರಿಃ ಕರಂ ಯಚ್ಛತಿ ತಂ ರಮಾಯಾ-
ಶ್ಚಾರು ಸ್ತನಂ ವರ್ಣಯಿತುಂ ಕಃ ಈಶಃ ॥ ೩೩ ॥

ಉದ್ಯನ್ಮನೋಜ್ಞಮುಖನಿರ್ಮಲಪೂರ್ಣಚಂದ್ರ-
ಮುದ್ವೀಕ್ಷ್ಯ ಮಂದಹಸಿತಾಮೃತಶೋಭಿಬಿಂಬಮ್ ।
ಬಿಭ್ರತ್‌ಸದಾ ಮುಕುಲಿತಾಂಬುಜಕೋಶಕಾಂತಿಂ
ಪುಷ್ಣಾತು ವಿಶ್ವಜನನೀ ಕುಚಮಂಡಲಂ ನಃ ॥ ೩೪ ॥

ಸದ್ವಂಶಜಾತಃ ಸುಗುಣಃ ಸುವೃತ್ತ-
ರತ್ನೋಽಪಿ ಹಾರಃ ಕಮಲಾಕುಚಾಂತೇ ।
ನೈವಾವಕಾಶಂ ಲಭತೇ ಕುಲೇನ
ಕಿಂ ವಾ ಗುಣೋಘೈಃ ಕಠಿನೋಪಕಂಠೇ ॥ ೩೫ ॥

ಶಾಂರ್ಗಸ್ಯ ಗ್ರಹಣೇ ಮನೋರಮಗುಣಸ್ಯಾಕರ್ಷಣೇ ಸಾಯಕ-
ಸ್ಯಾದಾನೇ ಯುಧಿ ಮಾಧವಸ್ಯ ಫಲಿತಾಃ ಸಂಧಾನಕರ್ಮಣ್ಯಪಿ ।
ಚತ್ವಾರಃ ಕಬರೀಂ ಪ್ರಗೃಹ್ಯ ಕಮಲಾಮಾಲಿಂಗ್ಯ ಗಂಡಸ್ಥಲೀಂ
ಸಂಗೃಹ್ಯಾಧರಜಾಮೃತಂ ಚ ಪಿಬತೋ ಹಸ್ತಾಃ ರಹಃ ಕೇಲಿಷು ॥ ೩೬ ॥

ಹಸ್ತಾಃ ಸ್ಫುರನ್ಮರಕತದ್ಯುತಯೋಽತಿದೀರ್ಘಾಃ
ಕೃಷ್ಣಸ್ಯ ರಮ್ಯನಖಮೌಕ್ತಿಕ ಶೋಭಮಾನಾಃ ।
ಯಚ್ಛಂತು ನಃ ಫಲಿತಪುಷ್ಪಿತಪಾರಿಜಾತ-
ಶಾಖಾಸಮಾನವಿಭವಾ ವಿಭವೋಽಖಿಲಾರ್ಥಾನ್ ॥ ೩೭ ॥

ಚಕ್ರಂ ಹರೇರ್ಮರ್ದಿತದೈತ್ಯಚಕ್ರಂ
ಶಂಖಃ ಸ್ವನೈರ್ಧಿಕ್ಕೃತದೈತ್ಯಶಂಖಃ ।
ಪದ್ಮಂ ಚ ವಿಧ್ವಸ್ತಪರಾಸ್ಯ ಪದ್ಮಂ
ಗದಾ ಚ ಸಾ ಪಾಪಗದಾಪಹಂತ್ರೀ ॥ ೩೮ ॥

ದ್ವಿಷಾಮಸಹ್ಯೋಽಪಿ ನಿಜಪ್ರಹರ್ಷ-
ಕರೋಽಸ್ಯ ಖಡ್ಗಃ ಕಿಲ ನಂದಕಾಖ್ಯಃ ।
ವಿಯುಕ್ತನಾರೀಪರಿತಾಪಕಾರೀ
ಕಿಮಿಂದುರಾನಂದಕರೋ ನ ಲೋಕೇ ॥ ೩೯ ॥

ಶರೈರಪಾರೈರಿಪುವರ್ಗದೈನ್ಯ
ಕರೋಽಸ್ಯ ಚಾಪಸ್ತ್ರಿನತೋ ಮುರಾರೇಃ ।
ತಥಾಪಿ ಸದ್ವಂಶಭವಾ ಗುಣಾಢ್ಯಾ
ನತಾ ಸಮರ್ಥಾ ಅಪಿ ಸರ್ವಸಂಧೌ ॥ ೪೦ ॥

ಹಸ್ತಾಃ ಹರೇಃ ಕಟಕಕಂಕಣಮುದ್ರಿಕಾದ್ಯೈಃ
ದೀಪ್ತಾಃ ಸುದರ್ಶನಗದಾಂಬುಜಶಂಖಶೋಭಾಃ ।
ವೃತ್ತಾಸ್ತ್ರಿರೇಖಮಣಿಬಂಧರುಚೋಽತಿದೀರ್ಘಾಃ
ರಕ್ತಾಬ್ಜಕೋಮಲತಲಾ ಮಮ ಮಾನಸೇ ಸ್ಯುಃ ॥ ೪೧ ॥

ಭೈಷ್ಮ್ಯಾಃ ಕ್ವಣತ್ಕನಕ ಕಂಕಣರಂಜಿತೋ ಮೇ
ಹಸ್ತಃ ಸಮಸ್ತಫಲದಸ್ತನುತಾದಭೀಷ್ಟಮ್ ।
ಯೇನಾನಿಶಂ ರಹಸಿ ಬಂಧಮುಪೇಕ್ಷಮಾಣಃ
ಶ್ರೀಶೋಽಖಿಲಂ ಹರತಿ ಪೂರ್ಣಮನೋರಥೋಽಪಿ ॥ ೪೨ ॥

ವೃತ್ತೇ ತ್ರಿರೇಖೇ ರತ್ನೌಘದೀಪ್ತೇ ಶ್ರೀಶ್ರೀಶಕಂಧರೇ ।
ವಿಷ್ವಕ್‌ಸ್ರವದ್ರತ್ನಚಿತ್ರೌ ಜಿಗ್ಯತುಃ ಶಂಖಶೇವಧೀ ॥ ೪೩ ॥

ರತ್ನೌಘರಮ್ಯೇಣ ಪರಿಶ್ರಿತೇನ
ಚಿರೇಣ ದೀಪ್ತಂ ನಿಜಭೂಷಣೇನ ।
ವೃತ್ತಂ ತ್ರಿರೇಖಂ ವರಹಾರಜುಷ್ಟಂ
ನಿತ್ಯಂ ಸ್ಮರ ಶ್ರೀರಮಣಸ್ಯ ಕಂಠಮ್ ॥ ೪೪ ॥

ಸನ್ನೀಲೋತ್ಪಲ ಚಾರುಚಂಪಕಲಸಜ್ಜಾತಿಸ್ಫುರನ್ಮಲ್ಲಿಕಾ-
ರಕ್ತಾಶೋಕಮೃದುಪ್ರಸೂನರಚಿತಾ ರಮ್ಯಾಬ್ಜರಾಜನ್ಮುಖೀ ।
ಮುಕ್ತಾ ನೀಲಮಣಿಪ್ರವಾಲವಿಲಸನ್ಮಾಣಿಕ್ಯ ಹೇಮೋಜ್ವಲಾ
ಭರ್ತ್ರಂಸಾರ್ಪಿತರುಗ್ಮಿಣೀ ಕರತಲೇವಾಭಾತಿ ಮಾಲಾ ವಿಭೋಃ ॥ ೪೫ ॥

ಬಂಧೋಜ್ಝಿತಾಯಾ ಅಪಿ ಸಿಂಧುಪುತ್ರ್ಯಾಃ
ಮಾಂಗಲ್ಯಸೂತ್ರಂ ಕಿಲ ನಿತ್ಯಬದ್ಧಮ್ ।
ಮುಗ್ಧಾಬಲಾಮೋಹನಕಂಠಯೋಗೇ
ಮೋಕ್ಷೋಪ್ಯನಾಕಾಂಕ್ಷಿತ ಏವ ನೂನಮ್ ॥ ೪೬ ॥

ಸನ್ನೀಲರತ್ನರುಚಿರಂ ಸತತಂ ಶ್ರಿಯೈ ಸ್ಯಾತ್
ಮಾಂಗಲ್ಯಸೂತ್ರಮಿಹ ಮಂಗಲ ದೇವತಾಯಾಃ ।
ಯತ್ ಕಂಠದೇಶ ಧೃತಮಬ್ಜದಲಾಯತಾಕ್ಷ್ಯಾಃ
ನ ಪ್ರಾಕ್‌ವ್ಯಯುಂಕ್ತ ನ ವಿಯೋಕ್ಷ್ಯತಿ ನೋ ವಿಯುಂಕ್ತೇ ॥ ೪೭ ॥

ದೂರೇ ವಿಧೂಯ ಹರಿಣಂ ಸುಭಗಂ ತದೀಯ-
ನೇತ್ರಂ ಸ್ವಬಿಂಬಖಚಿತಂ ವಿತನೋತು ಚಂದ್ರಃ ।
ಸಾಮ್ಯಂ ತಥಾಪಿ ನ ಸಮೇತಿ ಶುಚಿಸ್ಮಿತಸ್ಯ
ಲೋಲಾಲಕಸ್ಯ ಕಮಲಾಚ್ಯುತಸನ್ಮುಖಸ್ಯ ॥ ೪೮ ॥

ಮಾಣಿಕ್ಯಸಂಶೋಭಿಮುಖಂ ಸದಾಂತಃ
ಶಾಣಾಗಮೋದ್ಭಾಸಿತಮೌಕ್ತಿಕಾಢ್ಯಮ್ ।

ಮಾನಾರ್ಹನೀಲೋತ್ಪಲಸತ್ಕರಂಡಂ
ಶ್ರೀನಾಥಗಂಡದ್ವಯಮಾಜಿಗಾಯ ॥ ೪೯ ॥

ಚಂದ್ರೋಪಮಂ ಶ್ರೀರಮಣಸ್ಯ ಸೌಖ್ಯ-
ಸಂದೋಹದಂ ರಂಜಿತಮೋಷ್ಠಭಾಸಾ ।
ಸೌಂದರ್ಯದುಗ್ಧಾಂಬುಧಿಫೇನಕಲ್ಪಂ
ಮಂದಸ್ಮಿತಂ ಮಂದಯತಾದಘಂ ನಃ ॥ ೫೦ ॥

ಸ್ವಚ್ಛಾ ಮೃದುಸ್ಮಿತದಶಾಕಲಿತೈಕದೇಶಾ
ಲಕ್ಷ್ಮೀಕಪೋಲಲಲಿತಕ್ಷತಹೇತುಭೂತಾ ।
ಸತ್ಕುಂದಕುಡ್ಮಲಸಮಾ ನಿಬಿಡಾ ಮಮಾಂತಃ
ಕೃಷ್ಣಸ್ಯ ರಮ್ಯರದನಾವಲಿರಾವಿರಸ್ತು ॥ ೫೧ ॥

ಸನ್ಮಾನ್ಯಲಾವಣ್ಯ ಮರಂದಸಾಂದ್ರ-
ಮಮ್ಲಾನಸಚ್ಚಂಪಕಸಂಪದಂತಃ ।
ಮನ್ಮಾನಸೇ ಸ್ಯಾಲ್ಲಸದುನ್ನತಾಗ್ರಂ
ಸೌಮ್ಯಸ್ಯ ನಾಸಾಪುಟಮಚ್ಯುತಸ್ಯ ॥ ೫೨ ॥

ವ್ಯಕ್ತಾತಿಕೋಮಲಮನೋರಮವರ್ಣಪೂರ್ಣಂ
ಶ್ರುತ್ಯರ್ಥವೃತ್ತಿಮಧುರಸ್ವರಮತ್ಯಗಾಧಮ್ ।
ಸತ್ಕ್ಲೇಶದುರ್ವಿಷಶಮೇಽಮೃತವರ್ಷಕಲ್ಪಂ
ತತ್ತ್ವಂ ನಿಜಂ ಹರಿವಚಃ ಪರಿಬೋಧಯೇನ್ಮಾಮ್ ॥ ೫೩ ॥

ನಾನಾವಿಧಾನುಪಮರತ್ನವಿಚಿತ್ರಿತಾಭ್ಯಾಂ
ಮೀನೋಪಮೋಜ್ವಲಹಿರಣ್ಮಯಕುಂಡಲಾಭ್ಯಾಮ್ ।
ಶ್ರೀನಾಥಕರ್ಣಯುಗಲಂ ಸುಭಗಂ ಭವಾರ್ತ್ಯಾ
ದೀನಸ್ಯ ಮೇ ಗಿರಮಿಮಾಂ ಶೃಣುಯಾಚ್ಚ್ರಿತಸ್ಯ ॥ ೫೪ ॥

ಅಂಭೋಜಕೋಮಲವಿಶಾಲಸುದೀರ್ಘಪತ್ರ
ಸಂಭಾಸಮಾನಮಲಿರಾಜದಧೀರತಾರಮ್ ।
ಶಂಭುಪ್ರಭೃತ್ಯಮರವಾಂಛಿತವಲ್ಗುವೀಕ್ಷಂ
ಜೃಂಭನ್ಮುಕುಂದನಯನಂ ಮುಹುರೀಕ್ಷತಾನ್ಮಾಮ್ ॥ ೫೫ ॥

ವಕ್ರಾಲಕಂ ಮಣಿಮಯೋಜ್ವಲಪಟ್ಟಬಂಧಂ
ಕಸ್ತೂರಿಕಾತಿಲಕಭೂಷಿತಮಚ್ಯುತಸ್ಯ ।

ವಿಸ್ತೀರ್ಣಮೀಷದುದಿತಾಲಿಕಯುಗ್ಮಮಿಷ್ಟಂ
ಅಸ್ಮಾಕಫಾಲಲಿಖಿತಂ ಕುರುತಾಲ್ಲಲಾಟಮ್ ॥ ೫೬ ॥

ಶ್ಯಾಮಂ ತ್ರಿವಕ್ರಂ ವಿಧಿಮುಖ್ಯದೇವ-
ಸಾಮ್ರಾಜ್ಯವಿಶ್ರಾಣನಹೇತುಲೀಲಮ್ ।
ಕಾಮಾಗ್ರ್ಯಚಾಪಾಕೃತಿಕಾಮತಾತ
ಭ್ರೂಮಂಡಲಂ ಖಂಡಯತಾದಘಂ ನಃ ॥ ೫೭ ॥

ಸ ಭವತು ಯಶಸೇ ಪ್ರವಾಲಕಾಂತಿ-
ರ್ಮೃದುಲತರಃ ಸರಸೋಽಧರೋ ಮುರಾರೇಃ ।
ಯದುದಿತರಸಲುಬ್ಧಧೀರವಾಪ್ತ್ಸೀದುರಪಿ
ರಮಾಽನನ ಪದ್ಮಚುಂಬಿವೇಣೌ ॥ ೫೮ ॥

ಸಂಪಕ್ವಬಿಂಬಸಮರಮ್ಯತಮಾಧರೋಷ್ಠಃ
ಸತ್‌ಸಂಪದೇ ಭವತು ಸಾತ್ವತರಾಜರಾಜ್ಞ್ಯಾಃ ।
ಯತ್‌ಸಂಭವಾಮೃತಕಣೇನ ಫಣೇಂದ್ರತಲ್ಪ
ಕೃಷ್ಣಃ ಸ ನಿತ್ಯಮಜರಾಮರಣೋ ಬಭೂವ ॥ ೫೯ ॥

ಸೌವರ್ಣರಮ್ಯಫಲಕೋಪಮಿತಃ ಕಪೋಲಃ
ಸೌಭಾಗ್ಯದೋ ಭವತು ರಂಜಿತಕುಂಡಲಶ್ರೀಃ ।
ಯಚ್ಚುಂಬನಂ ವಿರಚಯನ್ವಿಗತಾನ್ಯತೃಷ್ಣಃ
ಕೃಷ್ಣೋ ಬಭೂವ ಸರಸಃ ಕಿಲ ನಿತ್ಯತೃಪ್ತಃ ॥ ೬೦ ॥

ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಷ್ಟಾದಶಃ ॥ ೬೧ ॥

॥ ಇತಿ ಅಷ್ಟಾದಶಃ ಸರ್ಗಃ ॥

## ॥ ಅಥ ಏಕೋನವಿಂಶಃ ಸರ್ಗಃ ॥

ದಂತಕ್ಷತೈಃ ಕೃತಪದಂ ಪ್ರವಿಭಾತಿ ದೇವ್ಯಾ
ಗಂಡಸ್ಥಲಂ ಪ್ರಿಯವಶೀಕರಣೋಚಿತಸ್ಯ ।
ಮುಷ್ಣತ್ಪ್ರಭಂ ಕನಕಯಂತ್ರವರಸ್ಯ ವಶ್ಯ
ಕರ್ಮಾರ್ಹರಕ್ತರಸತೋ ರಚಿತಾಕ್ಷರಸ್ಯ ॥ ೧ ॥

ಅಂತರ್ನಿಗೂಢಕನಕಾಂಕುರಿತಾನನೋಽಪಿ–
ನಾಸಾವಿಭೂಷಣಮಣಿರ್ಮುರವೈರಿಪತ್ನ್ಯಾಃ ।
ಮುಕ್ತಾಮಯಃ ಕಿಲ ಮನೋಜ್ಞವಧೂಸುಧಾರ್ದ್ರ–
ಬಿಂಬೋಷ್ಠಚುಂಬಿ ವದನಸ್ಯ ಸದಾಮಯಃ ಕ್ವ ॥ ೨ ॥

ಮುಕ್ತಾತ್ಮಕೋಽಪಿ ಮೃದುಲೋಷ್ಠಪುಟಾನುಷಕ್ತ
ನಿತ್ಯಂ ಯದುಲ್ಲಸದಪಾಂಗಶರೇಣ ಭಿನ್ನಃ ।
ನಾಸಾ ವಿಭೂಷಣಮಣಿಃ ಪರಿಲಂಬತೇ ಸ್ಯಾಃ
ದೇವ್ಯಾಃ ಕಿಮಚ್ಯುತ ವಶೀಕರಣೇ ಪ್ರಯಾಸಃ ॥ ೩ ॥

ನಾಸಾಖ್ಯಚಂಪಕಭಿಯಾ ಚಲಿತಸ್ಯ ನೇತ್ರ–
ಚಾರ್ವಂಬುಜಾರ್ಪಿತಹೃದಾ ಚ ಸಮುತ್ಸುಕಸ್ಯ ।
ಭೃಂಗಸ್ಯ ಸಂಪದಮಧೀರಜವಸ್ಯ ಮುಷ್ಣನ್
ಲಕ್ಷ್ಮೀಂ ತನೋತು ಯದುಪುಂಗವರಾಜ್ಞ್ಯಪಾಂಗಃ ॥ ೪ ॥

ಸ್ವರ್ಣಾಂಗೀ ವರನೀಲರತ್ನಸದೃಶಾಪಾಂಗೀ ಪ್ರವಾಲೋಲ್ಲಸತ್–
ಪಾದಾ ಯಾ ಸ್ಮಿತಮೌಕ್ತಿಕಾ ಮರಕತಸ್ಕಂಧಾಭನೀಲಾ ಜಟಾ ।
ವೈಡೂರ್ಯಾಗ್ರ್ಯನಖಾ ನಖಕ್ಷತಲಸನ್ಮಾಣಿಕ್ಯಪುಷ್ಪೋಷ್ಠಸತ್
ಗೋಮೇದಾ ರದವಜ್ರರುಕ್ಸುರತರುಂ ನಾಸ್ಯೈ ದದೌ ಶ್ರೀಪತಿಃ ॥ ೫ ॥

ಕಾರ್ಶ್ಯಂ ಕಾಯೇ ಮನೋಜ್ಞೇ ಕಚಭರಕರಯೋರ್ಲಂಬಮಾನತ್ವದೈರ್ಘ್ಯೇ
ಚಕ್ಷುರ್ಮಧ್ಯೋರುದೇಶೇಷ್ವಧಿಕಚಪಲತಾ ದೃಶ್ಯತಾ ಮಾರ್ದವಾನಿ ।

ತತ್ತೇ ತಾನಿ ಕ್ರಮೇಣ ದ್ವಿರದಪರಿಲಸತ್ಕುಂಭ ಶೋಭಾಪಹಾರಿ-
ಣ್ಯಸ್ತಿ ಸ್ತಃ ಸಂತಿ ಲಕ್ಷ್ಮ್ಯಾಃ ಕುಚಕಲಶತಟೇ ನಾಸ್ತಿ ನಸ್ತೋ ನ ಸಂತಿ ॥ ೬ ॥

ಭ್ರೂಮಧ್ಯಲಗ್ನ ಮೃಗನಾಭಿಲಲಾಮರೇಖಾ
ಶ್ರೀಶ್ರೀಶಯೋರನುಕರೋತಿ ಹಿ ನೀಲನೀಲಾ ।
ಶಾಣೋಪಲೋಪರಿಗತಂ ರಣಧೀರಮಾರ-
ಚಾಪಾನುಷಕ್ತಮಸಿತೋತ್ಪಲಚಾರು ಬಾಣಮ್ ॥ ೭ ॥

ನಿತ್ಯಂ ಪರಸ್ಪರ ಮನೋರಮಗಾತ್ರಸಂಗಾತ್
ಮತ್ತಾಲಿರಕ್ತಸರಸೀರುಹಕಾಂತಿಮಂತೌ ।
ಲಕ್ಷ್ಮೀರಮಾರಮಣಯೋರ್ಜಗದಾದಿಪಿತ್ರೋಃ
ಅಸ್ಮಾಕಮೀಪ್ಸಿತಫಲಂ ಕುರುತಾಂ ಕಟಾಕ್ಷೌ ॥ ೮ ॥

ರಕ್ತಾರಮಾರಾಮಕಟಾಕ್ಷಲಕ್ಷ್ಮೀ-
ರ್ಲಕ್ಷೀಕರೋತ್ವಸ್ಮದಮಿತ್ರವರ್ಗಮ್ ।
ಸೈವಾನುರಕ್ತಾ ವಿಧಿಶರ್ವಪೂರ್ವ-
ಸೌಭಾಗ್ಯದಾತ್ರೀ ಶರಣಾಗತಂ ಮಾಮ್ ॥ ೯ ॥

ಮುಕುಟರವಿಭಿಯಾಽಧೋ ಲಂಬಮಾನಂ ಮುಖೇಂದು-
ಪ್ರವಿಲಸದುರುಭಾಸಾ ಚೋನ್ಮುಖಂ ತನ್ಮುಖಸ್ಥಂ ।
ಕುಟಿಲಮಲಕರಾಶಿಂ ಕರ್ಣನೀಲೋತ್ಪಲಶ್ರೀ-
ಪರಿಹೃತನಿಜದೈನ್ಯಂ ತರ್ಕಯಾಮ್ಯಂಧಕಾರಮ್ ॥ ೧೦ ॥

ಉತ್ತುಂಗನೀಲಚಮರೀಮೃಗಬಾಲಭಾರ-
ಕಲ್ಪಂ ಸ್ಫುರದ್ವಿವಿಧರತ್ನಲಸತ್ಕಿರೀಟಮ್ ।
ಉತ್ಫುಲ್ಲಪುಷ್ಪನಿಕರಾಕರಮುಜ್ವಲಂತಂ
ನಿತ್ಯಂ ಸ್ಮರಾಮಿ ಕಮಲಾಚ್ಯುತ ಮೌಲಿದೇಶಮ್ ॥ ೧೧ ॥

ಇತ್ಥಂ ಜಾಂಬವತೀಮುವಾಹ ಸವಿಭುಃ ಸಲ್ಲಕ್ಷಣಾಂ ಲಕ್ಷಣಾಂ
ಸತ್ಯಾಂ ಸರ್ವಗುಣಾಕರಾಂ ಶಶಿಮುಖೀಂ ನೀಲಾಂ ಚ ನೀಲಾಲಕಾಮ್ ।
ಕಾಲಿಂದೀ ಕಲಕಂಠಕಂಠನಿನದಾಂ ಸ್ವಾಂ ಮಿತ್ರವಿಂದಾಂ ತಥಾ
ಬಾಲಾ ಭೂಮಿಹೃತಾಶ್ಚ ಬಹುಶೋ ದ್ವಾರಾವತೀವಲ್ಲಭಃ ॥ ೧೨ ॥

ಕಸ್ಮಾನ್ಮುಹ್ಯಥ ಮಾನವಾಃ ಮುರಭಿದಃ ಸರ್ವೋತ್ತಮತ್ವೇ ಪುರಾ
ಯಃ ಪದ್ಮಾಸನಧೂರ್ಜಟಿಪ್ರಭೃತಿಭಿಃ ಕಾರ್ಯಾರ್ಕ್ಷಮೈಃ ಪ್ರಾರ್ಥಿತಃ ।
ಗರ್ಭೇ ಗೀರ್ಭಿರಭಿಷ್ಟುತಃ ಫಣಿಫಣೇ ನೃತ್ಯಂಶ್ಚ ಯಃ ಸೇವಿತಃ
ಸದ್ವೇಣುಂ ರಣಯಂಶ್ಚ ನಮ್ರತನುಭಿರ್ಯೋ ವಿಸ್ಮಿತೈಃ ಈಕ್ಷಿತಃ ॥ ೧೩ ॥

ಕೃಷ್ಣಾಯಾಮಪಿ ತೈರ್ನತೈಃ ಪರಿವೃತಂ ದೃಷ್ಟ್ವಾಶ್ವಫಲ್ಕಾತ್ಮಜಃ
ಯಂ ತುಷ್ಟಾವ ಗುಣೈರಬದ್ಧಮಿತರಾನ್ ಬದ್ಧಾನುದೀರ್ಯ ಸ್ಫುಟಮ್ ।
ಸೇವಾತುಷ್ಟಿಹೃದೋಽಪಿ ದೇವನಿಕರಾದಪ್ರಾಪ್ತಮುಕ್ತಿಂ ಪ್ರಭುಃ
ಯಃ ಪ್ರಾದಾನ್ಮುಚುಕುಂದಭೂಮಿಪತಯೇ ತೈರ್ನಿದ್ರಿತಾಯಾಪ್ಯಲಮ್ ॥ ೧೪ ॥

ಯಃ ಕಲ್ಪಾಂಘ್ರಿಪಮಾಹರನ್ ಸುರವರಾನ್ ವ್ಯದ್ರಾವಯತ್ ಸೇಶ್ವರಾನ್
ಯೋ ಭಸ್ಮೀಕೃತಭಸ್ಮದಾನವಪತಿಃ ಶಂಭುಂ ಪುರಾ ಪಾಲಯತ್ ।
ಯೋಗೀಂದ್ರಾದೃತವೈಭವೋ ಭೃಗುಮುನಿರ್ಯಚ್ಛ್ರೈಷ್ಠ್ಯಮಸ್ಪಷ್ಟಯತ್
ತಂ ಭಕ್ತ್ಯಾ ಭಜತಾಜಿತಂ ಮಧುಜಿತಂ ಕೈವಲ್ಯಕಾಮಾಃ ಜನಾ ॥ ೧೫ ॥

ಕೈಲಾಸಯಾತ್ರಾದಿಭಿರೂನಭಾವೋ
ಯದ್ಯಸ್ಯ ತರ್ಹ್ಯೈಕ್ಯವಚೋ ವೃಥಾ ಸ್ಯಾತ್ ।
ಲೀಲೇತಿ ವಾಚ್ಯಂ ಭವತಾ ವಯಂ ತು
ಪೌತ್ರಾಲಯಪ್ರಾಪ್ತಿಮುಪೇಕ್ಷಯಾಮಃ ॥ ೧೬ ॥

ಯುಧಿಷ್ಠಿರಸ್ಯಾಲಯಮೇವ ಗಚ್ಛನ್
ತಥಾ ದ್ವಿಜಾದೀನ್ಯಮಿನಃ ಸಮರ್ಚನ್ ।
ತತೋಽಪಿ ನೀಚಃ ಕಿಮಯಂ ನೃಲೋಕೇ
ನರಾನುಕಾರಾರ್ಥಮಿದಂ ಹಿ ಸರ್ವಮ್ ॥ ೧೭ ॥

ಯದೀಹ ಶಂಕಾ ವಿಪರೀತಭಾವೇ
ತದಾ ನರಾಃ ಸಂತಿ ಕಿಮಾತ್ಮಲೋಕಾತ್ ।
ಪಯೋಬ್ಧಿತೀರಂ ವ್ರಜತೋ ವಿಧಾತುಃ
ಶಿವಸ್ಯ ಚ ಸ್ವಾಲಯತೋ ಗತಸ್ಯ ॥ ೧೮ ॥

ಉಕ್ತಾಃ ಕಿಮರ್ಥಾ ನರದೃಷ್ಟಿಗಮ್ಯಾಃ
ಸ್ವಸ್ಥಾನಸಂಸ್ಥೈಃ ರಚಿತಾಃ ಸಮಸ್ತಾಃ ।
ಅತ್ರಾಪ್ಯದೃಶ್ಯಾ ಕೃತಿಭಿರ್ಮುನೀಂದ್ರ-
ವಿಜ್ಞಾನದೃಷ್ಟೇರಪಿ ದೂರದೂರೈಃ ॥ ೧೯ ॥

ಪುರೋಗ್ರಭಸ್ಮಾಸುರಘಾತಕಾಲೇ ನರಾನುಕಾರಸ್ಯ ಹಿ ಕಾಸ್ತಿ ಯುಕ್ತಿಃ ।
ಮುನೇಶ್ಚ ಸತ್ತತ್ವವಿಚಾರಹೇತೋರ್ಗತಸ್ಯ ಮರ್ತ್ಯಾನುಕೃತಿಃ ಕಿಮರ್ಥಾ ॥ ೨೦ ॥

ಮರ್ತ್ಯಾನುಕಾರೋಽಪಿ ಹಿ ಮರ್ತ್ಯಲೋಕಂ
ಪ್ರಾಪ್ತಸ್ಯ ಯುಕ್ತೋ ನರದೃಷ್ಟಿಮಾರ್ಗೇ ।
ಕೈಲಾಸಶೈಲಂ ಸ್ವಜನಸ್ಯ ಮಧ್ಯೇ
ವಿಜ್ಞಾಪ್ಯ ಕೃಷ್ಣೋಗಮದಾಗಮಚ್ಚ ॥ ೨೧ ॥

ಯದಾ ಸ ಪುತ್ರಂ ನಿಜನಾಭಿಜಾತ-
ಕುಶೇಶಯಾತ್ ಪ್ರಾಗ್ಜನಯಾಂಬಭೂವ ।
ತದಾ ಶಿವಃ ಕುತ್ರ ವರಸ್ಯ ದಾತಾ
ತದೀಯಫಾಲಾಂತರಜನ್ಮಭೂಮಿಃ ॥ ೨೨ ॥

ಯದ್ವಾಹನೀಭೂತಗರುತ್ಮದೋಜೋ
ವಿದ್ರಾವಯಾಮಾಸ ಪಿನಾಕಪಾಣಿಮ್ ।
ತಸ್ಯ ಪ್ರಸಾದಾತ್ಸುತಂ ಜಗಾಮೇ-
ತ್ಯುಕ್ತಿರ್ನ ವಿದ್ವಜ್ಜನಮಾನನೀಯಾ ॥ ೨೩ ॥

ಮದನ್ಯಸೇವ್ಯೈಹಿಕಕಾಮದಾತ್ರೀ-
ತ್ಯುದೀರಯನ್ ಸರ್ವಗುಣಾಗ್ರಗಣ್ಯಃ ।
ಸ್ವಪೌತ್ರಯಾತ್ರಾಂ ವಿರಚಯ್ಯ ಸೂನು-
ಮವಾಪ ಪಾಪೌಘತಮಿಸ್ರಭಾನುಃ ॥ ೨೪ ॥

ಆನಂದಾಂಬುಧಿಮಗ್ನಮೂರ್ತಿರುದಯನ್ನೋದಾಶ್ರುಧಾರಾಜಲಂ
ಭರ್ತ್ರಂಘ್ರೌ ಪ್ರಣಿಧಾಯ ಕಾಯಕನಕಂ ಕೃಷ್ಣಾರ್ಪಿತಂ ಯೋಽತನೋತ್ ।
ಯಾ ತದ್ಗಾತ್ರಹರಿನ್ಮಣಿಂ ಕರವಶಂ ಚಕ್ರೇ ನವಾಪ್ತೋನಯಾ
ಕೋಽಥೋರ್ ಯಾ ಕಮಲಾ ವಿಮುಕ್ತಕಬರೀ ಗರ್ಭೇ ದಧಾರ ಸ್ಮರಮ್ ॥ ೨೫ ॥

ಗರ್ಭಂ ಬಭಾರ ಗಜರಮ್ಯಗತಿಃ ಸ್ವಕಾಂತಾತ್
ಮಧ್ಯೇ ಮನೋಜ್ಞಮದನಾತ್ಮಕಮಬ್ಧಿಪುತ್ರೀ ।
ಹೃದ್ಯಪ್ಯಯೋಗಚಕಿತೇ ಹೃದಯಂಗಮಸ್ಯ
ಮರ್ತ್ಯಾನುಕಾರಿಚರಿತಸ್ಯ ತಮೇವ ತನ್ವೀ ॥ ೨೬ ॥

ಮಾರಂ ಕುಮಾರಂ ಸುಷುವೇಽಥಭೈಷ್ಮೀ
ಶೌರೇರ್ಜಿತಾರೇರನುರೂಪರೂಪಮ್ ।
ಪ್ರಾಚೀನರೋಚಿಃ ಶತಪೂರಿತಾಶಂ
ಪ್ರಾಚಾಂ ಸುವಾಚಾಂ ವಿಷಯಂ ನಿಶೇಶಮ್ ॥ ೨೭ ॥

ಯಃ ಕರ್ಣೇ ನಿಜಚಿಹ್ನಮುನ್ನತಶರಾನ್ ದಂತೋಷ್ಠದೃಗ್ದೋಃ ಪದೇ
ಸ್ವಾಂಗಂ ಮಧ್ಯತನೌ ಭ್ರುವೋರ್ವರಧನುರ್ಮೌರ್ವೀಂ ಅಸತ್ಕುಂತಲೇ ।
ಮಾಲ್ಯೇ ಮಂತ್ರಿಣಮಾನನೇ ಚ ಸುಹೃದಂ ವಾಕ್ಯೇರ್ಪಯಿತ್ವಾ ಶುಕಂ
ತದ್ದಾತ್ರಂ ರಚಯಾಂಬಭೂವ ಸ ಸುತಸ್ತಸ್ಯ ಸ್ಮರೋಽಭೂತ್ಕಿಲ ॥ ೨೮ ॥

ತಾರುಣ್ಯಲಾವಣ್ಯಸುವೀರ್ಯಧೈರ್ಯ-
ಕಾರುಣ್ಯಮುಖ್ಯೈಃ ದ್ರವಿಣೈಃ ಪ್ರಕೃಷ್ಟಃ ।
ಪ್ರದ್ಯುಮ್ನನಾಮಾರ್ಥಮಸೌ ಕುಮಾರಃ
ಪ್ರದ್ಯುಮ್ನಮುಖ್ಯಾಂಶಯುತಃ ಪಿಪರ್ತಿ ॥ ೨೯ ॥

ಸರುಗ್ಮವತ್ಯಾಂ ಕಿಲ ರುಗ್ಮಿಪುತ್ರ್ಯಾಂ
ಹರೇಃ ಸುತೋಽಜೇಜನದಾತ್ಮಜಾತಮ್ ।
ಅಸೂತ ತಂ ಯಾಮಲಹೇಮಕಲ್ಪಂ
ಅಸೌ ಸ್ವನಾಮೋಚಿತಮೇವ ಬಭ್ರೇಃ ॥ ೩೦ ॥

ಸಪತ್ನಸೈನ್ಯೈರನಿರುದ್ಧಮಾಜೌ
ಯಮಾಮನಂತಿ ಹ್ಯನಿರುದ್ಧ ಸಂಜ್ಞಮ್ ।
ಸದಾಶ್ರಿತಾಭೀಪ್ಸಿತವಿತ್ತರಾಶಿ-
ಪ್ರದಾನಕಾಲೇಪ್ಯನಿರುದ್ಧಮನ್ಯೈಃ ॥ ೩೧ ॥

ಉಷಾಭಿಧಾಯಾಂ ಸ ಚ ವಜ್ರಸಂಜ್ಞ-
ಮಜೀಜನದ್ವೈರಿನಗೌಘವಜ್ರಮ್ ।

ತಮಃ ಸಮುನ್ಮೂಲನಮುಜ್ವಲಂ ತಂ
ಉಪಸ್ಯಶೀತಾಂಶುಮಿವೋದಯಾದ್ರಿಃ ॥ ೩೨ ॥

ಯಃ ಪೃಥ್ವೀಪತಿಮೌಲಿರತ್ನಘಟಿತಶ್ರೀಪಾದಪೀಠಃ ಕ್ಷಿತೌ
ಯಃ ಸ್ವರ್ಗೀಶ್ವರಫಾಲಮಂಡನಕರಶ್ರೀಪಾದರೇಣುರ್ದಿವಿ ।
ಯಃ ಶ್ರೇಯಪಥಪಾಂಥಸಜ್ಜನಮನಃ ಪಾಥೇಯಗೇಯೋದಯ
ಸ್ತಸ್ಯ ದ್ವಾರವತೀ ಪುರೀ ಪ್ರಿಯತಮಾ ಸೇಯಂ ಬಭೂವಾಸಮಾ ॥ ೩೩ ॥

ಮಧ್ಯೇ ಸಮುದ್ರಂ ಮಣಿಮಂಜುಮೌಲಿ-
ವಿದ್ಯೋತಿತಾಶಾದಶಕಃ ಸ ದೇವಃ ।
ಅದ್ಯಾಪಿ ಭೈಷ್ಮ್ಯಾಃ ಸಹ ಭಾಸಯಂಸ್ತಾ-
ಮಾದ್ಯಃ ಪುಮಾನಾರ್ಯವೃತಃ ಕಿಲಾಸ್ತೇ ॥ ೩೪ ॥

ಕುಶಸ್ಥಲೀ ಸಾ ಕುಶಲೈಕಗಮ್ಯಾ
ಪ್ರಶಸ್ತಕೀರ್ತೇಃ ಪ್ರಥಿತಾ ಪುರೀಯಮ್ ।
ಶರೀರಿಣಂ ಸರ್ವಪುಮರ್ಥಸಾರ್ಥ-
ಕರೀ ನರೀನರ್ತು ಮದಂತರಂಗೇ ॥ ೩೫ ॥

ವಂದಾರುದ್ವಿಜವರ್ಯವಾಂಛಿತನಿಜಧ್ಯಾನಕ್ಷಮಾ ಶಂಕರಃ
ಸ್ವರ್ವಾಗ್ನಿವ್ರಜವರ್ಣ್ಯದಿಗ್ವಿತತಿಕೃತ್‌ಕರ್ಮೌಘರಾಜತ್ ಕರೀ ।
ರುದ್ರಾಣೀಪತಿ ಮಾನ್ಯರಾಜಿತಗತಿಃ ಸತ್ಯಾಸಹಾಯಃ ಸತಾಂ
ತಾಂ ರೇಮೇ ವರದಃ ಸ್ವಬಂಧುರುಚಿರಾಂ ರಕ್ಷನ್ಪುರೀಮದ್ಭುತಾಮ್ ॥ ೩೬ ॥

ಕೃಷ್ಣಸ್ಯೋದಯವರ್ಣನೈಃ ಸುಚರಿತಸ್ತೋಮಸ್ತವೈಸ್ಸೂಕ್ತಿಭಿಃ
ಸುಶ್ಲೋಕೈಃ ಸುಭಗಾರಸೈಶ್ಚ ವಿವಿಧೈಃ ಸ್ವಾನಂದಸರ್ಗೈರ್ವೃತಾ ।
ದುಷ್ಪಾಗಮ್ಯ ನಿಜಾರ್ಥತೋಷಿತಖಗಾ ಸಾಽಸ್ಯಾಃ ಕೃತೇ ವೈಖರೀಂ
ಬಿಭ್ರಾಣೇವ ವಿಭಾತಿ ವಿಠ್ಠಲಪುರೀ ವಿಷ್ವಕ್ಸುವರ್ಣೋಜ್ಜ್ವಲಾ ॥ ೩೭ ॥

ಯಸ್ಮಿನ್‌ಮಂಗಲದೇವತಾಽಖಿಲಜಗನ್ಮಾತಾ ರಮಾ ನಾಯಿಕಾ
ಪದ್ಮಾಪದ್ಮಭವಾದಿಸೇವ್ಯಚರಣಸ್ತದ್ವಲ್ಲಭೋ ನಾಯಕಃ ।

ಅಶ್ವಗ್ರೀವದಯಾ ಪಯೋಬ್ಧಿಫಲಿತಪ್ರಾಗ್ರ್ಯೋಕ್ತಿರತ್ನೋಜ್ವಲಂ
ತದ್ದಾಸಾನುಗವಾದಿರಾಜರಚಿತಂ ಕಾವ್ಯಂ ವಿಭಾವ್ಯಂ ಬುಧೈಃ ॥ ೩೮ ॥

ಕೃಷ್ಣಃ ಕಾವ್ಯಕೃತೇ ಸ್ವಹಸ್ತಕಮಲಛತ್ರಂ ಪ್ರದದ್ಯಾತ್ ಪ್ರಭುಃ
ಸಚ್ಛಾಸ್ತ್ರಾಭಿಧರಮ್ಯರಾಜ್ಯಪದವೀಂ ಸುಜ್ಞಾನಯಾನಂ ಮುದಾ ।
ಸ್ವಾಂಘ್ರ್ಯಾರಾಧನಕಂಕಣಂ ಕರಯುಗೇ ಕೈಂಕರ್ಯಹಾರಂ ಗತೀ
ಸ್ವಾತ್ಮಾನಂ ಹೃದಿ ನಿತ್ಯಚಿಂತನಧನಂ ಸದ್ಯುಕ್ತಿರತ್ನಾನ್ಯಪಿ ॥ ೩೯ ॥

ಹಂಸಾನಾಂ ಹೃದಯಂಗಮಂ ಕವಿಲಸದ್ಭೃಂಗಾದೃತಂ ಮೌಕ್ತಿಕ-
ಪ್ರಖ್ಯಾಗ್ರ್ಯೋಕ್ತಿನವಂ ಪ್ರಬಂಧಜಲಜಂ ಪಾದೇಽರ್ಪಿತಂ ಸ್ಯಾದ್ಧರೇಃ ।
ಲಕ್ಷ್ಮೀರಮ್ಯಕರೀ ವರಾಮರತತೇಃ ಸನ್ಮಾನಸೇ ಶಾರದಾ-
ನಂದಂ ತತ್ತ್ವವನಃ ಸ್ವಹೃತ್ಕೃತಗುಣಂ ವಿಸ್ತಾರಯತ್ವಂಜಸಾ ॥ ೪೦ ॥

ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸರ್ಗೋಽಭೂತ್ ಸುರಮಂಡಲೀಷು ಸುತರಾಮೇಕೋನವಿಂಶೋ ಮುದಾಮ್ ॥ ೪೧ ॥

॥ ಇತಿ ಏಕೋನವಿಂಶಃ ಸರ್ಗಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ತ್ರಯೋದಶಃ ಸರ್ಗಃ

ನಿಜಾಗಮಾಶಾಧೃತಜೀವನಾನಾಂ
ವ್ರಜಾಂಗನಾನಾಂ ಹೃದಿ ಖೇದಶಂಕೀ ।
ಇಮಾಂ ಸ್ಥಿತಿಂ ಸ್ವಸ್ಯ ನಿಶಮ್ಯ ರಮ್ಯಾಂ
ಸ್ವಸೂನುತಾ ಶಾಪಗಮಾಚ್ಚ ಪಿತ್ರೋಃ ॥ ೧ ॥

ವ್ರಜಂ ವ್ರಜೇತ್ಯಾದಿಶದುದ್ಧವಂ ಸ್ವಂ
ವ್ರಜೇಶ್ವರೋಥಾತ್ಮ ವಿಯೋಗವಹ್ನೇಃ ।
ಪ್ರತಪ್ತಮುಜ್ಜೀವಯಿತುಂ ಸ್ವವರ್ಗಂ
ಸುಖಾರ್ಥಸಂದೇಶಸುಧಾ ಪ್ರವಾಹೈಃ ॥ ೨ ॥

ಅಥ=ಅನಂತರ; ವ್ರಜ=ಗೋಕುಲಕ್ಕೆ; ಈಶ್ವರಃ=ಒಡೆಯನಾದ ಕೃಷ್ಣನು; ನಿಜ=ತನ್ನ; ಆಗಮ=ಬರುವಿಕೆಯ; ಆಶಾ=ಆಸೆಯಿಂದ; ಧೃತ=ಧರಿಸಿದ; ಜೀವನಾನಾಂ=ಜೀವವುಳ್ಳ; ವ್ರಜ=ಗೋಕುಲದ; ಅಂಗನಾನಾಂ=ನಾರಿಯರ; ಸ್ವಸ್ಯ=ತನ್ನ; ರಮ್ಯಾಂ=ಚಂದದ; ಇಮಾಂ=ಈ; ಸ್ಥಿತಿಂ=ಅವಸ್ಥೆಯನ್ನು; ನಿಶಮ್ಯ=ನೋಡಿ; ಸ್ವ=ತನ್ನ; ಸೂನುತಾ=ಮಗನ; ಆಶಾ=ಆಸೆಯ; ಅಪಗಮಾತ್=ಹೋದದ್ದರಿಂದ; ಪಿತ್ರೋಶ್ಚ=ಪಿತೃಗಳಿಗೂ; ಹೃದಿ=ಮನದಲ್ಲಿ; ಖೇದ=ದುಃಖದ; ಶಂಕೀ=ಸಂಶಯವುಳ್ಳವನಾಗಿ; ಆತ್ಮ=ತನ್ನ; ವಿಯೋಗ=ಅಗಲುವಿಕೆ ಎಂಬ; ವಹ್ನೇಃ=ಬೆಂಕಿಯಿಂದ; ಪ್ರತಪ್ತಂ=ಬೆಂದಿರುವ; ಸ್ವ=ತನ್ನ; ವರ್ಗಂ=ಜನರನ್ನು; ಸುಖ=ಸುಖವೇ; ಅರ್ಥ=ಪ್ರಯೋಜನವುಳ್ಳ; ಸಂದೇಶ=ಮಾತೆಂಬ; ಸುಧಾ=ಅಮೃತದ; ಪ್ರವಾಹೈಃ=ಪ್ರವಾಹಗಳಿಂದ; ಉಜ್ಜೀವಯಿತುಂ=ಬದುಕಿಸಲು; ಸ್ವಂ=ತನ್ನ; ಉದ್ಧವಂ= ಉದ್ಧವನನ್ನು; ವ್ರಜಂ=ಗೋಕುಲವನ್ನು; ವ್ರಜ=ಹೋಗು; ಇತಿ=ಎಂದು; ಆದಿಶತ್= ಕಳಿಸಿದನು.

ಕೃಷ್ಣನು ಉಪನೀತನಾದ ವಿಷಯವು ಎಲ್ಲರಿಗೂ ತಿಳಿಯಿತು. ಕೃಷ್ಣನು ವೃಂದಾವನದಿಂದ ಮಥುರೆಗೆ ಹೊರಟಾಗ ಗೋಪಿಕೆಯರು ಕೃಷ್ಣನು ತಿರುಗಿ ಬರಬಹುದು ಎಂಬ ಆಸೆಯಲ್ಲಿ ಇದ್ದರು. ಅದಕ್ಕೋಸ್ಕರ ಬದುಕಿದ್ದರು. ಆದರೆ ಉಪನಯನದ ವಿಷಯ ತಿಳಿದ ಮೇಲೆ ಮನಸ್ಸಿಗೆ ತುಂಬಾ ಬೇಸರವಾಯಿತು –ಕೃಷ್ಣನು ಇನ್ನು ಮುಂದೆ ಅಧ್ಯಯನಕ್ಕೆ ತೊಡಗುತ್ತಾನೆ. ಇಲ್ಲಿಗೆ ಬರುವುದಿಲ್ಲ ಎಂದು.

ಯಶೋದಾನಂದಗೋಪರಿಗೂ ಬೇಸರವಾಯಿತು –ಈ ತನಕ ಕೃಷ್ಣನ ತಂದೆತಾಯಿ

ಯರು 'ನಾವು' ಎಂದು ಬಹಳ ಹೆಮ್ಮೆಪಡುತ್ತಿದ್ದರು. ಕೃಷ್ಣನಿಗೆ ವಸುದೇವನು ಉಪನಯನ ವನ್ನು ಮಾಡಿದನು. ತಂದೆಯಾದವನು ಉಪನಯನ ಮಾಡುವ ಕ್ರಮ. ಈಗ ಸಮಾಜವು ವಸುದೇವನನ್ನು ಕೃಷ್ಣನ ತಂದೆಯನ್ನಾಗಿ ತಿಳಿದುಕೊಂಡಿತು. ಕೃಷ್ಣನ ಬಗ್ಗೆ ಇವರಲ್ಲಿರುವ ತಂದೆತಾಯ್ತನ ಹೋಯಿತು ಎಂದು.

ಈ ರೀತಿಯಾಗಿ ಕೃಷ್ಣನ ವಿರಹವನ್ನು ಸಹಿಸಲಾರದೆ ಇವರೆಲ್ಲಾ ಗೋಕುಲದಲ್ಲಿ ಬಹಳವಾಗಿ ತಪಿಸುತ್ತಿದ್ದಾರೆ. ಈ ತಾಪದಿಂದ ಇವರಿಗೆ ವಿಮೋಚನೆ ಕೊಡಬೇಕಾಗಿದೆ. ಅದಕ್ಕಾಗಿ ಒಂದು ಸಂದೇಶವನ್ನು ಉದ್ಧವನ ಮೂಲಕ ಕೃಷ್ಣನು ಕೊಟ್ಟು ಕಳಿಸಿದನು. ಈ ಮಾತು ಅವರ ತಾಪಕ್ಕೆ ಅಮೃತಸಿಂಚನದಂತಿದೆ. ದೇವರು ಯಾವ ಉದ್ದೇಶದಿಂದ ಕೆಲಸ ಮಾಡುತ್ತಾನೋ ಆ ಉದ್ದೇಶವು ಈಡೇರುವುದು ನಿಶ್ಚಿತ.

**ಸಂದೇಶ** : ಶಾಸ್ತ್ರದ ಮಾತು ದೇವರ ಮಾತು. ಅದನ್ನು ನಾವು ಪಾಲಿಸಿದರೆ ನಮಗೆ ಮಾನಸಿಕ ನೆಮ್ಮದಿ ನಿಶ್ಚಿತ. **'ಜೀವಾ ಏವ ತು ದುಃಖಿನಃ । ತೇಷಾಂ ದುಃಖ ಪ್ರಹರಣಾಯ ಶ್ರುತಿರೇಷಾ ಪ್ರವರ್ತತೇ ।' ಜೀವರು ದುಃಖಿಗಳು. ಅವರ ದುಃಖಪರಿಹಾರಕ್ಕೆ ವೇದಗಳು ಹೊರಟಿವೆ ಎಂದು ವೇದಗಳೇ ಹೇಳುತ್ತವೆ.**

**ಸ ಚ ಪ್ರಿಯಾಯೋಗ ಸಮುತ್ಥಸಾಧ್ವಸಂ**
**ತದೀಯ ಸಂದೇಶವರ್ಯೈಃ ವಿದೂರಯನ್ ।**
**ಪ್ರಪನ್ನವಾತ್ಸಲ್ಯಮದೋ ಮಧುದ್ವಿಷಃ**
**ಸ್ಮರನ್ ಶ್ರಮಂ ವರ್ತ್ಮನಿ ವಿಸ್ಮರನ್ ಯಯೌ** ॥ ೩ ॥

ಸ ಚ=ಉದ್ಧವನಾದರೂ; ಪ್ರಿಯ=ಇಷ್ಟನ; ಅಯೋಗ=ವಿರಹದಿಂದ; ಸಮುತ್ಥ= ಉಂಟಾದ; ಸಾಧ್ವಸಂ=ಭಯವನ್ನು; ತದೀಯ=ಕೃಷ್ಣನ; ಸಂದೇಶ=ಮಾತುಗಳ; ವರ್ಯೈಃ= ಶ್ರೇಷ್ಠತೆಯಿಂದ; ವಿದೂರಯನ್=ಪರಿಹರಿಸುತ್ತಾ; ಮಧು=ಮಧುವಿಗೆ; ದ್ವಿಷಃ=ದ್ವೇಷಿಯಾದ ಕೃಷ್ಣನ; ಅದಃ=ಈ; ಪ್ರಪನ್ನ=ಶರಣರ; ವಾತ್ಸಲ್ಯಂ=ಪ್ರೀತಿಯನ್ನು; ಸ್ಮರನ್=ಎಣಿಸುತ್ತಾ; ವರ್ತ್ಮನಿ=ದಾರಿಯಲ್ಲಿ; ಶ್ರಮಂ=ಆಯಾಸವನ್ನು; ವಿಸ್ಮರನ್=ಮರೆಯುತ್ತಾ; ಯಯೌ= ಹೋದನು.

ಕೃಷ್ಣನು ಇನ್ನು ಮುಂದೆ ಗೋಕುಲಕ್ಕೆ ಬರುವುದೇ ಇಲ್ಲವೋ ಎಂದು ಎಲ್ಲರೂ ಹೆದರಿದ್ದರು. ಅವರ ಭಯವನ್ನು ದೂರಮಾಡಲು ಕೃಷ್ಣನು ಉದ್ಧವನನ್ನು ಕೊಟ್ಟು ಕಳಿಸಿದ್ದನು. ಕೃಷ್ಣನು ದೈಹಿಕವಾಗಿ ಹೊರಡದಿದ್ದರೂ ಮಾತಿನ ರೂಪದಿಂದ ಉದ್ಧವನ ಜೊತೆಗೆ ಗೋಕುಲಕ್ಕೆ ಹೊರಟಿದ್ದನು. ಕೃಷ್ಣನಿಗೆ ತನ್ನ ಭಕ್ತರಲ್ಲಿ ಬಹಳ ದಯೆ. ಅವರ ದುಃಖವನ್ನು ದೇವರು ಎಂದೂ ಸಹಿಸುವುದಿಲ್ಲ. ದೇವರ ಈ ದಯಾಮಯವಾದ ಅಂತಃಕರಣವನ್ನು ಸ್ಮರಿಸುತ್ತಾ ಉದ್ಧವನು ಗೋಕುಲದ ಕಡೆ ಹೆಜ್ಜೆ ಹಾಕಿದ್ದಾನೆ. ದೇವರ

ಈ ಕಾರುಣ್ಯವನ್ನು ಎಣಿಸಿಕೊಂಡು ಹೋಗುತ್ತಿರುವುದರಿಂದ ದಾರಿಯ ಆಯಾಸ ಆತನಿಗೆ ಆಗಲೇ ಇಲ್ಲ.

<u>ಸಂದೇಶ</u> : ಭಕ್ತರಲ್ಲಿ ದೇವರಿಗಿರುವ ದಯಾವನ್ನು ಸ್ಮರಿಸಿದರೆ ನಮ್ಮ ಸಾಂಸಾರಿಕ ಆಯಾಸವು ಪರಿಹೃತವಾಗುತ್ತದೆ.

ನಿಶಾಮುಖೇ ಗೋನಿಕುರಂಬಮೀಶಿತುರ್ವ್ರಜಂ
ವಿಶನ್ ಸೋऽಥ ದದರ್ಶ ಮಂಡಿತಮ್ ।
ಪರಿಸ್ಫುರದ್ವೇಣುವಿನೋದ ವೇದಿತ–
ಸ್ವಭರ್ತೃಲೀಲಾ ರಸಗೋಪಬಾಲಕೈಃ ॥ ೪ ॥

ಅಥ=ಅನಂತರ; ಸಃ=ಅವನು; ನಿಶಾ=ರಾತ್ರಿಯ; ಮುಖೇ=ಆರಂಭದಲ್ಲಿ; ಈಶಿತುಃ= ಒಡೆಯನ; ವ್ರಜಂ=ಗೋಕುಲವನ್ನು; ವಿಶನ್=ಪ್ರವೇಶಿಸುತ್ತಾ; ಪರಿಸ್ಫುರತ್= ಶೋಭಿಸುವ; ವೇಣು=ಕೊಳಲಿನ; ವಿನೋದ=ಆನಂದದಿಂದ; ವೇದಿತ= ತಿಳಿಯಲ್ಪಟ್ಟ; ಸ್ವ=ತನ್ನ; ಭರ್ತೃ= ಸ್ವಾಮಿಯ; ಲೀಲಾ=ಕ್ರೀಡೆಯ; ರಸ=ರಸವುಳ್ಳ; ಗೋಪಾಲ=ಗೊಲ್ಲರ; ಬಾಲಕೈಃ= ಹುಡುಗರಿಂದ; ಮಂಡಿತಂ=ಅಲಂಕೃತವಾದ; ಗೋ=ದನಗಳ; ನಿಕುರಂಬಂ=ಸಮೂಹ ವನ್ನು; ದದರ್ಶ=ಕಂಡನು.

ಉದ್ಧವನು ಗೋಕುಲವನ್ನು ಪ್ರವೇಶಿಸುವಾಗ ಸೂರ್ಯನು ಅಸ್ತಮಿಸುವ ಸಮಯವಾಗಿತ್ತು. ಆಕಳುಗಳು ಒಂದೇಕಡೆ ಸೇರಿದ್ದವು. ಗೊಲ್ಲರು ಅಲ್ಲಿಯೇ ಗುಂಪಾಗಿ ನಿಂತಿದ್ದರು. ಕೈಯಲ್ಲಿ ಕೊಳಲುಗಳನ್ನು ಹಿಡಿದುಕೊಂಡು ನುಡಿಸುತ್ತಿದ್ದರು. ಇದು ಕೃಷ್ಣನು ಇಲ್ಲಿರುವಾಗ ಮಾಡಿದ ಲೀಲೆಗಳನ್ನು ನೆನಪಿಸುತ್ತಿತ್ತು. ಇಂತಹ ದೃಶ್ಯವನ್ನು ಉದ್ಧವನು ಕಂಡನು.

<u>ಸಂದೇಶ</u> : ಸಂಧಿಕಾಲದಲ್ಲಿ ದೇವರ ಸ್ಮರಣೆಯನ್ನು ಮಾಡಬೇಕು.

ಉತ್ಕ್ಷಿಪ್ತಪುಚ್ಛಮುದಿತಾಲ್ಪರವಾಭಿರಾಮಂ
ವತ್ಸಂ ಸ್ಮ ಧಾವನವಿಲಾಸವಿಕಂಪಿತಾಂಗಮ್ ।
ವೀಕ್ಷ್ಯಾನುಧಾವನ ಪರಾಧ್ವನಿ ಗೌಃಸ್ವವರ್ಗ–
ಮನ್ವೇತು ಕೃಷ್ಣ ಇತಿ ವಕ್ತಿ ತದೋದ್ಧವಾಯ ॥ ೫ ॥

ತದಾ=ಆಗ; ಅಧ್ವನಿ=ದಾರಿಯಲ್ಲಿ; ಉತ್ಕ್ಷಿಪ್ತ=ಎತ್ತಿದ; ಪುಚ್ಛಂ=ಬಾಲವುಳ್ಳ; ಉದಿತ= ಉಂಟಾದ; ಅಲ್ಪ=ಸ್ವಲ್ಪ; ರವ=ಧ್ವನಿಯಿಂದ; ಅಭಿರಾಮಂ=ಚಂದದ; ಧಾವನ=ಓಡುವ; ವಿಲಾಸ=ಆಟದಿಂದ; ವಿಕಂಪಿತ=ನಡುಗುವ; ಅಂಗಂ=ದೇಹವುಳ್ಳ; ವತ್ಸಂ=ಕರುವನ್ನು; ವೀಕ್ಷ್ಯ=ನೋಡಿ; ಅನುಧಾವನ=ಅನುಸರಣೆಯಲ್ಲಿ; ಪರಾ=ಆಸಕ್ತವಾದ; ಗೌಃ=ಆಕಳು;

ಕೃಷ್ಣಃ=ಕೃಷ್ಣನು; ಸ್ವ=ತನ್ನ; ವರ್ಗಂ=ಗುಂಪನ್ನು; ಇತಿ=ಈ ರೀತಿಯಾಗಿ; ಅನ್ವೇತು= ಅನುಸರಿಸಲಿ ಎಂದು; ಉದ್ಧವಾಯ=ಉದ್ಧವನಿಗೆ; ವಕ್ತಿ=ಹೇಳುತ್ತದೆ.

ಗೋಕುಲದಲ್ಲಿ ಪುಟ್ಟ ಕರುಗಳು ಬಹಳ ಓಡಾಡುತ್ತಿದ್ದವು. ಕರುಗಳ ಕಿವಿಗಳಿಗೆ ಗಾಳಿ ಹೋದಾಗ ಅವುಗಳು ಹಾರಾಡುವುದು ಸಹಜ. ಓಡುವಾಗ ಬಾಲವನ್ನು ಎತ್ತುತ್ತವೆ. ಕಾಲುಗಳನ್ನು ತಲೆಯನ್ನು ಬಹಳವಾಗಿ ಅಲುಗಾಡಿಸುತ್ತವೆ. 'ಅಂಬೆ' ಎಂದು ಚಿಕ್ಕ ಧ್ವನಿಯಿಂದ ಕೂಗುತ್ತವೆ. ಇಂತಹ ಚಂದದ ತಮ್ಮ ಕರುಗಳನ್ನು ನೋಡಿ ಅವುಗಳ ತಾಯಿ ಆಕಳುಗಳು ಅವುಗಳ ಹಿಂದೆ ಓಡುತ್ತವೆ. ತಮ್ಮ ಕರುಗಳಿಗೆ ರಕ್ಷಣೆಯನ್ನು ಕೊಡುತ್ತವೆ. ಹಾಗೆಯೇ ಅಪರೂಪದ ವ್ಯಕ್ತಿಯಾದ ಉದ್ಧವನನ್ನು ನೋಡುತ್ತವೆ. ನೋಡುತ್ತಾ ಉದ್ಧವನಿಗೆ ಈ ರೀತಿ ಸೂಚನೆ ಕೊಡುವಂತೆ ಇದೆಯೋ ಎಂದು ರಾಜರು ಊಹಿಸುತ್ತಾರೆ. ಇಲ್ಲಿ ನಮ್ಮನ್ನು ನಂಬಿದ ಈ ಕರುಗಳು ಸುಖವಾಗಿವೆ. ಕಾರಣ ನಾವು ಅವುಗಳ ರಕ್ಷಣೆಗೆ ಅವುಗಳ ಜೊತೆಗೇ ಇರುವುದು. ಅದೇ ರೀತಿ ಕೃಷ್ಣನನ್ನೇ ನಂಬಿದ ಗೊಲ್ಲರು ನೆಮ್ಮದಿಯಿಂದ ನಲಿಯುತ್ತಿರಬೇಕಾದರೆ ಕೃಷ್ಣನೂ ಕೂಡಾ ನಮ್ಮಂತೆಯೇ ಗೊಲ್ಲರನ್ನು ಅನುಸರಿಸಲಿ ಎಂದು.

**ಸಂದೇಶ** : ನಮ್ಮನ್ನು ರಕ್ಷಿಸುವುದು ದೇವನ ಕರ್ತವ್ಯ. ಆತನು ತನ್ನ ಕೆಲಸವನ್ನು ಮಾಡಲು ನಾವು ಪ್ರಾರ್ಥಿಸುವ ಮೊದಲು ನಾವು ನಮ್ಮ ಕರ್ತವ್ಯವನ್ನು ಮಾಡಬೇಕು.

**ಗೋಧೂಲಿಧೂಸರಮನೋಜ್ಞಶರೀರಕಾಂತೀನ್**
**ಗೋಪಾನ್ನಿರೀಕ್ಷ್ಯ ಕರಸಂಗತ ವೇಣುಶೃಂಗಾನ್ ।**
**ಕೃಷ್ಣಸ್ಯ ಶೈಶವವಿಲಾಸಮನುಸ್ಮರನ್ಸ**
**ಮೋದಾಂಬುಪೂರ್ಣನಯನಃ ಪುಲಕಾಂಕಿತೋಽಭೂತ್ ॥ ೬ ॥**

ಗೋ=ದನಗಳ; ಧೂಲಿ=ಧೂಳಿಂದ; ಧೂಸರ=ಕೆಂಪಾದ; ಮನೋಜ್ಞ=ಚಂದದ; ಶರೀರ=ದೇಹದ; ಕಾಂತೀನ್=ಕಾಂತಿವುಳ್ಳ; ಕರ=ಕೈಯಲ್ಲಿ; ಸಂಗತ=ಇರುವ ಬಿದಿರಿನ ವೇಣು; ಶೃಂಗಾನ್=ಕೊಂಬುಳ್ಳ; ಗೋಪಾನ್=ಗೊಲ್ಲರನ್ನು; ನಿರೀಕ್ಷ್ಯ=ನೋಡಿ; ಸಃ= ಅವನು; ಕೃಷ್ಣಸ್ಯ=ಕೃಷ್ಣನ; ಶೈಶವ=ಬಾಲ್ಯದ; ವಿಲಾಸಂ=ಆಟವನ್ನು; ಅನುಸ್ಮರನ್= ಎಣಿಸುತ್ತಾ; ಮೋದ=ಆನಂದದಿಂದ; ಅಂಬು=ನೀರಿನಿಂದ; ಪೂರ್ಣ= ತುಂಬಿದ; ನಯನಃ= ಕಣ್ಣುಳ್ಳವನು; ಪುಲಕ=ರೋಮಾಂಚನದಿಂದ; ಅಂಕಿತಃ= ಕೂಡಿದವನು; ಅಭೂತ್=ಆದನು.

ಹಗಲಿಡೀ ಗೊಲ್ಲರು ಆಕಳುಗಳ ಜೊತೆಗೆ ಇದ್ದರು. ಇದರಿಂದ ಬಹಳ ಬಳಲಿ ಮೈಯೆಲ್ಲಾ ಬೆವರು. ಸಾಯಂಕಾಲ ಹಿಂದಿರುಗುವಾಗ ಗೋಧೂಳಿಗಳು ಏಳುತ್ತಿದ್ದವು. ಅವುಗಳು ಇವರ ದೇಹಕ್ಕೆ ಅಂಟಿಕೊಳ್ಳುತ್ತಿದ್ದವು. ಇದರಿಂದ ಗೊಲ್ಲರು ಸ್ವಲ್ಪ ಕೆಂಬಣ್ಣಕ್ಕೆ ತಿರುಗಿದ್ದರು. ಇದರಿಂದಾಗಿ ನೋಡಲು ಚಂದ ಕಾಣುತ್ತಿದ್ದರು. ಇವರ ಕೈಗಳಲ್ಲಿ ಬಿದಿರಿನಿಂದ

ಮಾಡಿದ ಕೊಂಬು ಎಂಬ ವಾದ್ಯಗಳಿದ್ದವು. ಆಕಳುಗಳ ಕೋಡುಗಳಂತೆ ಇವುಗಳ ಆಕಾರ. ಇಂತಹ ಗೊಲ್ಲರನ್ನು ಉದ್ಧವನು ಕಂಡನು. ಕೃಷ್ಣನು ಬಾಲನಿರುವಾಗ ಹೀಗೆಯೇ ಇಲ್ಲಿ ಆಕಳುಗಳ, ಗೊಲ್ಲರ ಜೊತೆಗೆ ಆಡುತ್ತಿದ್ದನು ಎಂಬುದನ್ನು ಮೆಲುಕುಹಾಕಿದನು. ಆಗ ಆತನಿಗೆ ತಿಳಿಯದಂತೆಯೇ ಕಣ್ಣುಗಳಿಂದ ಆನಂದಭಾಷ್ಪ ಉದುರಿತು. ಮೈರೋಮಾಂಚ ಗೊಂಡಿತು.

<u>ಸಂದೇಶ</u> : ದೇವರನ್ನು ಸ್ಮರಿಸಬೇಕಾದರೆ ದೇವರನ್ನೇ ಕಾಣಬೇಕು, ಕೇಳಬೇಕು ಎಂದೇನಿಲ್ಲ. ದೇವರ ಭಕ್ತರ ಲೀಲೆಗಳನ್ನು ಕಂಡರೂ ಸಾಕು. ವಿವಾಹಾದಿಗಳಿಗೆ ಗೋಧೂಳಿಲಗ್ನವು ಪ್ರಶಸ್ತವೆಂಬಂತೆ ಸಂಧ್ಯಾವಂದನೆಗೂ ಕೂಡಾ.

ತಾಃ ಕೃಷ್ಣಭುಕ್ತವರಭೂಷಣವಸ್ತ್ರಮಾಲ್ಯಂ
ಭೃತ್ಯಂ ನಿರೀಕ್ಷ್ಯ ನಿಜನಾಥಧಿಯೇವ ಗಾವಃ ।
ಉನ್ನಮ್ರಕಂಧರಮುದೀರಿತ ಕರ್ಣಯುಗ್ಮಂ
ಪಶ್ಯಂತ್ಯ ಉದ್ಧವಮನೋಭ್ಯುದಯಂ ವಿತೇನುಃ ॥ ೭ ॥

ಕೃಷ್ಣ=ಕೃಷ್ಣನಿಂದ; ಭುಕ್ತ=ಉಪಯೋಗಿಸಲ್ಪಟ್ಟ; ವರ=ಉತ್ತಮವಾದ; ಭೂಷಣ= ಆಭರಣಗಳು; ವಸ್ತ್ರ=ಬಟ್ಟೆಗಳು; ಮಾಲ್ಯಂ=ಮಾಲೆಗಳುಳ್ಳ; ಭೃತ್ಯಂ=ಸೇವಕನನ್ನು; ತಾಃ= ಆ; ಗಾವಃ=ಆಕಳುಗಳು; ನಿಜ=ತಮ್ಮ; ನಾಥ=ಒಡೆಯನ; ಧಿಯಾ ಇವ=ಬುದ್ಧಿಯಂತೆ; ನಿರೀಕ್ಷ್ಯ=ನೋಡಿ; ಉನ್ನಮ್ರ=ಎತ್ತಿದ; ಕಂಧರಂ=ಕುತ್ತಿಗೆ ಉಳ್ಳದ್ದಾಗಿ; ಉದೀರಿತಃ= ನೆಟ್ಟಗಾದ; ಕರ್ಣ=ಕಿವಿಗಳ; ಯುಗ್ಮಂ=ಎರಡು ಉಳ್ಳದ್ದಾಗಿ; ಪಶ್ಯಂತ್ಯ=ನೋಡುತ್ತಾ; ಉದ್ಧವ=ಉದ್ಧವನ; ಮನಃ=ಮನಕ್ಕೆ; ಅಭ್ಯುದಯಂ=ಉತ್ಸಾಹವನ್ನು; ವಿತೇನುಃ= ಮಾಡಿದವು.

ಮಥುರೆಯಲ್ಲಿ ಕೃಷ್ಣನು ದಿನವೂ ಹೊಸ ವಸ್ತ್ರಾದಿಗಳನ್ನೇ ಬಳಸುತ್ತಿದ್ದನು. ಹಳತನ್ನು ತನ್ನ ಭಕ್ತರಾದ ಉದ್ಧವ ಅಕ್ರೂರಾದಿಗಳಿಗೆ ಕೊಡುತ್ತಿದ್ದನು. ಅವರಾದರೂ ಇದಕ್ಕಾಗಿಯೇ ಕಾಯುವವರು. ಸದ್ಯ ಉದ್ಧವನು ಅಂತಹ ವಸ್ತ್ರ ಆಭರಣಗಳನ್ನು ತೊಟ್ಟುಕೊಂಡು ಗೋಕುಲಕ್ಕೆ ಬಂದಿದ್ದನು. ಆದ್ದರಿಂದ ಒಂದು ರೀತಿ ಕೃಷ್ಣನಂತೆ ಕಾಣುತ್ತಿದ್ದನು. ಇಂತಹ ಉದ್ಧವನನ್ನು ಕಂಡಾಗ ಆಕಳುಗಳ ಕಿವಿಗಳೂ ನೆಟ್ಟಗಾದವು. ಕಣ್ಣುಗಳು ಅರಳಿದವು. ಕೃಷ್ಣನೇ ಬಂದನೇನೋ ಎಂಬಂತೆ ಕುತ್ತಿಗೆಯನ್ನು ಮೇಲಕ್ಕೆತ್ತಿ ಇವನನ್ನೇ ದಿಟ್ಟಿಸಿ ನೋಡಲಾರಂಭಿಸಿದವು. ಇದರಿಂದ ಉದ್ಧವನ ಶರೀರದಲ್ಲಿ ಹೊಸ ಚೈತನ್ಯವನ್ನು ತುಂಬಿದಂತಾಯಿತು. ಕೃಷ್ಣನನ್ನೇ ಕಂಡು ಆತನ ಒಡನಾಟದಲ್ಲಿ ಇದ್ದ ಇವರು ಕೃಷ್ಣನಿಗಿಂತ ಬಹಳ ನಿಕೃಷ್ಟನಾಗಿರುವ ನನ್ನನ್ನು ತಿರಸ್ಕರಿಸುವರೋ, ಹೇಗೆಂದರೆ ಮೃಷ್ಟಾನ್ನವನ್ನು ಉಂಡವನಿಗೆ ಗಂಜಿ ದೊರಕಿದಂತೆ ಎಂಬ ಭಾವನೆಯಲ್ಲಿದ್ದ ಈ ಉದ್ಧವನು ಈಗ

ಮೂಕಪ್ರಾಣಿಗಳೂ ಕೂಡಾ ಈತನ ಕಡೆಗೆ ಅರಳಿದ ಕಣ್ಣುಗಳಿಂದ ನೋಡಿದಾಗ ಈತನ ಹುರುಪು ಇಮ್ಮಡಿಯಾಯಿತು.

<u>ಸಂದೇಶ</u> : ದೇವರ ಜೊತೆಯಲ್ಲಿ ಇರುವವರಿಗೆ ಸಾರೂಪ್ಯ ಎಂಬ ಮೋಕ್ಷದ ಪ್ರಾಪ್ತಿ. ಪ್ರಪಂಚದಲ್ಲಿ ಎಲ್ಲಿ ಹೋದರೂ ಕೆಳವರ್ಗದ ಪ್ರಾಣಿಗಳಿಂದ ಆರಂಭಿಸಿ ಎಲ್ಲರಿಂದಲೂ ಆದರ.

**ದಿದೇಶ ಯಂ ಪ್ರೀತಮನಾಃ ಸ್ವವರ್ಗೇ**
**ನಿಜಂ ವ್ರಜಂ ಪ್ರತ್ಯರವಿಂದನೇತ್ರಃ ।**
**ವಿವೇಶ ಸೋಪ್ಯುದ್ಧವಮೇವ ದೂರಾ–**
**ನ್ನಿವೇಶಯನ್ ದ್ರಷ್ಟೃವಿಲೋಚನೇಷು ॥ ೮ ॥**

ಸ್ವ=ತನ್ನ; ವರ್ಗೇ=ಜನರಲ್ಲಿ; ಪ್ರೀತ=ಸಂತುಷ್ಟನಾದ; ಮನಾಃ=ಮನಸ್ಸುಳ್ಳ; ಅರವಿಂದ= ಕಮಲದಂತೆ; ನೇತ್ರಃ=ಕಣ್ಣುಳ್ಳ ಕೃಷ್ಣನು; ನಿಜಂ=ತನ್ನ; ವ್ರಜಂ ಪ್ರತಿ=ಗೋಕುಲವನ್ನು ಕುರಿತು; ಯಂ=ಯಾರನ್ನು; ದಿದೇಶ=ಕಳಿಸಿದನೋ; ಸಃ ಅಪಿ=ಅವನಾದರೂ; ದೂರಾತ್= ದೂರದಿಂದ; ದ್ರಷ್ಟೃ=ನೋಡುವವರ; ವಿಲೋಚನೇಷು=ಕಣ್ಣುಗಳಲ್ಲಿ; ಉದ್ಧವಂ ಏವ= ಹಬ್ಬವನ್ನೇ; ನಿವೇಶಯನ್=ತುಂಬಿಸುತ್ತಾ; ವಿವೇಶ=ಪ್ರವೇಶಿಸಿದನು.

ಕೃಷ್ಣನು ಮಥುರೆಯಲ್ಲಿ ಇದ್ದಾನೆ. ಆತನ ಬಹಳ ಭಕ್ತರು ಗೋಕುಲದಲ್ಲಿ ಇದ್ದಾರೆ. ಇವರನ್ನು ಎಂದೂ ಕೃಷ್ಣನು ಕೈಬಿಡುವವನಲ್ಲ. ಯಾಕೆಂದರೆ ಅವರು ಎಂದೂ ತಮ್ಮ ಮನದಿಂದ ಕೃಷ್ಣನನ್ನು ಬಿಟ್ಟವರಲ್ಲ. ಆದ್ದರಿಂದ ಅವರಲ್ಲಿ ದಯೆಯಿಂದ ತನ್ನ ಭಕ್ತನಾದ ಉದ್ಧವನನ್ನು ಅವರ ಬಳಿಗೆ ಕಳಿಸಿದನು. ಈತನನ್ನು ಕಂಡ ಜನರ ಆನಂದಕ್ಕೆ ಪಾರವೇ ಇಲ್ಲ. ಈತನನ್ನು ಕಣ್ಣುತುಂಬಾ ನೋಡಿದರು. ಇವನಿಗೆ ಇಟ್ಟಿರುವ ಉದ್ಧವ ಎಂಬ ಹೆಸರು ಸಾರ್ಥಕವಾಯಿತು. ಉದ್ಧವ ಶಬ್ದಕ್ಕೆ 'ಆನಂದ' ಎಂಬ ಅರ್ಥವೂ ಇದೆ.

<u>ಸಂದೇಶ</u> : ದೇವರ ಬಳಿ ವಾಸದಿಂದ ತಮ್ಮ ಜನ್ಮಕ್ಕೆ ಮಾತ್ರವಲ್ಲದೆ ಹೆಸರಿಗೂ ಸಾರ್ಥಕತೆ ಬರುವುದು.

**ಗೃಹೇಗೃಹೇ ಕೃಷ್ಣಕಥಾಮೃತಾತತಂ ತದರ್ಚನಾಯಾಹೃತಧೂಪವಾಸಿತಮ್ ।**
**ಸ್ರಗಂಬರಾಲಂಕೃತಿ ಚಂದನಾದಿಭಿರ್ವಿಭೂಷಿತ ಸ್ತ್ರೀಪುರುಷಂ ತದರ್ಪಿತೈಃ ॥ ೯ ॥**

ಗೃಹೇಗೃಹೇ=ಪ್ರತಿ ಮನೆಯಲ್ಲಿಯೂ; ಕೃಷ್ಣ=ಕೃಷ್ಣನ; ಕಥಾ=ಕಥೆ ಎಂಬ; ಅಮೃತ= ಅಮೃತದಿಂದ; ಆತತಂ=ವ್ಯಾಪ್ತವಾದ; ತತ್=ಕೃಷ್ಣನ; ಅರ್ಚನಾಯ=ಪೂಜೆ ಗೋಸ್ಕರ; ಆಹೃತ=ತಂದಿರುವ; ಧೂಪ=ಧೂಪದಿಂದ; ವಾಸಿತಂ=ಪರಿಮಳಿತವಾದ; ತತ್=ಕೃಷ್ಣನಿಗೆ; ಅರ್ಪಿತೈಃ=ಅರ್ಪಿಸಿರುವ; ಸ್ರಕ್=ಮಾಲಿಕೆಯು; ಅಂಬರ=ಬಟ್ಟೆಯು; ಅಲಂಕೃತಿಃ= ಆಭರಣವು; ಚಂದನ=ಗಂಧವು; ಆದಿಭಿಃ=ಮೊದಲಾದ್ದರಿಂದ; ವಿಭೂಷಿತ=ಅಲಂ ಕೃತರಾದ;

ಸ್ತ್ರೀ=ಸ್ತ್ರೀಯರು; ಪುರುಷಂ=ಪುರುಷರುಳ್ಳ; ಗೋಕುಲಂ=ಗೋಕುಲವನ್ನು; ಆಪ= ಹೊಂದಿದನು.

ಗೋಕುಲದಲ್ಲಿ ಪ್ರತಿಯೊಂದು ಮನೆಯಲ್ಲಿಯೂ ಕೃಷ್ಣನ ಚರಿತ್ರೆಯು ಕೇಳಿಬರುತ್ತಿತ್ತು. ಪಾರಾಯಣದನಂತರ ದೇವರ ಪೂಜೆಯನ್ನು ಮಾಡುತ್ತಿದ್ದರು. ಅದಕ್ಕಾಗಿ ಧೂಪಾರತಿಯನ್ನು ಎತ್ತುತ್ತಿದ್ದರು. ಆ ಧೂಪದ ಪರಿಮಳವು ಎಲ್ಲಾ ಕಡೆಯೂ ಹರಡಿತ್ತು. ಪೂಜೆಯ ಅಂಗ ವಾಗಿ ದೇವರಿಗೆ ನಾನಾ ಬಗೆಯ ವಸ್ತ್ರಗಳನ್ನು ಸಮರ್ಪಿಸಿದ್ದರು. ಪೂಜಾನಂತರ ಅವು ಗಳನ್ನು ಪ್ರಸಾದರೂಪವಾಗಿ ಎಲ್ಲರೂ ಧರಿಸಿದ್ದರು. ಈ ರೀತಿಯಾಗಿ ಉದ್ಧವನ ಕಣ್ಣು ಕಿವಿ ಮೂಗುಗಳಿಗೆ ಉತ್ಸವವನ್ನು ಉಂಟುಮಾಡುವ ಗೋಕುಲವನ್ನು ಉದ್ಧವನು ಪ್ರವೇಶಿಸಿದನು.

**ಶುಕೈರ್ಹರೇರ್ನಾಮ ಗೃಣದ್ಭಿರಾವೃತಂ ಪಿಕೈಶ್ಚ ತದ್ವೇಣುರವಾನುವಾದಿಭಿಃ ।**
**ಮುಕುಂದಪಾದಾಂಬುಜ ಶೋಭಿನೀರಜ ಸ್ಥಿರದ್ವಿರೇಫೈರ್ಹರಿಕಿಂಕರಪ್ರಭೈಃ ॥ ೧೦ ॥**

ಹರೇಃ=ದೇವರ; ನಾಮ=ಹೆಸರನ್ನು; ಗೃಣದ್ಭಿಃ=ಹೇಳುವ; ಶುಕೈಃ=ಗಿಳಿಗಳಿಂದ; ತತ್=ಕೃಷ್ಣನ; ವೇಣು=ಕೊಳಲಿನ; ರವ=ಧ್ವನಿಯನ್ನು; ಅನುವಾದಿಭಿಃ=ಅನುಕರಿಸುವ; ಪಿಕೈಃ ಚ=ಕೋಗಿಲೆಗಳಿಂದಲೂ; ಹರಿ=ದೇವರ; ಕಿಂಕರ=ಸೇವಕರಂತೆ; ಪ್ರಭೈಃ= ಶೋಭಿಸುವ; ಮುಕುಂದ=ಕೃಷ್ಣನ; ಪಾದ=ಚರಣವೆಂಬ; ಅಂಬುಜ=ಕಮಲದಂತೆ; ಶೋಭಿ=ಶೋಭಿಸುವ; ನೀರಜ=ತಾವರೆಗಳಲ್ಲಿ; ಸ್ಥಿರ=ಇರುವ; ದ್ವಿರೇಫೈಃ=ಭ್ರಮರಗಳಿಂದ ಕೂಡಿದ ಗೋಕುಲವನ್ನು ಹೊಂದಿದನು.

ಕೃಷ್ಣನು ಇಲ್ಲಿರುವಾಗ ಸದಾ ಗೊಲ್ಲರು ಕೃಷ್ಣನನ್ನು ಹೆಸರೆತ್ತಿ ಕರೆಯುತ್ತಿದ್ದರು. ಅದನ್ನು ಕೇಳಿಸಿಕೊಂಡಿರುವ ಗಿಳಿಗಳು ತಾವೂ ಅದೇ ರೀತಿ ಉಚ್ಚರಿಸಲು ಆರಂಭಿಸಿದ್ದವು. ಈಗಲೂ ಗಿಳಿಗಳ ಆ ಧ್ವನಿಯು ಉದ್ಧವನಿಗೆ ಕೇಳಿಸುತ್ತಿತ್ತು. ಕೃಷ್ಣನ ಕೊಳಲಿನ ಧ್ವನಿಯಂತೆ ಕೋಗಿಲೆಗಳು ತಾವೂ ಕೂಗಲು ಪ್ರಯತ್ನಿಸುತ್ತಿದ್ದವು. ಆ ಪ್ರಯತ್ನವನ್ನು ಉದ್ಧವ ಬಂದಾಗಲೂ ಮಾಡುತ್ತಿದ್ದವು. ಗೋಕುಲದ ಕೊಳಗಳ ಕಡೆಗೆ ಉದ್ಧವನು ದೃಷ್ಟಿಯನ್ನು ಹಾಯಿಸಿದನು. ಅಲ್ಲಿ ಬಹಳ ಕಮಲಗಳಿದ್ದವು. ಅವುಗಳಲ್ಲಿ ದುಂಬಿಗಳು ಅಲುಗಾಡದೆ ಕುಳಿತಿದ್ದವು– ಮಕರಂದದ ಆಸೆಯಿಂದ. ಅವುಗಳಿಗೆ ಆ ಕಮಲಗಳನ್ನು ನೋಡಿದಾಗ ಕೃಷ್ಣನ ಪಾದಗಳ ನೆನಪಾಯಿತು. ಕೃಷ್ಣನ ಪಾದಗಳಲ್ಲಿ ಇರೋಣವೆಂದರೆ ಕೃಷ್ಣ ಈಗ ಇಲ್ಲಿ ಇಲ್ಲ. ಆದ್ದರಿಂದ ಅವನ ಪಾದಗಳಂತಿರುವ ಕಮಲಗಳನ್ನಾದರೂ ಆಶ್ರಯಿಸೋಣ ಎಂಬ ಕಾತರದಿಂದ ಅಲ್ಲೇ ಇದ್ದವು. ಇಂತಹ ಸನ್ನಿವೇಶವು ಉದ್ದವನಿಗೆ ಗೋಕುಲದಲ್ಲಿ ಕಂಡಿತು. ಯಜಮಾನನ ಹೆಸರನ್ನು ಹೇಳುತ್ತಿರುವುದು, ಆತನನ್ನು ಅನುಸರಿಸುವುದು ಹಾಗೂ ಆತನ ಕಾಲಬುಡದಲ್ಲಿ ಸದಾ ಇರುವುದು –ಇದೆಲ್ಲಾ ಸೇವಕರ ಲಕ್ಷಣಗಳು. ಆ ಎಲ್ಲಾ ಲಕ್ಷಣಗಳೂ ಈ ಪಕ್ಷಿಜಾತಿಗಳಲ್ಲಿಯೂ ಇಲ್ಲಿ ಕಾಣಸಿಗುತ್ತವೆ.

**ಸದಾ ಮುಕುಂದಾಗಮನಾನುಶಂಕಯಾ ಸುಪೂರ್ಣಕುಂಭೈಃ ಶುಭತೋರಣಧ್ವಜೈಃ ।**
**ಅಲಂಕೃತದ್ವಾರಚಯಂ ಫಲೋಚ್ಚಯೈರ್ವಿಚಿತ್ರರಂಗಾವಲಿಭಿಶ್ಚ ರಂಜಿತಮ್ ॥ ೧೧ ॥**

ಮುಕುಂದ=ಕೃಷ್ಣನ; ಆಗಮನ=ಬರುವಿಕೆಯ; ಅನುಶಂಕಯಾ=ಸಂಶಯದಿಂದ; ಸುಪೂರ್ಣ=ತುಂಬಿದ; ಕುಂಭೈಃ=ಕಲಶಗಳಿಂದ; ಶುಭ=ಒಳ್ಳೆಯ; ತೋರಣ=ತೋರಣಗಳಿಂದ; ಧ್ವಜೈಃ=ಪತಾಕೆಗಳಿಂದ; ಸದಾ=ಯಾವಾಗಲೂ; ಅಲಂಕೃತ=ಅಲಂಕಾರಗೊಂಡ; ದ್ವಾರ=ಬಾಗಿಲುಗಳ; ಚಯಂ=ಸಮೂಹವುಳ್ಳ; ಫಲ=ಹಣ್ಣುಗಳ; ಉಚ್ಚಯೈಃ=ಗುಂಪುಗಳಿಂದ; ವಿಚಿತ್ರ=ನಾನಾ ರೀತಿಯ; ರಂಗಾವಲಿಭಿಃ ಚ=ರಂಗೋಲಿಗಳಿಂದಲೂ; ರಂಜಿತಮ್=ಶೋಭಿಸುವ ಗೋಕುಲವನ್ನು ಪ್ರವೇಶಿಸಿದನು.

ಗೋಕುಲದಲ್ಲಿ ಗೊಲ್ಲರು ಕೃಷ್ಣನನ್ನು ಅನನ್ಯವಾಗಿ ಪ್ರೀತಿಸುತ್ತಿದ್ದರು. ಕೃಷ್ಣನು ಇಂದಲ್ಲದಿದ್ದರೂ ನಾಳೆಯಾದರೂ ನಮ್ಮಲ್ಲಿಗೆ ಬಂದೇ ಬರುತ್ತಾನೆ ಎಂಬ ದೃಢವಾದ ನಂಬಿಕೆಯನ್ನೂ ಇಟ್ಟುಕೊಂಡಿದ್ದರು. ಅದಕ್ಕಾಗಿ ತಮ್ಮ ತಮ್ಮ ಮನೆಗಳನ್ನು ಉತ್ತಮವಾಗಿ ಅಲಂಕರಿಸಿದ್ದರು. ಮನೆಯ ಮುಂದೆ ಪೂರ್ಣಕುಂಭಗಳನ್ನು ಇಟ್ಟಿದ್ದರು. ಕಂಬಗಳಿಗೆ ತೋರಣಗಳನ್ನು ಬಿಗಿದಿದ್ದರು. ಮನೆಯ ಮೇಲೆ ಧ್ವಜಗಳನ್ನೂ ನೆಟ್ಟಿದ್ದರು. ಹೆಬ್ಬಾಗಿಲಿಗೆ ನಾನಾ ರೀತಿಯ ಎಳನೀರು ಮೊದಲಾದ ಫಲಗಳನ್ನು ನೇತುಹಾಕಿದ್ದರು. ಅಂಗಳದಲ್ಲಿ ಬಗೆಬಗೆಯ ರಂಗೋಲಿಗಳು ಬೆಳಗುತ್ತಿದ್ದವು. ನಿಮ್ಮ ಮನೆಗಳನ್ನು ನೀವು ಅಲಂಕೃತಗೊಳಿಸಲಿಲ್ಲ. ಆದ್ದರಿಂದ ನಾನು ಬರುವುದಿಲ್ಲ ಎಂದು ಕೃಷ್ಣನು ಹೇಳುವಂತಿಲ್ಲ. ಆ ರೀತಿ ಇಡೀ ಗೋಕುಲವು ಮಳೆ ಪಕ್ಷಿ ಕಾಯುವಂತೆ ಕೃಷ್ಣನನ್ನು ಎದುರುನೋಡುತ್ತಿದೆ. ಅಂತಹ ಗೋಕುಲವನ್ನು ಉದ್ಧವನು ಕಂಡನು.

**ಮುಕುಂದವೀಕ್ಷಾಫಲಕಾಮ್ಯಯಾನ್ವಹಂ**
**ತ್ರಿಕಾಲಚೀರ್ಣದ್ವಿಜದೇವತಾರ್ಚನೈಃ ।**
**ಗೋಕುಲಂ ತದೀಯಲೀಲಾಮೃತಪೂರ್ಣಸತ್ಕಥಾ**
**ಧೃತಾಸುಭಿಃ ಸಂಕುಲಮಾಸಮಾಪ ॥ ೧೨ ॥**

ಮುಕುಂದ=ಕೃಷ್ಣನ; ವೀಕ್ಷಾ=ದರ್ಶನವೆಂಬ; ಫಲ=ಫಲದ; ಕಾಮ್ಯಯಾ=ಇಚ್ಛೆಯಿಂದ; ಅನ್ವಹಂ=ಯಾವಾಗಲೂ; ತ್ರಿಕಾಲ=ಮೂರು ಕಾಲದಲ್ಲಿಯೂ; ಚೀರ್ಣ=ಮಾಡಿದ; ದ್ವಿಜ=ಬ್ರಾಹ್ಮಣರ; ದೇವತಾ=ದೇವತೆಗಳ; ಅರ್ಚನೈಃ=ಪೂಜೆಗಳಿಂದ; ತದೀಯ=ಕೃಷ್ಣ ಸಂಬಂಧಿಯಾದ; ಲೀಲಾ=ಲೀಲೆಗಳೆಂಬ; ಅಮೃತ=ಅಮೃತದಿಂದ; ಪೂರ್ಣ=ತುಂಬಿದ; ಸತ್=ಒಳ್ಳೆಯ; ಕಥಾ=ಕಥೆಯಿಂದ; ಧೃತ=ಧರಿಸಿರುವ; ಅಸುಭಿಃ=ಪ್ರಾಣ ಉಳ್ಳವರಿಂದ; ಸಂಕುಲಂ=ಕೂಡಿದ; ಗೋಕುಲಂ=ಗೋಕುಲವನ್ನು; ಆಪ=ಹೊಂದಿದನು.

ಈ ಗೊಲ್ಲರು ತ್ರಿಕಾಲದಲ್ಲಿಯೂ ಬ್ರಾಹ್ಮಣರನ್ನೂ ದೇವತೆಗಳನ್ನೂ ಪೂಜಿಸುತ್ತಿದ್ದರು.

ಬ್ರಾಹ್ಮಣರು; ದೇವತೆಗಳು ಎಂದರೆ ಕೃಷ್ಣನಿಗೆ ಬಹಳ ಪ್ರೀತಿ. ಇವರನ್ನು ಆರಾಧಿಸಿದರೆ ದೇವರು ಬಂದೇ ಬರುತ್ತಾರೆ ಎಂಬ ಅಚಲನಂಬಿಕೆ. ಕೃಷ್ಣನು ಮಥುರೆಗೆ ಹೊರಟ ದಿನದಂದೇ ಇವರೆಲ್ಲಾ ಸಾಯುವವರಿದ್ದರು. ಆದರೆ ಕೃಷ್ಣನ ಚರಿತ್ರೆಗಳೆಂಬ ಅಮೃತವನ್ನು ಕಿವಿಗಳಿಂದ ಪ್ರತಿನಿತ್ಯ ಕುಡಿಯುತ್ತಿದ್ದರು. ಆದ್ದರಿಂದ ಸಾಯಲಿಲ್ಲ. ಅಂದರೆ ಸದಾ ಕೃಷ್ಣಧ್ಯಾನದಲ್ಲೇ ಮಗ್ನರಾದ ಅದಕ್ಕಾಗಿಯೇ ಬದುಕಿರುವ ಜನರಿಂದ ತುಂಬಿದ ಗೋಕುಲ ವನ್ನು ಉದ್ಧವನು ಕಂಡನು.

**<u>ಸಂದೇಶ</u>** : ದೇವರ ಸಂದೇಶವನ್ನು ಹೊತ್ತುತರುವವರ ದರ್ಶನವಾಗಬೇಕಾದರೆ ಆ ಸಂದೇಶ ವನ್ನು ಶ್ರವಣ ಮಾಡಬೇಕಾದರೆ ನಮ್ಮ ಮನೆಯ ಮನದ ವಾತಾವರಣ ಈ ರೀತಿ ಇರಬೇಕು.

**ತತೋ ವಿವೇಶ ನಂದಸ್ಯ ಸದನಂ ಸಹಸೋದ್ಧವಃ ।**
**ಅನ್ಯೇಷಾಮಪಿ ಚೇತಃಸ್ಸು ನ್ಯಯುಂಕ್ತ ಪರಮುದ್ಧವಮ್** ॥ ೧೩ ॥

ತತಃ=ಅನಂತರ; ಉದ್ಧವಃ=ಉದ್ಧವನು; ಸಹಸಾ=ಕೂಡಲೇ; ನಂದಸ್ಯ=ನಂದ- ಗೋಪನ; ಸದನಂ=ಮನೆಯನ್ನು; ವಿವೇಶ=ಪ್ರವೇಶಿಸಿದನು; ಅನ್ಯೇಷಾಂ ಅಪಿ=ಬೇರೆ ಯವರ; ಚೇತಃಸ್ಸು=ಮನಗಳಲ್ಲಿ; ಪರಂ=ಶ್ರೇಷ್ಠವಾದ; ಉದ್ಧವಮ್=ಆನಂದವನ್ನು; ನ್ಯಯುಂಕ್ತ=ತುಂಬಿಸಿದನು.

ಕೃಷ್ಣನ ವಿರಹದಿಂದ ಬಹಳ ನೊಂದವನು ನಂದಗೋಪನು ಹಾಗೂ ಗೋಕುಲದ ರಾಜನೂ ಕೂಡಾ. ಆದ್ದರಿಂದ ಉದ್ಧವನು ಮೊದಲು ಆತನ ಮನೆಯನ್ನೇ ಪ್ರವೇಶಿಸಿದನು. ಇದರಿಂದ ಅಲ್ಲಿರುವ ಎಲ್ಲರಿಗೂ ಆನಂದವಾಯಿತು. ಉದ್ಧವನು ನಮ್ಮ ಮನೆಗೂ ಬರುವನೆಂದು. ಇಲ್ಲಿ ಸ್ವಲ್ಪ ಶಬ್ದಸಾಮ್ಯ ಇದೆ. ಉದ್ಧವ ಅಂದರೆ ಆನಂದ ಎಂಬ ಅರ್ಥವೂ ಇದೆ ಎಂದು ಹಿಂದೆ ಹೇಳಿದೆ. ಈ ಉದ್ಧವನು ಕೃಷ್ಣಭಕ್ತನು. ನಂದನ ಮನೆಯನ್ನು ಪ್ರವೇಶಿಸುವ ಕಾಲದಲ್ಲಿಯೇ ಎಲ್ಲರ ಮನದಲ್ಲಿಯೂ 'ಉದ್ಧವ' ಪ್ರವೇಶಿಸಿದೆ. ಅಂದರೆ ಆನಂದವಾಗಿದೆ. ಮೊದಲು ದೂರದಿಂದಲೇ ಕಂಡ ಇವರಿಗೆ ಕಣ್ಣಿಗೆ ಆನಂದವಾಗಿತ್ತು. ಈಗ ಮನಸ್ಸಿಗೂ ಆನಂದವಾಗಿದೆ.

**<u>ಸಂದೇಶ</u>** : ಭಕ್ತರ ದರ್ಶನದಿಂದಲೇ ಇಷ್ಟು ನೆಮ್ಮದಿ ಸಿಗುವಾಗ ಭಗವಂತನ ದರ್ಶನದಿಂದ ಎಷ್ಟು ಸಿಗಲಿಕ್ಕಿಲ್ಲ.

**ತಮರ್ಚಯಾಮಾಸ ಸ ನಂದಗೋಪಃ**
**ಸ್ವನಂದನಾಂಘ್ರ್ಯಂಬುಜಲುಬ್ಧ ಭೃಂಗಮ್ ।**
**ತಥಾ ಹಿ ಲಕ್ಷ್ಮೀಶ ಪದೈಕಭಕ್ತಾ-**
**ಸ್ತದನ್ಯದರ್ಚಂತಿ ತದೀಯಬುದ್ಧ್ಯಾ** ॥ ೧೪ ॥

ಸಃ=ಆ; ನಂದಗೋಪಃ=ನಂದನು: ಸ್ವ=ತನ್ನ; ನಂದನ=ಮಗನ: ಅಂಘ್ರಿ=ಪಾದ ಗಳೆಂಬ; ಅಂಬುಜ=ಕಮಲದಲ್ಲಿ; ಲುಬ್ಧ=ಆಸಕ್ತವಾದ; ಭೃಂಗಂ=ಭ್ರಮರವಾದ; ತಂ= ಅವನನ್ನು; ಅರ್ಚಯಾಮಾಸ=ಪೂಜಿಸಿದನು: ತಥಾಹಿ=ಇದು ಸರಿ; ಲಕ್ಷ್ಮೀಶ=ದೇವರ; ಪದ=ಚರಣದಲ್ಲಿ; ಏಕ=ಮುಖ್ಯವಾದ; ಭಕ್ತಾಃ=ಭಕ್ತರು; ತದೀಯ=ಕೃಷ್ಣಸಂಬಂಧಿಯಾದ; ಭುದ್ಧ್ಯಾ=ಬುದ್ಧಿಯಿಂದ; ತತ್=ಕೃಷ್ಣನಿಗಿಂತ; ಅನ್ಯತ್=ಇನ್ನೊಂದನ್ನು; ಅರ್ಚಯಂತಿ= ಪೂಜಿಸುತ್ತಾರೆ.

ಈ ಉದ್ಧವನು ಕೃಷ್ಣನ ಪಾದಗಳನ್ನೇ ನಂಬಿದವನು. ಅವುಗಳಿಂದಲೇ ಇವನ ಜೀವನ. ಕಮಲಗಳನ್ನೇ ಆಶ್ರಯಿಸಿಕೊಂಡು ಬದುಕುವ ದುಂಬಿಯಂತೆ. ಈ ದೃಷ್ಟಿಯಿಂದ ನಂದಗೋಪನು ಉದ್ಧವನನ್ನು ಪೂಜಿಸಿದನು, ಸತ್ಕರಿಸಿದನು.

ಭೌತಿಕಕಣ್ಣಿಗೆ ನಂದಗೋಪನ ಸ್ವಾರ್ಥದಂತೆ ತೋರಬಹುದು –ಕೃಷ್ಣನು ನಂದನ ನೆಚ್ಚಿನ ಮಗ. ಅವನನ್ನು ಈ ಉದ್ಧವನು ಸದಾ ಪ್ರೀತಿಸುತ್ತಾನೆ. ಆದ್ದರಿಂದ ತನ್ನ ಮಗನಿಗೆ ಬಹಳ ಬೇಕಾದವನು ಎಂದು ನಂದನು ಆದರಿಸಿದನು ಎಂದು. ಆದರೆ ರಾಜರು ಇದನ್ನು ವೈದಿಕ ದೃಷ್ಟಿಯಿಂದ ನೋಡಿ ಈ ರೀತಿ ಹೇಳುತ್ತಾರೆ– ನಂದನು ಉದ್ಧವನನ್ನು ಆದರಿಸಿದ್ದು ಶಾಸ್ತ್ರೀಯ ದೃಷ್ಟಿಯಿಂದ ಹೊರತು ಸ್ವಾರ್ಥದಿಂದ ಅಲ್ಲ. ಶಾಸ್ತ್ರ ಈ ರೀತಿ ಹೇಳುತ್ತದೆ– **ಸರ್ವವರ್ಣಾಶ್ರಮೈಃ ವಿಷ್ಣುಃ ಏಕ ಏವ ಇಜ್ಯತೇ ಸದಾ। ರಮಾಬ್ರಹ್ಮಾದಯಸ್ತಸ್ಯ ಪರಿವಾರತಯೈವತು** ॥ ವೈಷ್ಣವರು ಯಾವ ವರ್ಣದವರೇ ಆಗಲಿ, ಯಾವ ಆಶ್ರಮದವರೇ ಆಗಲಿ, ಎಲ್ಲರೂ ವಿಷ್ಣುವನ್ನೇ ಆರಾಧನೆ ಮಾಡುತ್ತಾರೆ. ಬೇರೆಯವರನ್ನು ಆರಾಧಿಸುವುದಿಲ್ಲವಾ? ಎಂಬ ಪ್ರಶ್ನೆಗೆ– ರಮಾದಿಗಳನ್ನೂ ಪೂಜಿಸುತ್ತಾರೆ. ಸರ್ವೋತ್ತಮತ್ವೇನ ಅಲ್ಲ, ಅಥವಾ ಸ್ವತಂತ್ರರೆಂದೂ ಅಲ್ಲ. ಇವರೆಲ್ಲಾ ದೇವರ ಸೇವಕರು, ಭಕ್ತರು ದೇವರಿಗೆ ಬಹಳ ಪ್ರಿಯರು. ಇವರನ್ನು ಪೂಜಿಸಿದರೆ ದೇವರಿಗೆ ಸಂತೋಷವಾಗು ತ್ತದೆ ಎಂಬ ಅಭಿಪ್ರಾಯದಿಂದ. ಅನ್ಯದೇವತೆಗಳ ಸಂತೋಷಕ್ಕಿಂತಲೂ ದೇವರ ಸಂತೋಷವೇ ಮುಖ್ಯ ಈ ವೈಷ್ಣವರಿಗೆ. ತಂದೆಯ ಪ್ರೀತಿಯನ್ನು ಗಳಿಸಲು ಮಗನನ್ನು ಗೌರವಿಸುವಂತೆ.

**<u>ಸಂದೇಶ</u>** : ದೇವರಿಗೆ ಪ್ರೀತಿಯಾಗುವ ಇತರ ಯಾವ ಕಾರ್ಯಗಳನ್ನೂ ಮಾಡಬಹುದು.

**ಕೃಪಾಂ ಹರೇರಾತ್ಮನಿ ವರ್ಣ್ಯಮಾನಾಂ**
**ನಿಶಮ್ಯ ನಂದಃ ಸಹಜಾಯಯಾಭೂತ್ ।**
**ಪ್ರಹೃಷ್ಟರೋಮಾ ಪ್ರತಿರುದ್ಧಕಂಠಃ**
**ಪ್ರಹರ್ಷವಾರ್ಯಂಕಿತ ಲೋಲನೇತ್ರಃ** ॥ ೧೫ ॥

ನಂದಃ=ನಂದನು: ಹರೇಃ=ಕೃಷ್ಣನ: ಆತ್ಮನಿ=ತನ್ನಲ್ಲಿ; ವರ್ಣ್ಯಮಾನಾಂ=ಹೇಳಲ್ಪಡುವ;

ಕೃಪಾಂ=ದಯೆಯನ್ನು; ನಿಶಮ್ಯ=ಕೇಳಿ; ಜಾಯಯಾ=ಪತ್ನಿಯಿಂದ; ಸಹ=ಕೂಡಿಕೊಂಡು; ಪ್ರಹೃಷ್ಟ=ನೆಮ್ಮದಿಯ; ರೋಮಾ=ರೋಮವುಳ್ಳವನು; ಪ್ರತಿರುದ್ಧ=ತಡೆದ; ಕಂಠಃ= ಕುತ್ತಿಗೆವುಳ್ಳವನು; ಪ್ರಹರ್ಷ=ಆನಂದದ; ವಾರಿ=ನೀರಿನಿಂದ; ಅಂಕಿತ=ಕೂಡಿದ; ಲೋಲ= ಚಂಚಲವಾದ; ನೇತ್ರಃ=ಕಣ್ಣುಳ್ಳವನು; ಅಭೂತ್=ಆದನು.

ಕೃಷ್ಣನು ಮಥುರೆಯಲ್ಲಿ ಈ ಉದ್ಧವಾದಿಗಳ ಜೊತೆಯಲ್ಲಿ ತನ್ನನ್ನು ಸಾಕಿದ ನಂದಾದಿಗಳ ಬಗ್ಗೆ ಬಹಳ ಹೇಳುತ್ತಿದ್ದನು. ಅದನ್ನೆಲ್ಲಾ ಉದ್ಧವನು ಈಗ ನಂದನ ಮುಂದೆ ಬಿಡಿಸಿದನು. ಕೃಷ್ಣನಿಂದ ಅನಂತಾಂಶದಿಂದ ನೀಚರಾದವರು ನಂದಾದಿಗಳು. ಆದರೂ ಇವರನ್ನು ಕೃಷ್ಣನು ಇನ್ನೊಬ್ಬರ ಮುಂದೆ ಹೊಗಳಿ ಮಾತಾಡಿದ್ದನ್ನು ಕೇಳಿಸಿಕೊಂಡ ನಂದನಿಗೆ, ಕೃಷ್ಣನು ತನ್ನಲ್ಲಿ ತೋರಿದ ದಯೆಯ ಅರಿವಾಯಿತು. ಮೈರೋಮಾಂಚನ ಗೊಂಡಿತು. ಕಂಠ ಬಿಗಿದು ಮಾತೇ ಹೊರಡಲಿಲ್ಲ. ಕಣ್ಣುಗಳಲ್ಲಿ ಆನಂದಬಾಷ್ಪ ಹರಿಯಿತು.

<u>**ಸಂದೇಶ**</u> : ನೈಜ ಭಕ್ತನಲ್ಲಿ ಈ ಅವಸ್ಥೆಗಳು ಸಹಜವಾಗಿ ಇರುತ್ತವೆ.

**ವಿಜೃಂಭಿತೇ ಯಸ್ಯ ಮುಖೇ ಸತೀಯ-**
**ಮಪಶ್ಯದಾತ್ಮಾನಮಿದಂ ಜಗಚ್ಚ ।**
**ವಿಯೋಗವಾರ್ತಾಮಮುನೋಽಸೃಜದ್ಧ್ವಂ**
**ಪರಂ ಪರಂಬ್ರಹ್ಮಧಿಯಾ ಭಜದ್ಧ್ವಮ್** ॥ ೧೬ ॥

ವಿಜೃಂಭಿತೇ=ಆಕಳಿಸಿದ; ಯಸ್ಯ=ಯಾವ ಕೃಷ್ಣನ; ಮುಖೇ=ಬಾಯಲ್ಲಿ; ಇಯಂ=ಈ; ಸತೀ=ನಾರಿಯು; ಆತ್ಮಾನಂ=ತನ್ನನ್ನು; ಇದಂ=ಈ; ಜಗತ್ ಚ=ಲೋಕವನ್ನು; ಅಪಶ್ಯತ್=ಕಂಡಳೋ; ಅಮುನಾ=ಇಂತಹ ಕೃಷ್ಣನಿಂದ; ವಿಯೋಗ=ವಿರಹದ; ವಾರ್ತಾಂ= ಮಾತನ್ನು; ಉಸೃಜದ್ವಂ=ಬಿಡಿರಿ; ಪರಂ=ಮತ್ತು; ಪರಂಬ್ರಹ್ಮ=ದೇವರೆಂಬ; ಧಿಯಾ= ಬುದ್ಧಿಯಿಂದ; ಭಜದ್ವಂ=ಭಜಿಸಿರಿ.

ಉದ್ಧವನು ಕೃಷ್ಣನ ಸಂದೇಶವನ್ನು ನಂದದಂಪತಿಗಳಿಗೆ ಕೊಡುತ್ತಿದ್ದಾನೆ– ನಂದನೇ, ಒಂದು ದಿನ ನಿನ್ನ ಈ ಪತ್ನಿಯು ಕೃಷ್ಣನಿಗೆ ಹಾಲೂಡಿಸುತ್ತಿರುವಾಗ ಆತನು ಆಕಳಿಸಿದನು. ಆಗ ಯಶೋದೆಯು ಬಾಯೊಳಗೆ ಇಣಿಕಿದಳು. ಅಲ್ಲಿ ಇಡೀ ಜಗವನ್ನು ಮಾತ್ರವಲ್ಲದೇ ತನ್ನನ್ನೂ ಪ್ರತ್ಯೇಕವಾಗಿ ಕಂಡಳು. ಇದರಿಂದಾಗಿ ತಿಳಿಯುತ್ತೆ– ನೀವು ಸದಾ ಕೃಷ್ಣನ ಜೊತೆಗೇ ಇದ್ದೀರಿ ಎಂದು. ಆದ್ದರಿಂದ ಕೃಷ್ಣ ನಮ್ಮ ಜೊತೆಗಿಲ್ಲ ಎಂದು ಮರುಗಬೇಡಿ. ಮರುಗಿದರೆ ನಿಮ್ಮ ವಿಪರೀತಜ್ಞಾನವು ಸಮಾಜಕ್ಕೆ ತಿಳಿಯುತ್ತದೆ. ಋಷಿಗಳ ಕೋಪಕ್ಕೆ ತುತ್ತಾಗಬೇಕಾಗುತ್ತದೆ. ಆದ್ದರಿಂದ ಕೃಷ್ಣನು ಸರ್ವತ್ರ ವ್ಯಾಪ್ತನಾದ ದೇವರು ಎಂಬ ತಿಳುವಳಿಕೆಯಿಂದ ಆರಾಧಿಸಿರಿ ಎಂದು.

<u>**ಸಂದೇಶ**</u> : ದೇವರ ಒಂದೊಂದು ಕ್ರಿಯೆಯೂ ಸರ್ವೋತ್ತಮತ್ವಕ್ಕೆ ದ್ಯೋತಕ.

**ಸ ನಂದಮಾನಂದ ನಿಧಿಂ ವಿಧಾಯ ಜಗಾಮಗೋಪೀಜನಮಂದಿರಾಣಿ ।**
**ಸುದುಷ್ಕರೋಗ್ರವ್ರತಕರ್ಶಿತಾಂಗ ಮುನೀಂದ್ರವೃಂದಾಶ್ರಮ ಸಂಮಿತಾನಿ ॥ ೧೭ ॥**

ಸಃ=ಉದ್ಧವನು; ನಂದಂ=ನಂದನನ್ನು; ಆನಂದ=ನೆಮ್ಮದಿಯ; ನಿಧಿಂ=ನಿಧಿಯನ್ನಾಗಿ; ವಿಧಾಯ=ಮಾಡಿ; ಸುದುಷ್ಕರ=ಕಷ್ಟಸಾಧ್ಯವಾದ; ಉಗ್ರ=ತೀಕ್ಷ್ಣದ; ವ್ರತ=ನಿಯಮಗಳಿಂದ; ಕರ್ಶಿತ=ಕೃಶವಾದ; ಅಂಗ=ದೇಹವುಳ್ಳ; ಮುನೀಂದ್ರ=ಋಷಿಗಳ; ವೃಂದ=ಸಮೂಹದ; ಆಶ್ರಮ=ಆಶ್ರಮಗಳಿಗೆ; ಸಂಮಿತಾನಿ=ಸದೃಶಗಳಾದ; ಗೋಪೀಜನ=ಗೋಪಿಯರ; ಮಂದಿರಾಣಿ=ಮನೆಗಳನ್ನು; ಜಗಾಮ=ಹೋದನು.

ಉದ್ಧವನ ಉಪದೇಶವನ್ನು ಕೇಳಿ ನಂದನು ಆನಂದತುಂದಿಲನಾದನು. ಇನ್ನು ಗೋಪಿಯರ ಮನದ ಬೇಸರವನ್ನೂ ಕಳೆಯಬೇಕಾಗಿದೆ. ಅದಕ್ಕಾಗಿ ಅವರ ಮನೆಗಳನ್ನೂ ಪ್ರವೇಶಿಸಿದನು. ಈ ಮನೆಗಳೆಲ್ಲಾ ಆಶ್ರಮಗಳಂತೆ ಇದ್ದವು. ಆಶ್ರಮಗಳಲ್ಲಿ ಋಷಿಗಳು ಇರುವರು. ಬಹಳ ಕಠಿಣವಾದ ವ್ರತಗಳನ್ನು ಮಾಡುವರು. ಈ ವ್ರತಗಳನ್ನು ಇನ್ನೊಬ್ಬರಿಂದ ಮಾಡಲು ಬಹಳ ಕಷ್ಟ. ಇಂತಹ ವ್ರತಗಳಿಂದ ದೇಹವು ಬಹಳ ಕೃಶವಾಗುತ್ತದೆ. ಋಷಿಗಳ ಇಷ್ಟೆಲ್ಲಾ ಶ್ರಮ ದೇವರ ದರ್ಶನಕ್ಕಾಗಿ. ಇದೇ ರೀತಿ ಗೋಪಿಯರೂ ತಮ್ಮ ಮನೆಗಳಲ್ಲಿ ಇದ್ದಾರೆ.

**ಸಂದೇಶ** : ದೇವರ ಸಂದೇಶದ ಶ್ರವಣಕ್ಕೂ ಋಷಿಜೀವನ ಅಗತ್ಯ.

**ಕಾಚಿತ್ ಮುಕುಂದೇನ ಸಹೈಕಶಯ್ಯಾಂ**
**ಪ್ರಾಪ್ತುಂ ಬತಾಧಃ ಶಯನವ್ರತಸ್ಥಾ ।**
**ತಜ್ಜುಷ್ಟ ತಾಂಬೂಲಫಲಾಯ ಧನ್ಯಾ**
**ತತ್ಯಾಜ ತಾಂಬೂಲರುಚಿಂ ಕಿಲಾನ್ಯಾ ॥ ೧೮ ॥**

ಕಾಚಿತ್=ಒಬ್ಬಳು; ಮುಕುಂದೇನ=ಕೃಷ್ಣನಿಂದ; ಸಹ=ಕೂಡಿ; ಏಕ=ಒಂದೇ; ಶಯ್ಯಾಂ=ಹಾಸಿಗೆಯನ್ನು; ಪ್ರಾಪ್ತುಂ=ಹೊಂದಲು; ಅಧಃ=ಕೆಳಗೆ; ಶಯನ=ಮಲಗುವಿಕೆಯ; ವ್ರತ=ನಿಯಮದಲ್ಲಿ; ಸ್ಥಾ=ಇರುವವಳು; ಬತ=ಆಶ್ಚರ್ಯವು; ಧನ್ಯಾ=ಕೃತಾರ್ಥಳಾದ; ಅನ್ಯಾ=ಇನ್ನೊಬ್ಬಳು; ತತ್=ಕೃಷ್ಣನಿಂದ; ಜುಷ್ಟ=ತಿನ್ನಲ್ಪಟ್ಟ; ತಾಂಬೂಲ=ತಾಂಬೂಲದ; ಫಲಾಯ=ಫಲಕ್ಕೋಸ್ಕರ; ರುಚಿಂ=ರುಚಿಯನ್ನು; ತತ್ಯಾಜ ಕಿಲ=ಬಿಟ್ಟಳು ತಾನೆ.

ಗೋಪಿಯರ ಋಷಿಜೀವನವನ್ನು ರಾಜರು ವರ್ಣಿಸುತ್ತಾರೆ– ಋಷಿಗಳು ನೆಲದಲ್ಲಿಯೇ ಮಲಗುವುದು. ತಾಂಬೂಲವನ್ನು ತಿನ್ನುವುದಿಲ್ಲ. ಉದ್ಧವನು ಒಂದು ಮನೆಗೆ ಹೋದಾಗ ಅಲ್ಲಿ ಅವಳು ನೆಲದಲ್ಲಿ ಮಲಗಿದ್ದಳು. ಅವಳ ಉದ್ದೇಶ– ಇಲ್ಲಿ ಕಠಿಣ ವ್ರತಗಳಲ್ಲಿ ಒಂದಾದ ನೆಲದಲ್ಲಿ ಮಲಗುವುದನ್ನು ಮಾಡಿದರೆ ಮೋಕ್ಷದಲ್ಲಿ

ದೇವರ ಜೊತೆಗೇ ಹಾಸಿಗೆಯಲ್ಲಿ ಮಲಗುವ ಭಾಗ್ಯ ಸಿಗುತ್ತದೆ ಎಂದು. ಕೃಷ್ಣನು ಗೋಕುಲದಲ್ಲಿರುವಾಗ ಇವರಿಗೆ ಈ ಭಾಗ್ಯ ಒದಗಿತ್ತು. ಆದರೆ ಅದು ಕಠಿಣವ್ರತದಿಂದ ಲಭಿಸಿದ್ದು ಅಲ್ಲ. ಆದ್ದರಿಂದ ಸ್ಥಿರವಾಗಿ ಉಳಿಯಲಿಲ್ಲ. ಸ್ಥಿರವಾಗಿ ಉಳಿಯಲು ಈ ವ್ರತವನ್ನು ಕೈಗೊಂಡಿದ್ದಾಳೆ. ಋಷಿಗಳು ನೆಲದಲ್ಲಿ ಮಲಗುವುದೂ ಇದೇ ಉದ್ದೇಶದಿಂದ.

ಇನ್ನೊಬ್ಬಳು ತಾಂಬೂಲ ಮೆಲ್ಲುವುದನ್ನು ಬಿಟ್ಟಿದ್ದಳು. ಯಾಕೆಂದರೆ ದೇವರ ಎಂಜಲು ತಾಂಬೂಲ ಸಿಗುವುದಕ್ಕೋಸ್ಕರ. ಈಕೆಯೂ ಕೃಷ್ಣನು ಗೋಕುಲದಲ್ಲಿರುವಾಗ ಆತನ ಎಂಜಲು ತಾಂಬೂಲವನ್ನೇ ಮೆಲ್ಲುತ್ತಿದ್ದಳು. ಈಗ ಈಕೆ ದೇವರಿಗೆ ಅರ್ಪಿಸದ ತಾಂಬೂಲವನ್ನು ಮೆದ್ದರೆ ದೇವರು ತನ್ನ ಎಂಜಲನ್ನು ಈಕೆಗೆ ಕೊಡುವುದಿಲ್ಲ. ಅದು ಸಿಕ್ಕಿಲ್ಲವೆಂದರೆ ಈ ಸಂಸಾರವನ್ನು ಗೆಲ್ಲಲು ಸಾಧ್ಯವಿಲ್ಲ. ತಾಂಬೂಲಾದಿಗಳು ವೈಷಯಿಕಸುಖ ದಲ್ಲಿ ಸೇರಿವೆ. ಈ ಸುಖವನ್ನು ತ್ಯಜಿಸಿದವರಿಗೆ ದೇವರು ಲಭ್ಯ. ಶಾಸ್ತ್ರದಲ್ಲಿ 'ಉಚ್ಛಿಷ್ಟಭೋಜನೋ ದಾಸಾಃ ತವ ಮಾಯಾಂ ಜಯೇಮಹಿ' –ದೇವರ ಎಂಜಲನ್ನು ಉಂಡವರು ಆತನ ಮಾಯೆಯನ್ನು ಗೆಲ್ಲಬಹುದು ಎಂದು ಮಾತಿದೆ. ಈ ದೃಷ್ಟಿಯಿಂದಲೇ ಋಷಿಗಳು ತಾಂಬೂಲಚರ್ವಣವನ್ನು ಬಿಡುವುದು.

<u>ಸಂದೇಶ</u> : ದೇವರನ್ನು ಒಲಿಸಿಕೊಳ್ಳಲು ನಾನಾರೀತಿಯ ವ್ರತಗಳು ಅಗತ್ಯ.

**ತದ್ಭುಕ್ತಶೇಷೋದನಲುಬ್ಧಚಿತ್ತಾ ನಿತ್ಯಂ ಕಿಲೈಕಾನಶನವ್ರತಸ್ಥಾ ।**
**ಸ್ವಪ್ನೇಽಪಿ ತತ್ಸಂಗಮಿವಾಪ್ತುಕಾಮಾ ಸ್ವಸ್ಥಾಪಿ ಶೇತೇ ಕಿಲ ಕಾಪಿ ದೀನಾ ॥ ೧೯ ॥**

ತತ್=ಕೃಷ್ಣನಿಂದ; ಭುಕ್ತ=ಊಟದ; ಶೇಷ=ಉಳಿದ; ಓದನ=ಅನ್ನದಲ್ಲಿ; ಲುಬ್ಧ=ಆಸಕ್ತ ವಾದ; ಚಿತ್ತಾ=ಮನಸ್ಸುಳ್ಳ; ಏಕಾ=ಒಬ್ಬಳು; ನಿತ್ಯಂ=ಯಾವಾಗಲೂ; ಅನಶನ=ಉಪವಾಸ ವೆಂಬ; ವ್ರತ=ವ್ರತದಲ್ಲಿ; ಸ್ಥಾ ಕಿಲ=ಇದ್ದಾಳೆತಾನೆ; ದೀನಾ=ದೀನಳಾದ; ಕಾ ಅಪಿ=ಒಬ್ಬಳು; ಸ್ವಪ್ನೇ ಅಪಿ=ಕನಸಿನಲ್ಲಾದರೂ; ತತ್=ಕೃಷ್ಣನ; ಸಂಗಂ=ಸಂಬಂಧವನ್ನು; ಆಪ್ತು= ಹೊಂದಲು; ಕಾಮಾ ಇವ=ಅಪೇಕ್ಷಿಸಿದಂತೆ; ಸ್ವಸ್ಥಾ ಅಪಿ=ಆಲಸ್ಯ ಇಲ್ಲದಿದ್ದರೂ; ಶೇತೇಕಿಲ= ಮಲಗಿದ್ದಾಳೆತಾನೆ.

ಇನ್ನೊಬ್ಬಳು ಋಷಿಗಳಂತೆ ಉಪವಾಸ ಇದ್ದಳು. ಅವಳದ್ದು ನಿರಶನವ್ರತ. ಕೃಷ್ಣ ಉಂಡು ಉಳಿದ ಅನ್ನ ಸಿಗುವುದಾದರೆ ಮಾತ್ರ ಉಣ್ಣುತ್ತೇನೆ. ಇಲ್ಲದಿದ್ದರೆ ಉಪವಾಸ ಇರುತ್ತೇನೆ ಎಂದು ದೀಕ್ಷೆ ತೊಟ್ಟವಳು. ಈಕೆಯ ಈ ಛಲಕ್ಕೆ ಕೃಷ್ಣನು ಸ್ಪಂದಿಸುತ್ತಾನೆ. ಬಂದು ತನ್ನ ಎಂಜಲನ್ನು ಕೊಟ್ಟೇ ಕೊಡುವನು. ಅದಕ್ಕಾಗಿಯಾದರೂ ಬಂದಾನು ಎಂಬ ನಂಬಿಕೆ ಆಕೆಯದು.

ಇನ್ನೊಬ್ಬಳು ಮಲಗಿದ್ದಾಳೆ. ಸಾಮಾನ್ಯವಾಗಿ ಮಲಗುವುದು ಆಲಸ್ಯ ಉಂಟಾದಾಗ. ಆದರೆ ಇವಳಿಗೆ ಯಾವ ಆಲಸ್ಯವೂ ಇಲ್ಲ. ಆದರೂ ಮಲಗಿದ್ದಾಳೆ. ಇವಳ ಉದ್ದೇಶ

ಈ ರೀತಿ– ಎಚ್ಚರಿಕೆಯಲ್ಲಿ ಕೃಷ್ಣನ ದರ್ಶನ ಆಗುತ್ತಿಲ್ಲ. ಈ ಅವಸ್ಥೆಯಲ್ಲಿ ಸದಾ ಕೃಷ್ಣನ ಚಿಂತನೆ ಇರುತ್ತದೆ. ಅದರ ಸಂಸ್ಕಾರ ಮನಸ್ಸಿನಲ್ಲಿ ಇರುತ್ತದೆ. ಮಲಗಿದ್ದಾಗ ನಿದ್ದೆ ಹತ್ತಿದರೆ ಸಂಸ್ಕಾರವಶಾತ್ ಸ್ವಪ್ನದಲ್ಲಿಯಾದರೂ ಕೃಷ್ಣದರ್ಶನವಾದೀತು ಎಂಬ ಆಸೆ ಆಕೆಗೆ.

**ಸಂದೇಶ** : ನಮ್ಮ ಜೀವನದ ಎಲ್ಲಾ ಅವಸ್ಥೆಗಳನ್ನು ದೇವರ ಸೇವೆಗಾಗಿ ಉಪಯೋಗಿಸಲು ಸಾಧ್ಯವಾಗುತ್ತದೆ.

**ಕಾಂತಂ ಹರಿಂ ತತ್ಪ್ರಭವಂ ಕುಮಾರಂ**
**ತಜ್ಜುಷ್ಟಗೇಹಂ ಗೃಹಮೂಹಮಾನಾ ।**
**ಪತ್ಯುರ್ನ ಪೂಜಾಂ ನಚ ಪುತ್ರರಕ್ಷಾಂ**
**ಕೃತ್ಯಂ ನ ಗೃಹ್ಯಂ ವಿತನೋತಿ ತನ್ವೀ** ॥ ೨೦ ॥

ತನ್ವೀ=ನಾರಿಯು; ಹರಿಂ=ಕೃಷ್ಣನನ್ನು; ಕಾಂತಂ=ಪತಿಯನ್ನಾಗಿ; ತತ್=ಆತನಿಂದ; ಪ್ರಭವಂ=ಹುಟ್ಟಿದವನನ್ನು; ಕುಮಾರಂ=ಮಗನನ್ನಾಗಿ; ತತ್=ಕೃಷ್ಣನಿಂದ; ಜುಷ್ಟಂ=ಸೇವಿಸಿದ್ದ; ಗೇಹಂ=ಮನೆಯನ್ನು; ಗೃಹಂ=ಮನೆಯನ್ನಾಗಿ; ಊಹಮಾನಾ=ತಿಳಿದವಳಾಗಿ; ಪತ್ಯುಃ=ಪತಿಯ; ಪೂಜಾಂ=ಸೇವೆಯನ್ನು; ಪುತ್ರ=ಮಗನ; ರಕ್ಷಾಂ=ರಕ್ಷಣೆಯನ್ನು; ಗೃಹ್ಯಂ=ಮನೆಯ; ಕೃತ್ಯಂ=ಕೆಲಸವನ್ನು; ನವಿತನೋತಿ=ಮಾಡುವುದಿಲ್ಲ.

ಋಷಿಗಳಿಗೆ ಪ್ರಾಪಂಚಿಕ ಸಂಬಂಧಿಗಳು ಎಂಬುದು ಇಲ್ಲ. ತಂದೆತಾಯಿ ಮೊದಲಾದ ಎಲ್ಲಾರೀತಿಯ ಸಂಬಂಧವನ್ನು ಕಳಚಿಕೊಂಡವರು. ಏನಿದ್ದರೂ ಎಲ್ಲಾ ರೀತಿಯ ಸಂಬಂಧಿಯೂ ದೇವರೇ. ಅದೇ ರೀತಿ ಈ ಗೋಪಿಯೂ ಕೃಷ್ಣನನ್ನೇ ತನ್ನ ಪತಿಯನ್ನಾಗಿ, ಆತನಿಂದ ಹುಟ್ಟಿದವರನ್ನೇ ಸುತರನ್ನಾಗಿ, ಆತನು ವಾಸಮಾಡಿದ ಜಾಗವನ್ನೇ ಮನೆಯನ್ನಾಗಿ ನಂಬಿದವಳು. ಆದ್ದರಿಂದ ಲೋಕದಲ್ಲಿ ಕೈಹಿಡಿದ ಪತಿಯ ಸೇವೆಯನ್ನು, ಆತನಿಂದ ಹುಟ್ಟಿದವರ ರಕ್ಷಣೆಯನ್ನು, ಇವರೆಲ್ಲಾ ಇರುವ ಜಾಗದ ಕೆಲಸವನ್ನು ಮಾಡಲಿಲ್ಲ. ಇವೆಲ್ಲಾ ಬಂಧಕಗಳು, ದೇವರಲ್ಲೇ ಎಲ್ಲವನ್ನೂ ಕಾಣುವುದು ಮೋಚಕಗಳು.

**ಸಂದೇಶ** : ಭ ಅಂದರೆ ಭಗವಂತ. ಆತನಿಂದ ರಹಿತವಾದ ಭ– ವನ ಕೇವಲ ವನವು.

**ರತ್ನಾವಸಾನೇ ಮುರಜಿತ್ಕರೇಣ ನಿಬದ್ಧಮೋಕೋಜ್ಝಿತಕೇಶಬಂಧಾ ।**
**ತದೈವ ತತ್ಸಂಹಿತಭೂಷಣೇಚ್ಛಾ ನ ಭೂಷಣಂ ಕಾಪಿ ಬಿಭರ್ತಿಬಾಲಾ** ॥ ೨೧ ॥

ಏಕಾ=ಒಬ್ಬಳು; ರತ=ಕ್ರೀಡೆಯ; ಅವಸಾನೇ=ಕೊನೆಯಲ್ಲಿ; ಮುರ=ಮುರನನ್ನು; ಜಿತ್=ಗೆದ್ದಿರುವ ಕೃಷ್ಣನ; ಕರೇಣ=ಕೈಯಿಂದ; ನಿಬದ್ಧಂ=ಕಟ್ಟಲು; ಉಜ್ಝಿತ=ಬಿಚ್ಚಲ್ಪಟ್ಟ; ಕೇಶ=ಕೂದಲಿನ; ಬಂಧಾ=ಸೂಡಿವುಳ್ಳವಳು; ತದಾ ಏವ=ಆಗಲೇ; ತತ್=ಕೃಷ್ಣನಲ್ಲಿ; ಸಂಹಿತ=ಇರುವ; ಭೂಷಣ=ಆಭರಣಗಳ; ಇಚ್ಛಾ=ಆಸೆವುಳ್ಳ; ಕಾ ಅಪಿ=ಒಬ್ಬಳು; ಬಾಲಾ=ಗೋಪಿಯು; ಭೂಷಣಂ=ಆಭರಣವನ್ನು; ನ ಬಿಭರ್ತಿ=ಧರಿಸಲಿಲ್ಲ.

ಋಷಿಗಳು ತಲೆಕೂದಲುಗಳನ್ನು ಎಣ್ಣೆಯಿಂದ ತೋಯಿಸುವುದಿಲ್ಲ. ಅವುಗಳು ಅಸ್ತವ್ಯಸ್ತವಾಗಿ ಇರುತ್ತವೆ. ಒಬ್ಬಳು ಗೋಪಿಯೂ ತನ್ನ ತಲೆಕೂದಲುಗಳನ್ನು ಸಂಸ್ಕರಿಸಲಿಲ್ಲ. ಸೂಡಿಹಾಕದೆ ಹಾಗೆಯೇ ಬಿಟ್ಟಿದ್ದಳು. ಕೃಷ್ಣನು ಗೋಕುಲದಲ್ಲಿ ಇದ್ದಾಗ ಆಕೆಯ ಜೊತೆಗೆ ವಿಹರಿಸುತ್ತಿದ್ದ. ಬಿಚ್ಚಿದ ಆಕೆಯ ಕೂದಲನ್ನು ಆತನೇ ಕಟ್ಟುತ್ತಿದ್ದ. ಈಗಲೂ ಆತನೇ ಬಂದು ಕಟ್ಟಲಿ ಎಂಬ ಅಭಿಪ್ರಾಯ ಆಕೆಗೆ.

ಋಷಿಗಳಿಗೆ ದೇವರನ್ನು ತಿಳಿಸುವ ವರ್ಣಗಳೇ ಸುವರ್ಣಗಳು. ವಿರಕ್ತರಾದ್ದರಿಂದ ಚಿನ್ನಾಭರಣಗಳನ್ನು ಧರಿಸುವುದಿಲ್ಲ. ಗೋಕುಲದಲ್ಲಿ ಒಂದು ಮನೆಯ ಗೋಪಿಯು ಈ ಮುನಿಗಳಂತೆ ನಿರಾಭರಣೆಯಾಗಿದ್ದಳು. ಒಂದು ಸಲ ಕೃಷ್ಣನು ಈಕೆಯ ಜೊತೆ ವಿಹರಿಸಿ ತನ್ನ ಎಲ್ಲಾ ಆಭರಣಗಳನ್ನು ಈಕೆಗೆ ಕೊಟ್ಟಿದ್ದ. ಈಗಲೂ ಅಂತಹ ಆಭರಣಗಳು ಬೇಕು. ಇಲ್ಲದಿದ್ದರೆ ಹೀಗೆಯೇ ಇರುವೆನು ಎಂಬ ಹಠ ಆಕೆಗೆ.

**<u>ಸಂದೇಶ</u>** : ದೇವನ ಪ್ರೀತಿಗಾಗಿ ದೇಹದ ಮೋಹ ಕಡಿಮೆ ಆಗಬೇಕು.

**ಪ್ರದಕ್ಷಿಣೀಕೃತ್ಯ ದಿನೇ ದಿನೇನ್ಯಾಃ ಸ್ವಧಾಮವೃಂದಾವನಮರ್ಥಯಂತೇ ।**
**ವಿಕಸ್ವರಕ್ಷ್ಮಾರುಹಪುಂಜಮಂಜುಮುಕುಂದ ವೃಂದಾವನರಾಸಲೀಲಾಮ್ ॥ ೨೨ ॥**

ಅನ್ಯಾಃ=ಬೇರೆ ಗೋಪಿಯರು; ದಿನೇ ದಿನೇ=ಪ್ರತಿದಿನ; ಸ್ವ=ತಮ್ಮ; ಧಾಮ=ಮನೆಯ; ವೃಂದಾವನಂ=ವೃಂದಾವನವನ್ನು; ಪ್ರದಕ್ಷಿಣೀಕೃತ್ಯ=ಪ್ರದಕ್ಷಿಣೆ ಬಂದು; ವಿಕಸ್ವರ=ಅರಳಿದ; ಕ್ಷ್ಮಾರುಹ=ಮರಗಳ; ಪುಂಜ=ಸಮೂಹದ; ಮಂಜು=ಚಂದದ; ಮುಕುಂದ=ಕೃಷ್ಣನ; ವೃಂದಾವನ=ವೃಂದಾವನದ; ರಾಸಲೀಲಾಂ=ರಾಸಕ್ರೀಡೆಯನ್ನು; ಅರ್ಥಯಂತೇ=ಪ್ರಾರ್ಥಿಸುತ್ತಾರೆ.

ಋಷಿಗಳ ಆಶ್ರಮಗಳ ಮುಂದೆ ತುಳಸೀವೃಂದಾವನಗಳಿರುತ್ತವೆ. ಋಷಿಗಳು ಪ್ರತಿದಿನ ಅವುಗಳಿಗೆ ಪ್ರದಕ್ಷಿಣೆ ಬರುತ್ತಾರೆ. ಯಾಕೆಂದರೆ ಅಲ್ಲಿ ದೇವರ ಸನ್ನಿಧಾನ ಬಹಳ ಇರುತ್ತದೆ. ಗೋಪಿಯರ ಮನೆಗಳ ಮುಂದೆಯೂ ವೃಂದಾವನಗಳಿವೆ. ಅವುಗಳಿಗೆ ಗೋಪಿಯರು ಪ್ರತಿದಿನ ಪ್ರದಕ್ಷಿಣೆ ಬರುತ್ತಿದ್ದರು. ಹಾಗೆಯೇ ಕೃಷ್ಣನ ಜೊತೆ ರಾಸಲೀಲೆಯ ಭಾಗ್ಯವನ್ನು ಪುನಃ ಬೇಡುತ್ತಿದ್ದರು. ಇಲ್ಲಿ ಅದನ್ನು ಯಾಕೆ ಬೇಡುತ್ತಿದ್ದರು? ಅಂದರೆ ಸಾಮ್ಯ ಇರುವುದರಿಂದ. ಕೃಷ್ಣನ ವೃಂದಾವನದಲ್ಲಿ ಮರಗಳು ಚೆನ್ನಾಗಿ ಪುಷ್ಪಿತಗಳಾಗಿರುತ್ತವೆ. ಇದರಿಂದ ವೃಂದಾವನ ಚೆನ್ನಾಗಿ ಶೋಭಿಸುತ್ತಿರುತ್ತದೆ. ರಾಸಲೀಲೆ ಅಂದರೂ ಪ್ರದಕ್ಷಿಣೆ ಬರುವುದೇ ಆಗಿದೆ. ಈ ತುಳಸೀ ವೃಂದಾವನದಲ್ಲಿಯೂ ತುಳಸೀಗಿಡವು ಚೆನ್ನಾಗಿ ಅರಳಿ ತುಳಸೀಕಟ್ಟೆಗೆ ಶೋಭೆಯನ್ನು ಕೊಡುತ್ತದೆ. ದೇವರ ಸನ್ನಿಧಾನವೂ ವಿಶೇಷವಾಗಿ ಇದೆ. ತುಳಸೀಕಟ್ಟೆಗೂ ಎಲ್ಲರೂ ಪ್ರದಕ್ಷಿಣೆಯನ್ನೇ ಬರುವುದು.

**<u>ಸಂದೇಶ</u>** : ಫಲವನ್ನು ಅನುಸರಿಸಿಕೊಂಡು ದೇವರನ್ನು ಸೇವಿಸಬೇಕು. 'ತಂ ಯಥಾ ಉಪಾಸತೇ ತಥೈವ ಭವತಿ'. ಉಪಾಸನೆಗನುಸಾರ ಫಲ.

ನಿಜೈರ್ಜನನ್ಯಾ ಜನಕೇನ ಸಾಕಂ
ನಭಾಷತೇ ಕಿಂಚನ ಕಾಪಿ ಗೋಪೀ
ಪ್ರಿಯೇಣ ಸಾರ್ಧಂ ಬತ ರಮ್ಯಗೋಷ್ಠಿ-
ಮಕುರ್ವತೀ ಕಿಂ ವಚಸೇತಿ ದೀನಾ ॥ ೨೩ ॥

ಕಾ ಅಪಿ=ಒಬ್ಬಳು; ದೀನಾ=ದೀನಳಾದ; ಗೋಪೀ=ಗೋಪಿಯು; ಪ್ರಿಯೇಣ=ಇಷ್ಟನಾದ ಕೃಷ್ಣನಿಂದ; ಸಾರ್ಧಂ=ಕೂಡಿಕೊಂಡು; ರಮ್ಯ=ಚಂದದ; ಗೋಷ್ಠೀಂ=ಮಾತನ್ನು; ಅಕುರ್ವತೀ=ಮಾಡದವಳಾಗಿ; ನಿಜೈಃ=ತನ್ನವರಿಂದ; ಜನನ್ಯಾ=ತಾಯಿಯಿಂದ; ಜನಕೇನ=ತಂದೆಯಿಂದ; ಸಾಕಂ=ಕೂಡಿ; ವಚಸಾ=ಮಾತಿನಿಂದ; ಕಿಂ=ಏನು; ಇತಿ= ಎಂದು; ನ ಭಾಷತೇ=ಮಾತಾಡುತ್ತಿರಲಿಲ್ಲ; ಬತ=ಆಶ್ಚರ್ಯವು.

ಆಶ್ರಮಗಳಲ್ಲಿ ಋಷಿಗಳು ಮುನಿಗಳಾಗಿ ಇರುತ್ತಾರೆ. ಮುನಿಗಳು ಅಂದರೆ ಯಾರ ಜೊತೆಯೂ ಹಾಳುಹರಟೆ ಮಾತಾಡದವರು. ಸದಾ ದೇವರ ಜೊತೆಗೇ ವ್ಯವಹರಿಸುವವರು.

ಗೋಕುಲದಲ್ಲಿ ಎಲ್ಲಾ ಗೋಪಿಯರೂ ತಮ್ಮ ಬಂಧುಗಳ ಜೊತೆ ವ್ಯರ್ಥವಾಗಿ ಕಾಲಕಳೆಯುತ್ತಿರಲಿಲ್ಲ. ಇವರೆಲ್ಲಾ ಮೊದಲು ದೇವರ ಜೊತೆಗೇ ವ್ಯವಹರಿಸುತ್ತಿದ್ದವರು. ಈ ಬಂಧುಗಳ ಜೊತೆ ವ್ಯವಹರಿಸಿ ಏನಾಗಬೇಕಿದೆ? ಮತ್ತಷ್ಟು ಸಮಸ್ಯೆಗಳನ್ನೇ ಸೃಷ್ಟಿಸುವವರು ಎಂಬ ಭಾವನೆ ಈ ನಾರಿಯರಿಗೆ.

<u>**ಸಂದೇಶ**</u> : ಲೌಕಿಕರ ಜೊತೆಗೆ ವ್ಯವಹಾರ ಕಮ್ಮಿಯಾಗಿ ದೇವರ ಜೊತೆಗೆ ಜಾಸ್ತಿಯಾಗಬೇಕು. ಇದನ್ನೇ ಮಧ್ವರು ದ್ವಾದಶಸ್ತೋತ್ರದಲ್ಲಿ 'ತದಲಂ ಬಹುಲೋಕ-ವಿಚಿಂತನ ಯಾ ಪ್ರವಣಂ ಕುರು ಮಾನಸಂ ಈಶ ಪದೇ' ಎಂದು ತಿಳಿಸಿದ್ದಾರೆ.

ಮಂದಾನಿಲಂ ಚಂದನರಮ್ಯಗಂಧಿಮಿಂದೀವರಾಕ್ಷೀ ಸಹತೇ ನ ಕಾಚಿತ್ ।
ವಿಶ್ಲೇಷವಹ್ನೇರ್ದಹತೋ ನಿಜಾಂಗಂ ವೃದ್ಧಿಂ ವಿದಧ್ಯಾದಿತಿ ಚಿಂತಯೇವ ॥ ೨೪ ॥

ಕಾಚಿತ್=ಒಬ್ಬಳು; ಇಂದೀವರಾಕ್ಷೀ=ಗೋಪಿಯು; ನಿಜ=ತನ್ನ; ಅಂಗಂ=ದೇಹವನ್ನು; ದಹತ=ಸುಡುವ; ವಿಶ್ಲೇಷ=ವಿಯೋಗವೆಂಬ; ವಹ್ನೇಃ=ಬೆಂಕಿಯು; ವೃದ್ಧಿಂ=ಬೆಳವಣಿಗೆ ಯನ್ನು; ವಿದಧ್ಯಾತ್=ಮಾಡುತ್ತದೆ; ಇತಿ=ಎಂದು; ಚಿಂತಯಾ ಇವ=ಆಲೋಚನೆಯಂತೆ; ಚಂದನ=ಗಂಧದಿಂದ; ರಮ್ಯ=ಚಂದದ; ಗಂಧಿಂ=ಪರಿಮಳವುಳ್ಳ; ಮಂದ=ನಿಧಾನವಾದ; ಮಾರುತಂ=ಗಾಳಿಯನ್ನು; ನ ಸಹತೇ=ಸಹಿಸುವುದಿಲ್ಲ.

ಋಷಿಗಳು ವಾಯುವಿಹಾರಕ್ಕೆ ಎಂದೂ ಹೋಗುವವರಲ್ಲ. ಅದೂ ಒಂದು ರೀತಿಯಲ್ಲಿ ಲೌಕಿಕ ಜೀವನವೇ ಆಗುತ್ತದೆ. ಒಬ್ಬಳು ಗೋಪಿಯೂ ತಾನು ವಾಯುವಿಹಾರ ವನ್ನು ಮಾಡುತ್ತಿರಲಿಲ್ಲ. ಯದ್ಯಪಿ ಈ ಗಾಳಿಯು ಸೇವಿಸಲು ಅಯೋಗ್ಯವಾಗಿರಲಿಲ್ಲ.

ಗಂಧದ ಮರಗಳ ಮೂಲಕ ಬರುವ ಗಾಳಿಯಾಗಿದ್ದರಿಂದ ಪರಿಮಳಿತವೂ, ತಂಪೂ ಆಗಿತ್ತು. ಆದರೂ ಈಕೆಗೆ ಭಯ –ಗಾಳಿಯು ಬೆಂಕಿಯ ಮಿತ್ರ; ಬೆಂಕಿಯು ಜೋರಾಗಿ ಉರಿಯುವುದು ಗಾಳಿಯ ಸಹಾಯದಿಂದ. ಈಕೆಯಲ್ಲಿ ಕೃಷ್ಣನ ವಿರಹವೆಂಬ ಬೆಂಕಿಯು ಇದೆ. ಗಾಳಿಯನ್ನು ಸೇವಿಸಿದರೆ ಈ ಬೆಂಕಿಯು ಜೋರಾಗಿ ಉರಿಯುತ್ತದೆ. ಇದರಿಂದ ತಾಪವೂ, ದುಃಖವೂ ಜಾಸ್ತಿಯಾಗುತ್ತದೆ ಎಂದು.

**ಸಂದೇಶ** : ಲೌಕಿಕ ಜೀವನವನ್ನು ಕಮ್ಮಿ ಮಾಡಿದರೆ ಮಾನಸಿಕ ದುಃಖವು ಕಮ್ಮಿಯಾಗುತ್ತದೆ.

**ಆಲಾಪಮಾಲ್ಯಾಃ ಪ್ರಿಯಮಪ್ಯಪಾರ್ಥ–**
**ಮಾಲೋಚ್ಯ ಬಾಲಾ ನ ಹಿ ಶುಶ್ರುವೇನ್ಯಾ ।**
**ಸೇಯಂ ಮುಕುಂದಾಗಮನಂ ವದಂತೀ**
**ಜಾತೇದೃಶೀತ್ಯುತ್ಥಿತ ತೀವ್ರತಾಪಾ ॥ ೨೫ ॥**

ಅನ್ಯಾ=ಇನ್ನೊಬ್ಬಳು; ಬಾಲಾ=ಗೋಪಿಯು; ಮುಕುಂದ=ಕೃಷ್ಣನ; ಆಗಮನಂ= ಬರುವಿಕೆಯನ್ನು; ವದಂತೀ=ಹೇಳುವ; ಸಾ ಇಯಂ=ಆ ಇವಳು; ಈದೃಶೀ=ಇಂಥವಳು; ಜಾತಾ=ಆದಳು; ಇತಿ=ಎಂದು; ಉತ್ಥಿತ=ಉಂಟಾದ; ತೀವ್ರ=ಬಹಳವಾದ; ತಾಪಾ=ದುಃಖ ವುಳ್ಳವಳಾಗಿ; ಆಲ್ಯಾಃ=ಗೆಳತಿಯ; ಪ್ರಿಯಂ ಅಪಿ=ಇಷ್ಟವಾಗಿದ್ದರೂ; ಆಲಾಪಂ= ಮಾತು ಗಳನ್ನು; ಅಪಾರ್ಥಂ=ವ್ಯರ್ಥವನ್ನಾಗಿ; ಆಲೋಚ್ಯ=ತಿಳಿದು; ನ ಹಿ ಶುಶ್ರುತೇ=ಕೇಳಲಿಲ್ಲ.

ಋಷಿಗಳು ಲೌಕಿಕರ ಜೊತೆಗೆ ಮಾತನಾಡುತ್ತಾರೆ. ಅಂದರೆ ಲೌಕಿಕರು ದೇವರ ವಿಷಯವನ್ನೇ ಮಾತನಾಡಬೇಕು. ಅಕಸ್ಮಾತ್ ಅವರೇನಾದರೂ ವಿಷಯವನ್ನು ಲೋಕದ ಕಡೆಗೆ ತಿರುಗಿಸಿದರೆ ಋಷಿಗಳು ಅಲ್ಲಿಂದ ಹೊರಟಾಯಿತು. ಯಾರೋ ಕೆಲವರು ಒಬ್ಬಳು ಗೋಪಿಯ ಮನೆಗೆ ಬಂದರು. ಕೃಷ್ಣನು ಅವಳ ಮನೆಗೆ ಬರುವ ಬಗ್ಗೆ ಮಾತ ನಾಡುತ್ತಿದ್ದರು. ಇವಳೂ ಅವರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದಳು. ಅದಕ್ಕೆ ಪೂರಕವಾದ ಮಾತುಗಳನ್ನು ಆಡುತ್ತಿದ್ದಳು. ಆದರೆ ಬಂದವರು ವಿಷಯಾಂತರಕ್ಕೆ ಹೋದರು. ಇದರಿಂದಾಗಿ ಇವಳ ವಿರಹವೇದನೆಯು ಇನ್ನಷ್ಟು ಜಾಸ್ತಿಯಾಯಿತು. ವಿಷಯಾಂತರ ವಾದರೂ ಒಳ್ಳೆಯ ಮಾತೇ ಆಗಿತ್ತು. ಯಾರ ಬಗ್ಗೆಯೂ ಮತ್ಸರಿಸುವಂಥದ್ದೂ, ಬಯ್ಯುವಂಥದ್ದೂ ಆಗಿರಲಿಲ್ಲ. ಆದರೂ ಇವಳು ಮಾತ್ರ ಗೆಳತಿಯರ ಮಾತನ್ನು ಕೇಳಿಸಿಕೊಳ್ಳಲೇ ಇಲ್ಲ. ಇದು ವ್ಯರ್ಥವಾದ ಮಾತೆಂದು ಕಡೆಗಣಿಸಿದಳು.

**ಸಂದೇಶ** : 'ದುರ್ವಾರ್ತಾ ದುಷ್ಟಶಬ್ದೇಭ್ಯೋ ನಿವರ್ತಯ ಹರೇ ಶ್ರುತೀ' ಕೆಟ್ಟ ವಾರ್ತೆಗಳಿಂದ ಕೆಟ್ಟ ಶಬ್ದಗಳಿಂದ ನಮ್ಮ ಕಿವಿಗಳು ದೂರ ಸರಿಯಬೇಕು.

**ಕರ್ಪೂರ ಕುಂಕುಮಲಸನ್ಮೃಗನಾಭಿಶೋಭಿ**
**ನೇಚ್ಛತ್ಯಹೋ ಮಲಯಜಾಮಲಚೂರ್ಣಮನ್ಯಾ ।**
**ಕೃಷ್ಣಾಂಗಸಂಗಿ ತದಲಂ ಪರಿರಭ್ಯ ದೋರ್ಭ್ಯಾಂ**
**ಧರ್ತುಂ ಧಿಯೇವ ವರವೈಷ್ಣವವರ್ಗಯೋಗ್ಯಮ್ ॥ ೨೬ ॥**

ಅನ್ಯಾ=ಇನ್ನೊಬ್ಬಳು; ಕೃಷ್ಣ=ಕೃಷ್ಣನ; ಅಂಗ=ದೇಹದ; ಸಂಗಿ=ಸಂಬಂಧವುಳ್ಳ; ವರ=ಉತ್ತಮ; ವೈಷ್ಣವ=ವೈಷ್ಣವರ; ವರ್ಗ=ಗುಂಪಿಗೆ; ಯೋಗ್ಯಂ=ಉಚಿತವಾದ; ತತ್= ಅದನ್ನು; ದೋರ್ಭ್ಯಾಂ=ಕೈಗಳಿಂದ; ಅಲಂ=ಚೆನ್ನಾಗಿ; ಪರಿರಭ್ಯ=ಆಲಿಂಗಿಸಿ; ಧರ್ತುಂ= ಧರಿಸಲು; ಧಿಯಾ ಇವ=ಬುದ್ಧಿಯಂತೆ; ಕರ್ಪೂರ=ಕರ್ಪೂರದಿಂದ; ಕುಂಕುಮ= ಕೇಸರಿ ಯಿಂದ; ಲಸತ್=ಒಳ್ಳೆಯ; ಮೃಗನಾಭಿ=ಕಸ್ತೂರಿಯಿಂದ; ಶೋಭಿ=ಶೋಭಿಸುವ; ಮಲಯಜ=ಚಂದನದ; ಅಮಲ=ಒಳ್ಳೆಯ; ಚೂರ್ಣಂ=ಪುಡಿಯನ್ನು; ನ ಇಚ್ಛತಿ= ಅಪೇಕ್ಷಿಸುವುದಿಲ್ಲ; ಅಹೋ=ಆಶ್ಚರ್ಯವು.

ಋಷಿಗಳು ತಮ್ಮ ಮೈಗಳಿಗೆ ಸುಗಂಧ ಲೇಪನಾದಿಗಳನ್ನು ಮಾಡಿಕೊಳ್ಳುವುದಿಲ್ಲ. ಒಬ್ಬಳು ಗೋಪಿಯು ಅದೇ ರೀತಿ ಇದ್ದಳು. ಇವಳ ಮನೆಯಲ್ಲಿ ಅಗರು ಗಂಧ ತೇದಿದ್ದು ಇತ್ತು. ಅದಕ್ಕೆ ಪಚ್ಚೆಕರ್ಪೂರ, ಕುಂಕುಮಕೇಸರಿ, ಕಸ್ತೂರಿ ಇದನ್ನೆಲ್ಲಾ ಸೇರಿಸಿತ್ತು. ಇದರಿಂದ ತುಂಬಾ ಪರಿಮಳವೂ ಹೊರಡುತ್ತಿತ್ತು. ಆದರೂ ಹಚ್ಚಿಕೊಳ್ಳಲಿಲ್ಲ. ಯಾಕೆಂದರೆ ಇದನ್ನು ಕೃಷ್ಣ ಹಚ್ಚಿಕೊಂಡಿರಲಿಲ್ಲ. ಆತನು ತನ್ನ ಮೈಗೆ ಹಚ್ಚಿಕೊಳ್ಳಬೇಕು. ಅಂತಹ ಮೈಯಿಂದ ಆತನು ನನ್ನನ್ನು ಆಲಿಂಗಿಸಬೇಕು. ಆಗ ಆ ಚಂದನವು ನನ್ನ ಮೈಗೆ ತಗಲಬೇಕು. ಆ ತನಕ ಹಚ್ಚಿಕೊಳ್ಳುವುದಿಲ್ಲ. ನಾನು ಉತ್ತಮ ವೈಷ್ಣವಳು. ವೈಷ್ಣವರಾದ ಋಷಿಗಳು ಎಂದೂ ದೇವರಿಗೆ ನೈವೇದ್ಯವಾಗದ್ದನ್ನು ಸ್ವೀಕರಿಸುವುದಿಲ್ಲ. ನೈವೇದ್ಯವಾದದ್ದನ್ನು ಸ್ವೀಕರಿಸುವಾಗಲೂ ಪ್ರಸಾದರೂಪೇಣ ಸ್ವೀಕರಿಸುತ್ತಾರೆ. ಭೋಗಕ್ಕಾಗಿ ಅಲ್ಲ. ಅದೇ ರೀತಿ ನನಗೂ ಪ್ರಸಾದರೂಪವಾಗಿ ಸಿಗಬೇಕು. ಕೃಷ್ಣನಿಲ್ಲದ ನನಗೆ ಈ ಮನೆಯಲ್ಲಿ ಭೋಗ ಯಾಕೆ? ಎಂದು ಆಕೆಯ ಅಭಿಪ್ರಾಯ.

**ಸಂದೇಶ** : ಯೋಗ್ಯವಾದ ಯಾವುದನ್ನೂ ದೇವರ ಪ್ರಸಾದರೂಪದಿಂದಲೇ ಸ್ವೀಕರಿಸಬೇಕು. ಭೋಗರೂಪದಿಂದ ಅಲ್ಲ.

**ಕೀರೇಂದು ಕೋಕಿಲ ಮಧುವ್ರತ ಮಾನ್ಯ ಗಂಧ**
**ಪುಷ್ಪಾಣಿ ಕಾಪಿ ನಹೃದೋ ವಿಷಯೀ ಕರೋತಿ ।**
**ಕೃಷ್ಣೋಕ್ತಿ ಸನ್ಮುಖ ಮೃದುಸ್ವರ ಕುಂತಲಾಂಗ–**
**ಸೌರಭ್ಯ ಸಂಗತತದೀಯ ಸಮಸ್ತವೃತ್ತಿಃ ॥ ೨೭ ॥**

ಕೃಷ್ಣ=ಕೃಷ್ಣನ; ಉಕ್ತಿ=ಮಾತು; ಸನ್ಮುಖ=ಒಳ್ಳೆಯ ಮುಖವು; ಮೃದು=ಇಂಪಾದ;

ಸ್ವರ=ಧ್ವನಿಯು; ಕುಂತಲ=ಮುಂಗುರುಳು; ಅಂಗ=ದೇಹದ; ಸೌರಭ್ಯ=ಪರಿಮಳವು; ಸಂಗತ=ಇರುವ; ತದೀಯ=ತತ್ಸಂಬಧಿಯಾದ; ಸಮಸ್ತ=ಎಲ್ಲಾ; ವೃತ್ತಿಃ=ಕೆಲಸಗಳುಳ್ಳ; ಕಾ ಅಪಿ=ಯಾರೋ ಒಬ್ಬಳು; ಕೀರ=ಗಿಳಿಯು; ಇಂದು=ಚಂದ್ರನು; ಕೋಕಿಲ= ಕೋಗಿಲೆಯು; ಮಧು=ಜೇನನ್ನು; ವ್ರತ=ಸ್ವೀಕರಿಸುವ ಇವುಗಳಂದ. ಮಾನ್ಯ= ಆದೃತ ವಾದ; ಗಂಧ=ಪರಿಮಳವುಳ್ಳ; ಪುಷ್ಪಾಣಿ=ಹೂಗಳನ್ನು; ಹೃದಃ=ಮನಸ್ಸಿಗೆ; ನ ವಿಷಯೀ- ಕರೋತಿ=ತೆಗೆದುಕೊಳ್ಳುವುದಿಲ್ಲ.

ದೇವರ ದರ್ಶನಕ್ಕೆ ಅಡ್ಡಿಯಾಗುತ್ತವೆ ಈ ಲೌಕಿಕಪುಷ್ಪಗಳು. ಆದ್ದರಿಂದ ಋಷಿಗಳು ಇವುಗಳ ಸೇವನೆಯಿಂದ ದೂರ ಇರುತ್ತಾರೆ. ಒಬ್ಬಳು ಗೋಪಿಯು ಕೆಲವು ಹೂಗಳನ್ನು ತಾನು ಸ್ವೀಕರಿಸುತ್ತಿರಲಿಲ್ಲ. ಆ ಪುಷ್ಪಗಳು ಗಿಳಿಗೆ, ಚಂದ್ರನಿಗೆ, ಕೋಗಿಲೆಗೆ, ದುಂಬಿಗಳಿಗೆ ಸಂಬಂಧಿಸಿದ್ದು ಆಗಿದ್ದವು. ಈ ಪುಷ್ಪಗಳಿಂದ ಆಕೆಗೆ ಗಿಳಿ ಮೊದಲಾದ್ದರ ನೆನಪು ಬರುತ್ತಿತ್ತು. ಅದರಿಂದ ಕೃಷ್ಣನ ನೆನಪಿನತ್ತ ಸಾಗುತ್ತದೆ ಮನಸ್ಸು. ಗಿಳಿಯಿಂದಾಗಿ ಕೃಷ್ಣನ ಮಾತುಗಳು, ಚಂದ್ರನಿಂದಾಗಿ ಕೃಷ್ಣನ ಮುಖ, ಕೋಗಿಲೆಯಿಂದ ಕೃಷ್ಣನ ಹಾಡುಗಳು, ಭ್ರಮರದಿಂದ ಕೃಷ್ಣನ ಮುಂಗುರುಳು, ಹಾಗೆಯೇ ಈ ಹೂಗಳ ಪರಿಮಳದಿಂದ ಕೃಷ್ಣನ ದೇಹದ ಪರಿಮಳ. ಈಕೆ ಕೃಷ್ಣನ ವಿರಹದಿಂದ ಬಹಳ ದುಃಖಿತಳಾಗಿದ್ದಾಳೆ. ಇನ್ನು ಈ ಹೂಗಳನ್ನು ಸ್ವೀಕರಿಸಿದರೆ ಕೃಷ್ಣನ ನೆನಪು ಮರುಕಳಿಸುತ್ತದೆ. ಆ ದುಃಖಕ್ಕೆ ತುಪ್ಪ ಎರೆದಂತೆ ಆಗುತ್ತದೆ. ಆದ್ದರಿಂದ ಉದ್ಯಾನದಲ್ಲಿ ವಿಹಾರವನ್ನು ತ್ಯಜಿಸಿದಳು. ಋಷಿಗಳು ಎಂದೂ ವಾಯುವಿಹಾರಕ್ಕೆ ಹೋಗುತ್ತಿರಲಿಲ್ಲ.

**ಸಂದೇಶ** : ದೇವರ ಪೂಜೆಗಾಗಿ ಇರುವ ಪುಷ್ಪಾದಿಗಳನ್ನು ನಮ್ಮ ಐಷಾರಾಮಿ ಜೀವನಕ್ಕೆ ಉಪಯೋಗಿಸಕೂಡದು.

**ಕೃಷ್ಣಾಂಘ್ರಿಭೃಂಗಂ ತಂ ವೀಕ್ಷ್ಯ ಲಜ್ಜಾಕ್ಲೇಶವಶಂ ಗತಾಃ ।**
**ಶ್ಲಿಷ್ಟೋಕ್ತ್ಯೋಚುಸ್ತಥಾ ಭೃಂಗಂ ಲಕ್ಷೀಕೃತ್ಯಾನ್ಯಮಗ್ರತಃ ॥ ೨೮ ॥**

ಕೃಷ್ಣ=ಕೃಷ್ಣನ; ಅಂಘ್ರಿ=ಪಾದಗಳಲ್ಲಿ; ಭೃಂಗಂ=ದುಂಬಿಯಂತಿರುವ; ತಂ=ಉದ್ಧವ ನನ್ನು; ವೀಕ್ಷ್ಯ=ನೋಡಿ; ಲಜ್ಜಾ=ನಾಚಿಕೆಯ; ಕ್ಲೇಶ=ಕಷ್ಟದ; ವಶಂ=ಅಧೀನವನ್ನು; ಗತಾಃ= ಹೊಂದಿದವರಾಗಿ; ಅಗ್ರತಃ=ಮುಂದೆ; ಅನ್ಯಂ=ಇನ್ನೊಂದು; ಭೃಂಗಂ=ದುಂಬಿಯನ್ನು; ಲಕ್ಷೀಕೃತ್ಯ=ಉದ್ದೇಶಿಸಿ; ಶ್ಲಿಷ್ಟ=ಎರಡರ್ಥದ; ಉಕ್ತ್ಯಾ=ಮಾತಿನಿಂದ; ತಥಾ=ಹಾಗೆ; ಊಚುಃ=ಹೇಳಿದರು.

ಈ ಉದ್ಧವನು ಕೃಷ್ಣನ ಚರಣಗಳನ್ನೇ ಸದಾ ಆಶ್ರಯಿಸಿದವನು. ದುಂಬಿಗಳು ಸದಾ ಕಮಲವನ್ನು ಆಶ್ರಯಿಸುವಂತೆ. ಈ ನಾರಿಯರಿಗೆ ತಮ್ಮ ಒಳಗಿರುವ ಕಾಮದಿಂದ ಕೂಡಿದ ದುಃಖವನ್ನು ಇವನಲ್ಲಿ ನೇರವಾಗಿ ತೋಡಿಕೊಳ್ಳಲು ನಾಚಿಕೆ. ಹಾಗೆಯೇ

ನಿಷ್ಠುರವಾದ ಮಾತುಗಳನ್ನು ಆಡಲು ಮನಸ್ಸು ಒಪ್ಪುತ್ತಿಲ್ಲ. ಏನು ಮಾಡಬೇಕೆಂದು ಇವರಿಗೆ ತೋಚಲಿಲ್ಲ. ಅದೇ ಸಮಯದಲ್ಲಿ ಒಂದು ದುಂಬಿಯು ಬಂದು ಇವರ ಮುಂದೆ ಇರುವ ಪುಷ್ಪದಲ್ಲಿ ಕುಳಿತಿತ್ತು. ಇದನ್ನು ನೋಡಿದ ಗೋಪಿಯರು ಉದ್ಧವನಿಗೆ ಕೇಳಿಸುವಂತೆ ಈ ದುಂಬಿಯನ್ನು ಉದ್ದೇಶಿಸಿ ಮಾತುಗಳನ್ನು ಆರಂಭಿಸಿದರು. ದುಂಬಿಯ ಜೊತೆ ತಮ್ಮ ಕಾಮನೆಗಳನ್ನು ಹೇಳಲು ನಾಚಿಕೆ ಇಲ್ಲ. ಕೃಷ್ಣನನ್ನು ಬೈಯಲು ಕಷ್ಟವೂ ಆಗುವುದಿಲ್ಲ. ಈ ಮಾತುಗಳನ್ನು ಕೇಳಿಸಿಕೊಂಡ ಉದ್ಧವನು ಈ ನಾರಿಯರನ್ನು ತರಾಟೆಗೆ ತೆಗೆದುಕೊಳ್ಳುವಂತಿಲ್ಲ. ಹಾಗೇನಾದರೂ ಮಾಡಿದರೆ ನಾರಿಯರು 'ನಾವು ನಿಮ್ಮ ಬಗ್ಗೆ ಏನೂ ಅಂದಿಲ್ಲ. ಈ ದುಂಬಿಗಳ ಜೊತೆ ಮಾತನಾಡುತ್ತಿದ್ದೇವೆ' ಎಂದು ಉತ್ತರಿಸುವರು. ಈ ರೀತಿ ದುಂಬಿಯ ಪರವಾದ ಹಾಗೆಯೇ ಕೃಷ್ಣನ ಪರವಾದ ಅರ್ಥ ಬರುವಂತೆ ಮಾತನಾಡಿದರು.

**ಸಂದೇಶ** : ಭಾಗವತದ ಸಪ್ತಮ ಸ್ಕಂಧದಲ್ಲಿ ಹೇಳಿದಂತೆ ಬೇರೆ ಯಾರ ಜೊತೆ ವ್ಯವಹರಿಸುವಾಗಲೂ ಅದು ಮಿಶ್ರ ವ್ಯವಹಾರವಾಗಿರುತ್ತದೆ. ಆ ವ್ಯಕ್ತಿ ಹಾಗೂ ಆತನ ಅಂತರ್ಯಾಮಿಯಾದ ದೇವರು ಇವರಿಬ್ಬರನ್ನು ಕುರಿತು ಆಗಿರುತ್ತದೆ.

**ಮಧುಪ ಚರಸಿ ಕಸ್ಮಾದಸ್ಮದಗ್ರೇ ತ್ವಮಗ್ರ್ಯ-**
**ದ್ವಿರದವರದ ಮೂರ್ಧಾರೋಹಯೋಗ್ಯೋಽಸಿ ನೂನಮ್ ।**
**ವಿಷಮ ವಿರಹ ವಹ್ನೌ ನಿರ್ದಹತ್ಯಸ್ಮದಂಗಂ**
**ಕಿಮಿಹ ಪತಿತುಮಿಚ್ಛಸ್ಯಂಗ ದೂರೇ ಪ್ರಯಾಹಿ ॥ ೨೯ ॥**

ಮಧು=ಮಧುಗಳನ್ನು; ಪ=ರಕ್ಷಿಸುವವನೇ; ಕಸ್ಮಾತ್=ಯಾಕೆ?; ಅಸ್ಮತ್=ನಮ್ಮ; ಅಗ್ರೇ=ಮುಂಭಾಗದಲ್ಲಿ; ಚರಸಿ=ಸಂಚರಿಸುತ್ತಿ; ತ್ವಂ=ನೀನು; ಅಗ್ರ್ಯ=ಉತ್ತಮವಾದ; ದ್ವಿರದ=ಆನೆಯ; ವರದ=ಆನಂದವನ್ನು ಕೊಡುವ; ಮೂರ್ಧಾ=ತಲೆಯಲ್ಲಿ; ಆರೋಹ= ಹತ್ತಲು; ಯೋಗ್ಯಃ=ಯೋಗ್ಯನು; ಅಸಿ=ಆಗಿದ್ದಿ; ನೂನಂ=ನಿಶ್ಚಯ; ಅಸ್ಮತ್=ನಮ್ಮ; ಅಂಗಂ=ದೇಹವನ್ನು; ನಿರ್ದಹತಿ=ಸುಡುವ; ವಿಷಮ=ದುಸ್ತರವಾದ; ವಿರಹ=ವಿರಹವೆಂಬ; ವಹ್ನೌ=ಬೆಂಕಿಯಲ್ಲಿ; ಇಹ=ಇಲ್ಲಿ; ಕಿಂ=ಯಾಕೆ?; ಪತಿತುಂ=ಬೀಳಲು; ಇಚ್ಛಸಿ=ಇಚ್ಛಿಸುತ್ತಿ; ಅಙ್ಗ=ಅಜ್ಞಾನಿಯೆ?; ದೂರೇ=ದೂರ; ಪ್ರಯಾಹಿ=ಹೋಗು.

ಬ್ರಾಹ್ಮಣರಲ್ಲಿ ಆಚಾರ್ಯ, ಭಟ್ಟ, ರಾವ್, ದೇಶಪಾಂಡೆ ಇತ್ಯಾದಿ ಅನೇಕ ವಿಧಗಳು ಇವೆ. ಅದರಂತೆ ಯಾದವರಲ್ಲಿಯೂ ವೃಷ್ಣಿಗಳು, ಅಂಧಕರು, ಭೋಜರು, ಮಧುಗಳು ಎಂದು ನಾನಾ ಪಂಗಡಗಳಿವೆ. ಪ್ರಕೃತ ಈ ಉದ್ಧವನು ಮಧುವಂಶದಲ್ಲಿ ಅವತರಿಸಿದವನು. ಮಧುರೆಯಲ್ಲಿ ಮಂತ್ರಿಪದವಿಯನ್ನು ಅಲಂಕರಿಸಿದವನು. ಮಧುವಿನ ವಂಶದವರನ್ನು ರಕ್ಷಿಸುವ ಜವಾಬ್ದಾರಿಯನ್ನು ಹೊತ್ತವನು. ಆದ್ದರಿಂದ ಮಧುಪ ಎಂಬ ಹೆಸರು ಉದ್ಧವನಿಗೆ ಕೂಡುತ್ತದೆ.

ಗೋಪಿಯರು ಉದ್ಧವನನ್ನು ಮಧುಪನೆಂದು ಸಂಬೋಧಿಸಿ ಈ ರೀತಿ ಹೇಳುತ್ತಾರೆ –ಎಲೋ ಮಧುಪನೇ, ನೀನು ನಮ್ಮ ಮುಂದೆ ಕಾಲ್ನಡಿಗೆಯಲ್ಲಿ ಅಡ್ಡಾಡುತ್ತಿದ್ದಿ ಯಾಕೆ? ನಿನ್ನ ಒಡೆಯನಾದ ಕೃಷ್ಣನು ಕಂಸನನ್ನು ಕೊಂದಿದ್ದಾನೆ. ಉಗ್ರಸೇನನನ್ನು ಸಿಂಹಾಸನದಲ್ಲಿ ಕೂಡಿಸಿದ್ದಾನೆ. ಆದ್ದರಿಂದ ಈಗ ಕೃಷ್ಣನೇ ಮಧುರೆಯ ಅಧಿಪತಿ ಎನ್ನುವುದೇ ಸರಿಯಾದ ಮಾತು. ಕಂಸನ ಆಧಿಪತ್ಯದಲ್ಲಿ ನಿನಗೂ ಕಂಸನಿಗೂ ವೈಚಾರಿಕವಾದ ವ್ಯತ್ಯಾಸವು ಇತ್ತು. ಆದ್ದರಿಂದ ನಿನಗೆ ಮೆರೆಯಲು ಆಗುತ್ತಿರಲಿಲ್ಲ. ಈಗ ನಿನ್ನ ಸ್ವಾಮಿಯಾದ ಕೃಷ್ಣನು ಒಡೆಯನಾದ್ದರಿಂದ ನೀನು ಆನೆಯ ಮೇಲೆ ಅಂಬಾರಿ ಹಾಕಿ ಅದರಲ್ಲಿ ಕುಳಿತು ಮೆರೆಯುವ ಕಾಲ. ಹೀಗಿರುವಾಗ ಇಲ್ಲಿ ನಮ್ಮ ಮುಂದೆ ಈ ಕಾಡಲ್ಲಿ ಯಾತಕ್ಕಾಗಿ ಅಡ್ಡಾಡುವಿ?

ನಾವು ಮೊದಲೇ ಕೃಷ್ಣನ ವಿರಹವೆಂಬ ಬೆಂಕಿಯಿಂದ ಸುಡುತ್ತಿದ್ದೇವೆ. ನಿನ್ನನ್ನು ನೋಡಿದಾಗ ಆ ಬೆಂಕಿಯು ಇನ್ನೂ ಹೆಚ್ಚಾಗುತ್ತಿದೆ. ಈ ಬೆಂಕಿಯಿಂದ ನಾವು ಸುಡುವುದೇ ಸಾಕು. ನೀನು ಪುನಃ ಇಲ್ಲಿಗೆ ನಮ್ಮ ಸಮೀಪಕ್ಕೆ ಬಂದು ಈ ಬೆಂಕಿಯಲ್ಲಿ ಬೀಳಲು ಅಪೇಕ್ಷೆ ಪಡುತ್ತಿಯಾ? ನೀನು ಸಾಯಬೇಡ; ದೂರ ಹೋಗು ಎಂದು ನಾರಿಯರು ಉದ್ಧವನಿಗೆ ನಾಟುವಂತೆ ಹೇಳಿದರು.

ನಾವು ಯಾವುದೋ ಒಂದು ವಿಷಯದ ಬಗ್ಗೆ ದುಃಖಿಸುತ್ತಿರುತ್ತೇವೆ. ಆ ಸಂದರ್ಭವನ್ನು ಬಳಸಿಕೊಂಡು ನಮಗೆ ಆಗದವರು ನಮ್ಮ ಬಳಿಗೆ ಬಂದು ಪುನಃ ಆ ವಿಷಯವನ್ನು ನೆನಪಿಸಿ ನಮ್ಮ ದುಃಖವನ್ನು ಜಾಸ್ತಿ ಮಾಡುತ್ತಾರೆ. ಅದೇ ರೀತಿ ಉದ್ಧವನೂ ಬಂದಿದ್ದಾನೆ ಎಂಬ ಅಭಿಪ್ರಾಯದಿಂದ ನಾರಿಯರು ಆತನನ್ನು ತಿವಿದರು. ಇದಕ್ಕೆ ಉದ್ಧವನು ಪ್ರತಿಕ್ರಯಿಸಲು ಆರಂಭಿಸಿದರೆ ಆಗ ಈ ನಾರಿಯರು "ನಾವು ನಿನ್ನನ್ನು ಕುರಿತು ಹೇಳಿದ್ದೇ ಅಲ್ಲ. ಈ ದುಂಬಿಯನ್ನು ಕುರಿತು ಹೇಳಿದ್ದು ಎಂದು ದುಂಬಿಯ ಪರವಾದ ಅರ್ಥವು ಇದೇ ಶಬ್ದಗಳಿಂದ ಬರುವಂತೆ ರಾಜರು ಹೇಳುತ್ತಾರೆ–

ದುಂಬಿಗಳು ಹೂವಿನ ಮಕರಂದವನ್ನು ಪಾನಮಾಡುತ್ತವೆ. ಮಕರಂದಕ್ಕೆ ಮಧು ಎಂದು ಹೆಸರಿದೆ. ಅದನ್ನು ಪಾನ ಮಾಡುವುದರಿಂದ ದುಂಬಿಗಳಿಗೆ ಮಧುಪಗಳೆಂದು ಹೆಸರು.

ಎಲೋ ಮಧುಪಗಳಾದ ದುಂಬಿಗಳೇ, ಕೃಷ್ಣನು ನಮ್ಮ ಜೊತೆಗೆ ಇಲ್ಲ. ಆದ್ದರಿಂದ ನಾವು ಪುಷ್ಪಗಳ ಹಾರಾದಿಗಳನ್ನು ಧರಿಸುವುದಿಲ್ಲ. ಹೀಗಿರುವಾಗ ನಿಮಗೆ ಬೇಕಾದ ಮಕರಂದವು ನಮ್ಮ ಬಳಿ ಇಲ್ಲ. ನೀವು ನಮ್ಮ ಬಳಿ ಸಂಚರಿಸುವುದು ವ್ಯರ್ಥ. ನಿಮಗೆ ಮಕರಂದದಂತೆ ಆನೆಗಳ ಕುಂಭಸ್ಥಳಗಳಲ್ಲಿ ಸುರಿಯುವ ಮದಜಲವೂ ಇಷ್ಟ. ಕಾಡಾನೆಗಳು ಆಗಾಗ ಮದಜಲವನ್ನು ಸುರಿಸುತ್ತಿರುತ್ತವೆ. ನೀವು ಅಂತಹ ಆನೆಗಳ ಕುಂಭಸ್ಥಳಗಳಲ್ಲಿ

ಓಡಾಡಿರಿ. ಇಲ್ಲಿಂದ ದೂರ ಹೋಗಿರಿ. ನಾವು ಇಲ್ಲಿ ಕೃಷ್ಣನ ವಿರಹಾಗ್ನಿಯಿಂದ ಬೇಯುತ್ತಿದ್ದೇವೆ. ನೀವು ನಮ್ಮ ಸಮೀಪಕ್ಕೆ ಬಂದರೆ ಬೆಂಕಿಗೆ ಬೀಳುವ ಪತಂಗಗಳಂತೆ ಸುಟ್ಟುಹೋದೀರಿ.

ಈ ರೀತಿ ಎರಡು ಅರ್ಥ ಬರುವಂತೆ ರಾಜರು ತನ್ನ ಚತುರಮುಖತ್ವವನ್ನು ಮೆರೆದಿದ್ದಾರೆ.

<u>ಸಂದೇಶ</u> : ದೇಹಕ್ಕೂ ದೇವರಿಗೂ ವಿಯೋಗವಾದಾಗ ಎಂತಹವರ ದೇಹವೂ ಸುಟ್ಟುಹೋಗುತ್ತದೆ.

**ಸದಸಿ ಸುಮನಸಾಂ ತ್ವಂ ಪ್ರೌಢಿಮಾದರ್ಶಯಾಲಂ**
**ವಿಧುರವಿವಿಧಯೋಷಿತ್ತಾಪಮಾಪಾದಯೇಃ ಕಿಮ್ ।**
**ಗ್ರಹಗತಿರಿಯಮಾರ್ಯಾ ಯತ್ಪುರಸ್ತಾದಯಂ ನೋ**
**ವಸತಿ ವಸತಿ ಪುತ್ರಾಮಿತ್ರ ವಾರ್ತೋಜ್ಝಿತಾನಾಮ್** ॥ ೩೦ ॥

ವಿಧು=ಚಂದ್ರನ; ರವಿ=ಸೂರ್ಯನ; ವಿಧ=ಪ್ರಕಾರದವನೇ; ತ್ವಂ=ನೀನು; ಸುಮನಸಾಂ=ದೇವತೆಗಳ; ಸದಸಿ=ಸಭೆಯಲ್ಲಿ; ಪ್ರೌಢಿಂ=ಚಾತುರ್ಯವನ್ನು; ಅಲಂ=ಚೆನ್ನಾಗಿ; ಆದರ್ಶಯ=ತೋರಿಸು; ಯೋಷಿತ್=ನಾರಿಯರಿಗೆ; ತಾಪಂ=ದುಃಖವನ್ನು; ಕಿಮ್=ಯಾಕೆ?; ಆಪಾದಯೇಃ=ಉಂಟುಮಾಡುತ್ತಿ; ಹೇ ಆರ್ಯಾಃ=ಎಲೋ ನಾರಿಯರೇ; ವಸತಿ=ಮನೆಯು; ಪುತ್ರ=ಮಕ್ಕಳು; ಅಮಿತ್ರ=ಶತ್ರುಗಳು ಇವರ.; ವಾರ್ತಾ=ವಿಚಾರದಿಂದ; ಉಜ್ಝಿತಾನಾಂ=ರಹಿತರಾದ; ನಃ=ನಮ್ಮ; ಪುರಸ್ತಾತ್=ಮುಂದೆ; ವಸತಿ=ಇದ್ದಾನೆ; ಇಯಂ=ಇದು; ಗ್ರಹಗತಿಃ=ಗ್ರಹಚಾರವು.

ಭ್ರಮರ ಪಕ್ಷದಲ್ಲಿ ಎರಡನೇ ಪಾದದ ಪದವಿಭಾಗವು ಈ ರೀತಿ ಇದೆ–

ವಿಧುರ=ರಹಿತರಾದ; ವಿವಿಧ=ನಾನಾ ರೀತಿಯ.

[ಮೇಲಿನ ಶ್ಲೋಕದ ದುಂಬಿಪರವಾದ ಅರ್ಥವನ್ನು ಕೆಳಗೆ ಕೊಡಲಾಗಿದೆ.]

(ಸುಮನಸ್ ಶಬ್ದಕ್ಕೆ ದೇವತೆಗಳು ಎಂಬ ಅರ್ಥ ಇರುವಂತೆ ಪುಷ್ಪ ಎಂಬ ಅರ್ಥವೂ ಇದೆ. ಗೋಪಿಯರು ಹೇಳುತ್ತಾರೆ– ಎಲೋ ದುಂಬಿಗಳೇ, ಪುಷ್ಪಗಳು ಇರುವಲ್ಲಿ ನಿಮ್ಮ ಝೇಂಕಾರಗಳು ಮೊಳಗಲಿ. ನಾವು ಅನ್ನ, ತಾಂಬೂಲ, ಪರಿಮಳದ್ರವ್ಯಾದಿಗಳನ್ನು ತ್ಯಜಿಸಿದವರು. ನೀವು ಇಲ್ಲಿ ಹಾರಾಡುವುದರಿಂದ ಏನೂ ಲಾಭ ಇಲ್ಲ. ಕೃಷ್ಣನ ನೆನಪನ್ನು ನಮಗೆ ಕೊಡುತ್ತೀರಿ. ಇದರಿಂದ ನಮಗೆ ಬಹಳ ದುಃಖವೇ ಆಗುತ್ತದೆ. ನಮಗೆ ಯಾಕೆ ಈ ರೀತಿ ದುಃಖವನ್ನು ಕೊಡುತ್ತೀರಿ. ನಾವು ಇಷ್ಟು ಬೇಡಿಕೊಂಡರೂ ನೀವು ಇಲ್ಲಿಂದ ಹೋಗುವುದಿಲ್ಲವೆಂದರೆ ನಮ್ಮ ಗ್ರಹಚಾರವೇ ಸರಿ ಇಲ್ಲ ಎಂದು ಅರ್ಥ.)

ಹೇ ಉದ್ಧವನೇ, ನೀನು ಗ್ರಹರಾದ ಸೂರ್ಯ ಚಂದ್ರಾದಿಗಳ ಗುಂಪಲ್ಲಿ ಸೇರಿದವನು. ಅವರು ದೇವತೆಗಳು. ನೀನೂ ಅವರಂತೆ ದೇವತೆಯು. ಅವರು ನಮ್ಮ ಜೊತೆ ಮಾತನಾಡುವುದಿಲ್ಲ. ಏನಿದ್ದರೂ ಅವರ ಮಾತುಗಳು ದೇವತೆಗಳ ಸಭೆಗಳಲ್ಲಿ. ನೀನೂ ನಮ್ಮ ಜೊತೆ ಮಾತನಾಡಬೇಡ. ಇಲ್ಲಿಂದ ದೇವತೆಗಳ ಬಳಿಗೆ ಹೋಗು. ಅಲ್ಲಿ ನಿನ್ನ ವಿಚಾರವನ್ನು ಮುಂದಿಡು. ನಮ್ಮ ಮುಂದೆ ಕೃಷ್ಣನ ವಿಚಾರವನ್ನು ಹೇಳಿ ನಮ್ಮನ್ನು ಮತ್ತಷ್ಟು ದುಃಖಕ್ಕೆ ತಳ್ಳಬೇಡ.

ಇಷ್ಟು ಹೇಳಿದರೂ ಆತನು ಅಲ್ಲೇ ನಿಂತಿದ್ದ. ಇದನ್ನು ಕಂಡ ಒಬ್ಬಳು ಇತರರಲ್ಲಿ ಸಿಟ್ಟಿನಿಂದ, ಅಯ್ಯೋ ನಮ್ಮ ಗ್ರಹಚಾರವೇ ಸರಿಯಿಲ್ಲ. ನಾವು ಮನೆ, ಸಂಪತ್ತು, ಮಕ್ಕಳು, ಶತ್ರುಗಳು ಎಲ್ಲವನ್ನೂ ಬಿಟ್ಟು ಬಂದವರು. ಈತನು ಇಲ್ಲೇ ಅಡ್ಡಾಡಿಕೊಂಡು ನಮ್ಮ ಯಾವ ವಿಷಯದ ಬಗ್ಗೆ ಮಾತನಾಡುತ್ತಾನೆ. ನಮ್ಮಲ್ಲಿ ಈಗ ಯಾವ ವಸ್ತುಗಳೂ ಇಲ್ಲ. ಇಲ್ಲಿಂದ ಹೋಗು ಎಂದರೂ ಪಕ್ಕನೇ ಹೋಗುತ್ತಿಲ್ಲ ಎಂದಳು.

'ಗ್ರಹಚಾರವೇ ಸರಿಯಿಲ್ಲ' ಎಂಬ ಆಕೆಯ ಮಾತಿನ ಆಂತರ್ಯ– ಗ್ರಹ ಅಂದರೆ ಉದ್ಧವ. ಈತನು ನವಗ್ರಹರಲ್ಲಿ ಐದನೆಯವನಾದ ಗುರುವಿನ ಅವತಾರ. ಆತನ ಚಾರ ಅಂದರೆ ಸಂಚಾರ. ಸೂರ್ಯಾದಿಗ್ರಹರು ಮೇಷಾದಿ ದ್ವಾದಶ ರಾಶಿಗಳ ಮಧ್ಯೇ ನೀಚರಾಶಿಗಳಲ್ಲಿ ಸಂಚರಿಸುವಾಗ ಅನಿಷ್ಟ ಫಲಗಳನ್ನು ಕೊಡುತ್ತಾರೆ. ಗೋಕುಲವು ಈಗ ಕೃಷ್ಣನಿಂದ ರಹಿತವಾದ್ದರಿಂದ ನೀಚ ಸ್ಥಾನವಾಗಿದೆ. ಇಲ್ಲಿ ಗುರುವಾದ ಉದ್ಧವನು ತಿರುಗುತ್ತಿದ್ದಾನೆ. ಆದ್ದರಿಂದ ಅನಿಷ್ಟಫಲವನ್ನು ಕೊಡುತ್ತಿದ್ದಾನೆ ಎಂದು.

ಹಾಗೆಯೇ 'ಹೋಗೆಂದರೂ ಹೋಗುವುದಿಲ್ಲ' ಎಂಬ ಮಾತಿನ ಆಂತರ್ಯವೂ –ಗುರುವು ಮೇಷಾದಿ ಒಂದೊಂದು ಮನೆಯಲ್ಲಿ ಒಂದೊಂದು ವರ್ಷ ಇರುವನು. ನಿಧಾನವಾಗಿ ಗಮನ. ಚಂದ್ರನಂತೆ ಶೀಘ್ರಗತಿ ಇವನದಲ್ಲ. ತಾನು ಬಂದ ಕೆಲಸವನ್ನು ಮುಗಿಸದೆ ಹೋಗುವವನಲ್ಲ ಎಂದು.

**ಸಂದೇಶ** : ದೇವರಿಗೂ ನಮಗೂ ಪುನಃ ಸಂಯೋಗವಾಗಬೇಕಾದರೆ ನಾವು ನವಗ್ರಹರಲ್ಲ ಒಬ್ಬರಾದ ಗುರುಗಳಲ್ಲಿ ಹೇಳಬೇಕು. ಗುರುಗಳು ದೇವತೆಗಳಲ್ಲಿ ತಿಳಿಸಬೇಕು.

**ವರುಣದಿಶಿ ಗತೋಽಪಿ ಸ್ವೈರಮುದ್ಯಾತಿ ಸೋಽಪಿ**
**ಬತ ದಿಶಿ ಬಲಭೇತ್ತುಃ ಕಾಮದಃ ಕಾಮಿನೀನಾಂ ।**
**ಗುರುರಿವ ಸಖಿ ಕರ್ಣೋಪಾಂತಮಭ್ಯೇತ್ಯ ಗೀತಂ**
**ಹರಿಪದಕೃತವೃತ್ತಿಃ ಶ್ರಾವಯತ್ಯೇಷ ಧೀರಃ** ॥ ೩೧ ॥

ಹೇ ಸಖಿ=ಎಲೋ ಗೆಳತಿಯೇ; ಕಾಮಿನೀನಾಂ=ನಾರಿಯರಿಗೆ; ಕಾಮ=ಇಷ್ಟವನ್ನು;

ದಃ=ಕೊಡುವ; ಸಃ ಅಪಿ=ಉದ್ಧವನಾದರೂ; ವರುಣ=ವರುಣನ; ದಿಶಿ=ದಿಕ್ಕಿನಲ್ಲಿ; ಗತಃ ಅಪಿ=ಹೋದರೂ; ಬಲ=ಸೈನ್ಯವನ್ನು; ಭೇತ್ತುಃ=ನಾಶಮಾಡುವ; ಇಂದ್ರನ; ದಿಶಿ=ದಿಕ್ಕಿನಲ್ಲಿ; ಸ್ವೈರಂ=ಯಥೇಚ್ಛವಾಗಿ; ಉದ್ಯಾತಿ=ಉದಿಸುತ್ತಾನೆ; ಬತ=ದುಃಖವು; ಗುರುಃ ಇವ=ಗುರುವಿನಂತೆ; ಕರ್ಣ=ಕಿವಿಯ; ಉಪಾಂತಂ=ಸಮೀಪವನ್ನು; ಅಭ್ಯೇತ್ಯ=ಬಂದು; ಹರಿ=ದೇವರ ಪದ=ಚರಣಗಳಲ್ಲಿ; ಕೃತ=ಮಾಡಿದ; ವೃತ್ತಿಃ=ಮನಸ್ಸುಳ್ಳ; ಧೀರಃ=ಧೈರ್ಯದ; ಏಷಃ=ಇವನು; ಗೀತಂ=ಚರಿತ್ರೆಯನ್ನು; ಶ್ರಾವಯತಿ=ಕೇಳಿಸುತ್ತಾನೆ.

ಇತರ ಗ್ರಹರು ನೀಚಸ್ಥಾನದಲ್ಲಿದ್ದಾಗ ನಮಗೆ ಅನಿಷ್ಟಫಲವನ್ನು ಕೊಡುವರು. ಅಂತಹ ಗ್ರಹರಿಗೆ ಗುರುದೃಷ್ಟಿ ಇದ್ದರೆ ಅವರು ದುರ್ಬಲರಾಗುತ್ತಾರೆ. ಬಹಳಷ್ಟು ಅನಿಷ್ಟವನ್ನು ಮಾಡುವುದಿಲ್ಲ. ನಾರಿಯರು ಹೇಳುತ್ತಾರೆ –ನಾವೆಲ್ಲರೂ ಕೃಷ್ಣನ ಕರುಣೆಗೆ ಪಾತ್ರರು. ಆತನ ಒಡನಾಟದಲ್ಲಿ ಇರುವವರು. ಆದ್ದರಿಂದ ಈ ಗುರುವಾದ ಉದ್ಧವನು ತನ್ನ ದೃಷ್ಟಿಯನ್ನು ಇತರ ಗ್ರಹರ ಮೇಲೆ ಬೀರುತ್ತಾನೆ. ಇತರ ಗ್ರಹರು ನೀಚಸ್ಥಾನದಲ್ಲಿದ್ದದ್ದರಿಂದ ನಮಗೆ ಕೃಷ್ಣನ ವಿರಹವಾಗಿ ಬಹಳ ದುಃಖವಾಗುತ್ತಿದೆ. ಅದನ್ನು ಕಡಿಮೆ ಮಾಡಲು ಈತನು ಬಂದಿದ್ದಾನೆ. ಇಲ್ಲಿಂದ ಹೋಗೆಂದು ನಾವು ಜರೆದರೂ ಸ್ವಲ್ಪ ದೂರ ಹೋಗಿ ಕಾಣದಾಗುತ್ತಾನೆ. ಪುನಃ ಮತ್ತೊಂದು ಕಡೆಯಿಂದ ತಾನಾಗಿಯೇ ಕಾಣಿಸಿಕೊಳ್ಳುತ್ತಾನೆ. ಈ ಗೋಪಿಯರು ಗುರುವಿನ ಧರ್ಮವನ್ನು ಈ ಉದ್ಧವನಲ್ಲಿ ಕಾಣುತ್ತಾರೆ. ಗುರುವು ಪಶ್ಚಿಮದಿಕ್ಕಿನಲ್ಲಿ ಅಸ್ತಮಿಸುತ್ತಾನೆ. ಪೂರ್ವದಿಕ್ಕಿನಲ್ಲಿ ಉದಿಸುತ್ತಾನೆ. ಜಾತಕದಲ್ಲಿ ಗುರುದೃಷ್ಟಿಗೆ ಬಹಳ ಮಹತ್ವ ಇದೆ.

ಈತನು ಕೃಷ್ಣನ ಚರಣಗಳಲ್ಲಿ ಬಹಳ ಭಕ್ತನು. ದೇವರ ಬಗ್ಗೆ ತಿಳಿಸುವ ಅಧಿಕಾರವುಳ್ಳವನು ಗುರುವೇ ಹೊರತು ಬೇರಾರೂ ಅಲ್ಲ. ಆ ಗುರುವಿನ ಶಿಷ್ಯನ ಕಿವಿಯಲ್ಲಿ ದೇವರನ್ನು ಉಪದೇಶಿಸುತ್ತಾನೆ. ದೇವರ ವಿಷಯದಲ್ಲಿ ತಾನು ಸ್ವಲ್ಪವೂ ಸಂಶಯ ಉಳ್ಳವನಲ್ಲ. ಉಪದೇಶದ ಮೂಲಕ ಶಿಷ್ಯನಿಗೆ ದೇವರ ಸಾಂಗತ್ಯವನ್ನು ಕೊಡುವನು. ಶಿಷ್ಯನ ದುಃಖವನ್ನು ಪರಿಹರಿಸುವನು. ಕೃಷ್ಣಭಕ್ತನಾದ ಈ ಉದ್ಧವನು ಸಿಟ್ಟಿನ ಭರದಲ್ಲಿ ಗೋಪಿಯರಿಂದ ತಿರಸ್ಕರಿಸಲ್ಪಟ್ಟವನು. ಆದರೂ ಇವರಲ್ಲಿ ಅನುಕಂಪ ದಿಂದ ಪುನಃ ಬಂದನು. ಇವರಿಗೆ ಕೃಷ್ಣನ ಬಗ್ಗೆ ಉತ್ತಮ ಉಪದೇಶವನ್ನು ರಹಸ್ಯವಾಗಿ ಕೊಡುವನು. ಈ ನಾರಿಯರ ದುಃಖವನ್ನು ಕಳೆಯುವನು.

ದುಂಬಿಯ ಪರವಾದ ಅರ್ಥ ಈ ರೀತಿ ಇದೆ– ಕಾಮೋದ್ದೀಪಕಗಳಾದ ಅನೇಕ ವಸ್ತುಗಳಲ್ಲಿ ದುಂಬಿಯೂ ಒಂದು. ಇದನ್ನು ಕಂಡಾಗ ನಾರಿಯರಿಗೆ ಕೃಷ್ಣನ ಬಗ್ಗೆ ಕಾಮವು ಹೆಚ್ಚಾಗುತ್ತದೆ. ಇದು ನಾರಿಯರಿಗೆ ಅಪೇಕ್ಷಿತ. ದುಂಬಿಗಳು ಬಹಳ ಚಂಚಲ. ನಮ್ಮ ಮುಖದ ಮುಂದೆ ಹಾರಾಡುವಾಗ ನಾವು ಕೈಯಿಂದ ಓಡಿಸಿದರೆ ಸ್ವಲ್ಪ ದೂರ ಹೋಗಿ ಪುನಃ ಮುಖದ ಬಳಿಗೇ ಬರುತ್ತವೆ. ಆಕಾಶಕ್ಕೆ 'ಹರಿಪದ' ಎಂಬ ಹೆಸರಿದೆ. ಇವುಗಳು

ಸದಾ ಹರಿಪದದಲ್ಲೇ ಆಸಕ್ತಗಳು. ಅಂದರೆ ಸದಾ ಆಕಾಶದಲ್ಲೇ ಹಾರಾಡತಕ್ಕವುಗಳು. ಇಲ್ಲಿ 'ಹರಿಪದಕೃತವೃತ್ತಿಃ' ಎಂಬ ಶಬ್ದವು ಉದ್ಧವ ಹಾಗೂ ದುಂಬಿಗಳಲ್ಲಿ ಸಮಾನವಾಗಿದೆ.

ಈ ದುಂಬಿಗಳು ಭಯರಹಿತಗಳು. ಇದು ಅವುಗಳ ಝೇಂಕಾರದಿಂದಲೇ ತಿಳಿಯುತ್ತದೆ. ಇಂತಹ ದುಂಬಿಗಳು ಒಮ್ಮೊಮ್ಮೆ ಈ ಗೋಪಿಯರ ಕಿವಿಯ ಬಳಿಗೆ ಬಂದು ಝೇಂಕರಿಸುತ್ತವೆ. ಈ ರೀತಿ ಉದ್ಧವನಲ್ಲಿರುವ ಎಲ್ಲಾ ಗುಣಧರ್ಮಗಳನ್ನು ರಾಜರು ಗೋಪಿಯರ ಮೂಲಕ ದುಂಬಿಗಳಲ್ಲಿಯೂ ಕಾಣುತ್ತಾರೆ.

**ಸಂದೇಶ** : ಪ್ರಾರಬ್ಧವಶಾತ್ ಶಿಷ್ಯರು ಮುನಿಸಿಕೊಂಡರೂ ಸ್ವರೂಪೋದ್ಧಾರಕ ಗುರುಗಳು ತಾವು ಮುನಿಸಿಕೊಳ್ಳುವುದಿಲ್ಲ. ಶಿಷ್ಯರಿಗೆ ನಾನಾ ರೀತಿಯಿಂದ ದೇವರನ್ನು ಉಪದೇಶಿಸಿ ಉದ್ಧಾರ ಮಾಡುತ್ತಾರೆ.

**ಗಗನಚರ ಕಿಮಸ್ಮತ್ಸನ್ನಿಧೌ ತೇಽಸ್ತಿ ಕೃತ್ಯಂ**
**ಹರಿಪದಮುಪಯಾಯಾ ದೂರಮಸ್ಮದ್ವ್ರಜಸ್ಯ ।**
**ಸಮರುಚಿಮಲಕಾಲ್ಯಾ ವಕ್ರಯಾ ನಂದಸೂನೋಃ**
**ಕಥಯ ಕಥಮಿಹ ತ್ವಾಂ ಸಂಭಜಾಮಸ್ತ್ಯಜಾಮಃ ॥ ೩೨ ॥**

ಗಗನ=ಆಕಾಶದಲ್ಲಿ; ಚರ=ಸಂಚರಿಸುವವನೇ; ಅಸ್ಮತ್=ನಮ್ಮ; ಸನ್ನಿಧೌ=ಸಮೀಪದಲ್ಲಿ; ತೇ=ನಿನಗೆ; ಕೃತ್ಯಂ=ಕೆಲಸವು; ಕಿಂ=ಏನು; ಅಸ್ತಿ=ಇದೆ; ಅಸ್ಮತ್=ನಮ್ಮ; ವ್ರಜಸ್ಯ= ಗೋಕುಲದ; ದೂರಂ=ದೂರದ; ಹರಿ=ದೇವರ; ಪದಂ=ಪಾದವನ್ನು; ಉಪಯಾಯಾಃ= ಹೋಗು; ವಕ್ರಯಾ=ವಕ್ರವಾದ; ಅಲಕ=ಕೂದಲುಗಳು; ಆಲ್ಯಾ=ಸಮೂಹದಿಂದ; ನಂದ= ನಂದನ; ಸೂನೋಃ=ಮಗನಿಗೆ; ಸಮ=ಸಮಾನವಾದ; ರುಚಿಂ=ಕಾಂತಿವುಳ್ಳ; ತ್ವಾಂ= ನಿನ್ನನ್ನು; ಇಹ=ಇಲ್ಲಿ; ಕಥಂ=ಹೇಗೆ; ತ್ಯಜಾಮಃ=ಬಿಡುವೆವು; ಸಂಭಜಾಮಃ= ಸೇವಿಸುವೆವು; ಕಥಯ=ಹೇಳು.

ಎಲವೋ ಗುರುರೂಪದ ಉದ್ಧವನೇ, ನೀನು ಗ್ರಹರೂಪದಿಂದ ಆಕಾಶದಲ್ಲಿ ಸಂಚರಿಸುವವನು. ಭೂಮಿಯಲ್ಲಿ ಇಲ್ಲಿ ಗೋಕುಲದಲ್ಲಿ ಯಾಕೆ ಅಡ್ಡಾಡುತ್ತಿ? ಕೃಷ್ಣನೇ ನಮಗೆ ವಿಮುಖನಾಗಿದ್ದಾನೆ. ಹೀಗಿರುವಾಗ ಯಾವ ಗ್ರಹರೂ ನಮಗೆ ಮಾನಸಿಕ ನೆಮ್ಮದಿಯನ್ನು ಕೊಡಲು ಸಮರ್ಥರಲ್ಲ. ನೀನು ಕೃಷ್ಣನ ಪಾದದ ಬಳಿಗೆ ಹೋಗು. ಕೃಷ್ಣನು ನಮಗೆ ವಿಮುಖನಾದ್ದರಿಂದ ಆತನ ಪಾದವು ಇಲ್ಲಿಂದ ಬಹಳ ದೂರದಲ್ಲಿದೆ.

ಶಬ್ದತತ್ವಕ್ಕೆ ಅಭಿಮಾನಿ ಬೃಹಸ್ಪತಿಯು. ದೇವರ ಬಲಕಾಲಿನ ಹೆಬ್ಬೆರಳನ್ನು ಆಶ್ರಯಿಸಿದ್ದಾನೆ. ತನ್ನ ನೆಲೆಯಾದ ಕೃಷ್ಣನ ಪಾದದ ಬಳಿಗೆ ಹೋಗು ಎಂದು ನಾರಿಯರು ಹೇಳಿದ್ದರಲ್ಲಿ ಅಭಿಪ್ರಾಯವಿದೆ.

ಹೇ ಉದ್ಧವ, ನಿನ್ನ ತಲೆಗೂದಲನ್ನು ನೋಡಿದಾಗ ಕೃಷ್ಣನ ಕೂದಲಿನ ನೆನಪಾಗುತ್ತದೆ. ನಿಮ್ಮಿಬ್ಬರ ಕೂದಲುಗಳೂ ಗುಂಗುರಾಗಿವೆ; ಆದ್ದರಿಂದ ನಿನ್ನನ್ನು ಹೋಗೆನಲು ಮನಸ್ಸಿಲ್ಲ. ನಿನ್ನನ್ನು ಇಲ್ಲೇ ಇರಿಸಲೂ ಸಾಧ್ಯವಿಲ್ಲ. ನೀನು ಕೃಷ್ಣನಾಗಿ ಕೃಷ್ಣನಂತೆ ಇರುವುದಾದರೆ ನಿನ್ನ ಆಲಿಂಗನಾದಿಗಳನ್ನು ಮಾಡಿ ಆನಂದಿಸಬಹುದಿತ್ತು. ನೀನು ಕೃಷ್ಣನಿಗಿಂತ ಭಿನ್ನ. ನಾವು ಕೃಷ್ಣನಲ್ಲದೆ ಇನ್ನೊಬ್ಬರನ್ನು ಸ್ಪರ್ಶಿಸುವುದಿಲ್ಲ. ಆದ್ದರಿಂದ ನೀನು ಇದ್ದೂ ಪ್ರಯೋಜನವಿಲ್ಲ.

ದುಂಬಿ ಪರವಾದ ಅರ್ಥವು ಈ ರೀತಿ ಇದೆ –ಎಲೋ ದುಂಬಿಗಳೇ, ನೀವು ಹರಿಪದದಲ್ಲಿ (ಆಕಾಶ) ಇರುವವರು. ಆಕಾಶಕ್ಕೆ ಹರಿಪದ ಎಂದು ಹೆಸರು. ಹರಿಪದವನ್ನು ಬಿಟ್ಟು ಇಲ್ಲಿಗೆ ಯಾಕೆ ಬಂದಿರಿ? ನಾವು ಕೃಷ್ಣನಿಂದ ದೂರಾದವರು. ಪರಿಮಳಿತವಾದ ಪುಷ್ಪಾದಿ ಯಾವ ವಸ್ತುಗಳನ್ನೂ ಧರಿಸಿಲ್ಲ. ನಿಮಗೆ ಬೇಕಾದ ಪರಾಗಾದಿಗಳು ಇಲ್ಲಿ ಇಲ್ಲ. ಆದ್ದರಿಂದ ಇಲ್ಲಿಂದ ದೂರ ಹೋಗಿರಿ.

ನಿಮ್ಮ ಬಣ್ಣ ಕೃಷ್ಣನ ಬಣ್ಣದಂತಿದೆ. ನಿಮ್ಮ ಆಕಾರ ಕೃಷ್ಣನ ಮುಂಗುರುಳಿನಂತಿದೆ ವರ್ತುಲವಾಗಿದೆ. ಆದ್ದರಿಂದ ನಿಮ್ಮನ್ನು ಇಲ್ಲೇ ಇರಿಸೋಣ ಎಂದು ತೋರುತ್ತದೆ. ನೀವು ಇಲ್ಲಿ ಇದ್ದರೆ ನಮ್ಮಲ್ಲಿ ಇರುವ ಕೃಷ್ಣನ ಬಗ್ಗೆ ಕಾಮವನ್ನು ಬಡಿದೆಬ್ಬಿಸುತ್ತೀರಿ. ಇದರಿಂದ ನಮಗೆ ಬಹಳ ದುಃಖವಾಗುತ್ತದೆ. ಆದ್ದರಿಂದ ಕಳಿಸೋಣ ಎಂದು ತೋರುತ್ತದೆ.

**ಸಂದೇಶ** : ದೇವರು ವಿಮುಖನಾದರೆ ನಮ್ಮ ಪರಿಸ್ಥಿತಿಯು ಡೋಲಾಯಮಾನ.

**ವನಭವನಗತಾನಾಂ ದರ್ಶಯಿತ್ವಾ ಸ್ವರೂಪಂ**
**ಕತಿಪಯದಿನಮಧ್ಯೇ ಮಾಧವೋಽಸೌ ತ್ವದೀಯಃ ।**
**ನ ದಿಶತಿ ಪುನರೀಕ್ಷಾಂ ಹಂತ ತಸ್ಯಾನುವರ್ತೀ**
**ತ್ವಮಪಿ ಚಪಲ ತಾದೃಕ್ ಕಿಂ ತದಸ್ಮಾಸು ಮೈತ್ರ್ಯಾ ॥ ೩೩ ॥**

ತ್ವದೀಯಃ=ನಿನ್ನವನಾದ; ಅಸೌ=ಈ; ಮಾಧವಃ=ಕೃಷ್ಣನು; ಕತಿಪಯ=ಕೆಲವು; ದಿನ=ದಿನಗಳ; ಮಧ್ಯೇ=ಮಧ್ಯದಲ್ಲಿ; ವನ=ಕಾಡಿನ; ಭವನ=ಮನೆಗಳಲ್ಲಿ; ಗತಾನಾಂ=ಇರುವ ನಮಗೆ; ಸ್ವರೂಪಂ=ತನ್ನ ರೂಪವನ್ನು; ದರ್ಶಯಿತ್ವಾ=ತೋರಿಸಿ; ಪುನಃ=ಅನಂತರ; ಈಕ್ಷಾಂ=ದರ್ಶನವನ್ನು; ನ ದಿಶತಿ=ಕೊಡುವುದಿಲ್ಲ; ಹಂತ=ದುಃಖವು; ತಸ್ಯ=ಅವನ; ಅನುವರ್ತೀ=ಅನುಯಾಯಿಯಾದ; ತ್ವಂ ಅಪಿ=ನೀನೂ ಕೂಡಾ; ತಾದೃಕ್=ಆ ರೀತಿಯಾಗಿ; ಚಪಲಃ=ಚಂಚಲನು; ತತ್=ಆದ್ದರಿಂದ; ಅಸ್ಮಾಸು=ನಮ್ಮಲ್ಲಿ; ಮೈತ್ರ್ಯಾ=ಸಖ್ಯದಿಂದ; ಕಿಂ=ಏನು?

ಎಲೋ ಉದ್ಧವನೇ, ಹಿಂದೆ ನಾವು ಕೃಷ್ಣನ ಜೊತೆ ವೃಂದಾವನದಲ್ಲಿ ಆಡುತ್ತಿದ್ದೆವು. ಅಲ್ಲಿ ನಾನಾ ರೀತಿಯ ಕುಟೀರಗಳಿದ್ದವು. ಅದರಲ್ಲಿ ನಾವಿರುತ್ತಿದ್ದೆವು. ಕೃಷ್ಣನೂ ಅಲ್ಲಿಗೆ

ಬರುತ್ತಿದ್ದ. ಕುಟೀರಗಳಲ್ಲಿ ನಮ್ಮ ಜೊತೆ ವಿಹರಿಸುತ್ತಿದ್ದ. ಕೃಷ್ಣ ಬಂದ ಎಂಬ ಆನಂದದಲ್ಲಿ ಇರುತ್ತಿದ್ದೆವು. ಆದರೆ ಒಮ್ಮೆಲೇ ಕಾಣದಂತೆ ಹೋಗುತ್ತಿದ್ದನು. ಆಗ ನಮಗೆ ಬಹಳ ನೋವಾಗುತ್ತಿತ್ತು.

ನೀನು ಕೃಷ್ಣನ ಸೇವಕ. ಆತನಂತೆ ಇರುವವನು. ಒಮ್ಮೊಮ್ಮೆ ಕಾಣಿಸುತ್ತಿ. ಹಾಗೆಯೇ ಅಸ್ತನೂ ಆಗುತ್ತಿ. ನಮ್ಮನ್ನು ಸಮಾಧಾನಿಸಲು ಕೃಷ್ಣನು ನಿನ್ನನ್ನು ಇಲ್ಲಿಗೆ ಅಟ್ಟಿದ್ದಾನೆ. ಆದ್ದರಿಂದ ನಮ್ಮ ಮುಂದೆ ಬರುತ್ತಿ. ಕೃಷ್ಣನ ವಿರಹದಿಂದ ದುಃಖಿಗಳಾದ ನಮ್ಮ ಬೈಯುವಿಕೆಗೆ ಹೆದರಿ ಮರಗಳ ಹಿಂದೆ ಮರೆಯಾಗುವಿ. ನಿನ್ನನ್ನು ನೋಡಿದಾಗ ಕೃಷ್ಣನ ಬಂಧು ಎಂಬ ಭಾವನೆಯಿಂದ ನಮ್ಮಲ್ಲಿ ಉತ್ಸಾಹವು ಚಿಮ್ಮುತ್ತಿತ್ತು. ಚಟುವಟಿಕೆಗಳಲ್ಲಿ ತತ್ಪರರಾಗುತ್ತಿದ್ದೆವು. ನೀನು ಮರೆಯಾದಾಗ ನಾವು ನಿರುತ್ಸಾಹಿಗಳಾಗಿ ಸುಮ್ಮನಿರುತ್ತಿದ್ದೆವು.

ಆಕಾಶದಲ್ಲಿ ಗುರುಗ್ರಹವೂ ಇದೇ ರೀತಿ ಉದಯಾಸ್ತಮಾನವುಳ್ಳದ್ದು ಒಮ್ಮೊಮ್ಮೆ ಆಗುತ್ತದೆ. ಗುರುವು ಅಸ್ತನಾದರೆ ಯಾವ ಶುಭಕಾರ್ಯವನ್ನೂ ಮಾಡುವುದಿಲ್ಲ. ಉದಯವಾದ ಮೇಲೆ ಪುನಃ ಆರಂಭಿಸುತ್ತಾರೆ. ಈ ಅಭಿಪ್ರಾಯವನ್ನು ಸೇರಿಸಿ ನಾರಿಯರು ಉದ್ಧವನನ್ನು ಕುರಿತು ಹೇಳಿದ ಮಾತಿದು.

ಈ ರೀತಿಯಾಗಿ ಸದಾ ನಮ್ಮ ಜೊತೆಗೆ ಇರದೆ ಇರುವ ನಿನ್ನ ಗೆಳೆತನದಿಂದ ನಮಗೇನೂ ಲಾಭವಿಲ್ಲ.

ಭ್ರಮರದ ಪಕ್ಷದಲ್ಲಿ –ಮಾಧವ ಎಂಬ ಹೆಸರು ದೇವರಿಗೂ ವಸಂತ ಋತುವಿಗೂ ಇದೆ. ವಸಂತವೂ ದುಂಬಿಯ ಗೆಳೆಯ ಎಂದು ಕವಿಗಳ ಅಭಿಪ್ರಾಯ. ಈ ನಾರಿಯರು ಕಾಡಿನ ಎಲೆಮನೆಗಳಲ್ಲಿ ಇರುತ್ತಾರೆ. ಮಳೆಗಾಲ ಚಳಿಗಾಲಗಳಲ್ಲಿ ವಸಂತಮಾಸದ ದರ್ಶನ ಇಲ್ಲ. ಅಂದರೆ ವಸಂತದ ಲಕ್ಷಣವಾದ ಪುಷ್ಪಗಳ ಅರಳುವಿಕೆ, ತಂಪಾದ ಗಾಳಿ ಬೀಸುವಿಕೆ ಇರುವುದಿಲ್ಲ. ಚಳಿಗಾಲ ದಾಟಿದ ಮೇಲೆ ವಸಂತವೂ ತನ್ನ ಇರವನ್ನು ತೋರಿಸುತ್ತದೆ. ಇದೇ ರೀತಿ ದುಂಬಿಯೂ ಒಮ್ಮೊಮ್ಮೆ ಕಾಣಿಸುತ್ತದೆ; ಮರೆಯಾಗುತ್ತದೆ. ವಸಂತ, ದುಂಬಿ, ಮನ್ಮಥ –ಇವರು ಮೂವರು ಪರಸ್ಪರ ಮಿತ್ರರು. ಇವರಲ್ಲಿ ಕಾಮನು ಈ ನಾರಿಯರ ಮನವನ್ನು ಬಹಳ ಪೀಡಿಸುತ್ತಿದ್ದಾನೆ. ಇಂತಹ ಕಾಮನ ಮಿತ್ರನಾದ ದುಂಬಿಯು ನಾರಿಯರಿಗೆ ಗೆಳೆಯನಾಗಿ ಇರುವುದು ವಿರುದ್ಧವು. ಈ ರೀತಿ ಕೃಷ್ಣ, ಉದ್ಧವರ ಹೋಲಿಕೆಯನ್ನು ವಸಂತ, ದುಂಬಿಗಳಲ್ಲಿ ತುಂಬಿಸಿ ನಾರಿಯರು ಎರಡು ಅರ್ಥಗಳ ಮಾತನ್ನು ಆಡುತ್ತಾರೆ.

**ಸಂದೇಶ** : ಪರಶುಕ್ಲತ್ರಯರನ್ನು ಹೊರತು ಎಂತಹ ಅಪರೋಕ್ಷಜ್ಞಾನಿಗಳಿಗೂ ದೇವರ ದರ್ಶನದ ಉದಯಾಸ್ತಮಾನಗಳು ಇವೆ.

**ಅಯಿ ಸಖಿ ಚರತೋಽಸ್ಯ ಸ್ವೈರಮಸ್ಮತ್ಪುರಸ್ತಾತ್**
**ಮರುದಪಿ ಸಹಕಾರೀ ಸಾಧಯತ್ಯಗ್ರ್ಯಶಕ್ತಿಮ್ ।**
**ಅಭಿಮುಖಮನುಪಾರ್ಶ್ವಂ ವಿಷ್ವಗೂರ್ಧ್ವಂ ತಥಾಧಃ**
**ಚರಣಚತುರಶೀಲಃ ಶಿಕ್ಷಯೇದೇಷವೀರಾನ್ ॥ ೩೪ ॥**

ಅಯಿ ಸಖಿ=ಎಲೋ ಗೆಳತಿಯೇ, ಅಸ್ಮತ್=ನಮ್ಮ; ಪುರಸ್ತಾತ್=ಮುಂದೆ, ಸ್ವೈರಂ=ಚೆನ್ನಾಗಿ; ಚರತಃ=ಸಂಚರಿಸುವ; ಅಸ್ಯ=ಈ ಉದ್ಧವನಿಗೆ; ಸಹಕಾರೀ=ಸಹಾಯಕನಾದ; ಮರುತ್ ಅಪಿ=ಗಾಳಿಯೂ; ಅಗ್ರ್ಯ=ಬಹಳ; ಶಕ್ತಿಂ=ಶಕ್ತಿಯನ್ನು ; ಸಾಧಯತಿ=ಕೊಡುತ್ತಾನೆ; ಅಭಿಮುಖಂ=ಮುಂದೆ; ಅನುಪಾರ್ಶ್ವಂ=ಎರಡೂ ಬದಿ; ವಿಷ್ವಕ್=ಸುತ್ತಲೂ; ಊರ್ಧ್ವಂ=ಮೇಲೆ; ತಥಾ=ಹಾಗೆಯೇ; ಅಧಃ=ಕೆಳಗೆ; ಚರಣ=ಸಂಚಾರದಲ್ಲಿ; ಚತುರ=ಚುರುಕಾದ; ಶೀಲ=ಸ್ವಭಾವವುಳ್ಳ; ಏಷಃ=ಇವನು; ವೀರಾನ್=ಪರಾಕ್ರಮಿಗಳನ್ನು; ಶಿಕ್ಷಯೇತ್=ಸಿದ್ಧಪಡಿಸುತ್ತಾನೆ.

ಈ ಉದ್ಧವನಲ್ಲಿ ವಾಯುದೇವರ ಸನ್ನಿಧಾನ ಇದೆ. ಆದ್ದರಿಂದಲೇ ಕೃಷ್ಣನ ಪ್ರೀತಿಯು ವಿಶೇಷವಾಗಿ ಈತನ ಮೇಲೆ ಇದೆ. ಇಂತಹ ಉದ್ಧವನನ್ನು ಉದ್ದೇಶಿಸಿ ಗೋಪಿಯು ತನ್ನ ಗೆಳತಿಯಲ್ಲಿ ಈ ರೀತಿ ಹೇಳುತ್ತಾಳೆ– ನಾವು ಕೃಷ್ಣನಿಗೆ ಬಹಳ ಬೇಕಾದವರು. ಈಗ ಬಹಳ ದುಃಖಿಗಳು. ಇಂತಹ ನಮ್ಮ ಬಳಿಗೆ ಉದ್ಧವನನ್ನು ಕೃಷ್ಣನು ಕಳಿಸಿದ್ದಾನೆ. ಬೇರೆ ಯಾರನ್ನಾದರೂ ಕಳಿಸಿದ್ದರೆ ಅವರು ನಮಗೆ ಹೆದರಿ ಖಂಡಿತವಾಗಿಯೂ ಇಲ್ಲಿಗೆ ಬರುತ್ತಿರಲಿಕ್ಕಿಲ್ಲ. ಇವನಿಗೆ ಗಾಳಿಯು ಅಂದರೆ ವಾಯುದೇವರು ಧೈರ್ಯವನ್ನೂ ಶಕ್ತಿಯನ್ನೂ ಕೊಟ್ಟು ನಮ್ಮ ಮುಂದೆ ಸಂಚರಿಸುವಂತೆ ಮಾಡಿದ್ದಾರೆ. ತನ್ನಲ್ಲಿ ವಾಯುದೇವರ ಸನ್ನಿಧಾನವು ಮರೆತಾಗ ಈತನು ನಮ್ಮಿಂದ ಮರೆಯಾದರೂ ಮತ್ತೆ ಪುನಃ ಮುಂದೆ ಬರುತ್ತಾನೆ.

ಈ ಉದ್ಧವನಿಗೆ ದ್ರೋಣನೆಂಬ ರೂಪವೂ ಇದೆ. ಈ ದ್ರೋಣನು ಎಲ್ಲರಿಗೂ ವಿದ್ಯೆಯನ್ನು ಕೊಟ್ಟವನು. ಶತ್ರುಗಳು ಎದುರುಬಂದಾಗ ಹಿಂದೆ ಮುಂದೆ, ಮೇಲೆ ಕೆಳಗೆ, ಆಚೆ ಈಚೆ, ಸುತ್ತಮುತ್ತ ಹೀಗೆ ನಾನಾ ರೀತಿಯಲ್ಲಿ ಸಂಚರಿಸಿ ಶತ್ರುಗಳನ್ನು ತಬ್ಬಿಬ್ಬು ಮಾಡುವಂತಹ ಚುರುಕುತನವನ್ನು ತನ್ನ ಶಿಷ್ಯರಲ್ಲಿ ಕೊಡುವ ಶಕ್ತಿಯುಳ್ಳವನು ಎಂದು ನಾರಿಯರು ದ್ರೋಣನಿಂದ ತಯಾರಾದ ಅರ್ಜುನನನ್ನು ಎಣಿಸಿಕೊಂಡು ಈ ಮಾತನ್ನು ಹೇಳಿದರು.

ಮಂದಮಾರುತದ ಬಲದಿಂದ ದುಂಬಿಯೂ ತಾನು ಈ ನಾರಿಯರ ಮುಂದೆ ಅಡ್ಡಾಡುತ್ತದೆ. ಶಿಷ್ಯರಲ್ಲಿ ಶಕ್ತಿಯನ್ನು ತುಂಬಿಸಬೇಕಾದರೆ ಗುರುವಾದ ದ್ರೋಣರಲ್ಲಿ ಆ ಶಕ್ತಿಯು ಇರಲೇಬೇಕು. ದ್ರೋಣರ ಸ್ಥಾನದಲ್ಲಿರುವ ಈ ದುಂಬಿಯೂ ಸುತ್ತಮುತ್ತ,

ಆಚೆಈಚೆ ಅಡ್ಡಾಡುತ್ತಾ ಸೋಮಾರಿಗಳಂತೆ ಏಕತ್ರ ಕೂಡಬಾರದು; ಸದಾ ಚಟುವಟಿಕೆಯಲ್ಲಿ ತೊಡಗಬೇಕು ಎಂದು ತಿಳಿಸುತ್ತಿದೆ.

**ಸಂದೇಶ** : ವಾಯುದೇವರ ಅನುಗ್ರಹವಿಶೇಷ ನಮಗಿದ್ದರೆ ಯಾವುದನ್ನು ಸಾಧಿಸಲೂ ಧೈರ್ಯ ಬರುತ್ತದೆ.

**ಸುರಪತಿರಪಿ ನೂನಂ ಗಾನಮೇತನ್ನಿಶಮ್ಯ**
**ಪ್ರಿಯನಿನದ ಮಹಿಷ್ಯಾ ಮಾನಯಿಷ್ಯತ್ಯವಶ್ಯಮ್ ।**
**ಸಮಮಮಲ ವಿಲೋಕ್ಯ ತ್ವದ್ವಶಃ ಶಿಷ್ಯವತ್ಸ್ಯಾತ್**
**ಕಿಮಿಹ ಫಲಮಿದಾನೀಂ ಗಾಯತೋಽಪ್ಯಸ್ಮದಗ್ರೇ** ॥ ೩೫ ॥

ಪ್ರಿಯ=ಒಳ್ಳೆಯ; ನಿನದ=ಶಬ್ದಮಾಡುವವನೇ; ಸುರ=ದೇವತೆಗಳಿಗೆ; ಪತಿಃ ಅಪಿ= ಒಡೆಯನೂ; ಏತತ್=ಈ; ಗಾನಂ=ಮಾತನ್ನು; ನಿಶಮ್ಯ=ಕೇಳಿ; ನೂನಂ=ನಿಶ್ಚಯ ವಾಗಿಯೂ; ಮಹಿಷ್ಯಾಃ=ತನ್ನ ಪತ್ನಿಗೆ; ಸಮಂ=ಸಮಾನನನ್ನಾಗಿ; ಮಾನಯಿಷ್ಯತಿ=ಗೌರವಿ ಸುತ್ತಾನೆ; ಶಿಷ್ಯವತ್=ಶಿಷ್ಯನಂತೆ; ಅವಶ್ಯಂ=ಖಂಡಿತವಾಗಿಯೂ; ತ್ವತ್=ನಿನ್ನ; ವಶಃ= ಅಧೀನನು; ಸ್ಯಾತ್=ಆಗುತ್ತಾನೆ; ಅಮಲ=ನಿರ್ದುಷ್ಟನೇ; ವಿಲೋಕ್ಯ=ಇದನ್ನು ನೋಡಿ; ಇದಾನೀಂ=ಈಗ; ಅಸ್ಮತ್=ನಮ್ಮ; ಅಗ್ರೇ ಅಪಿ=ಮುಂದೆಯೂ ಕೂಡಾ; ಗಾಯತಃ= ಮಾತಾಡುವ ನಿನಗೆ; ಇಹ=ಇಲ್ಲಿ; ಕಿಂ ಫಲಂ=ಏನು ಲಾಭವು?

ಎಲೋ ಉದ್ಧವ, ನಿನ್ನ ಮಾತು ಬಹಳ ಚಂದ. ಇಂದ್ರನು ಯದ್ಯಪಿ ನಿನ್ನಕ್ಕಿಂತ ದೊಡ್ಡವನು. ಆದರೂ ನಿನ್ನ ಮಾತನ್ನು ಬಹಳ ಗೌರವಿಸುತ್ತಾನೆ. ತನ್ನ ಪತ್ನಿಯಾದ ಶಚಿಗೆ ಯಾವ ಸ್ಥಾನಮಾನಗಳನ್ನು ಕೊಡೊತ್ತಾನೋ, ಅದೇ ಸ್ಥಾನಮಾನಗಳನ್ನು ನಿನಗೂ ಕೊಡುತ್ತಾನೆ. ನಿನ್ನ ಶಿಷ್ಯನಂತೆ ನಡೆದುಕೊಳ್ಳುತ್ತಾನೆ.

ತಾರತಮ್ಯ ಸಿದ್ಧಾಂತದಲ್ಲಿ ಶಚೀ ಬೃಹಸ್ಪತಿಯರು ಒಂದೇ ಕಕ್ಷೆಯಲ್ಲಿ ಬರುತ್ತಾರೆ. ಹಾಗೆಯೇ ಈ ಬೃಹಸ್ಪತಿಯು ಇಂದ್ರನಿಗಿಂತ ಕನಿಷ್ಠನಾದರೂ ಆತನಿಗೆ ದೇವಗುರು ಎಂಬ ಒಂದು ಬಿರುದು ಇದೆ. ಆದ್ದರಿಂದ ಈತನಿಗಿಂತ ಎತ್ತರದ ದೇವತೆಗಳೂ ಈತನ ಕೈಕೆಳಗೆ ಇರುವಂತೆ ದೇವರ ಆಜ್ಞೆ. ಇದನ್ನು ಮನದಲ್ಲಿಟ್ಟುಕೊಂಡು ರಾಜರು ನಾರಿಯರ ಮುಖದಿಂದ ಈ ರೀತಿ ಹೇಳಿಸಿದ್ದಾರೆ.

ಉದ್ಧವನೇ, ನಿನ್ನಲ್ಲಿ ಯಾವ ದೋಷಗಳೂ ಇಲ್ಲ. ಇಂದ್ರನು ನಮ್ಮಕ್ಕಿಂತ ದೊಡ್ಡವನು. ಆತನೇ ನಿನ್ನನ್ನು ಸತ್ಕರಿಸಿದ್ದಾನೆ. ಆದ್ದರಿಂದ ಆತನಿಗಿಂತ ಚಿಕ್ಕವರಾದ ನಮ್ಮ ಮುಂದೆ ನೀನು ಮಾತನಾಡಿ ಏನೂ ಲಾಭವಿಲ್ಲ. ಆತನಿಗಿಂತ ಹೆಚ್ಚಿನದನ್ನು ಕೊಡಲು ನಾವು ಸಮರ್ಥರಲ್ಲ. ಈ ರೀತಿಯ ವಿಮರ್ಶೆಗೆ ಪ್ರತಿಬಂಧಕವಾದ ಯಾವ ದೋಷವೂ ನಿನ್ನಲ್ಲಿ ಇಲ್ಲ.

ನಾವು ಹಿಂದಿನ ಜನ್ಮದಲ್ಲಿ ಅಪ್ಸರಸ್ತ್ರೀಯರಾಗಿದ್ದೆವು. ಅಲ್ಲಿ ಇಂದ್ರನು ನಮಗೆ ಅನುಕೂಲನೇ ಆಗಿದ್ದನು. ಕೃಷ್ಣನ ಸಖ್ಯ ಅಲ್ಲಿ ಇರಲಿಲ್ಲ. ಆದ್ದರಿಂದ ವಿರಹದುಃಖವೂ ಇರಲಿಲ್ಲ. ಇಂತಹ ಪ್ರಸಂಗದಲ್ಲಿ ನೀನು ನಮ್ಮ ಮುಂದೆ ಬಂದಾಗ ನಿನ್ನನ್ನು ಚೆನ್ನಾಗಿ ಆದರಿಸಿದ್ದೆವು. ಈಗ ನಾವು ಇಲ್ಲಿ ಗೋಪಿಯರಾಗಿ ಹುಟ್ಟಿದ್ದೇವೆ. ಕೃಷ್ಣನ ಗೆಳೆತನವೂ ಇತ್ತು. ಈಗ ಕೃಷ್ಣನು ದೂರವಾಗಿದ್ದರಿಂದ ನಾವು ಬಹಳ ದುಃಖಿಗಳಾಗಿದ್ದೇವೆ. ಇಂತಹ ಸಂದರ್ಭದಲ್ಲಿ ನೀನು ನಮ್ಮ ಮುಂದೆ ಬಂದರೂ ನಾವು ನಿನ್ನನ್ನು ಆದರಿಸುವ ಹಂತದಲ್ಲಿ ಇಲ್ಲ. ಆದ್ದರಿಂದ ನಮ್ಮ ಮುಂದೆ ಬರಬೇಡ.

ಎಲೋ ದುಂಬಿಯೇ, ನಿನ್ನ ಝೇಂಕಾರವು ಕೇಳಲು ಬಹಳ ಇಂಪು. ಇಂದ್ರನು ತನ್ನ ರಮಣಿಯಿಂದ ಕೂಡಿಕೊಂಡು ವಿಹರಿಸುತ್ತಿರುವಾಗ ನೀನು ಎದುರಾದರೆ ಆತನು ನಿನ್ನನ್ನು ಆದರಿಸುತ್ತಾನೆ. ನೀನು ನಿನ್ನ ಸಂಗಾತಿಯಿಂದ ಕೂಡಿಕೊಂಡು ವಿಹರಿಸುವಾಗ ಅದನ್ನು ಕಂಡ ಇಂದ್ರನು ತಾನೂ ಹಾಗೆಯೇ ನಿನ್ನನ್ನು ಅನುಸರಿಸುತ್ತಾನೆ. ನಾವು ಈಗ ಕೃಷ್ಣನಿಂದ ವಿರಹಿಗಳು. ಯಾವ ರೀತಿಯ ಪುಷ್ಪಾದಿಗಳನ್ನು ಧರಿಸುವುದಿಲ್ಲ. ಆದ್ದರಿಂದ ಪರಾಗದ ಆಸೆಯಿಂದ ನಮ್ಮ ಮುಂದೆ ಸಂಚರಿಸಿ ಪ್ರಯೋಜನವಿಲ್ಲ.

<u>**ಸಂದೇಶ**</u> : ವಿರಾಗಿಗಳು ತಾವು ಯಾರ ಜೊತೆಯೂ ಸೇರುವುದಿಲ್ಲ.

**ಅಸಿ ಮಧುಕರ ವಿದ್ಮೋ ಮಾಧವೇ ಪಕ್ಷಪಾತೀ**
**ಕುಜರವಿಜಯಿಚಾಪೇ ತಸ್ಯ ಜೀವಾಯಿತೋಽಸಿ ।**
**ವಿರಚಯ ವಿವಶಂ ತಂ ನಃ ಸಮೀಪೇ ವಸಂತಂ**
**ವಿವಿಧರಸವಿಲಾಸಶ್ರೇಣಿವಿಶ್ರಾಣನಜ್ಞಮ್** ॥ ೩೬ ॥

ಹೇ, ಮಧು=ಸುಖವನ್ನು; ಕರ=ಮಾಡುವವನೇ; ಮಾಧವೇ=ಕೃಷ್ಣನಲ್ಲಿ; ಪಕ್ಷಪಾತೀ= ಪಕ್ಷಪಾತಿಯು; ಅಸಿ=ಆಗಿದ್ದಿ; ವಿದ್ಮಃ=ತಿಳಿದಿದ್ದೇವೆ; ಕು=ಭೂಮಿಯಲ್ಲಿ; ಜ=ಹುಟ್ಟಿದ; ರವಿ=ಕರ್ಣನನ್ನು; ಜಯಿ=ಗೆದ್ದ; ಚಾಪ=ಬಿಲ್ಲಿನಿಂದ; ಇತಸ್ಯ=ಕೂಡಿದ ಅರ್ಜುನನಿಗೆ; ಜೀವಾಯಿತಃ=ಶಕ್ತಿಯನ್ನು ತುಂಬಿದವನು; ಅಸಿ=ಆಗಿದ್ದಿ; ವಿ=ಗರುಡನಿಗೆ; ವಶಂ=ಅಧೀನ ನಾದ; ವಿವಿಧ=ನಾನಾ ರೀತಿಯ; ರಸ=ಶೃಂಗಾರಾದಿಗಳ; ವಿಲಾಸ=ಹಾವಭಾವಗಳ; ಶ್ರೇಣಿ=ಸಮೂಹಗಳ; ವಿಶ್ರಾಣನ=ವಿತರಣೆಯಲ್ಲಿ; ಜ್ಞಂ=ತಿಳುವಳಿಕೆವುಳ್ಳ; ತಂ=ಕೃಷ್ಣನನ್ನು; ನಃ=ನಮ್ಮ; ಸಮೀಪೇ=ಬಳಿಯಲ್ಲಿ; ವಸಂತಂ=ಇರುವವನನ್ನಾಗಿ; ವಿರಚಯ=ಮಾಡು.

ಎಲೋ ಉದ್ಧವನೇ, ನೀನು ಬೃಹಸ್ಪತಿಯ ಅವತಾರ. ಈತನು ನವಗ್ರಹರಲ್ಲಿ ಗುರುವು. ಗುರುವು ತನ್ನ ದೃಷ್ಟಿಯ ಪಾತದಿಂದ ಪಾಪಿಗ್ರಹಗಳ ದೋಷವನ್ನು ಪರಿಹರಿಸುವನು. ನೆಮ್ಮದಿಯನ್ನು ಕೊಡುವನು. ಹಾಗೆಯೇ ಉದ್ಧವರೂಪದಿಂದ ಕೃಷ್ಣನಿಗೆ ಬಹಳ ಬೇಕಾದವನು. ಕೃಷ್ಣನು ಇದಕ್ಕೆ ಪ್ರತಿಯಾಗಿ ನಿನ್ನ ಮಧು ಎಂಬ ಹೆಸರಿನ ವಂಶ

ಬೆಳವಣಿಗೆಯನ್ನು ಮಾಡುತ್ತಾನೆ. ಸೂರ್ಯನು ಕರ್ಣರೂಪದಿಂದ ಭೂಮಿಯಲ್ಲಿ ಹುಟ್ಟಿದ್ದನು. ಈತನಿಗೂ ಅರ್ಜುನನಿಗೆ ಬಹಳ ವಿರೋಧವಿತ್ತು. ಈ ಕರ್ಣನನ್ನು ಅರ್ಜುನನು ತನ್ನ ಗಾಂಡೀವದಿಂದ ಯುದ್ಧದಲ್ಲಿ ಬಡಿಯುತ್ತಾನೆ. ಅರ್ಜುನನು ಕೃಷ್ಣನಿಗೆ ಬಹಳ ಪ್ರಿಯನಾದವನು. ಇಂತಹ ಅರ್ಜುನನಿಗೆ ಈ ಉದ್ಧವನು ದ್ರೋಣರೂಪದಿಂದ ತನ್ನ ಎಲ್ಲಾ ವಿದ್ಯೆಯನ್ನೂ ಧಾರೆ ಎರೆದಿದ್ದನು. ಕರ್ಣನಿಗೆ ಕೊಟ್ಟಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಒಂದು ಕಾರಣ ಅರ್ಜುನನು ಕೃಷ್ಣನಿಗೆ ಪ್ರಿಯನು ಎಂದು. ಈ ರೀತಿ ಉದ್ಧವರೂಪದಿಂದಲೂ ದ್ರೋಣರೂಪದಿಂದಲೂ ಕೃಷ್ಣನ ಪಕ್ಷದಲ್ಲಿಯೇ ಇರುವವನು. ಇಂತಹ ನೀನು ಕೃಷ್ಣನನ್ನು ನಮ್ಮ ಬಳಿಗೆ ಕರೆದುಕೊಂಡು ಬಾ. ನಾವು ರಸಿಕರಾದ ನಾರಿಯರು. ಕೃಷ್ಣನು ಶೃಂಗಾರಾದಿ ನವರಸಗಳನ್ನೂ ತಿಳಿದಿದ್ದಾನೆ. ಅಷ್ಟೇ ಅಲ್ಲ, ಅದನ್ನು ಎಲ್ಲಿ, ಹೇಗೆ, ಯಾವಾಗ, ಯಾಕೆ ಪ್ರಯೋಗ ಮಾಡಬೇಕೆಂಬುದನ್ನೂ ತಿಳಿದಿದ್ದಾನೆ. ನಮ್ಮ ರಸಿಕತನಕ್ಕೆ ಸರಿಯಾಗಿ ಸ್ಪಂದಿಸುವವನು ಕೃಷ್ಣನು. ನಿನ್ನ ಮಾತನ್ನು ಕೃಷ್ಣನು ನಡೆಸಿಕೊಡುತ್ತಾನೆ. ಆದ್ದರಿಂದ ಆತನನ್ನು ನಮ್ಮಲ್ಲಿ ಕರೆದುಕೊಂಡು ಬಾ. ನಮ್ಮ ಜೊತೆ ಇರುವಂತೆ ಮಾಡು.

ದುಂಬಿಯನ್ನು ಕುರಿತು ನಾರಿಯರ ಮಾತು ಈ ರೀತಿ ಇದೆ –ಮಾಧವ ಶಬ್ದಕ್ಕೆ ದೇವರು ಎಂಬ ಅರ್ಥ ಇರುವಂತೆ ವಸಂತಋತು ಎಂಬ ಅರ್ಥವೂ ಇದೆ. ಎಲೋ ದುಂಬಿಗಳೇ, ನೀವು ಮಾಧವನ ಅಂದರೆ ವಸಂತ ಋತುವಿನಲ್ಲಿ ಪಕ್ಷಪಾತಿಗಳು ಅಂದರೆ ರೆಕ್ಕೆಗಳನ್ನು ಬಿಚ್ಚಿ ಯಥೇಚ್ಛವಾಗಿ ಹಾರಾಡುವವರು. ವಸಂತಮಾಸದಲ್ಲಿ ಎಲ್ಲಾ ರೀತಿಯ ಹೂಗಳೂ ಅರಳುತ್ತವೆ. ದುಂಬಿಗಳಿಗೆ ಆ ಕಾಲದಲ್ಲಿ ಬಹಳ ಆನಂದ. ಆ ಹೂಗಳ ಪರಿಮಳಕ್ಕೆ ಪರಾಗಕ್ಕೆ ಮರುಳಾಗಿ ಬಹಳವಾಗಿ ಹಾರಾಡುತ್ತಿರುತ್ತವೆ.

ದುಂಬಿಯ ಪರವಾಗಿ ಅರ್ಥಮಾಡುವಾಗ 'ಕುಜರವಿಜಯಿಚಾಪೇ' ಎಂಬ ಪದಕ್ಕೆ ಕು–ಜರಾ–ವಿಜಯಿ–ಚಾಪೇ ಎಂದು ಪದಗಳನ್ನು ವಿಂಗಡಿಸಬೇಕು. ಜರಾವನ್ನು ಅಂದರೆ ವಾರ್ಧಕ್ಯವನ್ನು ಕು=ನಿಂದಿಸುವವರು ಅಂದರೆ ತರುಣರು. ಕುಜರರು=ತರುಣರು, ತರುಣರು ಎಂದೂ ಮುದಿತನವನ್ನು ಆಶಿಸುವುದಿಲ್ಲ. ಕಾಮನು ಇಂತಹ ತರುಣರನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಅವರ ಮನಸ್ಸಿಗೆ ತಾನು ಬಾಣ ಹೂಡುತ್ತಾನೆ. ಆತನ ಧನುಸ್ಸು ಈ ಪುಷ್ಪಗಳು. ಧನುಸ್ಸಿನ ಹಗ್ಗ ಈ ದುಂಬಿಗಳು. ಈ ಪುಷ್ಪಗಳಿಂದ, ದುಂಬಿಗಳಿಂದ ಈ ವಸಂತದ ವಾತಾವರಣದಿಂದ ತರುಣರು ಮನೋವಿಕಾರಕ್ಕೆ ಒಳಗಾಗುತ್ತಾರೆ. ಕೇವಲ ಬಿಲ್ಲುಬಾಣವನ್ನು ಹೂಡಲು ಸಮರ್ಥವಲ್ಲ. ಎದೆಯೇರಿಸಿದಾಗ ಬಿಲ್ಲಿಗೆ ಅಂತಹ ಶಕ್ತಿ ಬರುತ್ತದೆ. ಅದೇ ರೀತಿ ಪುಷ್ಪಗಳಲ್ಲಿ ಈ ದುಂಬಿಗಳು ಕೂತ ದೃಶ್ಯವು ತರುಣತರುಣಿಯರ ಮನಸ್ಸನ್ನು ಕದಡುತ್ತದೆ.

ಎಲೋ ದುಂಬಿಗಳೇ, ವಸಂತದ ಪಕ್ಷಪಾತಿಗಳಾದ ನೀವು ಆ ಋತುವನ್ನು ನಮ್ಮ

ಬಳಿಗೆ ತನ್ನಿ. ಅಂದರೆ ಸದಾಕಾಲವು ವಸಂತವೇ ಆಗಿರಲಿ. ಈ ವಸಂತದಲ್ಲಿ ಪರಾಗಗಳು ಬಹಳವಾಗಿ ಹರಡುತ್ತವೆ. ಹಾಗೆಯೇ ತರುಣಾವಸ್ಥೆಯಲ್ಲಿ ಮನಸ್ಸನ್ನು ಕದಡುತ್ತವೆ.

ಸಂದೇಶ : ಪ್ರಕೃತಿಯು ಅಲಂಕೃತವಾದಾಗ ದೇವರನ್ನು ಕರೆಯಬೇಕು.

**ವಿತನ್ಯಮಾನಸ್ವಪ್ರೇಷ್ಠ ವಿಯೋಗಾರ್ತಿರಥೋದ್ಧವಃ ।**
**ಪ್ರಿಯೋಕ್ತಿಭಿಃ ಪ್ರೀಣಯಿತ್ವಾ ಪ್ರಯಯೌ ಕೃಷ್ಣಸನ್ನಿಧಿಮ್ ॥ ೩೭ ॥**

ಅಥ=ಅನಂತರ; ಉದ್ಧವಃ=ಉದ್ಧವನು; ವಿತನ್ಯಮಾನ=ವಿಸ್ತಾರಮಾಡಿದ; ಸ್ವ=ತಮಗೆ; ಪ್ರೇಷ್ಠ=ಪ್ರಿಯನಾದ ಕೃಷ್ಣನ; ವಿಯೋಗ=ವಿರಹದಿಂದ; ಆರ್ತೀಃ=ದುಃಖಿತರಾದ ಗೋಪಿಯರನ್ನು; ಪ್ರಿಯ=ಒಳ್ಳೆಯ; ಉಕ್ತಿಭಿಃ=ಮಾತುಗಳಿಂದ; ಪ್ರೀಣಯಿತ್ವಾ=ತೃಪ್ತಿಪಡಿಸಿ; ಕೃಷ್ಣ=ಕೃಷ್ಣನ; ಸನ್ನಿಧಿಂ=ಸಮೀಪವನ್ನು; ಪ್ರಯಯೌ=ಹೊರಟನು.

ಈ ಗೋಪಿಯರಿಗೆ ಕೃಷ್ಣನ ವಿರಹವನ್ನು ತಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಬಹಳವಾಗಿ ಪ್ರಲಪಿಸುತ್ತಿದ್ದಾರೆ. ಅಂತಹವರನ್ನು ಒಳ್ಳೆಯ ಮಾತುಗಳಿಂದ ಉದ್ಧವನು ಸಮಾಧಾನಪಡಿಸಿದನು. ಅನಂತರ ಮಧುರೆಗೆ ಹೊರಟನು.

ಸಂದೇಶ : ಭಕ್ತರು ಕಷ್ಟದಲ್ಲಿರುವಾಗ ಅವರಿಗೆ ಸಹಾಯ ಮಾಡಬೇಕು.

**ಕಂಸೇ ಬಲೈಃ ಸಹ ಮೃತೇ ಸತಿ ಯಾವಶಿಷ್ಟಾ**
**ವಂಶಂ ಸ್ವಮಾತುರಪಿ ತಾದೃಶಮಸ್ತಿನಾಮ್ನೀ ।**
**ಕೃತ್ವೋಚಿತಂ ವಿದಧತೀವ ನಿಜಾಭಿಧಾನಂ**
**ಪಿತ್ರೇ ನ್ಯವೇದಯದಥಾಚ್ಯುತಕೃತ್ಯಮಾರ್ತಾ ॥ ೩೮ ॥**

ಕಂಸೇ=ಕಂಸನು; ಬಲೈಃ=ಸೈನ್ಯದಿಂದ; ಸಹ=ಕೂಡಿ; ಮೃತೇ ಸತಿ=ಸಾಯುತ್ತಿರಲು; ಅವಶಿಷ್ಟಾ=ಉಳಿದ; ಯಾ=ಯಾವ; ಅಸ್ತಿನಾಮ್ನೀ=ಅಸ್ತಿ ಎಂಬ ಹೆಸರಿನವಳು; ಸ್ವ=ತನ್ನ; ಮಾತುಃ ಅಪಿ=ತಾಯಿಯದ್ದೂ ಕೂಡಾ; ವಂಶಂ=ವಂಶವನ್ನು; ತಾದೃಶಂ=ಆ ರೀತಿಯನ್ನಾಗಿ; ಕೃತ್ವಾ=ಮಾಡಿ; ನಿಜ=ತನ್ನ; ಅಭಿಧಾನಂ=ಹೆಸರನ್ನು; ಉಚಿತಂ=ಯೋಗ್ಯವನ್ನಾಗಿ; ವಿದಧತೀವ=ಮಾಡುವವಳಂತೆ; ಆರ್ತಾ=ದುಃಖಿತಳಾಗಿ; ಅಚ್ಯುತ=ಕೃಷ್ಣನ; ಕೃತ್ಯಂ=ಕೆಲಸವನ್ನು; ಪಿತ್ರೇ=ತಂದೆಗೋಸ್ಕರ; ನ್ಯವೇದಯತ್=ತಿಳಿಸಿದಳು.

ಕಂಸನನ್ನು ಕೊಂದ ಕೃಷ್ಣನು ಗೋಕುಲದ ಗೋಪಿಯರನ್ನು ಸಮಾಧಾನಗೊಳಿಸಿ ಮಧುರೆಯಲ್ಲಿ ಪ್ರಜೆಗಳನ್ನು ರಕ್ಷಿಸಿಕೊಂಡಿದ್ದನು. ಸತ್ತಿರುವ ಕಂಸನಿಗೆ ಅಸ್ತಿ ಎಂಬ ಹೆಸರಿನ ಪತ್ನಿಯಿದ್ದಳು. ಈಕೆ ಜರಾಸಂಧನ ಮಗಳು. ಕಂಸನು ಸತ್ತ ವಿಚಾರವನ್ನು ಆತನಿಗೆ ತಿಳಿಸಲು ಹೊರಟಳು.

ಇದನ್ನು ರಾಜರು ಈ ಕ್ರಮದಲ್ಲಿ ತಿಳಿಸುತ್ತಾರೆ –ಈಕೆಯ ಹೆಸರು ಅಸ್ತಿ ಎಂದು.

ಸಂಸ್ಕೃತದಲ್ಲಿ ಅಸ್ತಿ ಎಂದರೆ ಇರುವುದು ಎಂದು ಅರ್ಥ. ಈಕೆಯು ತನ್ನ ಗಂಡನ ಕಡೆಯ ಎಲ್ಲರನ್ನೂ ನಾಶಮಾಡಿಸಿದಳು. ಇನ್ನುಮುಂದೆ ತನ್ನ ತಾಯಿಯ ಕಡೆಯ ಇದೇ ರೀತಿಯ ಚತುರಂಗಸೈನ್ಯವನ್ನೂ ತನ್ನ ಅಪ್ಪನನ್ನೂ ಕೃಷ್ಣನ ಕೈಯಿಂದ ನಾಶಮಾಡಿಸಿ ತಾನು ಮಾತ್ರ ಇರುವವಳು ಎಂಬ ರೀತಿಯಲ್ಲಿ ತನ್ನ ಹೆಸರನ್ನು ಸಾರ್ಥಕಪಡಿಸಲೋ ಎಂಬಂತೆ ತಂದೆಯ ಬಳಿಗೆ ನಡೆದಳು ಎಂದು.

ಈಕೆಯು ಜರಾಸಂಧನಲ್ಲಿ ಕೃಷ್ಣನ ಕೆಲಸವನ್ನು ಹೇಳುತ್ತಾಳೆ. ಕ್ರುದ್ಧನಾದ ಜರಾಸಂಧನು ಸೈನ್ಯಸಹಿತನಾಗಿ ಕೃಷ್ಣನನ್ನು ಎದುರಿಸುತ್ತಾನೆ. ಯುದ್ಧದಲ್ಲಿ ಕೃಷ್ಣನು ಈ ಸೈನ್ಯವನ್ನು ನಾಶಮಾಡುತ್ತಾನೆ ಎಂದು ಅಭಿಪ್ರಾಯ.

<u>**ಸಂದೇಶ**</u> : ದೈವದತ್ತವಾದ ನಾಮವನ್ನು ಸಾರ್ಥಕಗೊಳಿಸಿ ಬದುಕಬೇಕು.

**ಸ ಮಾಗಧಃ ಸಾಧಿತಸೈನ್ಯಸಿಂಧುಃ**
**ಮದಾಂಧಬುದ್ಧಿರ್ಮಧುರಾಂ ಜಗಾಮ-**
**ಅನೇಕದೇಶಾಶ್ರಿತಭೂಮಿಭಾರ-**
**ಹರಸ್ಯ ಸಾರಥ್ಯಕೃದಚ್ಯುತಸ್ಯ** ॥ ೩೯ ॥

ಸಾಧಿತ=ಸಿದ್ಧಗೊಳಿಸಿದ; ಸೈನ್ಯ=ಸೈನ್ಯವೆಂಬ; ಸಿಂಧುಃ=ಸಮುದ್ರವುಳ್ಳ; ಮದ= ಅಹಂಕಾರದಿಂದ; ಅಂಧ=ಕುರುಡಾದ; ಬುದ್ಧಿಃ=ಬುದ್ಧಿಯುಳ್ಳ; ಸಃ=ಆ; ಮಾಗಧಃ= ಜರಾಸಂಧನು; ಅನೇಕ=ಬಹಳ; ದೇಶ=ಊರುಗಳನ್ನು; ಆಶ್ರಿತ=ಆಶ್ರಯಿಸಿರುವ; ಅಚ್ಯುತಸ್ಯ=ಕೃಷ್ಣನಿಗೆ; ಸಾರಥ್ಯ=ಸಹಾಯವನ್ನು; ಕೃತ್=ಮಾಡುವವನಂತೆ; ಮಧುರಾಂ=ಮಧುರೆಯನ್ನು; ಜಗಾಮ=ಹೊರಟನು.

ಮಗಳಾದ ಅಸ್ತಿಯಿಂದ ಜರಾಸಂಧನು ವಿಷಯವನ್ನು ತಿಳಿದನು. ಕೃಷ್ಣನನ್ನು ಸಂಹರಿಸುವ ಇಚ್ಛೆಯಿಂದ ಸೈನ್ಯವನ್ನು ಕಟ್ಟಿಕೊಂಡು ಮಧುರೆಯ ಕಡೆಗೆ ಹೊರಟನು. ಕೃಷ್ಣನು ಜರಾಸಂಧನನ್ನು ಕೊಲ್ಲದೆ ಆತನ ಸೈನ್ಯವನ್ನು ಸಮಗ್ರವಾಗಿ ನಾಶಮಾಡುತ್ತಾನೆ. ಇಂತಹ ಘಟನೆಯು ಬಹಳಸಲ ನಡೆಯುತ್ತದೆ.

ಕೃಷ್ಣನು ಭೂಭಾರಹರಣಕ್ಕೋಸ್ಕರ ಅವತರಿಸಿದವನು. ದೈತ್ಯರು ಭೂಮಿಯಲ್ಲಿ ಅಲ್ಲಲ್ಲಿ ಹುಟ್ಟಿದ್ದಾರೆ. ಅವರನ್ನೆಲ್ಲಾ ಕೊಲ್ಲಲು ಕೃಷ್ಣನೇ ಅವರಿದ್ದಲ್ಲಿಗೆ ಹೋಗುವುದು, ಕಾರಣ ಇಲ್ಲದೆ ಅವರ ಜೊತೆ ಕಾದಾಡಿ ಅವರನ್ನು ಕೊಲ್ಲುವುದು; ಇದೆಲ್ಲಾ ಲೌಕಿಕವಾಗಿ ಸ್ವಲ್ಪ ಶ್ರಮದ ಕೆಲಸ. ಜನಾಪವಾದಬರುವ ಕೆಲಸವೂ ಆಗಬಹುದು. ಕೃಷ್ಣನು ಈಗ ಕುಳಿತಲ್ಲೇ ಅಸುರಸಂಹಾರವನ್ನು ಮಾಡಲು ಜರಾಸಂಧನು ಸಹಕರಿಸಿದನು. ತಾನು ೧೮ ಸಲ ಕೃಷ್ಣನ ಮೇಲೆ ದಂಡೆತ್ತಿ ಬಂದನು. ಪ್ರತಿಸಲವೂ ೨೩ ಅಕ್ಷೋಹಿಣಿಸೈನ್ಯವನ್ನು ಕಟ್ಟಿಕೊಂಡುಬಂದನು. ಒಂದು ಅಕ್ಷೋಹಿಣಿ ಅಂದರೆ ೨೧,೮೭೦ ಆನೆಗಳು; ೨೧,೮೭೦

ರಥಗಳು; ೬೫೬೧೦ ಕುದುರೆಗಳು, ೧,೦೯,೩೫೦ ಪದಾತಿಗಳು –ಇಷ್ಟು ಇರಬೇಕು. ಈ ದುಷ್ಟರು ಭೂಮಿಯಲ್ಲಿ ಅಲ್ಲಲ್ಲಿ ವಾಸಿಸುತ್ತಿದ್ದರು. ಜರಾಸಂಧನು ಅವರನ್ನೆಲ್ಲಾ ಒಟ್ಟುಸೇರಿಸಿ ಕೃಷ್ಣನ ಬಳಿಗೆ ಕರೆದುಕೊಂಡು ಬರುತ್ತಿದ್ದನು. ಕೃಷ್ಣನು ಅವರನ್ನೆಲ್ಲಾ ಸಂಹರಿಸಿ ಪುನಃ ತರಲು ಜರಾಸಂಧನನ್ನು ಕಳಿಸುತ್ತಿದ್ದನು. ಈ ರೀತಿ ದುಷ್ಟಸಂಹಾರ ವಿಷಯದಲ್ಲಿ ಜರಾಸಂಧನು ಕೃಷ್ಣನಿಗೆ ಸಹಾಯ ಮಾಡುವಂತಿತ್ತು ಎಂದು ರಾಜರು ತಿಳಿಸುತ್ತಾರೆ.

<u>**ಸಂದೇಶ**</u> : ದೇವರ ದ್ವೇಷಿಗಳೂ ಕೂಡಾ ಒಂದು ರೀತಿಯಲ್ಲಿ ದೇವರ ಸೇವೆಯನ್ನೇ ಮಾಡುವುದು. ಇದನ್ನೇ ದಾಸರು ತನ್ನ ಹಾಡಿನಲ್ಲಿ ಸಾಧನಕೆ ಬಗೆಗಾಣೆ ಎನ್ನಬಹುದೇ ಎಂದು ಹೇಳಿದ್ದಾರೆ.

**ಗಜೈಃ ರಥೌಘೈಃ ಗಗನಂ ಸ್ಪೃಶದ್ಭಿ–**
**ರ್ಭಟೈರ್ಹಯೈರ್ಭಾಸುರಭೂಷಣೌಘೈಃ ।**
**ಜಗಾಮ ಜಾಮಾತೃಪಥೇನ ತಸ್ಮೈ**
**ಚಮೂಮಮುಂ ಪ್ರೇಷಯಿತುಂ ಧಿಯೇವ ॥ ೪೦ ॥**

ಜಾಮಾತೃ=ಅಳಿಯನ; ಪಥೇನ=ದಾರಿಯಿಂದ; ತಸ್ಮೈ=ಅಳಿಯನಿಗೆ; ಅಮುಂ=ಈ; ಚಮೂಂ=ಸೈನ್ಯವನ್ನು; ಪ್ರೇಷಯಿತುಂ=ಕಳಿಸಲು; ಧಿಯಾ ಇವ=ಬುದ್ಧಿಯಿಂದ ಎಂಬಂತೆ; ಗಗನಂ=ಆಕಾಶವನ್ನು; ಸ್ಪೃಶದ್ಭಿಃ=ಮುಟ್ಟುವ; ಗಜೈಃ=ಆನೆಗಳಿಂದ; ರಥ=ರಥಗಳ; ಓಘೈಃ=ಸಮೂಹಗಳಿಂದ; ಭಾಸುರ=ಶೋಭಿಸುವ; ಭೂಷಣ=ಆಭರಣಗಳ; ಓಘೈಃ= ಸಮೂಹವುಳ್ಳ; ಭಟೈಃ=ಸೇವಕರಿಂದ; ಹಯೈಃ=ಕುದುರೆಗಳಿಂದ; ಜಗಾಮ=ಹೊರಟನು.

ಕ್ರುದ್ಧನಾದ ಜರಾಸಂಧನು ಸೈನ್ಯವನ್ನು ಕಟ್ಟಿಕೊಂಡು ಕೃಷ್ಣನನ್ನು ಕೊಲ್ಲಲು ಮಧುರೆಯ ಮೇಲೆ ದಂಡೆತ್ತಿ ಬಂದನು. ಸೈನ್ಯದಲ್ಲಿ ದೊಡ್ಡ ದೊಡ್ಡ ಆನೆ, ಕುದುರೆ ಮೊದಲಾದುವುಗಳು ಇದ್ದವು. ಅವುಗಳನ್ನು ಬಹಳವಾಗಿ ಸಿಂಗರಿಸಿದ್ದನು. ಈ ಸೈನ್ಯವನ್ನು ಕೃಷ್ಣನು ಸಮಗ್ರವಾಗಿ ಸಂಹರಿಸುತ್ತಾನೆ. ಜರಾಸಂಧನನ್ನು ಉಳಿಸುತ್ತಾನೆ.

ಇದನ್ನು ರಾಜರು ಈ ರೀತಿ ಚಿತ್ರಿಸುತ್ತಾರೆ– ಜರಾಸಂಧನ ಅಳಿಯನಾದ ಕಂಸನನ್ನು ಕೃಷ್ಣನು ಪ್ರತ್ಯೇಕವಾಗಿ ಒಬ್ಬನನ್ನೇ ಸಂಹರಿಸಿದ್ದಾನೆ. ಕಂಸನು ನರಕಕ್ಕೆ ತಾನು ಒಂಟಿಯಾಗಿ ಹೋಗುತ್ತಿದ್ದಾನೆ. ಕಂಸನು ರಾಜನು. ರಾಜನು ಒಂಟಿಯಾಗಿ ಹೋಗುವುದು ಉಚಿತವಲ್ಲ. ಕಂಸನು ಜರಾಸಂಧನ ಅಳಿಯನಾದ್ದರಿಂದ ಮಾವನಿಗೂ ಇದರಿಂದ ಅಪಮಾನ. ಅದಕ್ಕಾಗಿ ಕಂಸನನ್ನು ವೈಭವದಿಂದ ನರಕಕ್ಕೆ ಕರೆದುಕೊಂಡು ಹೋಗಲು ತನ್ನ ಸೈನ್ಯವನ್ನು ಕಳಿಸಿಕೊಡುತ್ತಾನೋ ಎಂಬಂತೆ.

**ಕುಂತೈಃ ಕುಠಾರೈಃ ಕುದ್ದಾಲೈರ್ಬಭಂಜುರ್ಭಗವತ್ಪುರೀಮ್ ।**
**ಆದ್ಯಾಂ ಉಪನಿಷದ್ವಿದ್ಯಾಂ ಕುತರ್ಕೈರಿವ ವಾದಿನಃ ॥ ೪೧ ॥**

ವಾದಿನಃ=ವಾದಿಗಳು; ಕುತರ್ಕೈಃ=ಕೆಟ್ಟ ತರ್ಕಗಳಿಂದ; ಆದ್ಯಾಂ=ಅನಾದಿಯಾದ; ಉಪನಿಷತ್=ಉಪನಿಷದ್ರೂಪವಾದ; ವಿದ್ಯಾಂ ಇವ=ವಿದ್ಯೆಯನ್ನೆಂಬಂತೆ; ಕುಂತ್ಯೈಃ= ಈಟಿಗಳಿಂದ; ಕುಠಾರೈಃ=ಕೊಡಲಿಗಳಿಂದ; ಕುದ್ದಾಲೈಃ=ಪಿಕ್ಕಾಸುಗಳಿಂದ; ಭಗವತ್= ಕೃಷ್ಣನ; ಪುರೀಂ=ಊರನ್ನು; ಬಭಂಜುಃ=ಹೊಡೆದರು.

ಜರಾಸಂಧನ ಸೈನ್ಯವು ಕೃಷ್ಣನ ಮಧುರೆಯನ್ನು ಸುತ್ತುವರಿಯಿತು. ತಮ್ಮ ಕೈಯಲ್ಲಿರುವ ನಾನಾರೀತಿಯ ಆಯುಧಗಳಿಂದ ಮಧುರೆಯನ್ನು ಬಡಿಯಲು ಆರಂಭಿಸಿತು.

ಇದನ್ನು ರಾಜರು ಉದಾಹರಣೆಯ ಮೂಲಕ ತಿಳಿಸುತ್ತಾರೆ– ದುರ್ವಾದಿಗಳು ನಾನಾ ರೀತಿಯ ತರ್ಕಶಾಸ್ತ್ರಗಳನ್ನು ಅಭ್ಯಾಸ ಮಾಡುತ್ತಾರೆ. ಅವರ ತಾರ್ಕಿಕ ಬುದ್ಧಿಯು ಅಡ್ಡದಾರಿ ಹಿಡಿದಿರುತ್ತದೆ. ಅಂತಹ ತರ್ಕಗಳಿಂದ ಉಪನಿಷತ್ತನ್ನು ಖಂಡಿಸಲು ಆರಂಭಿಸುತ್ತಾರೆ. ಮಧುರೆಯ ಒಳಗೆ ಕೃಷ್ಣನಿರುವಂತೆ ಉಪನಿಷತ್ತಿನ ಒಳಗೆ ದೇವರಿದ್ದಾನೆ. "ಉಪನಿಷತ್ತು ದೇವರನ್ನು ಹೇಳುವುದಿಲ್ಲ" ಎಂದು ತಮ್ಮ ಕುಯುಕ್ತಿಗಳಿಂದ ಸಮರ್ಥಿಸಲು ಪ್ರಯತ್ನಿಸುತ್ತಾರೆ. ಅಸಮರ್ಥರಾಗುತ್ತಾರೆ. ಅದೇ ರೀತಿ ಕೃಷ್ಣನ ಮಧುರೆಯನ್ನೂ ಯಾರಿಂದಲೂ ನಾಶಮಾಡಲು ಸಾಧ್ಯವಿಲ್ಲ. ಉಪನಿಷತ್ತುಗಳೇ ಮಧುರೆ. ಕೃಷ್ಣನೇ ಉಪನಿಷ್ಪ್ರತಿಪಾದ್ಯನಾದ ದೇವರು. ಜರಾಸಂಧನ ಸೈನ್ಯವೇ ಕುವಾದಿಗಳು. ಸೈನ್ಯದ ಆಯುಧಗಳೇ ಕುತರ್ಕಗಳು.

<u>**ಸಂದೇಶ**</u> : ಉಪನಿಷತ್ತುಗಳು ದೇವರನ್ನೇ ಹೇಳುತ್ತವೆ. ಇದನ್ನು ಅಲ್ಲಗಳೆಯಲು ಯಾರಿಂದಲೂ ಸಾಧ್ಯವಿಲ್ಲ.

ಉಪವನಮುಪವೇದಪ್ರಾಯಮುನ್ಮೂಲಯಂತಃ
ಸುಕೃತಸಮಮುದಾರಂ ದ್ವಾರಮಾರಾತ್ಬಭಂಜುಃ ।
ಪ್ರತಿಭಯವರಶಕ್ತ್ಯಾದ್ಯೂರ್ಜಿತಾಧಾರಯುಕ್ತಾಃ
ಖಲಮತಿಹೃತಚಿತ್ತಾ ದೂಷ್ಯದುರ್ಮಂತ್ರದೃಪ್ತಾಃ ॥ ೪೨ ॥

ಪ್ರತಿಭಯ=ಭಯಂಕರಗಳಾದ; ವರ=ಉತ್ತಮವಾದ; ಶಕ್ತಿ=ಶಕ್ತಿ ಎಂಬ ಆಯುಧವೇ; ಆದಿ=ಮೊದಲಾದ; ಊರ್ಜಿತ=ಉತ್ತಮವಾದ; ಆಧಾರ=ಆಶ್ರಯದಿಂದ; ಯುಕ್ತಾಃ=ಕೂಡಿದ; ಖಲ=ದುಷ್ಟನ; ಮತಿ=ಬುದ್ಧಿಯಿಂದ; ಹೃತ=ಅಪಹೃತವಾದ; ಚಿತ್ತಾ=ಮನಸ್ಸುಳ್ಳ; ದೂಷ್ಯ=ಕೆಟ್ಟ; ದುರ್ಮಂತ್ರ=ದುರಾಲೋಚನೆಯಿಂದ; ದೃಪ್ತಾಃ=ಕೊಬ್ಬಿದ ಭಟರು; ಉಪವೇದಪ್ರಾಯಂ=ಉಪವೇದದಂತಿರುವ; ಉಪವನಂ=ಉದ್ಯಾನವನ್ನು; ಉನ್ಮೂಲ-ಯಂತಃ=ನಾಶಮಾಡುವವರಾಗಿ; ಸುಕೃತಸಮಂ=ಪುಣ್ಯದಂತಿರುವ; ಉದಾರಂ= ಉತ್ತಮವಾದ; ದ್ವಾರಂ=ಹೆಬ್ಬಾಗಿಲನ್ನು; ಆರಾತ್=ದೂರದಿಂದಲೇ; ಬಭಂಜುಃ= ಮರ್ದಿಸಿದರು.

ರಾಜರು ಕೃಷ್ಣಜರಾಸಂಧರ ಯುದ್ಧವನ್ನು ಆಧ್ಯಾತ್ಮಿಕ ವಿದ್ಯೆಯ ಬಗ್ಗೆ ವಾಕ್ಯಾರ್ಥ ಎಂಬ ಯುದ್ಧಕ್ಕೆ ಹೋಲಿಸುತ್ತಾರೆ. ಮಥುರಾಪಟ್ಟಣ ಎಂಬುದೇ ಉಪನಿಷದ್ವಿದ್ಯೆ. ಕೃಷ್ಣನ ಸೈನ್ಯ ತತ್ವವಾದಿಗಳು. ಜರಾಸಂಧನ ಸೈನ್ಯ ಮಿಥ್ಯಾವಾದಿಗಳು. ಯುದ್ಧವೇ ಚರ್ಚೆ.

ಜರಾಸಂಧನ ಸೈನಿಕರು ಬಹಳ ಆಯುಧಗಳನ್ನು ಹಿಡಿದಿದ್ದರು. ಈ ಆಯುಧಗಳು ಶತ್ರುಗಳಿಗೆ ಭಯಜನಕವಾಗಿತ್ತು. ಕೃಷ್ಣನ ಸೈನ್ಯವನ್ನು ಬಡಿಯುವ ಇವರಿಗೆ ಈ ಆಯುಧಗಳೇ ಆಧಾರ. ಜರಾಸಂಧನು ನಾನಾರೀತಿಯ ಪ್ರಲೋಭನೆಯಿಂದ ಇವರನ್ನು ತನ್ನವರನ್ನಾಗಿ ಮಾಡಿಕೊಂಡಿದ್ದಾನೆ. ತನ್ನ ದುರಾಲೋಚನೆಯಿಂದ ಕೃಷ್ಣನ ಮೇಲೆ ಕ್ರೋಧ ಬರುವಂತೆಯೂ ಮಾಡಿದ್ದಾನೆ. ಈ ಸೈನಿಕರು ಸಹಜವಾಗಿ ಅಯೋಗ್ಯರು. ಆದ್ದರಿಂದ ಜರಾಸಂಧನ ಪ್ರಯತ್ನವು ಫಲಿಸಿತು. ಇಂತಹ ಸೈನ್ಯವನ್ನು ಕಟ್ಟಿಕೊಂಡು ಜರಾಸಂಧನು ಕೃಷ್ಣನ ಮೇಲೆ ದಂಡೆತ್ತಿಬಂದನು. ಕೃಷ್ಣನ ಉದ್ಯಾನವನ್ನು ಪುಡಿಗೈದನು. ಹಾಗೆಯೇ ಮಥುರೆಯ ಹೆಬ್ಬಾಗಿಲನ್ನು ಧ್ವಂಸಗೊಳಿಸಲು ಆರಂಭಿಸಿದನು.

**ಆಧ್ಯಾತ್ಮಿಕ ಅರ್ಥ–** ಮಾಯಾವಾದಿಗಳು ಶಕ್ತಿಯನ್ನು ಚೆನ್ನಾಗಿ ಆರಾಧಿಸುತ್ತಾರೆ. ಅವಳನ್ನು ಪ್ರಸನ್ನೀಕರಿಸಿ, ಅವಳಿಂದ ಭಯಂಕರವಾದ ವರವನ್ನು ಪಡೆಯುತ್ತಾರೆ. ಈ ವರಗಳೇ ಈ ಮಾಯಾವಾದಿಗಳಿಗೆ ಬುನಾದಿ. ಲೋಕದಲ್ಲಿ ೨೨ ಮತಗಳಿವೆ. ಅವುಗಳಲ್ಲಿ ೨೧ ಮತಪ್ರವರ್ತಕರೂ ತಮ್ಮ ಮಾತುಗಳಿಂದಲೇ ಜನರನ್ನು ಮೋಡಿಮಾಡಿದರು. ತಮ್ಮತ್ತ ಸೆಳೆದುಕೊಂಡರು. ಯೋಗ್ಯತೆ ಹಾಳಾಗಿರುವ ಮಂದಿಗೆ ಇವರ ಮಾತು ಹಿಡಿಸಿತು. ಇವರ ಅನುಯಾಯಿಗಳಾದರು. ತಮ್ಮ ತಮ್ಮ ಗುಂಪುಗಳನ್ನು ಕಟ್ಟಿಕೊಂಡರು. ವೈದಿಕಸಿದ್ಧಾಂತವಾದ ಮಧ್ವಮತದ ಮೇಲೆ ಆಕ್ರಮಣಮಾಡಲು ರೂಪರೇಖೆಗಳನ್ನು ರಚಿಸಿದರು. ಕೆಟ್ಟ ಮಂತ್ರಾದಿಗಳನ್ನು ಜಪಿಸಿದರು. ಅದರಲ್ಲಿ ಸಿದ್ಧಿಯನ್ನು ಪಡೆದರು. ಜರಾಸಂಧನ ಸೈನಿಕರು ಉಪವನವಾದ ಉದ್ಯಾನವನ್ನು ಪುಡಿಮಾಡಿದಂತೆ ಈ ಮಾಯಾವಾದಿಗಳು ವೇದಕ್ಕೆ ಸಂಬಂಧಿಸಿದ ಆದ್ದರಿಂದಲೇ ಉಪವೇದದಂತಿರುವ ಆಯುರ್ವೇದಾದಿ ಶಾಸ್ತ್ರಗಳನ್ನು ಖಂಡಿಸಲು ಆರಂಭಿಸಿದರು. ಹಾಗೆಯೇ ಕರ್ಮಗಳಾದ ಯಜ್ಞಯಾಗಾದಿಗಳು ಸುಳ್ಳು; ಅದರಿಂದ ಬರುವ ಪುಣ್ಯಗಳು ಸುಳ್ಳು ಎಂದು ಪ್ರಚಾರ ಮಾಡಿದರು. ಈ ಪುಣ್ಯಗಳು ಉಪನಿಷತ್ತುಗಳಿಗೆ ದ್ವಾರದಂತೆ. ನಾವು ಕರ್ಮಗಳನ್ನು ಆಚರಿಸಬೇಕು. ಅದರಿಂದ ಪುಣ್ಯ ಬರುತ್ತೆ. ಆಗ ಉಪನಿಷತ್ತಿನಲ್ಲಿ ಪ್ರವೇಶ ಆಗುತ್ತದೆ. ಅದರ ಅಧ್ಯಯನ ಸುಲಭ ಆಗುತ್ತದೆ. ಈ ವಿಷಯವನ್ನು "ಕರ್ಮಣಾ ಜ್ಞಾನಂ ಆತನೋತಿ" ಕರ್ಮಾಚರಣೆಯಿಂದ ಜ್ಞಾನವನ್ನು ಪಡೆಯಲು ಸಾಧ್ಯ ಎಂದು ಶ್ರುತಿಯು ಹೇಳುತ್ತದೆ.

**ಬಾಧ್ಯಾಂ ತಾಂ ಸಹ ನಿಶ್ಚಲಾರ್ಥನಿಕರೈಃ ಕ್ರುದ್ಧಾಃ ಖಲಾ ನಿರ್ಗುಣಾ–**
**ಗಾರಾಮಂತರಹೋ ವಿಧಾತುಮಮತಾ ಯತ್ನಂ ವಿತೇನುಃ ಕಿಲ ।**

**ಕೃಷ್ಣೇನಾಪಿ ಸಮುಜ್ಝಿತಾಂ ಸಮಯಿನೋ ಯುಕ್ತ್ಯಾತ್ಮಪಕ್ಷೇಽಂಜಸಾ**
**ಕೃತ್ವೈಕ್ಯಂ ಸಮಯೋಜಯನ್ ಗತಭಯಾ ದುರ್ಭಾಷ್ಯಪುಂಜೈರಪಿ ॥ ೪೩ ॥**

ಸಮಯಿನಃ=ನಿಯಮವನ್ನು ಮಾಡಿರುವ; ಕ್ರುದ್ಧಾಃ=ಸಿಟ್ಟಿಗೆದ್ದಿರುವ; ಖಲಾಃ=ದುಷ್ಟರಾದ; ಅಮತಾಃ=ವೈರಿಗಳು; ಯುಕ್ತ್ಯಾ=ಉಪಾಯದಿಂದ; ಆತ್ಮ=ತಮ್ಮ; ಪಕ್ಷೇ=ಪಕ್ಷದಲ್ಲಿ; ಐಕ್ಯಂ=ಐಕಮತ್ಯವನ್ನು; ಅಂಜಸಾ=ಚೆನ್ನಾಗಿ; ಕೃತ್ವಾ=ಮಾಡಿ; ತಾಂ=ಆ ಮಧುರೆಯನ್ನು; ನಿಶ್ಚಲ=ದೃಢವಾದ; ಅರ್ಥ=ವಸ್ತುಗಳ; ನಿಕರೈಃ=ಸಮೂಹಗಳಿಂದ; ಬಾಧ್ಯಾಂ=ಧ್ವಸ್ತವನ್ನಾಗಿ; ವಿತೇನುಃ ಕಿಲ=ಮಾಡಿದರು; ಅಂತಃ=ಒಳಗೆ; ನಿರ್ಗುಣ=ಶೋಭಾರಹಿತವಾದ; ಆಗಾರಾಂ=ಮನೆ ಉಳ್ಳದ್ದನ್ನಾಗಿ; ವಿಧಾತುಂ=ಮಾಡಲು; ಯತ್ನಂ=ಪ್ರಯತ್ನವನ್ನು; ವಿತೇನುಃ=ಮಾಡಿದರು; ಕೃಷ್ಣೇನ ಅಪಿ=ಕೃಷ್ಣನಿಂದಲೂ; ಸಮುಜ್ಝಿತಾಂ=ರಹಿತವನ್ನಾಗಿ; ಗತಃ=ಹೋದ; ಭಯಾಃ=ಭಯವುಳ್ಳವರಾಗಿ; ದುರ್ಭಾಷ್ಯ=ಕೆಟ್ಟ ಪದಗಳ; ಪುಂಜೈ ಅಪಿ=ಸಮೂಹಗಳಿಂದಲೂ; ಸಮಯೋಜಯನ್=ಸೇರಿಸಿದರು.

ಸೈನಿಕರು ಒಂದು ಕಡೆ ಸೇರಿ ಇದೇ ರೀತಿ ಆಕ್ರಮಣ ಮಾಡಬೇಕು ಎಂದು ತೀರ್ಮಾನಿಸಿಕೊಂಡರು. ಜರಾಸಂಧನಲ್ಲಿ ನಿಷ್ಠೆ ಇದ್ದದ್ದರಿಂದ ಕೃಷ್ಣನಲ್ಲಿ ಬಹಳ ಸಿಟ್ಟಾಗಿದ್ದಾರೆ. ಇದರಿಂದಲೇ ಕೆಟ್ಟವರೆಂದು ತಿಳಿಯುತ್ತದೆ. ಆದರೆ ಈ ಸೈನ್ಯದಲ್ಲಿ ಕೆಲವರು ಒಳ್ಳೆಯವರೂ ಇದ್ದಾರೆ. ಜರಾಸಂಧನು ಅವರನ್ನು ಬಲಾತ್ಕಾರವಾಗಿ ಎಳೆದುತಂದವನು. ಆದ್ದರಿಂದ ಇವರು ಸೈನಿಕರ ಮಾತನ್ನು ಕೇಳುತ್ತಿರಲಿಲ್ಲ. ಆಗ ಬಲಾತ್ಕಾರದಿಂದ ತಮ್ಮ ಅಭಿಪ್ರಾಯಕ್ಕೆ ಮಣಿಯುವಂತೆ ಮಾಡುತ್ತಿದ್ದರು. ಇವರೆಲ್ಲಾ ಸೇರಿ ಮಧುರೆಯ ಗೋಡೆಗಳನ್ನು ಪುಡಿಗೈದರು. ಆ ಗೋಡೆಗಳಲ್ಲಿ ಧ್ವಜಗಳೋ, ಪತಾಕೆಗಳೋ, ಕಲಶಗಳೋ ಇದ್ದವು. ಇವುಗಳೆಲ್ಲ ನಷ್ಟವಾದವು.

ಕೋಟೆಗಳ ಒಳಬದಿಯಲ್ಲಿ ನಾನಾ ರೀತಿಯ ಮನೆಗಳಿದ್ದವು. ಮನೆಗಳ ಗೋಡೆಗಳು ನವರತ್ನಾದಿಗಳಿಂದ ಖಚಿತವಾಗಿದ್ದವು. ಇಂತಹ ಮನೆಗಳನ್ನು ಉರುಳಿಸಲು ಪ್ರಯತ್ನಿಸುತ್ತಿದ್ದರು. ಕೃಷ್ಣನನ್ನು ಕೊಲ್ಲಲು ಪ್ರಯತ್ನಿಸಿದರು. ಈ ಯುದ್ಧದ ಸಂದರ್ಭದಲ್ಲಿ ನಾನಾ ರೀತಿಯ ಕೆಟ್ಟ ಕೆಟ್ಟ ಶಬ್ದಗಳನ್ನು ಬಳಸುತ್ತಿದ್ದರು.

ಆಧ್ಯಾತ್ಮಿಕ ಅರ್ಥ– ಕೆಟ್ಟ ಶಾಸ್ತ್ರಗಳನ್ನು ಓದಿರುವ ಮಂದಿಗಳೆಲ್ಲಾ ಒಂದು ಕಡೆ ಸೇರಿದರು. ಇವರೆಲ್ಲಾ ಐಕ್ಯವಾದಿಗಳು. ಆದ್ದರಿಂದ ಪಂಚಭೇದವಾದಿಗಳಾದ ತತ್ತ್ವವಾದಿಗಳಲ್ಲಿ ವಿಪರೀತ ಕ್ರೋಧವುಳ್ಳವರು. ಚೇತನಗಳಿಗೆ ನಿಜವಾಗಿ ಪರಸ್ಪರ ಐಕ್ಯ ಇಲ್ಲ. ಆದರೂ ತಾವು ರಚಿಸಿದ ಕೆಟ್ಟ ಯುಕ್ತಿಗಳಿಂದ ಐಕ್ಯವನ್ನು ಹೇಳುತ್ತಾರೆ. ಅವರ ಯುಕ್ತಿಯು ಈ ರೀತಿ ಇದೆ– "ಪರಮಾತ್ಮನಿಗೆ ಆತನಿಂದ ಐಕ್ಯ ಇದೆ. ಅದೇ ರೀತಿ ಎಲ್ಲಾ ಆತ್ಮರಿಗೂ ಪರಮಾತ್ಮನಿಂದ ಐಕ್ಯ ಇರಬೇಕು" ಎಂದು. ಆದ್ದರಿಂದ ಭೇದವು ಸುಳ್ಳು. ಸುಖದುಃಖಾದಿಗಳೆಂಬ ವಿರುದ್ಧಧರ್ಮಗಳೂ ಸುಳ್ಳು. ಜಗತ್ತೂ ಸುಳ್ಳು. ಇದು ಅವರ

ವಾದದ ಶೈಲಿ. ಉಪನಿಷತ್ತುಗಳು, "ಜಗತ್ತು ಸತ್ಯ. ಜೀವ-ಈಶರ ವಿರುದ್ಧಧರ್ಮಗಳೂ ಸತ್ಯ. ಭೇದವೂ ಸತ್ಯ" ಎಂದು ಹೇಳುತ್ತಿದೆ.-ಈ ಮಾಯಾವಾದಿಗಳು ವೇದವಿರುದ್ಧವಾದ ತಮ್ಮ ಮಾತಿನ ಶೈಲಿಯಿಂದ ವೇದವನ್ನು ಬಾಧಿಸಿದರು. ಜರಾಸಂಧನ ಸೈನಿಕರು ಕೋಟೆಗಳನ್ನು ಹೊಡೆದು ಉರುಳಿಸಿದಂತೆ. ವೇದಗಳು ದೇವರನ್ನು ಹೇಳುತ್ತವೆ. ಆದರೆ ಆತನಲ್ಲಿ ಯಾವ ಗುಣಧರ್ಮಗಳೂ ಇಲ್ಲ. ಯಾವ ಶಬ್ದಗಳೂ ಆತನನ್ನು ಪ್ರತಿಪಾದಿಸುವುದಿಲ್ಲ. ಆತನು ನಿರ್ಗುಣ ಎಂದು ಸಮರ್ಥಿಸಲು ಪ್ರಯತ್ನಿಸಿದರು. ಕೋಟೆಗಳ ಒಳಗಿರುವ ಮನೆಗಳ ಸೌಂದರ್ಯಾದಿ ಧರ್ಮಗಳನ್ನು ನಾಶಮಾಡಲು ಪ್ರಯತ್ನಿಸಿದ ಜರಾಸಂಧನ ಸೈನಿಕರಂತೆ.

ಯಾವ ಶಬ್ದವೂ ದೇವರನ್ನು ಹೇಳುವುದಿಲ್ಲ. ದೇವರಲ್ಲಿ ಯಾವ ಗುಣಗಳೂ ಇಲ್ಲ. ಆತನು ನಿರ್ಗುಣ ಎಂದು ಮಾಯಾವಾದಿಗಳು ಹೇಳುತ್ತಾರೆ. ದೇವರನ್ನು ಯಾವ ಶಬ್ದವೂ ಹೇಳುವುದಿಲ್ಲ ಎಂದು ಹೇಳಿ ನಿರ್ಗುಣ ಎಂಬ ಶಬ್ದದಿಂದ ಆತನನ್ನು ಕರೆಯುತ್ತಾರೆ. ಈ ರೀತಿಯಾಗಿ ಪರಸ್ಪರ ವಿರುದ್ಧವಾದ ಮಾತುಗಳನ್ನು ಲೆಕ್ಕಿಸದೆ ಅಸಂಬದ್ಧವಾಗಿ ಮಾತನಾಡುತ್ತಾರೆ ಎಂದು ತಿಳಿಸಲು ರಾಜರು ತನ್ನ ಶ್ಲೋಕದಲ್ಲಿ 'ಅಹೋ' ಎಂಬ ಆಶ್ಚರ್ಯಾರ್ಥಕ ಶಬ್ದವನ್ನು ಬಳಸಿದ್ದಾರೆ.

ಸೈನಿಕರು ಮಧುರೆಯಲ್ಲಿ ಕೃಷ್ಣನ ನಾಶವನ್ನು ಆಶಿಸಿದಂತೆ ವೇದಗಳು ದೇವರನ್ನು ಹೇಳುವುದೇ ಇಲ್ಲ. ಎಲ್ಲವೂ ಶೂನ್ಯ ಎಂದು ಬೌದ್ಧರಂತೆ ಮಾಯಾವಾದಿಗಳು ಪ್ರಚಾರ ಮಾಡಲು ಆರಂಭಿಸಿದರು. ಸೈನಿಕರು ಕೃಷ್ಣನ ವಿಷಯದಲ್ಲಿ ಕೆಟ್ಟ ಕೆಟ್ಟ ಶಬ್ದಗಳನ್ನು ಬಳಸಿದಂತೆ ಈ ಮಾಯಾವಾದಿಗಳು ಬ್ರಹ್ಮಸೂತ್ರಗಳಿಗೆ, ವೇದಗಳಿಗೆ ಕೆಟ್ಟ ಭಾಷ್ಯಗಳನ್ನು ಬರೆದರು.

**ಕೃಷ್ಣೋಽಪಿ ಸ್ವಚಮೂಂ ಸುವರ್ಣಖಚಿತಾಂ ಕೃತ್ವಾ ಚತುರ್ಧಾ ಪ್ರಭುಃ ।**
**ತತ್ರಾಗ್ರ್ಯಾನ್ ಚತುರೋ ವಿಧಾಯ ನಗರೀರಕ್ಷಾರ್ಥಮೀಶೋಽದಿಶತ್ ।**
**ಭಾಸ್ವತ್ಸೂತ್ರಚಮೂಮಿವೋಪನಿಷದಾಂ ರಕ್ಷಾರ್ಥಮತ್ಯೂರ್ಜಿತಾಂ**
**ಅಧ್ಯಾಯೈಃ ಸಹಿತಾಂ ಚತುರ್ಭಿರಮಲೈಸ್ತನ್ನಾಮಪಾದೋಜ್ವಲೈಃ ॥ ೪೪ ॥**

ಪ್ರಭುಃ=ಸಮರ್ಥನಾದ; ಕೃಷ್ಣಃ ಅಪಿ=ಕೃಷ್ಣನಾದರೂ; ಸುವರ್ಣ=ಆಭರಣಗಳಿಂದ; ಖಚಿತಾಂ=ಕೂಡಿದ; ಸ್ವ=ತನ್ನ; ಚಮೂಂ=ಸೈನ್ಯವನ್ನು; ಚತುರ್ಧಾ=೪ ಭಾಗವಾಗಿ; ಕೃತ್ವಾ=ಮಾಡಿ; ತತ್ರ=ಅಲ್ಲಿ; ಚತುರಃ=೪; ಅಗ್ರ್ಯಾನ್=ನಾಯಕರನ್ನು; ವಿಧಾಯ=ಮಾಡಿ; ನಗರೀ=ಮಧುರೆಯ; ರಕ್ಷಾರ್ಥಂ=ರಕ್ಷಣೆಗೋಸ್ಕರ; ಈಶಃ=ದೇವನು; ಅದಿಶತ್=ಆಜ್ಞೆ ಮಾಡಿದನು; ಉಪನಿಷದಾಂ=ಉಪನಿಷತ್ತುಗಳ; ರಕ್ಷಾರ್ಥಂ=ರಕ್ಷಣೆಗೋಸ್ಕರ; ಅತಿ=ಬಹಳ; ಊರ್ಜಿತಾಂ=ಉತ್ತಮವಾದ; ಅಮಲೈಃ=ನಿರ್ಮಲವಾದ; ಚತುರ್ಭಿಃ=ನಾಲ್ಕು; ಅಧ್ಯಾಯೈಃ=

ಅಧ್ಯಾಯಗಳಿಂದ; ತತ್=ಅಷ್ಟೇ; ಮಾನ=ಪ್ರಮಾಣವುಳ್ಳ; ಪಾದ=ಪಾದಗಳಿಂದ; ಉಜ್ವಲೈಃ= ಶೋಭಿಸುವ; ಸಹಿತಾಂ=ಕೂಡಿದ; ಭಾಸ್ವತ್=ಹೊಳೆಯುವ; ಸೂತ್ರ=ಬ್ರಹ್ಮಸೂತ್ರಗಳ; ಚಮೂಂ ಇವ=ಸೈನ್ಯದಂತೆ.

ಜರಾಸಂಧನು ಮಧುರೆಯನ್ನು ಮುತ್ತಿದನು. ಕೃಷ್ಣನು ತನ್ನ ಮಧುರೆಯನ್ನು ರಕ್ಷಿಸಲು ತನ್ನ ಸೈನ್ಯವನ್ನು ನಾಲ್ಕು ವಿಭಾಗ ಮಾಡಿದನು. ಒಂದೊಂದು ಭಾಗದಲ್ಲಿಯೂ ನಾಲ್ಕು ನಾಲ್ಕು ಮಂದಿ ಪ್ರಧಾನರನ್ನು ನೇಮಿಸಿದನು. ಈ ಮಂದಿಗಳು ಬೇರೆ ಬೇರೆ ವಿಷಯಗಳಲ್ಲಿ ಪಳಗಿದವರಾಗಿದ್ದರು. ಹಾಗೆಯೇ ಸ್ವರ್ಣಗಳಿಂದ ಅಲಂಕೃತರಾಗಿದ್ದರು. ಈ ರೀತಿ ವಿಭಜಿಸಿ ಮಧುರೆಯನ್ನು ರಕ್ಷಿಸಲು ಆಜ್ಞಾಪಿಸಿದನು.

ಕೃಷ್ಣನ ಈ ಕೆಲಸವು ವೇದವ್ಯಾಸರನ್ನು ನೆನಪಿಸುತ್ತಿತ್ತು.

ವೈದಿಕಸಾಹಿತ್ಯವನ್ನು ಮಾಯಾವಾದಿಗಳು ಆಕ್ರಮಿಸಿದರು. ಇದರ ರಕ್ಷಣೆಗಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು. ಬ್ರಹ್ಮಸೂತ್ರಗಳನ್ನು ನಾಲ್ಕು ಅಧ್ಯಾಯ ಗಳನ್ನಾಗಿ ವಿಭಾಗಿಸಿದರು– ಕೃಷ್ಣನು ತನ್ನ ಸೈನ್ಯವನ್ನು ವಿಭಾಗಿಸಿದಂತೆ. ಪ್ರತಿಯೊಂದು ಭಾಗದಲ್ಲಿಯೂ ಕೃಷ್ಣನು ನಾಲ್ಕು ನಾಲ್ಕು ಮುಂದಾಳುಗಳನ್ನು ಇಟ್ಟಂತೆ ವ್ಯಾಸರು ಪ್ರತಿಯೊಂದು ಅಧ್ಯಾಯವನ್ನೂ ನಾಲ್ಕು ನಾಲ್ಕು ಪಾದಗಳನ್ನಾಗಿ ಪುನಃ ವಿಂಗಡಿಸಿದರು. ಕೃಷ್ಣನ ಸೈನ್ಯವು ಸುವರ್ಣಗಳಿಂದ ಅಲಂಕೃತವಾಗಿತ್ತು. ಸುವರ್ಣ ಅಂದರೆ ಆಭರಣ. ವ್ಯಾಸರ ಬ್ರಹ್ಮಸೂತ್ರಗಳು ಸುವರ್ಣಗಳಿಂದ ಅಂದರೆ ಸು–ವರ್ಣಗಳು=ಒಳ್ಳೆಯ ಅಕ್ಷರಗಳಿಂದ ಅಲಂಕೃತವಾಗಿವೆ. ಇಂತಹ ಸೂತ್ರಗಳ ಅಭಿಮಾನಿದೇವತೆಗೆ ವ್ಯಾಸರು ವೇದಗಳ ರಕ್ಷಣೆಗೆ ಆಜ್ಞಾಪಿಸಿದರು.

**ಪಕ್ಷೀಂದ್ರಾಯತನಃ ಪರಸ್ಯ ವಸತಿಃ ವೃಷ್ಣಿಪ್ರಮೋದೋಽಭ್ಯಗಾ–**
**ದ್ವಿಖ್ಯಾತಾಶ್ವ ಚತುಷ್ಟಯಃ ಕಿಲ ರಥೋ ವಿಭ್ರಾಜಮಾನಧ್ವಜಃ ।**
**ಮಧ್ವಸ್ಯೇವ ಮನೋರಥೋ ನಿಗಮಸಂಬದ್ಧಃ ಖಗೇಂದ್ರಾವೃತಃ**
**ವಿಷ್ಣೋರ್ಧಾಮ ತದಂಘ್ರಿಕೇತುನಿಲಯಃ ಸೂತ್ರೌಘಪುಷ್ಟಿಪ್ರದಃ ॥ ೪೫ ॥**

ಪಕ್ಷಿ=ಹಕ್ಕಿಗಳಿಗೆ; ಇಂದ್ರ=ಒಡೆಯನಾದ ಗರುಡನಿಗೆ; ಆಯತನಃ=ಆಶ್ರಯವಾದ; ಪರಸ್ಯ=ಕೃಷ್ಣನಿಗೆ; ವಸತಿಃ=ಆಶ್ರಯವಾದ; ವೃಷ್ಣಿ=ಯಾದವರಿಗೆ; ಪ್ರಮೋದಃ=ನೆಮ್ಮದಿ ಯನ್ನು ಕೊಡುವ; ವಿಖ್ಯಾತ=ಪ್ರಸಿದ್ಧವಾದ; ಅಶ್ವ=ಕುದುರೆಗಳ; ಚತುಷ್ಟಯಃ=ನಾಲ್ಕರಿಂದ ಕೂಡಿದ; ವಿಭ್ರಾಜಮಾನ=ಶೋಭಿಸುವ; ಧ್ವಜಃ=ಧ್ವಜವುಳ್ಳ; ರಥಃ=ಕೃಷ್ಣನ ರಥವು; ನಿಗಮ=ವೇದಗಳಿಂದ; ಸಂಬದ್ಧಃ=ಕೂಡಿದ; ಖಗ=ಹಕ್ಕಿಗಳಿಗೆ; ಇಂದ್ರ=ಒಡೆಯನಾದ ಗರುಡನಿಂದ; ಆವೃತಃ=ಕೂಡಿದ; ವಿಷ್ಣೋಃ=ದೇವರಿಗೆ; ಧಾಮ=ಆಶ್ರಯವಾದ; ತತ್= ಕೃಷ್ಣನ; ಅಂಘ್ರಿ=ಪಾದದಲ್ಲಿರುವ; ಕೇತು=ಧ್ವಜವನ್ನು; ನಿಲಯಃ=ಆಶ್ರಯಿಸಿರುವ; ಸೂತ್ರ=

ಬ್ರಹ್ಮಸೂತ್ರಗಳ; ಓಘ=ಸಮೂಹಕ್ಕೆ; ಪುಷ್ಟಿ=ಪುಷ್ಟಿಯನ್ನು; ಪ್ರದಃ=ಕೊಡುವ; ಮಧ್ವಸ್ಯ= ಮಧ್ವರ; ಮನೋರಥ ಇವ=ಮನವೆಂಬ ರಥದಂತೆ; ಅಭ್ಯಗಾತ್=ಬಂದಿತು.

ಕೃಷ್ಣನು ಜರಾಸಂಧನ ಜೊತೆ ಕಾದಾಡಲು ತಯಾರಾದನು. ತನ್ನ ಮೂಲರೂಪದ ರಥವನ್ನು ಎಣಿಸಿದನು. ಕೃಷ್ಣನ ರಥವು ಯಾವ ರೀತಿ ಇದೆ ಅಂದರೆ ಧ್ವಜದಲ್ಲಿ ಗರುಡಚಿಹ್ನೆ ಇದೆ. ರಥದಲ್ಲಿ ಕೃಷ್ಣನು ಇರುವನು. ಈ ರಥವನ್ನು ಕಂಡಾಗ ಯಾದವರು ಸಹಜವಾಗಿ ಆನಂದಿಗಳಾಗಿದ್ದಾರೆ. ಉತ್ತಮ ಜಾತಿಯ ನಾಲ್ಕು ಕುದುರೆಗಳಿಂದ ಕೂಡಿದೆ; ಬಲಿಷ್ಠವಾದ ಧ್ವಜದಿಂದ ಕೂಡಿದೆ. ಇಂತಹ ರಥವು ಧರೆಗೆ ಇಳಿಯಿತು.

ಈ ರಥವನ್ನು ಕಂಡಾಗ ಮಧ್ವರ ಮನೋರಥದ ನೆನಪಾಗುತ್ತದೆ. ಮಧ್ವರ ಮನೋರಥಕ್ಕೂ ಕೃಷ್ಣನ ರಥಕ್ಕೂ ಬಹಳ ಹೋಲಿಕೆ ಇದೆ. ಕೃಷ್ಣನ ರಥವು ನಾಲ್ಕು ಕುದುರೆಗಳಿಂದ ಕೂಡಿದಂತೆ ಮಧ್ವರ ಮನೋರಥವು ನಾಲ್ಕು ವೇದಗಳಿಂದ ಕೂಡಿದೆ. ಕುದುರೆಗಳು ನಮ್ಮನ್ನು ಗುರಿ ತಲುಪಿಸುವಂತೆ ವೇದಗಳು ನಮ್ಮ ಜೀವನದ ಗುರಿಯಾದ ದೇವರನ್ನು ತಲುಪಿಸುತ್ತವೆ. ಈ ರೀತಿ ಕುದುರೆಗಳಿಗೂ ವೇದಗಳಿಗೂ ಸಾಮ್ಯ ಇದೆ. ಮಧ್ವರು ತನ್ನ ಮನಸ್ಸಿನಿಂದ ಸದಾ ನಾಲ್ಕು ವೇದಗಳನ್ನು ಅಧ್ಯಯನ ಮಾಡುತ್ತಾರೆ. ಕೃಷ್ಣನ ರಥದ ಕುದುರೆಗಳೂ ಸದಾ ರಥದ ಜೊತೆಗೇ ಇರುತ್ತವೆ. ಕೃಷ್ಣನ ರಥದಲ್ಲಿ ಗರುಡನು ಇರುವಂತೆ ಈ ಮನೋರಥದಲ್ಲಿಯೂ ಗರುಡನು ಇದ್ದಾನೆ. ಹೇಗೆಂದರೆ ಪಂಚರಾತ್ರಾದಿ ಗ್ರಂಥಗಳನ್ನು ಅಭ್ಯಸಿಸುವಾಗ ನಮ್ಮ ಮನಸ್ಸಿಗೆ ಗರುಡನು ಅಭಿಮಾನಿಯಾಗಿ ಇರುತ್ತಾನೆ ಎಂದು ಪುರಾಣಾದಿಗಳು ಹೇಳುತ್ತವೆ. ಅದರಂತೆ ಮಧ್ವರು ತಾನು ಪಂಚರಾತ್ರ ಗ್ರಂಥವನ್ನು ವಿಮರ್ಶಿಸುವಾಗ ಗರುಡನು ಅವರ ಮನಸ್ಸಿನಲ್ಲಿಯೂ ಸೇವಕರೂಪದಿಂದ ನೆಲೆಸುವನು. ಕೃಷ್ಣನ ರಥದಲ್ಲಿ ಕೃಷ್ಣನು ಇರುವಂತೆ ಮಧ್ವರು ತನ್ನ ಮನೋರಥದಲ್ಲಿ ಕೃಷ್ಣನನ್ನು ಇರಿಸಿದ್ದಾರೆ. ಅಂದರೆ ಸದಾ ಕೃಷ್ಣಧ್ಯಾನಾಸಕ್ತರು. ಕೃಷ್ಣನ ರಥದಲ್ಲಿ ಭದ್ರವಾದ ಧ್ವಜ ಇದೆ. ಮನೋರಥದಲ್ಲಿಯೂ ಧ್ವಜವು ಇದೆ– ಉತ್ತಮರ ಪಾದದಲ್ಲಿ ಧ್ವಜ, ಅಂಕುಶ, ಕಮಲದ ರೇಖೆಗಳು ಇರುತ್ತವೆ. ಕೃಷ್ಣನ ಪಾದದಲ್ಲಿ ಈ ಎಲ್ಲ ರೇಖೆಗಳೂ ಇವೆ. ಇಂತಹ ಪಾದವನ್ನು ಮಧ್ವರು ತನ್ನ ಮನಸ್ಸಿನಿಂದ ಸದಾ ಧ್ಯಾನಿಸುವರು. ಆಗ ಧ್ವಜದ ರೇಖೆಯ ಧ್ಯಾನವೂ ಆಗುತ್ತದೆ. ಫಲಿತಾಂಶ ಧ್ವಜದ ಸಂಬಂಧ ಮನಸ್ಸಿಗೆ ಆಯಿತು. ಮಧ್ವರು ಬ್ರಹ್ಮಸೂತ್ರಗಳಿಗೆ ಸರಿಯಾದ ಅರ್ಥವನ್ನು ಬರೆಯುತ್ತಾರೆ. ಆಗ ಸೂತ್ರಾಭಿಮಾನಿದೇವತೆಗಳಿಗೆ ಬಹಳ ಆನಂದವಾಗುತ್ತದೆ. ಇತರ ಆಚಾರ್ಯರು ಅಬದ್ಧ ಅರ್ಥ ಬರೆದಾಗ ಬೇಸರವಾಗಿತ್ತು. ಮಧ್ವರು ಅರ್ಥವನ್ನು ಬರೆಯಬೇಕಾದರೆ ಮೊದಲು ತನ್ನ ಮನಸ್ಸಿನಿಂದ ಒಳ್ಳೆಯ ರೀತಿಯಿಂದ ವಿಮರ್ಶಿಸುತ್ತಿದ್ದರು, ಕೃಷ್ಣನ ರಥವನ್ನು ಕಂಡಾಗ ಯಾದವರು ಸಂತೋಷಪಟ್ಟಂತೆ. "ಭಾಷ್ಯಕ್ಕೆ ಒಳ್ಳೆಯ ಅರ್ಥವನ್ನು ಬರೆಯಬೇಕು

ಎಂಬ ಮಧ್ವರ ಮನೋರಥದಿಂದಲೂ ಸಮಸ್ತದೇವತೆಗಳಿಗೂ ಆನಂದವಾಯಿತು. ಈ ರೀತಿ ಮಧ್ವರ ಮನೋರಥದಂತಿರುವ ಕೃಷ್ಣನ ರಥವು ಧರೆಗೆ ಇಳಿಯಿತು.

**ಕೌಮೋದಕೀ ವಾದನಿವಿಷ್ಟಮಧ್ವವಾಚಃ ಸಮಾ ಪ್ರಾದುರಭೂತ್ ಧರಣ್ಯಾಮ್ ।**
**ಕಂಬುರ್ಗುರೋರ್ಮಂಜುನಿನಾದಕಂಠಕಾಂತಿಃ ಸಮಸ್ತಾಗಮಗಾನಕರ್ತುಃ ॥ ೪೬ ॥**

ವಾದ=ಚರ್ಚೆಯಲ್ಲಿ; ನಿವಿಷ್ಟ=ಪ್ರವಿಷ್ಟರಾದ; ಮಧ್ವ=ಮಧ್ವರ; ವಾಚಃ=ಮಾತಿಗೆ; ಸಮಾ=ಸದೃಶವಾದ; ಕೌಮೋದಕೀ=ಗದೆಯು; ಧರಣ್ಯಾಂ=ಭೂಮಿಯಲ್ಲಿ; ಪ್ರಾದುರ-ಭೂತ್=ಕಾಣಿಸಿಕೊಂಡಿತು; ಸಮಸ್ತ=ಎಲ್ಲಾ; ಆಗಮ=ವೇದಗಳ; ಗಾನ=ಉಚ್ಚಾರಣೆಯನ್ನು; ಕರ್ತುಃ=ಮಾಡುವ; ಗುರೋಃ=ಗುರುಗಳಾದ ಮಧ್ವರ; ಮಂಜು=ಚಂದದ; ನಿನಾದ=ಧ್ವನಿವುಳ್ಳ; ಕಂಠ=ಕುತ್ತಿಗೆಯ; ಕಾಂತಿ;=ಕಾಂತಿವುಳ್ಳ; ಕಂಬುಃ=ಶಂಖವು; ಪ್ರಾದುರಭೂತ್=ಕಾಣಿಸಿಕೊಂಡಿತು.

ಯುದ್ಧದ ಸಮಯದಲ್ಲಿ ಕೃಷ್ಣನ ರಥದ ಜೊತೆಗೆ ಆತನ ಆಯುಧಗಳೂ ಧರೆಗೆ ಇಳಿದವು. ಮೊದಲು ಗದೆಯು ಬಂದಿತು. ಈ ಗದೆಯು ಮಧ್ವರ ಮಾತಿನಂತೆ ಇದೆ. ಮಧ್ವರು ಅನ್ಯಮತದವರ ಜೊತೆ ವೇದದ ವಿಷಯದಲ್ಲಿ ಚರ್ಚೆಯನ್ನು ಮಾಡುತ್ತಾರೆ. ಮಧ್ವರ ಒಂದೊಂದು ಮಾತೂ ಕೂಡಾ ಪರಕೀಯರಿಗೆ ಗದಾಪ್ರಹಾರದಂತೆ ಇರುತ್ತಿತ್ತು. ಎರಡನೆಯದಾಗಿ ಶಂಖವು ಧರೆಗೆ ಬಂತು. ಈ ಶಂಖದ ಆಕಾರ ಧ್ವನಿ ಎರಡೂ ಮಧ್ವರ ಕುತ್ತಿಗೆ ಹಾಗೂ ಧ್ವನಿಯನ್ನು ಹೋಲುತ್ತಿತ್ತು. ಕುತ್ತಿಗೆ ಹೇಗಿರಬೇಕು ಅಂದರೆ ಶಂಖದಂತೆ ಇರಬೇಕು ಎಂದು ಹೇಳುವುದು ವಾಡಿಕೆ. ಶಂಖದಲ್ಲಿ ಮೂರು ರೇಖೆಗಳಿವೆ. ಮಧ್ವರ ಕಂಠದಲ್ಲಿಯೂ ಮೂರು ಗೆರೆಗಳಿವೆ. ಮಧ್ವರು ಸದಾ ವೇದದ ಬಗ್ಗೆ ಉಪನ್ಯಾಸ ನೀಡುತ್ತಿದ್ದರು. ಆಗ ಮಧ್ವರ ಧ್ವನಿಯು ಶಂಖದ ಗಂಭೀರ ಧ್ವನಿಯಂತೆ ಕುತ್ತಿಗೆಯಿಂದ ಹೊರಹೊಮ್ಮುತ್ತಿತ್ತು. ಕೇಳಲು ಬಹಳ ಇಂಪಾಗಿಯೂ ಇತ್ತು. ಜೊತೆಗೆ ಗಾಂಭೀರ್ಯವೂ ಇತ್ತು.

**ವ್ಯಕ್ತಾಭೇದ್ಯಸಹಸ್ರವಕ್ತ್ರರುಚಿರಂ ನಿತ್ಯಂ ಮುರಾರೇಃ ಪ್ರಿಯಂ**
**ಮುಕ್ತಿದ್ವಾರಮಹೀಶಮುಖ್ಯವಿಬುಧೈರ್ಗೀತಂ ತಮಿಸ್ರಾಪಹಮ್ ।**
**ದೈತ್ಯಧ್ವಂಸಿಸುದರ್ಶನಂ ದಿನಕರೋದ್ರಿಕ್ತಂ ದಿಗಂತಾತತಂ**
**ಪೃಥ್ವ್ಯಾಂ ಮಧ್ವಸುದರ್ಶನಪ್ರತಿಕೃತಿಂ ಪ್ರಾದೃಶ್ಯತ ಪ್ರೋಜ್ವಲಮ್ ॥ ೪೭ ॥**

ವ್ಯಕ್ತ=ಸ್ಪಷ್ಟವಾದ; ಅಭೇದ್ಯ=ಮುರಿಯಲು ಸಾಧ್ಯವಿಲ್ಲದ; ಸಹಸ್ರ=ಸಾವಿರ; ವಕ್ತ್ರ=ಮುಖಗಳಿಂದ; ರುಚಿರಂ=ಶೋಭಿಸುವ; ನಿತ್ಯಂ=ಯಾವಾಗಲೂ; ಮುರಾರೇಃ=ದೇವರಿಗೆ; ಪ್ರಿಯಂ=ಇಷ್ಟವಾದ; ಮುಕ್ತಿ=ಮೋಕ್ಷಕ್ಕೆ; ದ್ವಾರಂ=ಕಾರಣವಾದ; ಅಹಿ=ಸರ್ಪಗಳಿಗೆ; ಈಶ=ಒಡೆಯನೇ; ಮುಖ್ಯ=ಮೊದಲಾದ; ವಿಬುಧೈಃ=ದೇವತೆಗಳಿಂದ; ಗೀತಂ=ಹೊಗಳ

ಲ್ಪಟ್ಟ; ತಮಿಸ್ರ=ಕತ್ತಲೆಯನ್ನು; ಅಪಹಂ=ನಾಶಮಾಡುವ; ದೈತ್ಯ=ರಾಕ್ಷಸರನ್ನು; ಧ್ವಂಸಿ= ನಾಶಮಾಡುವ; ದಿನಕರ=ಸೂರ್ಯನಂತೆ; ಉದ್ರಿಕ್ತಂ=ಉತ್ತಮವಾದ; ದಿಗಂತ=ದಿಕ್ಕುಗಳ ಮೂಲೆಗೆ; ಆತತಂ=ಹರಡಿದ; ಪ್ರೋಜ್ವಲಂ=ಉರಿಯುವ; ಮಧ್ವ= ಮಧ್ವರ; ಸುದರ್ಶನ= ಶಾಸ್ತ್ರಕ್ಕೆ; ಪ್ರತಿಕೃತಿ=ಸದೃಶವಾದ; ಸುದರ್ಶನಂ=ಸುದರ್ಶನ ಚಕ್ರವು; ಪೃಥ್ವ್ಯಾಂ= ಭೂಮಿಯಲ್ಲಿ; ಪ್ರಾದೃಶ್ಯತ=ಕಾಣಿಸಿತು.

ಕೃಷ್ಣನ ಸುದರ್ಶನಚಕ್ರವೂ ಭೂಮಿಗೆ ಬಂತು. ಈ ಚಕ್ರಕ್ಕೆ ಸಹಸ್ರಾರ ಎಂಬ ಹೆಸರೂ ಇದೆ. ಎತ್ತಿನಬಂಡಿಯ ಚಕ್ರದ ಆಕಾರದಲ್ಲಿ ಇರುತ್ತದೆ. ಹೊರ ಬದಿಯಲ್ಲಿ ಒಂದು ವರ್ತುಲ; ಮಧ್ಯದಲ್ಲಿ ಒಂದು ಬಿಂದು. ಈ ಬಿಂದುವಿಗೂ ಹೊರವರ್ತುಲಕ್ಕೂ ಸಂಬಂಧಿಸಿ ಅನೇಕ ಕೋಲುಗಳು ಇರುತ್ತವೆ. ಇವುಗಳನ್ನು ಅರಗಳೆಂದು ಕರೆಯುವರು. ಇಂತಹ ಅರಗಳು ಸಾವಿರ ಇವೆ ಕೃಷ್ಣನ ಚಕ್ರಕ್ಕೆ. ಇವುಗಳು ಬಹಳ ದೃಢವಾಗಿವೆ. ಇವುಗಳನ್ನು ಮುರಿಯಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದಲೇ ಚೆನ್ನಾಗಿ ಶೋಭಿಸುತ್ತಿದೆ. ದೇವರು ದುಷ್ಟರನ್ನು ಈ ಚಕ್ರದಿಂದಲೇ ನಾಶಮಾಡುವುದು. ಆದ್ದರಿಂದ ದೇವರಿಗೆ ಈ ಚಕ್ರ ಅಂದರೆ ಬಹಳ ಪ್ರಿಯ. ಕೃಷ್ಣನು ಒಂದು ಸಂದರ್ಭದಲ್ಲಿ ಅರ್ಜುನನನ್ನು ಕರೆದುಕೊಂಡು ಅನಂತಾಸನಕ್ಕೆ ಹೋಗಿದ್ದನು. ದಾರಿಯಲ್ಲಿ ದಟ್ಟವಾದ ಕತ್ತಲಿನ ಪ್ರದೇಶವು ಎದುರಾಯಿತು. ಕೃಷ್ಣನು ತನ್ನ ಚಕ್ರದಿಂದ ಆ ಕತ್ತಲನ್ನು ಕತ್ತರಿಸಿದನು. ಮುಂದೆ ಮುಕ್ತ ಸ್ಥಳವಾದ ಅನಂತಾಸನಕ್ಕೆ ಹೋಗುವ ದಾರಿಯನ್ನು ಈ ಚಕ್ರದಿಂದ ತೋರಿಸಿದನು. ಈ ಚಕ್ರಕ್ಕೆ ಮುಖ್ಯ ಅಭಿಮಾನಿನಿ ದುರ್ಗೆಯು. ಇವಳಿಗಿಂತ ಕೆಳಗಿನ ಶೇಷನೇ ಮೊದಲಾದ ಸಮಸ್ತದೇವತೆಗಳೂ ಈ ಚಕ್ರವನ್ನು ಸ್ತುತಿಸುತ್ತಾರೆ. ಸೂರ್ಯನಂತೆ ಬಹಳ ಪ್ರಖರವಾದ ಇದರ ಬೆಳಕು ಎಲ್ಲಾ ದಿಕ್ಕುಗಳಿಗೂ ಹರಡಿದೆ.

ಈ ಸುದರ್ಶನಚಕ್ರವು ಮಧ್ವರ ಶಾಸ್ತ್ರದಂತೆ ಇದೆ. ಚಕ್ರಕ್ಕೆ ಸುದರ್ಶನ ಎಂದು ಹೆಸರಿದೆ. ಶಾಸ್ತ್ರಕ್ಕೂ ಈ ಹೆಸರು ಇದೆ. ಶಾಸ್ತ್ರವು ಸುದರ್ಶನ. ಸು=ಚೆನ್ನಾಗಿ, ದರ್ಶನ= ತೋರಿಸುವುದು. ಮಧ್ವರ ಶಾಸ್ತ್ರದ ಒಂದೊಂದು ವಾಕ್ಯಕ್ಕೂ ಸಾವಿರಾರು ಅರ್ಥಗಳು ಇವೆ. ಎಲ್ಲವೂ ಸ್ಪಷ್ಟವಾದ ಅರ್ಥಗಳೇ. ಈ ಅರ್ಥಗಳು ತಪ್ಪು ಎಂದು ಹೇಳುವವರು ಮೊಲದ ಕೋಡಿನಂತೆ. ಚಕ್ರವು ಗಟ್ಟಿಯಾದ ಸಾವಿರ ಅರಗಳಿಂದ ಕೂಡಿದಂತೆ ಶಾಸ್ತ್ರವು ಸಾವಿರ ಅರ್ಥಗಳಿಂದ ಕೂಡಿದೆ. ದೇವರ ಪಾರಮ್ಯವನ್ನು ಸಾರುವುದರಿಂದ ಶಾಸ್ತ್ರವು ಚಕ್ರದಂತೆ ದೇವರಿಗೆ ಇಷ್ಟವಾಗಿದೆ. ಈ ಶಾಸ್ತ್ರವು ದೇವರಿಗೆ ಅನಂತಗುಣಗಳನ್ನೂ, ಸರ್ವೋತ್ತಮತ್ವವನ್ನೂ, ನಾನಾ ರೂಪಗಳಿಂದ ಕೂಡಿರುವಿಕೆಯನ್ನೂ ತಿಳಿಸುತ್ತದೆ. ಮೋಕ್ಷವಾಗಬೇಕಾದರೆ ದೇವರ ವಿಷಯಕವಾಗಿ ಇಂತಹ ಜ್ಞಾನವು ಅಗತ್ಯ. ಇದಕ್ಕೆ ವಿಪರೀತಜ್ಞಾನದಿಂದ ಮೋಕ್ಷ ಆಗುವುದಿಲ್ಲ ಎಂದು "ನಾನ್ಯಃ ಪಂಥಾಃ ಅಯನಾಯ ವಿದ್ಯತೇ" ಎಂಬ ಶ್ರುತಿಯು ಸಾರುತ್ತಿದೆ. ಇಂತಹ ಜ್ಞಾನವನ್ನು ಈ ಶಾಸ್ತ್ರವು ಕೊಡುತ್ತಿದೆ.

ಮೋಕ್ಷಾಪೇಕ್ಷಿಗಳು ಈ ಶಾಸ್ತ್ರವನ್ನೇ ಅಭ್ಯಸಿಸಬೇಕು. ಆದ್ದರಿಂದ ಚಕ್ರದಂತೆ ಮುಕ್ತಿಗೆ ಕಾರಣವು. "ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ । ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋಃ ಮಾರ್ಗಂ ಪ್ರದರ್ಶಯ" । ಎಂಬ ಮಂತ್ರವು ಚಕ್ರವನ್ನು ಪ್ರಾರ್ಥಿಸುತ್ತದೆ –ದೇವರ ದಾರಿಯನ್ನು ತೋರಿಸು ಎಂದು. ದೇವರ ದಾರಿ ಅಂದರೆ ಮೋಕ್ಷ. ಮಧ್ವರು ಒಮ್ಮೆ ಉಡುಪಿಯ ಅನಂತೇಶ್ವರ ದೇವಳದಲ್ಲಿ ಪ್ರವಚನ ಮಾಡುತ್ತಿದ್ದರು. ಆಗ ಆಕಾಶದಲ್ಲಿ ಶೇಷಾದಿಗಳು ಬಂದು ಆಲಿಸುತ್ತಿದ್ದರು. ಅನಂತರ ಶೇಷನು ಮಧ್ವಶಾಸ್ತ್ರದ ಮಹತ್ವವನ್ನು ತನ್ನ ಅನುಯಾಯಿಗಳಿಗೆ ವರ್ಣಿಸಿದನು. ಈ ರೀತಿ ಚಕ್ರದಂತೆ ದೇವತೆಗಳಿಂದ ಈ ಶಾಸ್ತ್ರವು ಹೊಗಳಲ್ಪಡುತ್ತದೆ. ಕೃಷ್ಣನ ಚಕ್ರವು ಹೊರಗಿನ ಕತ್ತಲನ್ನು ನಾಶಮಾಡುತ್ತದೆ. ಮಧ್ವರ ಸುದರ್ಶನವು ನಮ್ಮ ಒಳಗಿರುವ ಅಜ್ಞಾನವೆಂಬ ಕತ್ತಲನ್ನು ನಾಶಮಾಡುತ್ತದೆ. ಮಧ್ವರ ಮತವು ಜಗತ್ತಿನಲ್ಲಿ ಬರುವ ಮೊದಲು ೨೧ ಆಚಾರ್ಯರು ೨೧ ರೀತಿಯಲ್ಲಿ ದೇವರನ್ನು ಪ್ರತಿಪಾದಿಸಲು ಪ್ರಯತ್ನಿಸಿದರು. ಎಲ್ಲರೂ ಎಡವಿದರು. ೨೧ ಆಚಾರ್ಯರೂ ಸಾತ್ವಿಕರಲ್ಲ; ತಾಮಸ ಜೀವಿಗಳು. ಮಧ್ವರು ತನ್ನ ಸಿದ್ಧಾಂತದ ಮೂಲಕ ಆ ಎಲ್ಲಾ ಮತಗಳನ್ನೂ ಖಂಡಿಸಿದರು. ಚಕ್ರವು ದೈತ್ಯರನ್ನು ಖಂಡಿಸಿದಂತೆ ಈ ಸುದರ್ಶನವು ದೈತ್ಯರ ಮತವನ್ನು ಧ್ವಂಸ ಮಾಡುತ್ತದೆ. ಸೂರ್ಯನಿಂದಲೂ ತಿಳಿಸಲು ಸಾಧ್ಯವಿಲ್ಲದ ದೇವರೆಂಬ ವಸ್ತುವನ್ನು ಈ ಶಾಸ್ತ್ರವೆಂಬ ಸುದರ್ಶನವು ತಿಳಿಸುತ್ತದೆ. ಚಕ್ರದ ಬೆಳಕಿನಂತೆ ಈ ಶಾಸ್ತ್ರದ ಮಹತ್ವವು ಎಲ್ಲಾ ದಿಕ್ಕುಗಳಲ್ಲಿಯೂ ಹರಡಿದೆ. ಈ ರೀತಿ ಎಲ್ಲಾ ತರದಿಂದಲೂ ಶಾಸ್ತ್ರಕ್ಕೆ ಸಮಾನವಾದ ಚಕ್ರವು ಕೃಷ್ಣನ ಕೈಯಲ್ಲಿ ಕಾಣಿಸಿಕೊಂಡಿತು.

**ಕೃಷ್ಣಶ್ರೈಷ್ಠ್ಯಸಮರ್ಥನೇಽತಿಚತುರೈಸ್ತದ್ಭಿನ್ನಲೋಕೇ ಭಿದಾಂ**
**ನಿತ್ಯಂ ಸಾಧಯಿತುಂ ಕ್ಷಮೈರ್ಮತಿಮತಾಪ್ಯಚ್ಛೇದ್ಯಹೃದ್ಯಾತ್ಮಭಿಃ ।**
**ವಿಖ್ಯಾತೈಃ ಶರಸಂಚಯೈಃ ಸುರುಚಿರಂ ಪ್ರಾಪ್ತಂ ನಿಷಂಗದ್ವಯಂ**
**ಭಾಸ್ವನ್ಮಾನಸಹಸ್ರಭಾಷ್ಯಸದನುವ್ಯಾಖ್ಯಾನಕಲ್ಪಂ ತದಾ** ॥ ೪೮ ॥

ಕೃಷ್ಣ=ಕೃಷ್ಣನ; ಶ್ರೈಷ್ಠ್ಯ=ಉತ್ತಮತ್ವದ; ಸಮರ್ಥನೇ=ಸಾಧಿಸುವುದರಲ್ಲಿ; ಅತಿಚತುರೈಃ=ಬಹಳ ಚುರುಕಾದ; ತತ್=ಕೃಷ್ಣನಿಗಿಂತ; ಭಿನ್ನ=ಬೇರೆಯಾದ; ಲೋಕೇ= ಜನರಲ್ಲಿ; ಭಿದಾಂ=ಭೇದವನ್ನು; ಸಾಧಯಿತುಂ=ಸಾಧಿಸಲು; ನಿತ್ಯಂ=ಯಾವಾಗಲೂ; ಕ್ಷಮೈಃ=ಸಮರ್ಥಗಳಾದ; ಮತಿಮತಾ ಅಪಿ=ಬುದ್ಧಿವಂತರಿಂದಲೂ; ಅಚ್ಛೇದ್ಯ=ಖಂಡಿಸ ಲಸಾಧ್ಯವಾದ; ಶರ=ಬಾಣಗಳ; ಸಂಚಯೈಃ=ಸಮೂಹಗಳಿಂದ; ಸುಚಿರಂ=ಮನೋಹರ ವಾದ; ಭಾಸ್ವತ್=ಶೋಭಿಸುವ; ಮಾನ=ಪ್ರಮಾಣಗಳ; ಸಹಸ್ರ=ಸಾವಿರವುಳ್ಳ; ಭಾಷ್ಯ=ಭಾಷ್ಯವು; ಸತ್=ಒಳ್ಳೆಯ; ಅನುವ್ಯಾಖ್ಯಾನ=ಅನುವ್ಯಾಖ್ಯಾನವು ಇವುಗಳಿಗೆ; ಕಲ್ಪಂ=ಸಮಾನವಾದ; ನಿಷಂಗ=ಬತ್ತಳಿಕೆಗಳ; ದ್ವಯಂ=ಎರಡು; ತದಾ=ಆಗ; ಪ್ರಾಪ್ತಂ=ಬಂದಿತು.

ಹಾಗೆಯೇ ಬಾಣಗಳಿಂದ ತುಂಬಿದ ಎರಡು ಬತ್ತಳಿಕೆಗಳೂ ಬಂದವು. ಮಧ್ವರು ವ್ಯಾಸರ ಬ್ರಹ್ಮಸೂತ್ರಗಳಿಗೆ ಎರಡು ರೀತಿಯ ಅರ್ಥವನ್ನು ಬರೆದಿದ್ದಾರೆ. ಒಂದು ಅರ್ಥವನ್ನು ಹೇಳುವ ಗ್ರಂಥಕ್ಕೆ ಭಾಷ್ಯ ಎಂದು ಹೆಸರು. ಇನ್ನೊಂದು ಗ್ರಂಥಕ್ಕೆ ಅನುವ್ಯಾಖ್ಯಾನ ಎಂದು ಹೆಸರು. ಈ ಎರಡು ಗ್ರಂಥಗಳಂತಿವೆ ಆ ಎರಡು ಬತ್ತಳಿಕೆಗಳು. ಬತ್ತಳಿಕೆಗಳಲ್ಲಿ ತುಂಬಾ ಬಾಣಗಳಿವೆ. ಎರಡು ಗ್ರಂಥಗಳಲ್ಲಿ ತುಂಬಾ ಪ್ರಮಾಣಗಳಿವೆ. ಬಾಣಗಳಿಗೂ ಪ್ರಮಾಣಗಳಿಗೂ ಹೋಲಿಕೆ ಇದೆ. ಕೃಷ್ಣನು ಈ ಬತ್ತಳಿಕೆಗಳಿಂದ ಬಾಣಗಳನ್ನು ಪ್ರಯೋಗಿಸಿದರೆ ಅವುಗಳು ಗುರಿ ತಪ್ಪುವುದಿಲ್ಲ. ಗುರಿ ತಲುಪಿದರೆ ಶತ್ರುಗಳು ಉಳಿಯುವುದೂ ಇಲ್ಲ. ಬಾಣಗಳಿಂದ ಒದೆತ ತಿಂದ ಶತ್ರುಗಳು ಇದು ಕೃಷ್ಣನಿಂದ ಬಂದ ಬಾಣ; ಬಹಳ ಶಕ್ತಿಯುತವಾಗಿದೆ ಎಂದು ತಿಳಿಯುತ್ತಾರೆ. ಈ ರೀತಿ ಬಾಣಗಳು ಕೃಷ್ಣನ ಎಲ್ಲಾ ರೀತಿಯ ಕೌಶಲ್ಯವನ್ನು ತಿಳಿಸಿ ಶ್ರೇಷ್ಠತೆಯನ್ನು ತಿಳಿಸುತ್ತವೆ. ಭಾಷ್ಯ ಅನುವ್ಯಾಖ್ಯಾನಗಳಲ್ಲಿ ತುಂಬಿರುವ ಒಂದೊಂದು ಪ್ರಮಾಣಗಳನ್ನು ಪರಮತದವರನ್ನು ಕುರಿತು ಪ್ರಯೋಗಿಸಿದಾಗ ಪರಕೀಯರು ತತ್ತರಿಸುತ್ತಾರೆ. ಪರರು ಐಕ್ಯವಾದಿಗಳಾಗಿರುತ್ತಾರೆ. ಈ ಪ್ರಮಾಣಗಳು ಕೃಷ್ಣನಿಗೂ ಜಗತ್ತಿಗೂ ಭೇದವನ್ನು ತಿಳಿಸುತ್ತದೆ. ಹಾಗೆಯೇ ಕೃಷ್ಣನ ಸರ್ವೋತ್ತಮತ್ವವನ್ನು ತಿಳಿಸುತ್ತದೆ. ಪ್ರಮಾಣಗಳು ಜೀವ–ಜೀವ, ಜೀವ–ಈಶ, ಜೀವ–ಜಡ, ಜಡ–ಜಡ, ಜಡ–ಈಶ ಈ ರೀತಿ ಐದು ರೀತಿಯ ಭೇದಗಳನ್ನು ತಿಳಿಸುತ್ತವೆ. ಬಾಣಗಳು ಶತ್ರುಗಳಲ್ಲಿ ಭೇದವನ್ನು ಅಂದರೆ ಕೈಕಾಲುಗಳನ್ನು ಭಿನ್ನಭಿನ್ನಗಳನ್ನಾಗಿ ಮಾಡುತ್ತವೆ. ಪರಕೀಯರು ಈ ಬಾಣಗಳನ್ನು ತುಂಡುಮಾಡಲು ಅಸಮರ್ಥರಾಗುವಂತೆ ಪರವಾದಿಗಳು ಈ ಪ್ರಮಾಣಗಳನ್ನು ಖಂಡಿಸಲು ಅಶಕ್ತರು ಅವರು ದೈಹಿಕ ಹಾಗೂ ಬೌದ್ಧಿಕಬಲವುಳ್ಳವರಾದರೂ ಕೂಡಾ. ಈ ರೀತಿ ಬಾಣಗಳಿಂದ ತುಂಬಿದ ಬತ್ತಳಿಕೆಗಳಂತೆ ಪ್ರಮಾಣಗಳಿಂದ ಈ ಎರಡು ಗ್ರಂಥಗಳು ತುಂಬಿವೆ.

**ಸದ್ವಂಶಜಾತಂ ಸುಗುಣಂ ಮುಕುಂದ–**
**ಹಸ್ತಾಂಬುಜಾಧಾರಮಭೇದ್ಯಮನ್ಯೈಃ ।**
**ಶಾರ್ಙ್ಗಂ ಸತಾಂ ವೃಂದಮಿವಾವಿರಾಸೀ–**
**ನ್ಮಾನೋಪಮಾನೇಷುಭಿರನ್ಯಜಿಷ್ಣು** ॥ ೪೯ ॥

ಸತ್=ಒಳ್ಳೆಯ; ವಂಶ=ವಂಶದಲ್ಲಿ; ಜಾತಂ=ಹುಟ್ಟಿದ; ಸುಗುಣಂ=ಒಳ್ಳೆಯ ಗುಣವುಳ್ಳ; ಮುಕುಂದ=ದೇವರ; ಹಸ್ತ=ಕೈಯೆಂಬ; ಅಂಬುಜ=ಕಮಲವೇ; ಆಧಾರಂ=ಆಶ್ರಯವಾಗಿ ಉಳ್ಳ; ಅನ್ಯೈಃ=ಬೇರೆಯವರಿಂದ; ಅಭೇದ್ಯಂ=ಮುರಿಯಲು ಅಸಾಧ್ಯವಾದ; ಮಾನ=ಪ್ರಮಾಣಗಳಿಗೆ; ಉಪಮಾನ=ಸಮಾನಗಳಾದ; ಇಷುಭಿಃ=ಬಾಣಗಳಿಂದ; ಅನ್ಯ=ಬೇರೆಯವರನ್ನು; ಜಿಷ್ಣು=ಗೆಲ್ಲುವ; ಶಾರ್ಙ್ಗಂ=ಧನುಸ್ಸು; ಸತಾಂ=ಸಜ್ಜನರ; ವೃಂದಮಿವ=ಸಮೂಹದಂತೆ; ಆವಿರಾಸೀತ್=ಕಾಣಿಸಿಕೊಂಡಿತು.

ಯುದ್ಧದ ಸಾಧನಗಳಲ್ಲಿ ಬತ್ತಳಿಕೆಯೂ ಒಂದು. ಹಾಗೆಯೇ ಧನುಸ್ಸಿನ ಪಾತ್ರವೂ ಯುದ್ಧದಲ್ಲಿ ಬಹಳ ಮಹತ್ವದ್ದು. ಈ ಧನುಸ್ಸು ಸಜ್ಜನರ ಸಮೂಹದಂತೆ ಇತ್ತು. ಧನುಸ್ಸಿಗೆ ಆಧಾರ ದೇವರ ಕೈ. ಬಿಲ್ಲನ್ನು ಕೈಯಲ್ಲಿ ಹಿಡಿದುಕೊಂಡೇ ಬಾಣಪ್ರಯೋಗ ಮಾಡುವುದು. ಅಂತೂ ದೇವರ ಕರಕಮಲವನ್ನು ಆಶ್ರಯಿಸಿಕೊಂಡು ಧನುಸ್ಸು ಇದೆ. ಸಜ್ಜನರಿಗೆ ದುಷ್ಟರು ಉಪಟಳ ಮಾಡುತ್ತಾರೆ. ಆಗ ದೇವರು ತನ್ನ ಕರಕಮಲದಿಂದ ಸಜ್ಜನರಿಗೆ ಅಭಯವನ್ನು ಪಾಲಿಸುತ್ತಾನೆ. ಇದರಿಂದ ಸಜ್ಜನರು ನಿರ್ಭೀತಿಯಿಂದ ಜಗತ್ತಿನಲ್ಲಿ ಸಂಚರಿಸುತ್ತಾರೆ. ಆದ್ದರಿಂದಲೇ ಧನುಸ್ಸನ್ನಾಗಲೀ, ಸಜ್ಜನರನ್ನಾಗಲೀ ನಾಶಮಾಡಲು ಯಾರಿಂದಲೂ ಸಾಧ್ಯವಿಲ್ಲ. ಈ ಧನುಸ್ಸು ತನ್ನಿಂದ ಹೊರಟ ಬಾಣಗಳಿಂದ ಶತ್ರುಗಳನ್ನು ಸದೆಬಡಿಯುತ್ತದೆ. ಸಜ್ಜನರು ತಮ್ಮ ಬಾಯಿಂದ ಹೊರಟ ಪ್ರಮಾಣಗಳಿಂದ ಅನ್ಯಮತೀಯರನ್ನು ಸೋಲಿಸುತ್ತಾರೆ. ಗುಣ ಎಂಬ ಶಬ್ದವು ಗುಣಗಳನ್ನು ತಿಳಿಸುವಂತೆ ಹಗ್ಗ ಎಂಬ ಅರ್ಥದಲ್ಲಿಯೂ ಇದೆ. ಧನುಸ್ಸು ಹಗ್ಗದಿಂದಲೂ, ಸಾತ್ವಿಕರು ಜ್ಞಾನಾದಿ ಗುಣಗಳಿಂದಲೂ ಯುಕ್ತವಾಗಿದ್ದಾರೆ. ಸಾತ್ವಿಕರೆಂದರೆ ಒಳ್ಳೆಯ ವಂಶದಲ್ಲಿ ಬಂದವರೇ ಆಗಿರುತ್ತಾರೆ. ವಂಶ ಎಂಬ ಹೆಸರು ಪರಂಪರೆ ಎಂಬ ಅರ್ಥದಲ್ಲಿ ಇರುವಂತೆ ಬದಿರು ಎಂಬ ಅರ್ಥದಲ್ಲಿಯೂ ಇದೆ. ಕ್ಷತ್ರಿಯರಿಗೆ ಧನುಸ್ಸೇ ಒಂದು ಭಾರವಾಗಬಾರದು. ಅದಕ್ಕೋಸ್ಕರ ಒಳ್ಳೆಯ ಜಾತಿಗೆ ಸೇರಿದ ಬಿದಿರಿನಿಂದ ಅದನ್ನು ತಯಾರಿಸುತ್ತಾರೆ.

ಯದ್ಯಪಿ ಕೃಷ್ಣನ ಧನುಸ್ಸು ಬಿದಿರಿನಿಂದ ತಯಾರಾದದ್ದು ಅಲ್ಲ. ಒಂದು ಪ್ರಾಣಿಯ ಕೋಡಿನಿಂದ ತಯಾರಾದದ್ದು. ಕೋಡಿಗೆ ಶೃಂಗ ಎಂದು ಹೆಸರು. ಆದ್ದರಿಂದ ಕೃಷ್ಣನ ಧನುಸ್ಸಿನ ಹೆಸರು ಶಾಂರ್ಗ ಎಂದು. ಆದರೂ ಸಾಮ್ಯ ಇರುವುದರಿಂದ ಈ ಧನುಸ್ಸನ್ನೂ ಸದ್ವಂಶದಲ್ಲಿ ಹುಟ್ಟಿದ್ದು ಎಂದು ಹೇಳಿದ್ದಾರೆ ರಾಜರು. ಈ ರೀತಿ ಧನುಸ್ಸಿಗೂ ಸಜ್ಜನರ ಸಮೂಹಕ್ಕೂ ಹೋಲಿಕೆ ಇದೆ.

**ದ್ವಿಡ್ವರ್ಗದೈನ್ಯಕರನಂದಕಸಂಜ್ಞಿತಾಸಿಂ**
**ಭಕ್ತೌಘನಂದಕಮಸಾವುರರೀಚಕಾರ ।**
**ಸದ್ವಾದಿನಾಂ ಸಮಯಮುದ್ಧತಶತ್ರುವರ್ಗ–**
**ವಿಧ್ವಂಸನಂ ಸ್ವಜನಹರ್ಷಕರಂ ಯುಧೀವ** ॥ ೫೦ ॥

ಅಸೌ=ಕೃಷ್ಣನು; ಭಕ್ತ=ಭಕ್ತರ; ಓಘ=ಸಮೂಹಕ್ಕೆ; ನಂದಕಂ=ಆನಂದದಾಯಕವಾದ; ದ್ವಿಟ್=ಶತ್ರುಗಳ; ವರ್ಗ=ಸಮೂಹಕ್ಕೆ; ದೈನ್ಯ=ದೀನಾವಸ್ಥೆಯನ್ನು; ಕರ=ಮಾಡುವ; ನಂದಕ=ನಂದಕ ಎಂದು; ಸಂಜ್ಞಿತ=ಹೆಸರಿನ; ಅಸಿಂ=ಕತ್ತಿಯನ್ನು; ಉದ್ಧತ=ಕೊಬ್ಬಿದ; ಶತ್ರು=ಶತ್ರುಗಳ; ವರ್ಗ=ಸಮೂಹವನ್ನು; ವಿಧ್ವಂಸನಂ=ನಾಶಮಾಡುವ; ಸ್ವ=ತನ್ನ; ಜನ=ಜನರಿಗೆ; ಹರ್ಷ=ಆನಂದವನ್ನು; ಕರಂ=ಮಾಡುವ; ಸತ್=ಒಳ್ಳೆಯ ವಿಚಾರವನ್ನು

ಮಂಡಿಸುವವರ; ಸಮಯಂ ಇವ=ಶಾಸ್ತ್ರದಂತೆ; ಯುಧಿ=ಯುದ್ಧದಲ್ಲಿ; ಉರರೀಚ-ಕಾರ=ಸ್ವೀಕರಿಸಿದನು.

ಕೃಷ್ಣನ ಕತ್ತಿಯ ಹೆಸರು 'ನಂದಕ' ಎಂದು. ಈ ಕತ್ತಿಯೂ ಯುದ್ಧದ ಸಮಯದಲ್ಲಿ ಕೃಷ್ಣನ ಕೈಸೇರಿತು. ಸ್ವತಂತ್ರನಾಗಿ ಯಾವಾಗಲೂ ಎಲ್ಲಾ ಕಡೆಯೂ ಇರುವುದರಿಂದ ದೇವರಿಗೆ ಸತ್ ಎಂದು ಹೆಸರು. ಇಂತಹ ದೇವರನ್ನು ಸಮಾಜಕ್ಕೆ ತಿಳಿಸುವವರು ಮಧ್ವರು. ಇವರ ಶಾಸ್ತ್ರದಂತೆ ಈ ಖಡ್ಗವು ಇದೆ. ಕೃಷ್ಣನ ಕತ್ತಿಗೆ ನಂದಕ ಎಂದು ಹೆಸರು. ನಂದಕ ಶಬ್ದದ ಅರ್ಥ ಸಂತೋಷಗೊಳಿಸುವುದು ಎಂದು. ಮಧ್ವರ ಶಾಸ್ತ್ರವನ್ನು ದುರಾಗ್ರಹ ಬಿಟ್ಟು ಅಭ್ಯಸಿಸುವವರಿಗೆ ಇಲ್ಲಿಯೂ ಆನಂದವಾಗುತ್ತದೆ. ಮೋಕ್ಷಸುಖವೂ ಸಿಗುತ್ತದೆ. ಆದ್ದರಿಂದ ಶಾಸ್ತ್ರಕ್ಕೂ ನಂದಕ ಎಂಬ ಹೆಸರು ಕೂಡುತ್ತದೆ. ಕೃಷ್ಣನು ಕತ್ತಿಯನ್ನು ಕೈಗೆತ್ತಿಕೊಂಡರೆ ಶತ್ರುಗಳೆಲ್ಲಾ ದೈನ್ಯಾವಸ್ಥೆ ತಾಳುತ್ತಾರೆ. ಬದುಕಲು ಬಿಡು ಎಂದು ಕೃಷ್ಣನಲ್ಲಿ ಅಂಗಲಾಚುತ್ತಾರೆ. ಪರಮತದವರು ಕೆಲವು ಪ್ರಮಾಣಾಭಾಸಗಳನ್ನು ಹಿಡಿದುಕೊಂಡು ತಮ್ಮ ಮತ ಬಹಳ ಶ್ರೇಷ್ಠ ಎಂದು ಬಡಾಯಿ ಕೊಚ್ಚುತ್ತಾರೆ. ಅವರ ಮುಂದೆ ಮಧ್ವಮತದವರು ಈ ಶಾಸ್ತ್ರವನ್ನು ಪ್ರಯೋಗಿಸುತ್ತಾರೆ. ಆಗ ಪರವಾದಿಗಳು ನಿರುತ್ತರರಾಗುತ್ತಾರೆ. ನಮ್ಮ ಮತವನ್ನು ಖಂಡಿಸಬೇಡಿ ಎಂದು ದೀನರಾಗಿ ಬೇಡುತ್ತಾರೆ. ಇದರಿಂದ ಸತ್‌ಸಿದ್ಧಾಂತಿಗಳು ಸಂತೋಷದಿಂದ ಬೀಗುತ್ತಾರೆ.

**ಶ್ರುತ್ಯಂತವಿಶ್ರಾಂತಶರೌಘಯುಕ್ತಿಶೂರಾ ಹರೇಃ ಪಕ್ಷಧರಾ ವಿಧಾಯ ।**
**ಸಿದ್ಧಾಂತಮತ್ಯೂರ್ಜಿತ ಪೂರ್ವಪಕ್ಷಂ ಜಘ್ನುಃ ಕ್ರಮೇಣೋತ್ತರಪಕ್ಷಮಂತೇ॥ ೫೧ ॥**

ಶ್ರುತಿ=ಕಿವಿಯ; ಅಂತ=ಸಮೀಪದಲ್ಲಿ; ವಿಶ್ರಾಂತ=ಇರುವ; ಶರ=ಬಾಣಗಳ; ಓಘ= ಸಮೂಹಗಳ; ಯುಕ್ತಿ=ಯೋಜನೆಯಲ್ಲಿ; ಶೂರಾಃ=ಚುರುಕಾದ; ಹರೇಃ=ಕೃಷ್ಣನ; ಪಕ್ಷ=ಪಕ್ಷವನ್ನು; ಧರಾಃ=ಧರಿಸಿರುವ ಸೈನಿಕರು; ಅತಿ=ಬಹಳ; ಊರ್ಜಿತ=ಬಲಿಷ್ಠವಾದ; ಪೂರ್ವ=ಪೂರ್ವದ್ವಾರದಲ್ಲಿರುವ; ಪಕ್ಷಂ=ಸೈನ್ಯವನ್ನು; ಸಿದ್ಧ=ಉಂಟಾದ; ಅಂತಂ=ನಾಶ ವುಳ್ಳದ್ದನ್ನಾಗಿ; ವಿಧಾಯ=ಮಾಡಿ; ಅಂತೇ=ಕೊನೆಯಲ್ಲಿ; ಉತ್ತರ=ಉತ್ತರದ್ವಾರದ; ಪಕ್ಷಂ=ಸೈನಿಕರನ್ನು; ಕ್ರಮೇಣ=ನಿಧಾನವಾಗಿ; ಜಘ್ನು=ಕೊಂದರು.

ಯುದ್ಧ ಆರಂಭವಾಯಿತು. ಈ ಯುದ್ಧವನ್ನು ರಾಜರು ಶಾಸ್ತ್ರದಲ್ಲಿ ನಡೆಯುವ ಚರ್ಚೆಗೆ ಹೋಲಿಸಿದ್ದಾರೆ. ಇಲ್ಲಿ ಕೆಲವು ಕಡೆ ಶಬ್ದಗಳಿಂದ ಮಾತ್ರ ಸಾಮ್ಯವನ್ನು ತಿಳಿಯಬೇಕು. ಕೃಷ್ಣನ ಸೈನಿಕರು ಬಿಲ್ಲಿಗೆ ಬಾಣವನ್ನು ಜೋಡಿಸಿದರು. ಕಿವಿಯ ತನಕ ಎಳೆದರು. ಇಂತಹ ಬಾಣಗಳ ಸಮೂಹಗಳನ್ನೇ ಶತ್ರುಗಳಲ್ಲಿ ಪ್ರಯೋಗಿಸುವುದರಲ್ಲಿ ಶೂರರು. ಶ್ರುತಿ ಶಬ್ದಕ್ಕೆ ವೇದ, ಕಿವಿ ಎಂಬ ಅರ್ಥಗಳಿವೆ. ಅಂತ ಶಬ್ದವು ಕೊನೆ, ನಿರ್ಣಯ ಎಂಬ ಅರ್ಥಗಳನ್ನು ಹೇಳುತ್ತವೆ. ವೇದಗಳ ಅರ್ಥ ನಿರ್ಣಾಯಕಗಳು

ಸೂತ್ರಗಳು. ಇವುಗಳಿಗೆ ವೇದಾಂತಗಳೆಂದು ಹೆಸರು. ಇವುಗಳಲ್ಲಿ ಸದ್‌ಯುಕ್ತಿಗಳು ಬಹಳ ಇವೆ. ಇವುಗಳು ಬಾಣಗಳಂತೆ ಬಹಳ ತೀಕ್ಷ್ಣಗಳು. ಇಂತಹ ಯುಕ್ತಿಗಳನ್ನು ಕೃಷ್ಣಪಕ್ಷೀಯರು ಅಂದರೆ ವೈಷ್ಣವರು ಚೆನ್ನಾಗಿ ಪ್ರಯೋಗಿಸುತ್ತಿದ್ದರು. ಮಾಧ್ವರು ಭೇದವಾದಿಗಳು, ಜಗತ್‌ಸತ್ಯತ್ವವಾದಿಗಳು. ಮಾಯಿಗಳು ಐಕ್ಯವಾದಿಗಳು, ಜಗತ್‌ಮಿಥ್ಯಾತ್ವವಾದಿಗಳು. ಈ ಮಾಯಿಗಳು ಭೇದಾದಿಗಳನ್ನು ತಮ್ಮ ಶಾಸ್ತ್ರಗಳಲ್ಲಿ ಪೂರ್ವಪಕ್ಷಗಳನ್ನಾಗಿ ಅಂದರೆ ಪ್ರಶ್ನೆಗಳನ್ನಾಗಿ ಮಾಡಿಕೊಂಡಿದ್ದರು. ಇವರ ಪೂರ್ವಪಕ್ಷಗಳು ಮಾಧ್ವರಿಗೆ ಸಿದ್ಧಾಂತ. ಮಾಧ್ವರು ವೇದಾಂತಗಳ ಯುಕ್ತಿಗಳನ್ನು ಬಳಸಿ ಇವರ ಪೂರ್ವ ಪಕ್ಷಗಳನ್ನೇ ಸಿದ್ಧಾಂತಗಳನ್ನಾಗಿ ಪರಿವರ್ತಿಸಿದರು. ಅನಂತರ ಅವರ ಸಿದ್ಧಾಂತ ಏನಿದೆ– ಐಕ್ಯ, ಮಿಥ್ಯಾತ್ವ ಇತ್ಯಾದಿ –ಇವುಗಳನ್ನೆಲ್ಲ ಖಂಡಿಸಿದರು. ಪೂರ್ವಪಕ್ಷ, ಉತ್ತರಪಕ್ಷ ಶಬ್ದಗಳಿಗೆ ಪೂರ್ವದ ಬಾಗಿಲು ಉತ್ತರದ ಬಾಗಿಲು ಎಂಬ ಅರ್ಥದಲ್ಲಿ ತಾತ್ಪರ್ಯ ಇರುವಂತೆ ಪ್ರಶ್ನೆ, ಉತ್ತರ ಎಂಬ ಅರ್ಥಗಳೂ ಇವೆ.

**ಆಪ್ಯಾಯಿತಾಃ ಕಿಲ ಮುರಾಂತಕಮುಖ್ಯವಾತ–**
**ಸಂಜಾತಶಂಖಮಧುರಶ್ರುತಿರಮ್ಯಶಬ್ದೈಃ ।**
**ಶತ್ರೂನ್ನಿಹತ್ಯ ಸಮರೇ ಪರಿತಃ ಪುರೀಂ ತಾಂ**
**ಚಕ್ರುರ್ಮುಕುಂದಗುಣವರ್ಣನಶೋಭಮಾನಾಮ್** ॥ ೫೨ ॥

ಮುರ=ಮುರನಿಗೆ; ಅಂತಕ=ಶತ್ರುವಾದ ಕೃಷ್ಣನ; ಮುಖ್ಯ=ಮುಖದಿಂದ ಹುಟ್ಟಿದ; ವಾತ=ಗಾಳಿಯಿಂದ; ಸಂಜಾತ=ಉಂಟಾದ; ಶಂಖ=ಶಂಖದ; ಮಧುರ=ಇಂಪಾದ; ಶ್ರುತಿ=ಕಿವಿಗಳಿಗೆ; ರಮ್ಯ=ಚಂದದ; ಶಬ್ದೈಃ=ಶಬ್ದಗಳಿಂದ; ಆಪ್ಯಾಯಿತಾಃ=ಸಂತುಷ್ಟರಾದ ಭಟರು; ಸಮರೇ=ಯುದ್ಧದಲ್ಲಿ; ಶತ್ರೂನ್=ಶತ್ರುಗಳನ್ನು; ನಿಹತ್ಯ=ಕೊಂದು; ತಾಂ=ಆ; ಪುರೀಂ=ಪಟ್ಟಣವನ್ನು; ಮುಕುಂದ=ದೇವರ; ಗುಣ=ಗುಣಗಳ; ವರ್ಣನ=ವರ್ಣನೆಯಿಂದ; ಪರಿತಃ=ಸುತ್ತಲೂ; ಶೋಭಮಾನಾಂ=ಶೋಭಿಸಿದ್ದನ್ನಾಗಿ; ಚಕ್ರುಃ=ಮಾಡಿದರು; ಕಿಲ=ಪ್ರಸಿದ್ಧ.

ಯುದ್ಧದ ಮಧ್ಯದಲ್ಲಿ ನಾಯಕನು ಶಂಖವನ್ನು ಊದುತ್ತಾನೆ. ಇದರಿಂದ ತನ್ನ ಸೈನ್ಯಕ್ಕೆ ಉತ್ಸಾಹ ಬರುತ್ತದೆ. ಶತ್ರುಸೈನ್ಯದ ಬಲ ಕಮ್ಮಿ ಆಗುತ್ತ ಕೃಷ್ಣನು ಶಂಖವನ್ನು ಊದಿದನು. ಧ್ವನಿಯು ಬಹಳ ಗಂಭೀರವಾಗಿತ್ತು. ಆದರೂ ಕಿವಿಗಳಿಗೆ ಬಹಳ ಇಂಪಾಗಿತ್ತು. ಇಂತಹ ಶಂಖಧ್ವನಿಯಿಂದ ಕೃಷ್ಣನ ಸೈನ್ಯಕ್ಕೆ ಬಹಳ ಹುರುಪು ಬಂತು. ಯುದ್ಧದ ಶ್ರಮ ಎಲ್ಲಾ ಹೋಯಿತು. ಜರಾಸಂಧನ ಸೈನ್ಯವನ್ನು ಚೆನ್ನಾಗಿ ಬಡಿಯಿತು. ಅನಂತರ ಕೃಷ್ಣನ ಪರಾಕ್ರಮಾದಿಗಳನ್ನು ಹೊಗಳಲು ಆರಂಭಿಸಿತು. ಎಲ್ಲಿ ಹೋದರಲ್ಲಿ ಕೃಷ್ಣನ ಗುಣಗಾನವೇ ಕೇಳಿಸುತ್ತಿತ್ತು. ಈ ರೀತಿ ಇಡೀ ದ್ವಾರಕೆಯು ಚೆನ್ನಾಗಿ ಶೋಭಿಸುತ್ತಿತ್ತು.

ಶಾಸ್ತ್ರೀಯ ಯುದ್ಧದಲ್ಲಿಯೂ ಇದೇ ರೀತಿಯ ವಾತಾವರಣ ಇತ್ತು. ಮುಖ್ಯಪ್ರಾಣನು

ಮುರಾಂತಕನಾದ ದೇವರಿಂದ ಹುಟ್ಟಿದವನು. ಅವನ ಅವತಾರವೇ ಆಚಾರ್ಯಮಧ್ವರು. ಇವರು ತನ್ನ ಪ್ರವಚನಗಳಲ್ಲಿ ಬಹಳ ಶ್ರುತಿಗಳನ್ನು ಉದಾಹರಿಸುತ್ತಿದ್ದರು. ಧ್ವನಿಯೂ ಬಹಳ ಗಂಭೀರವಾಗಿತ್ತು. ಪ್ರಮಾಣಭೂಯಿಷ್ಠವಾದ್ದರಿಂದ ಬಹಳ ಚಂದವೂ ಇತ್ತು. ಇದನ್ನು ಕೇಳಿದ ಮಧ್ವರ ಶಿಷ್ಯರು ಹೊಸ ಚೈತನ್ಯವನ್ನು ಪಡೆದರು. ಪರಮತೀಯರ ಜೊತೆ ಚರ್ಚೆಮಾಡಿ ಮೊದಲು ಬಹಳ ಶ್ರಮಪಟ್ಟಿದ್ದರು. ಸೋಲುವ ಹಂತಕ್ಕೆ ಬರುವ ಪ್ರಸಂಗವೂ ಬಂದಿರಬಹುದು. ಮಧ್ವರ ಉಪನ್ಯಾಸದ ಶ್ರವಣದಿಂದ ಹೊಸ ಹೊಸ ಪ್ರಮಾಣಗಳ ಅರಿವು ಮೂಡಿತು. ಇದರಿಂದ ಉತ್ಸಾಹ ಇಮ್ಮಡಿಯಾಯಿತು. ಪರಮತವನ್ನು ಖಂಡಿಸಿದರು. ಮೊದಲಿನ ಅರ್ಥದಲ್ಲಿ ಕೃಷ್ಣನ ಮನೆ ಅಂದರೆ ದ್ವಾರಕೆ. ಇನ್ನೊಂದು ಅರ್ಥದಲ್ಲಿ ಉಪನಿಷತ್ತುಗಳು. ಉಪನಿಷತ್ತುಗಳು ದೇವರ ನಿರ್ಗುಣತ್ವವನ್ನು ಹೇಳುತ್ತವೆ ಎಂದು ಮಾಯಿಗಳ ವಾದ. ಇಂತಹ ಮಾಯಿಗಳನ್ನು ಮಾಧ್ವರ ಶಿಷ್ಯರು ಖಂಡಿಸಿದರು. ಉಪನಿಷತ್ತುಗಳು ದೇವರ ಗುಣಗಳನ್ನು ಪ್ರತಿಪಾದಿಸುತ್ತವೆ ಎಂದು ಸಮರ್ಥಿಸಿದರು. ಇದರಿಂದಾಗಿ ಉಪನಿಷತ್ತುಗಳಿಗೆ ಒಂದು ಶೋಭೆ ಬಂತು.

**ಕೃಷ್ಣಾಂಗಸಂಗ್ಯುಜ್ಜ್ವಲ ಶಾರ್ಙ್ಗ ಜನ್ಮಾ**
**ಸತ್ಪಕ್ಷಪಾತೇನ ಗೃಹೀತವೇಗಃ ।**
**ಏಕೋऽಪಿ ನಾನಾವದನೈಃ ಸಮಂತಾತ್**
**ಯುಧ್ಯನ್ನಸೌ ಮಧ್ವ ಇವಾಸ್ತಿ ಬಾಣಃ** ॥ ೫೩ ॥

ಕೃಷ್ಣ=ಕೃಷ್ಣನ; ಅಂಗ=ಕೈಯ; ಸಂಗಿ=ಸಂಬಂಧವುಳ್ಳ; ಉಜ್ಜ್ವಲ=ಉತ್ತಮವಾದ; ಶಾರ್ಙ್ಗ=ಶಾರ್ಙ್ಗ ಎಂಬ ಧನುಸ್ಸಿನಿಂದ; ಜನ್ಮಾ=ಹೊರಟಿರುವ; ಸತ್=ಒಳ್ಳೆಯ; ಪಕ್ಷ= ರೆಕ್ಕೆಗಳ; ಪಾತೇನ=ಸಂಬಂಧದಿಂದ; ಗೃಹೀತ=ಉಂಟಾದ; ವೇಗಃ=ವೇಗವುಳ್ಳ; ಅಸೌ=ಈ; ಬಾಣಃ=ಬಾಣವು; ಏಕಃ ಅಪಿ=ಒಂದೇ ಆದರೂ; ನಾನಾ=ಬೇರೆಬೇರೆ; ವದನೈಃ= ಮುಖಗಳಿಂದ; ಸಮಂತಾತ್=ಎಲ್ಲಾ ಕಡೆ; ಯುಧ್ಯನ್=ಯುದ್ಧ ಮಾಡುತ್ತಾ; ಮಧ್ವ ಇವ=ಮಧ್ವರಂತೆ; ಅಸ್ತಿ=ಇದೆ.

ಕೃಷ್ಣನು ಯುದ್ಧದ ಪ್ರಸಂಗದಲ್ಲಿ ಪ್ರಯೋಗಮಾಡಿದ ಬಾಣಗಳನ್ನು ಕಂಡಾಗ ಮಧ್ವರ ನೆನಪಾಗುತ್ತಿತ್ತು. ಅಂದರೆ ಬಾಣಗಳು ಮಧ್ವರಂತೆ ಇದ್ದವು. ಕೃಷ್ಣನು ತನ್ನ ಕೈಯಲ್ಲಿ ಧನುಸ್ಸನ್ನು ತೆಗೆದುಕೊಂಡನು. ಅದಕ್ಕೆ ಬಾಣವನ್ನು ಜೋಡಿಸಿದನು. ಶತ್ರುಗಳ ಮೇಲೆ ಪ್ರಯೋಗಿಸಿದನು. ಈ ಬಾಣಗಳು ಶಾರ್ಙ್ಗಧನುಸ್ಸಿನಿಂದ ಹೊರಟವುಗಳು. ಈ ಧನುಸ್ಸಿಗೆ ದುರ್ಗೆಯು ಅಭಿಮಾನಿನಿಯು. ಈ ದುರ್ಗೆಯು ಕೃಷ್ಣನ ಅಂಗದ ಸಂಗ ಮಾಡಿದಳು. ಫಲಿತಾಂಶ– ವಾಯುದೇವರ ಮೂರನೇ ಅವತಾರವಾದ ಮಧ್ವರ ಆಗಮನ. ಈ ಮಾತನ್ನು ಋಗ್ವೇದದ ಬಳಿತ್ಥಾಸೂಕ್ತವು 'ದಶಪ್ರಮತಿಂ ಅಜನಯಂತ ಯೋಷಣಃ' ಯೋಷಣಃ= ಶ್ರೀ, ಭೂ, ದುರ್ಗೆಯರು, ದಶಪ್ರಮತಿಂ=ಪೂರ್ಣಪ್ರಜ್ಞರನ್ನು ಅಜನಯಂತ=

ಸೃಷ್ಟಿಸಿದರು ಎಂದು ಹೇಳುತ್ತದೆ. ಬಾಣಗಳು ಶಾರ್ಙ್ಗದಿಂದ ಬಂದವುಗಳು. ಮಧ್ವರು ಶಾರ್ಙ್ಗದ ಅಭಿಮಾನಿನಿಯಾದ ದುರ್ಗೆಯಿಂದ ಬಂದವರು.

ಬಾಣಗಳಿಗೆ ವೇಗ ಬರುವುದಕ್ಕಾಗಿ ಎರಡು ಒಳ್ಳೆಯ ರೆಕ್ಕೆಗಳನ್ನು ಕಟ್ಟುತ್ತಾರೆ. ಒಳ್ಳೆಯ ಪಕ್ಷಗಳ ಸಂಬಂಧದಿಂದಾಗಿ ಬಾಣಗಳು ಬಹಳ ವೇಗದಿಂದ ಶತ್ರುಗಳ ಮೇಲೆ ಎರಗುತ್ತವೆ. ಭೂಮಿಯಲ್ಲಿ ಸಜ್ಜನರು ದುಃಶಾಸ್ತ್ರಗಳ ಪ್ರಭಾವದಿಂದ ಬಹಳ ಕಂಗೆಟ್ಟಿದ್ದರು. ದೇವರಿಗೆ ಈ ಸಜ್ಜನರಲ್ಲಿ ದಯೆ ಬಂತು. ವಾಯುದೇವರಿಗೆ ಆಜ್ಞಾಪಿಸಿದನು– ಅವತರಿಸುವಂತೆ. ವಾಯುದೇವರು ಸಜ್ಜನರಲ್ಲಿ ಪಕ್ಷಪಾತವುಳ್ಳವರು. ಆದ್ದರಿಂದ ಬಹಳ ಬೇಗನೇ ಅವತರಿಸಿದರು. ಶಾಸ್ತ್ರಗಳನ್ನು ರಚಿಸಿದರು. ಈ ಮಧ್ವರು ಭಾವಿ ಚತುರ್ಮುಖರು. ಒಂದೇ ಬಾಣವು ಅನೇಕವಾಗಿ ಶತ್ರುಗಳನ್ನು ಸದೆಬಡಿಯಿತು. ಒಬ್ಬರೇ ಮಧ್ವರು ನಾಲ್ಕು ಮುಖದಿಂದ ಏಕಕಾಲಕ್ಕೆ ಪರಪಕ್ಷವನ್ನು ಮರ್ದಿಸಿದರು. ಎಲ್ಲಾ ಮತಾಚಾರ್ಯರನ್ನು ಖಂಡಿಸಲು ಮಧ್ವರು ಅನುವ್ಯಾಖ್ಯಾನ ಎಂಬ ಗ್ರಂಥವನ್ನು ರಚಿಸಿದರು. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಮಧ್ವರು ನಾಲ್ಕು ಅಧ್ಯಾಯಗಳನ್ನು ನಾಲ್ಕು ಶಿಷ್ಯರಿಂದ ಏಕಕಾಲದಲ್ಲಿ ಬರೆಯಿಸಿದರು. ಒಬ್ಬ ಶಿಷ್ಯನಿಂದ ಒಂದು ಅಧ್ಯಾಯವನ್ನು ಬರೆಸಿದನಂತರ ಇನ್ನೊಂದು ಅಧ್ಯಾಯವನ್ನು ಇನ್ನೊಬ್ಬನಿಂದ ಬರೆಸಿದ್ದು ಅಲ್ಲ –ದೇವರ ಬತ್ತಳಿಕೆಯಲ್ಲಿ ಐದು ಬಾಣಗಳು. ಈ ಬಾಣಗಳಿಗೆ ವಾಯುದೇವರು ಪ್ರಾಣ, ಅಪಾನಾದಿ ಐದು ರೂಪಗಳಿಂದ ಅಭಿಮಾನಿಯು. ದೇವರ ಬಾಣವೂ ಐದು. ಮಧ್ವರ ರೂಪಗಳೂ ಐದು. ಈ ರೀತಿ ಬಾಣದಂತೆ ಮಧ್ವರು ಪರಮತದವರನ್ನು ಸೋಲಿಸಿದರು.

> **ಅಯಃ ಸ್ಥಿರಾಪ್ತ್ಯಾsರಿಭಟೈರಸಹ್ಯಃ**
> **ಸುವರ್ಣಶೋಭೀ ಶುಭವಂಶಜನ್ಮಾ ।**
> **ದಿಗಷ್ಟಕವ್ಯಾಪ್ತತನುಃ ಸಮಂತಾತ್**
> **ಜಿಗಾಯ ಮಾಯಾವಿನಿಕಾಯಮಾಜೌ** ॥ ೫೪ ॥

ಅಯಃ ಸ್ಥಿರಾಪ್ತ್ಯಾ=ಬಾಣದ ತುದಿಯ ದೃಢವಾದ ಹೊಂದುವಿಕೆಯಿಂದ; ಅರಿಭಟೈಃ=ಶತ್ರುಸೈನಿಕರಿಂದ; ಅಸಹ್ಯಃ=ಸಹಿಸಲು ಅಸಹ್ಯವಾದ; ಸುವರ್ಣ= ಬಂಗಾರ ದಿಂದ; ಶೋಭೀ=ಶೋಭಿಸುವ; ಶುಭವಂಶಜನ್ಮಾ=ಒಳ್ಳೆಯ ವಂಶದಲ್ಲಿ ಹುಟ್ಟಿದ; ದಿಗಷ್ಟಕವ್ಯಾಪ್ತತನುಃ=ಎಂಟು ದಿಕ್ಕುಗಳಲ್ಲಿ ಹರಡಿದ ಶರೀರವುಳ್ಳ ಬಾಣವು; ಆಜೌ= ಯುದ್ಧ ದಲ್ಲಿ; ಮಾಯಾವೀ=ದೈತ್ಯರ; ನಿಕಾಯಂ=ಸಮೂಹವನ್ನು; ಸಮಂತಾತ್=ಸುತ್ತಲೂ; ಜಿಗಾಯ=ಗೆದ್ದಿತು.

ರಾಜರು ಈ ಶ್ಲೋಕದಲ್ಲಿ ಬಾಣವನ್ನು ಮಧ್ವರಿಗೆ ಹೋಲಿಸುತ್ತಾರೆ. ಬಾಣಗಳು ಹಗುರ ಇದ್ದರೆ ಒಳ್ಳೆಯದು. ಅದಕ್ಕಾಗಿ ಅವುಗಳನ್ನು ಬಿದಿರುಗಳಿಂದ ತಯಾರಿಸುತ್ತಾರೆ.

ಬಿದಿರುಗಳಿಗೆ ವಂಶಗಳೆಂದು ಹೆಸರಿದೆ. ಅಂಕುಡೊಂಕಿನ ಬಿದಿರು ಆಗದು ಬಾಣ ತಯಾರಿಸಲು. ಒಳ್ಳೆಯ ಬಿದಿರು ಆಗಬೇಕು. ತಥಾ ಚ ಬಾಣಗಳು ಒಳ್ಳೆಯ ವಂಶಗಳಿಂದ ಬಂದಿರುತ್ತವೆ. ಮಧ್ವರೂ ಒಳ್ಳೆಯ ವಂಶದಿಂದಲೇ ಬಂದವರು. ಈ ಬಾಣಗಳು ಶತ್ರುಗಳಿಗೆ ಚೆನ್ನಾಗಿ ತಾಗಬೇಕು. ಅದಕ್ಕಾಗಿ ಅದರ ತುದಿಗೆ ಕಬ್ಬಿಣದ ಮೊನಚನ್ನು ಕಟ್ಟುತ್ತಾರೆ. ಕಬ್ಬಿಣಕ್ಕೆ 'ಅಯ' ಎಂದು ಹೆಸರು. ಇಂತಹ ಬಾಣಗಳನ್ನು ಎದುರಿಸಲು ಶತ್ರುಗಳಿಂದ ಸಾಧ್ಯವಿಲ್ಲ. 'ಅಯ' ಎನ್ನುವುದಕ್ಕೆ ದೇವರು ಎಂದೂ ಅರ್ಥ. ದೇವರಲ್ಲಿ ಮಧ್ವರಿಗೆ ಬಹಳ ನಂಬಿಕೆ. ಆದ್ದರಿಂದ ಇವರನ್ನು ಸಹಿಸಲು ಪರಮತದವರಿಗೆ ಸಾಧ್ಯವಿಲ್ಲ. ಬಾಣಗಳು ಬಿದಿರಿನದ್ದಾದರೂ ಅದನ್ನು ಸುವರ್ಣದಿಂದ ಅಲಂಕರಿಸುತ್ತಾರೆ. ಮಧ್ವರೂ ಸುವರ್ಣದಿಂದ ಅಂದರೆ ಒಳ್ಳೆಯ ಅಕ್ಷರಗಳಿಂದ ಅಂದರೆ ಶಾಸ್ತ್ರದ ಮಾತುಗಳಿಂದ ಚೆನ್ನಾಗಿ ಬೆಳಗಿದ್ದಾರೆ. ಕೃಷ್ಣನಿಂದ ಹೊರಟ ಒಂದು ಬಾಣವು ಅನೇಕವಾಗಿ ಎಲ್ಲಾ ದಿಕ್ಕುಗಳಲ್ಲಿಯೂ ಹರಡಿತು. ಮಧ್ವರು ತನ್ನ ಕೀರ್ತಿಗಳಿಂದ ಎಲ್ಲಾ ದಿಕ್ಕುಗಳಿಗೂ ಹರಡಿದ್ದಾರೆ. ಬಾಣವು ಮೋಸಮಾಡುವ ಜರಾಸಂಧನ ಸೈನ್ಯವನ್ನು ನಾಶಮಾಡಿತು. ಮಧ್ವರು ತಮ್ಮ ಮಾತುಗಳಿಂದ ಜನರನ್ನು ವಂಚಿಸುವ ಮಾಯಾವಾದಿಗಳನ್ನು ಗೆದ್ದರು.

**ನತ್ಯುದ್ಯತಾನಾಂ ನಯವಾಕ್ಯಭಾಜಾಂ**
**ನ್ಯಸ್ತಾಯುಧಾನಾಂ ನಿಕುರಂಬಮಾಜೌ ।**
**ಹಿತ್ವೋದ್ಧತಾನೇವ ಜಯನ್ ಸ ಪೂರ್ಣ–**
**ಮತ್ಯಾಹ್ವಯಾರ್ಹಾಚರಣಂ ಬಿಭರ್ತಿ** ॥ ೫೫ ॥

ಸಃ=ಆ ಬಾಣವು; ಆಜೌ=ಯುದ್ಧದಲ್ಲಿ; ನತಿ=ನಮಸ್ಕಾರದಲ್ಲಿ; ಉದ್ಯತಾನಾಂ= ತಯಾರಾದ; ನಯ=ಒಳ್ಳೆಯ; ವಾಕ್ಯ=ಮಾತುಗಳನ್ನು; ಭಾಜಾಂ=ಹೊಂದಿರುವ; ನ್ಯಸ್ತ=ತ್ಯಜಿಸಿದ; ಆಯುಧಾನಾಂ=ಆಯುಧವುಳ್ಳವರ; ನಿಕುರಂಬಂ=ಸಮೂಹವನ್ನು; ಹಿತ್ವಾ=ಬಿಟ್ಟು; ಉದ್ಧತಾನ್ ಏವ=ಕೊಬ್ಬಿದವರನ್ನೇ; ಜಯನ್=ಗೆಲ್ಲುತ್ತಾ; ಪೂರ್ಣಮತಿ= ಪೂರ್ಣಪ್ರಜ್ಞ ಎಂಬ. ಆಹ್ವಯ=ಹೆಸರಿಗೆ; ಅರ್ಹ=ಯೋಗ್ಯವಾದ; ಆಚರಣಂ=ಆಚರಣೆ ಯನ್ನು; ಬಿಭರ್ತಿ=ಧರಿಸುತ್ತದೆ.

ಹಿಂದಿನ ಶ್ಲೋಕದಲ್ಲಿ ಬಾಣಕ್ಕೆ ಆಚಾರ್ಯರ ಹೋಲಿಕೆಯನ್ನು ಕೊಟ್ಟರು. ಈ ಶ್ಲೋಕದಲ್ಲಿ ಹೆಸರಿನಿಂದಲೂ ಸಾಮ್ಯವನ್ನು ಹೇಳುತ್ತಾರೆ. ಮಧ್ವರಿಗೆ ಪೂರ್ಣಪ್ರಜ್ಞ ಎಂಬ ಹೆಸರಿದೆ. ಬಾಣ ಮಾಡುವ ಕೆಲಸ ನೋಡುವಾಗ ಇದಕ್ಕೆ ತುಂಬಾ ತಿಳುವಳಿಕೆ ಇರಲೇಬೇಕು ಎಂದು ತಿಳಿಯುತ್ತದೆ. ಕೃಷ್ಣನು ಬರುವಾಗ ಯಾವ ಶತ್ರುವು ಆಯುಧವನ್ನು ಚೆಲ್ಲಿ ಕೈಜೋಡಿಸಿ ತಪ್ಪಾಯಿತು ಎಂದು ಹೇಳುತ್ತಾನೋ, ಬಾಣವನ್ನೂ ಅದರ ಯಜಮಾನನನ್ನು ಹೊಗಳುತ್ತಾನೋ ಅಂಥವರನ್ನು ಕೊಲ್ಲುತ್ತಿರಲಿಲ್ಲ. ಯಾರು ಅಹಂಕಾರದಿಂದ ಇನ್ನಷ್ಟು

ಹೋರಾಟಕ್ಕೆ ಮುಂದುವರಿಯುತ್ತಾರೋ ಅವರನ್ನು ಈ ಬಾಣವು ಸಂಹರಿಸುತ್ತಿತ್ತು. ಬಾಣವು ಈ ರೀತಿ ಮಾಡಬೇಕಾದರೆ ಬಾಣಕ್ಕೆ ತಿಳುವಳಿಕೆ ಇರಲೇಬೇಕು.

ಮಧ್ವರು ಶಾಸ್ತ್ರಗಳನ್ನು ರಚಿಸಿದರು. ಈ ಗ್ರಂಥಗಳನ್ನು, ಯೋಗ್ಯತೆ ಚೆನ್ನಾಗಿರುವ, ಪ್ರಾರಬ್ಧವಶಾತ್ ಅಡ್ಡದಾರಿ ಹಿಡಿದಿರುವ ಮಂದಿಯೂ ಸಹಜವಾಗಿ ತಾಮಸ ಸ್ವಭಾವದವರೂ ಓದಿದರು. ಅದರಲ್ಲಿ ಮೊದಲ ವರ್ಗದವರು ಓದಿದವರೇ ಮಾಯಿಶಾಸ್ತ್ರಗಳನ್ನು ಬಿಟ್ಟರು. ಶಾಸ್ತ್ರಿಗಳಾದ ಮಧ್ವರನ್ನು ನಮಸ್ಕರಿಸಿದರು. ಹೊಗಳಿದರು. ಇಂತಹವರನ್ನು ಮಧ್ವರು ಚರ್ಚೆಗೆ ಕರೆಯಲಿಲ್ಲ. ದುಷ್ಟರು ಈ ಶಾಸ್ತ್ರವನ್ನು ಓದಿದರೂ ಮಾಯಿಶಾಸ್ತ್ರವನ್ನು ಬಿಡಲಿಲ್ಲ. ಅಹಂಕಾರಿಗಳಾಗಿಯೇ ಇದ್ದರು. ಇಂತಹವರನ್ನು ಮಧ್ವರು ಹುಡುಕಿ ಹುಡುಕಿ ಸೋಲಿಸಿದರು. ಜನರ ಸ್ವಭಾವ ತಿಳಿಯಬೇಕಾದರೆ ತಿಳುವಳಿಕೆ ಪೂರ್ಣವಾಗಿರಲೇಬೇಕು.

**ಹೃನ್ಮಧ್ಯಾಲಯತಃ ಸ ನಿರ್ಗತತನುಃ ಪೃಥ್ವೀಭುಜಾಮಚ್ಯುತ-**
**ಪ್ರೇಕ್ಷಾವಾಪ್ತಮಹೋದಯಃ ಪವನವದ್ವಿಖ್ಯಾತವೇಗಃ ಕ್ಷಿತೌ ।**
**ಸಚ್ಛಾಸ್ತ್ರೋದಿತಕೃಷ್ಣವಿಕ್ರಮಚಯಂ ವಿಖ್ಯಾಪಯನ್ ಸ್ವರ್ಗಿಣಾಂ**
**ಸುಪ್ರೀತಿಂ ಜನಯನ್ ಮುರಾಂತಕಚಮೂಂ ಪುಷ್ಣನ್ನಜೈಷೀದ್ವಿಷಃ ॥ ೫೬ ॥**

ಪೃಥ್ವೀ=ಭೂಮಿಯನ್ನು; ಭುಜಾಂ=ಸೇವಿಸುವ ರಾಜರುಗಳ; ಹೃತ್=ಎದೆಯ; ಮಧ್ಯ=ಮಧ್ಯದ; ಆಲಯತಃ=ಭಾಗದಿಂದ; ನಿರ್ಗತ=ಹೊರಟ; ತನುಃ=ಸ್ವರೂಪವುಳ್ಳ; ಅಚ್ಯುತ=ದೋಷ ಇಲ್ಲದ; ಪ್ರೇಕ್ಷಾ=ನೋಟದಿಂದ; ಅವಾಪ್ತ=ಹೊಂದಿದ; ಮಹೋದಯಃ= ಮಹತ್ವವುಳ್ಳ; ಪವನವತ್=ಗಾಳಿಯಂತೆ; ವಿಖ್ಯಾತ=ಪ್ರಸಿದ್ಧವಾದ; ವೇಗಃ=ವೇಗವುಳ್ಳ; ಸತ್=ಒಳ್ಳೆಯ; ಶಾಸ್ತ್ರ=ಶಾಸ್ತ್ರದಲ್ಲಿ; ಉದಿತ=ಹೇಳಿದ; ಕೃಷ್ಣ=ಕೃಷ್ಣನ; ವಿಕ್ರಮ=ಸಾಮರ್ಥ್ಯದ; ಚಯಂ=ಸಮೂಹವನ್ನು; ಕ್ಷಿತೌ=ಭೂಮಿಯಲ್ಲಿ; ವಿಖ್ಯಾಪಯನ್=ಹರಡುವ; ಸ್ವರ್ಗಿಣಾಂ=ದೇವತೆಗಳಿಗೆ; ಸುಪ್ರೀತಿಂ=ಪ್ರೀತಿಯನ್ನು; ಜನಯನ್=ಉಂಟುಮಾಡುವ; ಮುರ=ಮುರಾಸುರನಿಗೆ; ಅಂತಕ=ಮಾರಕನಾದ ಕೃಷ್ಣನ; ಚಮೂಂ=ಸೈನ್ಯವನ್ನು; ಪುಷ್ಣನ್=ಪೋಷಿಸುತ್ತಾ; ಸಃ=ಆ ಬಾಣವು; ದ್ವಿಷಃ=ಶತ್ರುಗಳನ್ನು; ಅಜೈಷೀತ್=ಗೆದ್ದಿತು.

ಪುನಃ ಬಾಣಗಳಿಗೂ ಮಧ್ವರಿಗೂ ಸಾಮ್ಯವನ್ನು ತಿಳಿಸುತ್ತಾರೆ. ಶತ್ರುಗಳ ಹೃದಯಕ್ಕೆ ಕೃಷ್ಣನು ಬಾಣಗಳನ್ನು ಪ್ರಯೋಗಿಸುತ್ತಾನೆ. ಆ ಬಾಣಗಳು ಎದೆಯನ್ನು ಹೊಕ್ಕು ಬೆನ್ನಲ್ಲಿ ಹೊರಬರುತ್ತಿದ್ದವು. ಅಂತೂ ದೇಹವೆಂಬ ಮನೆಯ ಮಧ್ಯಬಾಗದಿಂದ ಹೊರಬಂದಂತೆ ಆಯಿತು.

ಹಿಂದಿನ ಕಾಲದಲ್ಲಿ ಮನೆಗಳಿರುವ ದಿಕ್ಕುಗಳ ಹೆಸರು ಮನೆಗಳಿಗೆ ಬರುತ್ತಿತ್ತು. ಬಡಗುಬದಿಯಲ್ಲಿ ಅಂದರೆ ಉತ್ತರದಿಕ್ಕಿನಲ್ಲಿ ಮನೆ ಆದರೆ ಬಡಕಿಲ್ಲಾಯರು. ಇಲ್ಲ್

ಅಂದರೆ ಮನೆ. ಮೂಡು, ಪಡು ದಿಕ್ಕುಗಳಾದರೆ ಮೂಡಿಲ್ಲಾಯರು, ಪಡಿಲ್ಲಾಯರು ಇತ್ಯಾದಿ. ಹೀಗೆ ನಾಲ್ಕು ದಿಕ್ಕುಗಳಲ್ಲಿ ಮನೆಗಳಿದ್ದುವು. ಇವುಗಳ ಮಧ್ಯದಲ್ಲಿರುವ ಮನೆಯ ಯಜಮಾನ ನಡಿಲ್ಲಾಯ. ಮಧ್ವರು ಈ ವಂಶಕ್ಕೆ ಸೇರಿದವರು. ಇಂತಹ ಮಧ್ಯಗೇಹ ವಂಶದಿಂದ ಮಧ್ವರು ಬಂದವರು. ಗೇಹ ಅಂದರೆ ಮನೆ. ಈ ರೀತಿ ಮಧ್ವರೂ ಮಧ್ಯಗೇಹರಿಂದ ಬಂದರು ಬಾಣದಂತೆ. ಬಾಣವನ್ನು ಬಿಲ್ಲಿಗೆ ಜೋಡಿಸಿ ಬಾಣದ ತುದಿಯನ್ನೂ ಗುರಿಯನ್ನೂ ಸಮಾನವಾಗಿ ಕಾಣಬೇಕು. ಹಾಗಾದಾಗ ಮಾತ್ರ ಬಾಣವು ಗುರಿಯನ್ನು ತಲುಪುತ್ತದೆ; ಒಳ್ಳೆಯ ಬಾಣ ಎಂದು ಪ್ರಶಂಸೆಗೆ ಪಾತ್ರವಾಗುತ್ತದೆ. ಕಾಣುವ ದೃಷ್ಟಿಯಲ್ಲಿ ಸ್ವಲ್ಪ ಚ್ಯುತಿ ಬಂದರೂ ಗುರಿ ತಪ್ಪುತ್ತದೆ. ಈ ರೀತಿ ಚ್ಯುತಿ ಇಲ್ಲದ ಆದ್ದರಿಂದಲೇ ಅಚ್ಯುತವಾದ ನೋಟದಿಂದ ಬಾಣವು ಅಮೋಘವಾಯಿತು.

ಮಧ್ವರಿಗೆ ಸನ್ಯಾಸ ಕೊಟ್ಟವರು ಅಚ್ಯುತಪ್ರೇಕ್ಷರು. ಬಾಹ್ಯದೃಷ್ಟಿಯಿಂದ ಹೇಳುವಾಗ ಈ ಅಚ್ಯುತಪ್ರೇಕ್ಷರಿಂದ ಮಧ್ವರಿಗೆ ಚತುರ್ಥಾಶ್ರಮವೆಂಬ ಮಹತ್ತ್ವ ಬಂತು. ಬಾಣವು ಗಾಳಿಯಂತೆ ಬಹಳ ವೇಗವಾಗಿ ಹೋಯಿತು. ಮಧ್ವರು ಎರಡನೇ ಬದರಿಗೆ ಹೋಗುವಾಗ ಬಹಳ ವೇಗದಿಂದ ಹೋಗುತ್ತಿದ್ದರು ಎಂದು ಮಧ್ವವಿಜಯವು ಹೇಳುತ್ತದೆ. ವೇದಾದಿ ಗ್ರಂಥಗಳು ಕೃಷ್ಣನ ಪರಾಕ್ರಮವನ್ನು ಬಹಳವಾಗಿ ಹೇಳುತ್ತವೆ. ಅವುಗಳನ್ನು ಸಮಾಜಕ್ಕೆ ತಿಳಿಸುವ ವಿಷಯದಲ್ಲಿ ಬಾಣಗಳ ಹಾಗೂ ಮಧ್ವರ ಪಾತ್ರ ಹಿರಿದು. ಬಾಣಗಳು ಬಂದು ಶತ್ರುಗಳಿಗೆ ತಗಲಿದಾಗ ಬಹಳ ನೋವನ್ನು ಅನುಭವಿಸುತ್ತಾರೆ. ಹೆಚ್ಚು ಹೆಚ್ಚು ನೋವಾದಂತೆ ಪ್ರಯೋಗ ಮಾಡಿದವನ ಶಕ್ತಿಯ ಆಧಿಕ್ಯವು ತಿಳಿಯುತ್ತದೆ. ಮಧ್ವರೂ ತನ್ನ ಉಪನ್ಯಾಸಗಳ ಮೂಲಕ ಶಾಸ್ತ್ರಗಳಲ್ಲಿ ಹೇಳಿದ ದೇವರ ಗುಣಗಳನ್ನು ಜನರಿಗೆ ತಿಳಿಸಿದರು. ದೇವಪೀಡಕರಾದ ಈ ಜರಾಸಂಧನ ಸೈನಿಕರ ನಾಶದಿಂದ ದೇವತೆಗಳು ಸಂತೋಷಗೊಳ್ಳುತ್ತಿದ್ದರು. ಭೂಮಿಯಲ್ಲಿ ಸಾತ್ವಿಕರು ದುಃಶಾಸ್ತ್ರಗಳ ಪ್ರಭಾವಕ್ಕೆ ಒಳಗಾದಾಗ ದೇವತೆಗಳು ಬಹಳ ನೊಂದುಕೊಂಡಿದ್ದರು. ಮಧ್ವರು ತನ್ನ ಪ್ರವಚನಗಳ ಮೂಲಕ ದುಃಶಾಸ್ತ್ರಗಳನ್ನು ಖಂಡಿಸಿದರು. ಸಾತ್ವಿಕರಿಗೆ ತಿಳಿಜ್ಞಾನವನ್ನು ಕೊಟ್ಟರು. ಇದರಿಂದ ದೇವತೆಗಳು ನೆಮ್ಮದಿಯ ಉಸಿರು ಬಿಟ್ಟರು. ಶತ್ರುಸಂಹಾರ ಮಾಡುವ ಮೂಲಕ ಬಾಣಗಳು ಕೃಷ್ಣನ ಸೈನಿಕರನ್ನು ಹುರಿದುಂಬಿಸುತ್ತಿದ್ದವು.

**ಶಸ್ತ್ರೈರಸ್ತ್ರಗಣೈಃ ಶರೈರರಿಧೃತೈರ್ವೇಧಂ ವಿಭೇದಂ ಛಿದಾಂ**
**ಕೃಷ್ಣೇ ಸ್ವಾಗಮಕೌಶಲೈಃ ಪರಿಹರನ್ ಸ್ವಾನಂದಮಾತ್ರಾಕೃತಿಮ್ ।**
**ನಿರ್ಬಾಧಾಂ ಪ್ರತಿಪಾದಯನ್ ಅವಯವಾನ್ ನಿತ್ಯಾಂಶ್ಚ ವಿಜ್ಞಾಪಯನ್**
**ಯಧ್ಯಗ್ರಾಹ್ಯಮತೀಂದ್ರಿಯಂ ವ್ಯತನುತಾಗಣ್ಯ ಪ್ರತಾಪಂಪ್ರಭುಮ್ ॥ ೫೭ ॥**

ಸಃ=ಬಾಣವು; ಅರಿ=ಶತ್ರುಗಳಿಂದ; ಧೃತೈಃ=ಪ್ರಯೋಗಿಸಲ್ಪಟ್ಟ; ಶಸ್ತ್ರೈಃ=ಆಯುಧ

ಗಳಿಂದ; ಅಸ್ತ್ರ=ಮಂತ್ರಗಳ; ಗಣ್ಯೈಃ=ಸಮೂಹಗಳಿಂದ; ಶರ್ಯೈಃ=ಬಾಣಗಳಿಂದ; ಕೃಷ್ಣೇ=ಕೃಷ್ಣನಲ್ಲಿ; ವೇಧಂ=ಹೊಡೆತವನ್ನು; ವಿಭೇದಂ=ಗಾಯವನ್ನು; ಛಿದಾಂ=ಕತ್ತರಿಸುವಿಕೆಯನ್ನು; ಸ್ವ=ತನ್ನ; ಆಗಮ=ಸಂಚಾರದ; ಕೌಶಲ್ಯೈಃ=ಕೌಶಲದಿಂದ; ಪರಿಹರನ್=ಪರಿಹರಿಸುತ್ತಾ; ಸು=ಒಳ್ಳೆಯ; ಆನಂದಮಾತ್ರ=ಕೇವಲ ಆನಂದವೇ; ಆಕೃತಿಂ=ಶರೀರವುಳ್ಳವನನ್ನಾಗಿ; ನಿರ್ಬಾಧಾಂ=ಪೀಡೆಯರಾಹಿತ್ಯವನ್ನು; ಪ್ರತಿಪಾದಯನ್=ತಿಳಿಸುತ್ತಾ; ಅವಯವಾನ್=ಅವಯವಗಳನ್ನು; ನಿತ್ಯಾನ್ ಚ=ನಿತ್ಯಗಳನ್ನಾಗಿ; ವಿಜ್ಞಾಪಯನ್=ತಿಳಿಸುತ್ತಾ; ಯುಧಿ=ಯುದ್ಧದಲ್ಲಿ; ಅಗ್ರಾಹ್ಯಂ=ಹಿಡಿಯಲು ಅಸಾಧ್ಯನನ್ನಾಗಿ; ಅತೀಂದ್ರಿಯಂ=ಕಾಣಲು ಅಸಾಧ್ಯನನ್ನಾಗಿ; ಅಗಣ್ಯ=ಎಣಿಸಲು ಸಾಧ್ಯವಿಲ್ಲದ; ಪ್ರತಾಪಂ=ಶಕ್ತಿವುಳ್ಳವನನ್ನಾಗಿ; ಪ್ರಭುಂ=ಕೃಷ್ಣನನ್ನು; ವ್ಯತನುತ=ಮಾಡಿತು.

ಪುನಃ ಬಾಣಗಳಿಗೂ ಮಧ್ವರಿಗೂ ಹೋಲಿಕೆ ಈ ಶ್ಲೋಕದಲ್ಲಿ ಮುಂದುವರಿಯುತ್ತದೆ. ಶತ್ರುಗಳು ಕೃಷ್ಣನ ಮೇಲೆ ನಾನಾ ರೀತಿಯ ಆಯುಧಗಳನ್ನು, ಮಂತ್ರಗಳನ್ನು ಪ್ರಯೋಗಿಸುತ್ತಿದ್ದರು. ಇವುಗಳನ್ನೆಲ್ಲಾ ಕೃಷ್ಣನ ಬಾಣಗಳು ಅರ್ಧದಲ್ಲಿಯೇ ಕತ್ತರಿಸಿ ಬಿಸಾಡುತ್ತಿದ್ದವು. ಶತ್ರುಗಳ ಆಯುಧಗಳಿಗೆ ಸರಿಯಾಗಿ ಕೃಷ್ಣನ ಧನುಸ್ಸಿನಿಂದ ಬಾಣಗಳು ಬರುತ್ತಿದ್ದವು. ಅಂತಹ ಕೌಶಲ್ಯ ಬಾಣಗಳಿಗೆ ಇತ್ತು. ಕೃಷ್ಣನ ದೇಹದಲ್ಲಿ ಯಾವುದೇ ರೀತಿಯಾದ ಗಾಯಾದಿಗಳು ಆಗದಂತೆ ನೋಡಿಕೊಂಡವು.

ಕೆಲವೊಮ್ಮೆ ಕೃಷ್ಣನು ಗಾಯಾದಿಗಳು ಆದಂತೆ ತೋರಿಸಿಕೊಡುತ್ತಿದ್ದನು. ಆಗ ಮಧ್ವರು ತಾನು ನಿರವಕಾಶವಾದ ಪ್ರಮಾಣಗಳನ್ನು ಉದಾಹರಿಸುತ್ತಿದ್ದರು. ಕೃಷ್ಣನಿಗೆ ಗಾಯ ಎಂಬುದೇ ಇಲ್ಲ. ಆತನದ್ದು ಪಾಂಚಭೌತಿಕಶರೀರವಲ್ಲ. ಇಂತಹ ಶರೀರಕ್ಕೆ ಮಾತ್ರ ಗಾಯಾದಿಗಳು ಆಗುವುದು. ಆತನದ್ದು ಜ್ಞಾನಾನಂದಮಯ ಶರೀರ. ಆದ್ದರಿಂದ ಯಾವುದೇ ರೀತಿಯ ಗಾಯಗಳು ಆಗುವುದಿಲ್ಲ. ಅಜ್ಞ ಜನ ಮೋಹಕ್ಕೋಸ್ಕರ ಗಾಯಗೊಂಡವರಂತೆ ತೋರಿಸಿಕೊಡುತ್ತಾನೆ ಎಂದು ಚೆನ್ನಾಗಿ ಸಾಧಿಸುತ್ತಾರೆ.

ಕೃಷ್ಣನನ್ನು ಹಿಡಿಯಲು ಶತ್ರುಗಳು ಬರುತ್ತಿದ್ದರು. ಆಗ ಕೃಷ್ಣನು ಬಾಣಗಳನ್ನು ಪ್ರಯೋಗಿಸಿ ಅವರನ್ನು ಮಧ್ಯದಲ್ಲಿಯೇ ಉರುಳಿಸುತ್ತಿದ್ದನು. ಬಾಣದ ಹೊಡೆತದಿಂದ ಕಣ್ಣುಕತ್ತಲು ಬರುತ್ತಿತ್ತು. ಇದರಿಂದ ಕೃಷ್ಣನು ಕಾಣಿಸುತ್ತಲೂ ಇರಲಿಲ್ಲ. ಹೀಗೆ ಕೃಷ್ಣನ ಅಗ್ರಾಹ್ಯತ್ವ, ಅದೃಶ್ಯತ್ವಗಳನ್ನು ಬಾಣಗಳು ತಿಳಿಸುತ್ತಿದ್ದವು.

'ನ ಇಂದ್ರಿಯಾಣಿ ನ ಅನುಮಾನಂ' ಇತ್ಯಾದಿ ಪ್ರಮಾಣಗಳು ದೇವರು ಚರ್ಮಚಕ್ಷುಸ್ಸಿಗೆ ಅಗೋಚರ ಎಂದು ತಿಳಿಸುತ್ತದೆ. ಇಂತಹ ಪ್ರಮಾಣಗಳನ್ನು ಮಧ್ವರು ತನ್ನ ಉಪನ್ಯಾಸಗಳಲ್ಲಿ ಬಹಳ ಬಳಸುತ್ತಿದ್ದರು. ದೇವರು ನಮ್ಮ ಇಂದ್ರಿಯಗಳಿಗೆ ಎಟಕುವುದಿಲ್ಲ; ಕೈಗಳಿಂದ ಹಿಡಿಯಲೂ ಸಾಧ್ಯವಿಲ್ಲ ಎಂದು ಜನತೆಗೆ ತಿಳಿಸುತ್ತಿದ್ದರು.

ಹೃಷ್ಟಾಂ ಸಃ ಕೃಷ್ಣಸ್ಯ ಚಮೂಂ ವಿತನ್ವನ್
ದುಷ್ಟಾನ್ ವಿನಷ್ಟಾನ್ ವಿಶಿಖೋ ವಿಧಾಯ ।
ತುಷ್ಟಃ ಸುರೈರ್ವ್ಯೋಮಚರೈರ್ಮುರಾರೇಃ
ಸ್ಪಷ್ಟೀಚಕಾರೋತ್ತಮತಾಂ ಜಿತಾರೇಃ ॥ ೫೮ ॥

ಸಃ=ಆ; ವಿಶಿಖಃ=ಬಾಣವು; ಕೃಷ್ಣಸ್ಯ=ಕೃಷ್ಣನ; ಚಮೂಂ=ಸೈನ್ಯವನ್ನು; ಹೃಷ್ಟಾಂ=ಆನಂದಿತವನ್ನಾಗಿ; ವಿತನ್ವನ್=ಮಾಡುತ್ತಾ; ದುಷ್ಟಾನ್=ದುಷ್ಟರನ್ನು; ವಿನಷ್ಟಾನ್=ಸತ್ತವರನ್ನಾಗಿ; ವಿಧಾಯ=ಮಾಡಿ; ವ್ಯೋಮ=ಆಕಾಶದಲ್ಲಿ; ಚರೈಃ=ಸಂಚರಿಸುವ; ಸುರೈಃ=ದೇವತೆಗಳಿಂದ; ತುಷ್ಟಃ=ಹೊಗಳಲ್ಪಟ್ಟದ್ದಾಗಿ; ಜಿತ=ಗೆದ್ದ; ಅರೇಃ=ಶತ್ರುಗಳುಳ್ಳ; ಮುರಾರೇಃ=ಕೃಷ್ಣನ; ಉತ್ತಮತಾಂ=ಸರ್ವೋತ್ತಮತ್ವವನ್ನು; ಸ್ಪಷ್ಟೀಚಕಾರ=ತಿಳಿಸಿತು.

ಈ ಬಾಣಗಳು ದುಷ್ಟರನ್ನು ಚೆನ್ನಾಗಿ ಬಡಿಯಿತು. ಕೃಷ್ಣನ ಸೈನಿಕರನ್ನು ಸಂತೋಷಗೊಳಿಸಿತು. ಆಗ ಆಕಾಶದಲ್ಲಿ ದೇವತೆಗಳು ಈ ಬಾಣಗಳನ್ನು ಹೊಗಳಿದರು. ಜರಾಸಂಧನು ಶಿವಭಕ್ತನು. ಈ ಜರಾಸಂಧನಿಗೆ ಬಾಣವು ಸೋಲುಣಿಸಿತು. ಕೃಷ್ಣನಿಗೆ ಜಯವನ್ನು ಒದಗಿಸಿತು. ಶಿವನಿಗಿಂತ ಕೃಷ್ಣನು ಉತ್ತಮನೆಂದು ತಿಳಿಸಿತು. ಶಿವನು ಎಲ್ಲರಿಗಿಂತಲೂ ಉತ್ತಮನು ಎಂದು ಶೈವರು ಹೇಳುತ್ತಾರೆ. ಅಂತಹ ಶಿವನಿಗಿಂತಲೂ ಕೃಷ್ಣನು ದೊಡ್ಡವನಾದ್ದರಿಂದ ಹರಿಯು ಸರ್ವೋತ್ತಮನೆಂದು ಶೈವರೂ ಒಪ್ಪಿದಂತಾಯಿತು.

ಆಚಾರ್ಯಮಧ್ವರೂ ಅನ್ಯಮತೀಯರನ್ನು ಸೋಲಿಸಿದರು. ಇದರಿಂದ ವೈಷ್ಣವರಿಗೆ ಬಹಳ ಆನಂದವಾಯಿತು. ಆಕಾಶದಲ್ಲಿ ದೇವತೆಗಳು ಆನಂದತೀರ್ಥರ ವಾದಶೈಲಿಯನ್ನು ಕಂಡು ಚೆನ್ನಾಗಿ ಹೊಗಳಿದರು. ದೇವರ ಸರ್ವೋತ್ತಮತ್ವವನ್ನು ಇಡೀ ಜಗತ್ತಿನ ಸಾತ್ವಿಕರಿಗೆ ಸಾರಿದರು.

ಪೌರಾಣಿಕಂ ವಾಕ್ಯಮಿವೋಗ್ರಸೇನ-
ಮಗ್ರೇ ಜರಾಸೂನುರಸೌ ಜಹಾಸ ।
ಜೀವೇಶಯೋರ್ಭೇದಮಿವಾತ್ಮಯುಕ್ತ್ಯಾ
ಭೇದಂ ಸ ಚಾಸಾದಯದಸ್ಯ ಚಾಪೇ ॥ ೫೯ ॥

ಅಸೌ=ಈ; ಜರಾಸೂನುಃ=ಜರಾಸಂಧನು; ಅಗ್ರೇ=ಮುಂದೆ; ಉಗ್ರಸೇನಂ=ಉಗ್ರಸೇನನನ್ನು; ಪೌರಾಣಿಕಂ=ಪುರಾಣದ; ವಾಕ್ಯಮಿವ=ವಾಕ್ಯದಂತೆ; ಜಹಾಸ=ತಮಾಷೆ ಮಾಡಿದನು; ಸ ಚ=ಉಗ್ರಸೇನನಾದರೂ; ಆತ್ಮ=ತನ್ನ; ಯುಕ್ತ್ಯಾ=ಯುಕ್ತಿಯಿಂದ; ಜೀವ=ಜೀವನಿಗೆ; ಈಶಯೋಃ=ಈಶನಿಗೂ; ಭೇದಂ ಇವ=ಭೇದದಂತೆ; ಅಸ್ಯ=ಜರಾಸಂಧನ; ಚಾಪೇ=ಧನುಸ್ಸಿನಲ್ಲಿ; ಭೇದಂ=ಭೇದವನ್ನು; ಆಸಾದಯತ್=ಉಂಟು ಮಾಡಿದನು.

ಈ ಜರಾಸಂಧನನ್ನು ಅವಮಾನಿಸಲು ಕೃಷ್ಣನು ತನ್ನ ಸೈನ್ಯದ ಮುಂಭಾಗದಲ್ಲಿ ವೃದ್ಧನಾದ ಉಗ್ರಸೇನನನ್ನು ಇಟ್ಟಿದ್ದನು. ಇದರಿಂದ ಜರಾಸಂಧನು ಬಹಳ ಸಿಟ್ಟಾದನು. ಸಿಟ್ಟಿನ ರಭಸದಲ್ಲಿ ಉಗ್ರಸೇನನನ್ನು ಬಹಳವಾಗಿ ನಿಂದಿಸಿದನು. ಉಗ್ರಸೇನ, ನೀನು ಮುದಿಯಾದ ಆಡಿನಂತೆ ಇದ್ದಿ. ನಾನು ಸಿಂಹದಂತೆ ಇದ್ದೇನೆ. ಸಿಂಹದ ಮುಂದೆ ಸಿಂಹವೇ ಬರಬೇಕು ಹೊರತು ಮೋಸಗಾರ ನರಿಯಲ್ಲ ಎಂದು. ಜರಾಸಂಧನ ಮಾತಿನಿಂದ ಕ್ರುದ್ಧನಾದ ಉಗ್ರಸೇನನು ಬಿಲ್ಲಿಗೆ ಬಾಣವನ್ನು ಜೋಡಿಸಿದನು. ಜರಾಸಂಧನ ಧನುಸ್ಸನ್ನು ತುಂಡುಮಾಡಿದನು.

ಈ ದೃಶ್ಯವು ಐಕ್ಯವಾದಿ ಭೇದವಾದಿಗಳ ಚರ್ಚೆಯಂತೆ ಇತ್ತು.

**ಗುಣೋಜ್ಝಿತಂ ಶ್ರೀರಮಣಂ ವಿಧಾತುಂ**<br>
**ಶರೋಽರಿವರ್ಗಂ ಯತಮಾನಮಾಶು ।**<br>
**ಗುಣೈರ್ವಿಹೀನಂ ವಿರಚಯ್ಯ ಕೃಷ್ಣ–**<br>
**ಮನಂತಸಚ್ಚಿಂತ್ಯಗುಣಂ ವಿತೇನೇ** ॥ ೬೦ ॥

ಶರ=ಬಾಣವು; ಶ್ರೀ=ರಮೆಯ; ರಮಣಂ=ಪತಿಯಾದ ಕೃಷ್ಣನನ್ನು; ಗುಣ=ಗುಣ ಗಳಿಂದ; ಉಜ್ಝಿತಂ=ರಹಿತನನ್ನಾಗಿ; ವಿಧಾತುಂ=ಮಾಡಲು; ಯತಮಾನಂ=ಪ್ರಯತ್ನಿಸುವ; ಅರಿ=ಶತ್ರುಗಳ; ವರ್ಗಂ=ಸಮೂಹವನ್ನು; ಆಶು=ಕೂಡಲೇ; ಗುಣೈಃ=ಗುಣಗಳಿಂದ; ವಿಹೀನಂ=ರಹಿತನನ್ನಾಗಿ; ವಿರಚಯ್ಯ=ಮಾಡಿ; ಕೃಷ್ಣಂ=ಕೃಷ್ಣನನ್ನು; ಅನಂತ=ಬಹಳ; ಸಚ್ಚಿಂತ್ಯ=ಎಣಿಸಲು ಯೋಗ್ಯವಾದ; ಗುಣಂ=ಗುಣವುಳ್ಳವನನ್ನಾಗಿ; ವಿತೇನೇ=ಮಾಡಿತು.

ಗುಣ ಎಂಬ ಶಬ್ದವು ಒಳ್ಳೆಯ ಧರ್ಮಗಳು ಹಾಗೂ ಹಗ್ಗ ಎಂಬ ಎರಡು ಅರ್ಥಗಳಲ್ಲೂ ಇವೆ. ಬಾಣಕ್ಕೂ ಮಧ್ವರಿಗೂ ಪುನಃ ಹೋಲಿಕೆಯನ್ನು ಈ ಶ್ಲೋಕದಲ್ಲಿ ಮುಂದುವರಿಸುತ್ತಾರೆ. ಧನುಸ್ಸಿನ ಹಗ್ಗವು ತುಂಡಾದರೆ ಅನಂತರ ಯುದ್ಧಮಾಡಲು ಸಾಧ್ಯವಿಲ್ಲ. ಆಗ ವ್ಯಕ್ತಿಯು ಸೋತಂತೆ. ಜರಾಸಂಧನ ಸೈನಿಕರು ಕೃಷ್ಣನನ್ನು ಸೋಲಿಸುವ ಸಲುವಾಗಿ ಆತನ ಧನುಸ್ಸಿನ ಹಗ್ಗವನ್ನು ತುಂಡುಮಾಡಲು ಪ್ರಯತ್ನಿಸುತ್ತಿದ್ದರು. ಆದರೆ ಕೃಷ್ಣನು ಪ್ರಯೋಗಿಸಿದ ಬಾಣವು ಮೊದಲೇ ತಾನು ಅವರ ಧನುಸ್ಸಿನ ಹಗ್ಗವನ್ನು ತುಂಡುಮಾಡುತ್ತಿತ್ತು. ಇದರಿಂದ ಅವರು ಬಾಣಗಳನ್ನು ಪ್ರಯೋಗಿಸಲೇ ಅಸಮರ್ಥರಾಗುತ್ತಿದ್ದರು. ಇದರಿಂದ ಕೃಷ್ಣನ ಪರಾಕ್ರಮವು ಅದ್ಭುತವಾಗಿ ಎದ್ದುಕಾಣುತ್ತಿತ್ತು.

ಆಚಾರ್ಯಮಧ್ವರ ಪರವಾಗಿ ಅರ್ಥ– ಮಾಯಾವಾದಿಗಳು ದುರ್ಬಲ ಶ್ರುತಿಗಳನ್ನು ಉದಾಹರಿಸಿ ದೇವರಿಗೆ ನಿರ್ಗುಣತ್ವವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದರು. "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತ್ಯಾದಿ ಶ್ರುತಿಗಳೇ ಅವರಿಗೆ ಆಧಾರ. ದೇವರಲ್ಲಿ ಯಾವುದೇ ಗುಣಗಳು ಇಲ್ಲ ಎಂದು ಹೇಳುವುದೇ ಅವರ ಗುರಿ. ಇಂತಹವರು

ಮಧ್ವರ ಮುಂದೆ ಬಂದರು. ತಮ್ಮ ವಾದಶೈಲಿಯನ್ನು ಆರಂಭಿಸಿದರು. ಆಗ ಮಧ್ವರು "ದೇವರು ನಿರ್ಗುಣ" ಎಂದು ಹೇಳಬೇಡಿ. ಇದರಿಂದ ನೀವೇ ನಿರ್ಗುಣರಾಗುತ್ತೀರಿ. ನೀವು ವೇದಗಳನ್ನು ಉದಾಹರಿಸಿ ಹೇಳುವವರು. ವೇದಕ್ಕೆ ಅರ್ಥ ಮಾಡಬೇಕಾದರೆ ವ್ಯಕ್ತಿಯಲ್ಲಿ ಕೆಲವು ಗುಣಗಳು ಇರಬೇಕು– ಷಡಂಗಗಳ ಅಧ್ಯಯನ, ದುರಾಗ್ರಹ ಇಲ್ಲದಿರುವುದು ಇತ್ಯಾದಿ. ನೀವು ವೇದಕ್ಕೆ ಅರ್ಥ ಹೇಳುವುದನ್ನು ನೋಡುವಾಗ ನಿಮ್ಮಲ್ಲಿ ಈ ಗುಣಗಳ ಕೊರತೆ ಎದ್ದುಕಾಣುವುದು ಎಂದರು. ಈ ರೀತಿ ಮಾಯಾವಾದಿಗಳು ವೇದಗಳ ಮೂಲಕ ದೇವರಿಗೆ ನಿರ್ಗುಣತ್ವವನ್ನು ಹೇಳಲು ಹೋಗಿ ತಾವೇ ಅಧ್ಯಯನಾದಿ ಗುಣಹೀನರು ಎಂದಾಯಿತು. ಅನಂತರ ಮಧ್ವರು ಶಾಸ್ತ್ರೀಯ ಕ್ರಮದಿಂದ ವೇದಗಳಿಗೆ ಅರ್ಥಮಾಡಿ ದೇವರು ಅನಂತಗುಣಪೂರ್ಣ ಎಂದ ಸಾಧಿಸಿದರು.

**ಅಂಧಾನಾಮಪಿ ಕೃಷ್ಣಸದ್ಗುಣಮಣಿಂ ಸಂದರ್ಶಯಿತ್ವಾ ಜಗತ್–**
**ವಂದ್ಯಾಂ ಕೀರ್ತಿವಧೂಂ ಪರಾನಲಸಮಾಂ ಸಂಧಾಯ ಲೋಕತ್ರಯೇ ।**
**ಸಾಂದ್ರೇ ರಕ್ತಜಲೇ ಚ ರತ್ನದೃಷದಾಂ ವೃಂದಂ ಚ ಸಂಪ್ಲಾವಯನ್**
**ಛಂದೋಽನ್ವರ್ಥಮಲಂ ಸಮರ್ಥಸುಧಿಯಾಂ ಸಂದೇಹಮಾಶ್ವಚ್ಛಿನತ್ ॥ ೬೧ ॥**

ಅಂಧಾನಾಂ ಅಪಿ=ಕುರುಡರಿಗೂ; ಕೃಷ್ಣ=ಕೃಷ್ಣನ; ಸದ್ಗುಣ=ಒಳ್ಳೆಯ ಗುಣಗಳೆಂಬ; ಮಣಿಂ=ಮಣಿಯನ್ನು; ಸಂದರ್ಶಯಿತ್ವಾ=ತೋರಿಸಿ; ಜಗತ್=ಲೋಕದಿಂದ; ವಂದ್ಯಾಂ= ನಮಸ್ಕರಿಸಲ್ಪಡುವ; ಪರ=ಶತ್ರುಗಳಿಗೆ; ಅನಲ=ಬೆಂಕಿಗೆ; ಸಮಾಂ=ಸಮಾನವಾದ; ಕೀರ್ತಿ=ಕೀರ್ತಿ ಎಂಬ; ವಧೂಂ=ಕನ್ಯೆಯನ್ನು; ಲೋಕ=ಲೋಕಗಳ; ತ್ರಯೇ=ಮೂರರಲ್ಲಿ; ಸಂಧಾಯ=ಇಟ್ಟು; ಸಾಂದ್ರೇ=ನಿಬಿಡವಾದ; ರಕ್ತ=ನೆತ್ತರೆಂಬ; ಜಲೇ=ನೀರಿನಲ್ಲಿ; ಚ ರತ್ನ= ನವರತ್ನಗಳೆಂಬ; ದೃಷದಾಂ=ಕಲ್ಲುಗಳ; ವೃಂದಂ=ಸಮೂಹವನ್ನು; ಚ ಸಂಪ್ಲಾವಯನ್= ತೇಲಿಸುತ್ತಾ; ಸಃ=ಆ ಬಾಣವು; ಛಂದಃ=ವೇದವನ್ನು; ಅನ್ವರ್ಥಂ=ಸರಿಯಾದ ಅರ್ಥವುಳ್ಳದ್ದನ್ನಾಗಿ; ಅಲಂ=ಚೆನ್ನಾಗಿ; ಸಮರ್ಥ=ಸಾಧಿಸಿ; ಸುಧಿಯಾಂ=ಸಜ್ಜನರ; ಸಂದೇಹಂ= ಸಂಶಯವನ್ನು; ಆಶು=ಕೂಡಲೇ; ಅಚ್ಛಿನತ್=ಕತ್ತರಿಸಿತು.

ಈಗ ಯುದ್ಧಭೂಮಿಯ ವರ್ಣನೆ. ಹಾಗೆಯೇ ಕೆಲವು ವಿಷಯದಲ್ಲಿ ವೇದಗಳಿಗೆ ಪ್ರಾಮಾಣ್ಯ ಸಮರ್ಥನೆ. ವೇದದಲ್ಲಿ "ಅಂಧಃ ಮಣಿಂ ಅವಿಂದತ್", ಕುರುಡನು ಮಣಿಯನ್ನು ಹೊಂದಿದನು ಎಂದು ಇದೆ. ಮೇಲ್ನೋಟಕ್ಕೆ ಇಲ್ಲಿ ವಿರೋಧ ತೋರುತ್ತದೆ. ಕುರುಡನು ಏನು ಮಾಡಲೂ ಅಸಮರ್ಥನು. ಹೀಗಿರುವಾಗ ವೇದದ ಈ ಮಾತು ಅಸಮಂಜಸವಾಗಿ ತೋರುತ್ತದೆ. ವಿರೋಧದ ಪರಿಹಾರ ಈ ರೀತಿ ಇದೆ. ಕುರುಡರು ಅಂದರೆ ಬಾಹ್ಯ ಕಣ್ಣು ಇಲ್ಲದವರು ಎಂದು ಅರ್ಥ ಅಲ್ಲ. ಒಳಗಣ್ಣು ಇಲ್ಲದವರು, ಅಸಂಸ್ಕೃತರು, ದೇವರ ಬಗ್ಗೆ ತಿಳುವಳಿಕೆ ಇಲ್ಲದವರು ಎಂದು ಅರ್ಥ. ಇಂತಹ ಮಂದಿಯೂ ಈ ಯುದ್ಧವನ್ನು ನೋಡುತ್ತಿದ್ದರು. ಕೃಷ್ಣನ ಈ ಬಾಣಗಳು ಶತ್ರುಗಳನ್ನು ಮರ್ದಿಸುವ

ಕ್ರಮ, ಇದರಿಂದ ಕೃಷ್ಣನ ಪರಾಕ್ರಮ, ಇವುಗಳನ್ನೆಲ್ಲಾ ತಿಳಿದುಕೊಂಡರು. ಮಣಿಗಳೆಂದರೆ ದೇವರ ಶಕ್ತ್ಯಾದಿಗಳು ಎಂದರ್ಥ. ಜಾತಿಯ ನವರತ್ನಗಳು ಪ್ರಕಾಶಿಸುತ್ತವೆ. ಕೃಷ್ಣನ ಕೀರ್ತಿಗಳೂ ಚೆನ್ನಾಗಿ ಬೆಳಗುತ್ತಿವೆ. ಆದ್ದರಿಂದ ಮಣಿಯ ಹೋಲಿಕೆ. ಈಗ ಯಾವ ವಿರೋಧವೂ ಇಲ್ಲ.

'ಯೋಷಿತಂ ಅಗ್ನಿಂ ಧ್ಯಾಯೀತ" ಹೆಣ್ಣನ್ನು ಬೆಂಕಿಯನ್ನಾಗಿ ತಿಳಿ ಎಂಬ ಇನ್ನೊಂದು ಮಾತು ವೇದದಲ್ಲಿ ಇದೆ. ಹೆಣ್ಣು ಬೆಂಕಿಯಾಗಲು ಹೇಗೆ ಸಾಧ್ಯ. ಹೆಣ್ಣು ಚೇತನ. ಬೆಂಕಿ ಜಡ. ಜಡಚೇತನಗಳಿಗೆ ಐಕ್ಯ ವಿರುದ್ಧ. ಪರಿಹಾರ ಈ ರೀತಿ ಇದೆ. ಹೆಣ್ಣು ಅಂದರೆ ಹೆಣ್ಣು ಎಂದೇ ಅರ್ಥ ಅಲ್ಲ. ಕೃಷ್ಣನ ಕೀರ್ತಿಯೇ ಒಂದು ಹೆಣ್ಣು. ಕೀರ್ತಿ ಶಬ್ದವು ಸ್ತ್ರೀಲಿಂಗವಾದ್ದರಿಂದ ಹೆಣ್ಣಿಗೆ ಹೋಲಿಕೆ. ಚಂದದ ಹೆಣ್ಣನ್ನು ಎಲ್ಲರೂ ಬೆನ್ನುಹತ್ತುತ್ತಾರೆ. ಕೃಷ್ಣನದ್ದು ಸತ್‌ಕೀರ್ತಿ –ಒಳ್ಳೆಯ ಕೀರ್ತಿ. ಕೆಟ್ಟ ಕೀರ್ತಿ ಅಲ್ಲ. ಆದ್ದರಿಂದ ಎಲ್ಲರಿಂದಲೂ ಆವೃತವಾಗಿದೆ. ಆದರೆ ದುಷ್ಟರು ಈ ಕೀರ್ತಿಯಿಂದ ಬಹಳ ತಪಿಸುತ್ತಾರೆ, ಬೆಂಕಿಯು ತಾಪ ಕೊಡುವಂತೆ. ಆದ್ದರಿಂದ ಬೆಂಕಿ ಎಂದೇ ಹೇಳಿದ್ದಾರೆ. ಆದ್ದರಿಂದ ಈ ಶ್ರುತಿಗೆ ನಾರಿಯನ್ನು ಬೆಂಕಿಯೆಂದೇ ತಿಳಿಯಬೇಕು ಎಂದು ಅರ್ಥ ಹೇಳದೆ ಬೆಂಕಿಯಂತೆ ಎಂದು ಅರ್ಥವನ್ನು ಹೇಳಬೇಕು. ಈಗ ವಿರೋಧ ಇಲ್ಲ.

'ಗ್ರಾವಾಣಃ ಪ್ಲವಂತೇ' ಕಲ್ಲುಗಳು ತೇಲುತ್ತವೆ ಎಂಬ ಇನ್ನೊಂದು ಮಾತು. ಕಲ್ಲುಗಳು ಎಂದೂ ತೇಲಿಕೊಂಡು ಹೋಗುವುದಿಲ್ಲ. ವೇದದ ಈ ಮಾತು ಪ್ರತ್ಯಕ್ಷ ವಿರುದ್ಧ. ಇದರಿಂದ ಇಡೀ ವೇದವೇ ಅಪ್ರಮಾಣ ಎಂಬ ಶಂಕೆ ಮೂಡುತ್ತದೆ.

ಪರಿಹಾರ– ಯುದ್ಧದಲ್ಲಿ ಕೃಷ್ಣನ ಬಾಣಗಳು ಶತ್ರುಗಳ ತಲೆಯನ್ನು ಒಂದೇ ಸವನೆ ಉರುಳಿಸುತ್ತಿದ್ದವು. ನದಿಯ ಪ್ರವಾಹದಂತೆ ರಕ್ತವು ರಭಸವಾಗಿ ಹರಿಯುತ್ತಿತ್ತು. ರಾಜರುಗಳು ಧರಿಸಿದ ರತ್ನಖಚಿತವಾದ ಆಭರಣಗಳು ಆ ರಕ್ತದ ಮಡುವಿನಲ್ಲಿ ಬಿದ್ದಿದ್ದವು. ಬಾಣಗಳು ಬೀಳಿಸಿದ ಸೈನಿಕರ ಹೆಣಗಳಲ್ಲಿ ಕಟ್ಟಿದ ಆಭರಣಗಳು ಹಾಗೆಯೇ ಇದ್ದವು. ರಕ್ತದ ಪ್ರವಾಹದಲ್ಲಿ ಹೆಣಗಳು ತೇಲಿಕೊಂಡು ಹೋಗುತ್ತಿದ್ದವು. ಹೆಣಗಳಲ್ಲಿದ್ದ ಆಭರಣಗಳೂ ತೇಲುತ್ತಿದ್ದವು ಎಂದು ಅರ್ಥ ಹೊರತು ನವರತ್ನಗಳೇ ತೇಲುತ್ತಿದ್ದವು ಎಂದಲ್ಲ. ಈ ರೀತಿ ವಿರೋಧ ಪರಿಹಾರವಾಯಿತು.

ಈ ಎಲ್ಲಾ ರೀತಿಯ ವಿರೋಧಗಳನ್ನು ಪರಿಹರಿಸಿದ್ದು ಈ ಬಾಣಗಳು. ಸಾತ್ವಿಕರು ಇಂತಹ ವಿರುದ್ಧ ವೇದಮಾತುಗಳಿಂದ ಬಹಳ ಕಂಗಾಲಾಗಿದ್ದರು. ಬಾಣಗಳು ವಿರೋಧವನ್ನು ಪರಿಹರಿಸಿ ಸಜ್ಜನರಿಗೆ ಸಮಾಧಾನವನ್ನು ಒದಗಿಸಿತು.

ಮಧ್ವರೂ ಇದೇ ಕೆಲಸವನ್ನು ಮಾಡಿದ್ದಾರೆ. ಬೌದ್ಧರು ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳಿದರು. ಕಾರಣ– ವೇದದಲ್ಲಿ ತೋರಿದ ಈ ರೀತಿಯಾದ ವಿರೋಧ. ಮಧ್ವರು ಆ

ವಿರೋಧಗಳನ್ನು ಪರಿಹರಿಸಿದರು. ವೇದಗಳಿಗೆ ಪ್ರಾಮಾಣ್ಯವನ್ನು ಸಾಧಿಸಿದರು. ಇದರಿಂದ ಸಜ್ಜನರು ನಿರಾಳರಾದರು.

**ಶಸ್ತ್ರಾಸ್ತ್ರಪ್ರಕರೇಷು ಶಾರ್ಙ್ಗಧರತೋ ಭೇದಂ ದ್ವಿಪಾಶ್ವದ್ವಿಪ-**
**ದ್ವರ್ಗೇಷ್ವಾತ್ತಶರಾಸನಾತ್ ಮುರಭಿದೋ ನಿರ್ಭಿನ್ನಗಾತ್ರೇಷು ಚ ।**
**ಮೃತ್ಯೋರ್ಲೋಕಮಿತೇಷು ತಂ ಸ್ವಜನತಃ ಕಾಯಾನ್ಮಿಥಃ ಖಂಡಿತೇ**
**ಹಸ್ತಾದೌ ಯುಧಿ ಸಾಧಯನ್ ಸ ವಿದಧೇ ವ್ಯಕ್ತಂ ಭಿದಾಂ ಪಂಚಕಮ್ ॥ ೬೨ ॥**

ಸಃ=ಆ ಬಾಣವು; ಯುಧಿ=ಯುದ್ಧದಲ್ಲಿ; ಶಸ್ತ್ರ=ಆಯುಧಗಳು; ಅಸ್ತ್ರ=ಮಂತ್ರಗಳು; ಇವುಗಳ ಪ್ರಕರೇಷು=ಸಮೂಹಗಳಲ್ಲಿ; ಶಾರ್ಙ್ಗ=ಶಾರ್ಙ್ಗಧನುಸ್ಸನ್ನು; ಧರಾತ್=ಧರಿಸಿರುವ ಕೃಷ್ಣನಿಂದ; ಭೇದಂ=ಭೇದಗಳು; ದ್ವಿಪ=ಆನೆಗಳು; ಅಶ್ವ=ಕುದುರೆಗಳು; ದ್ವಿಪತ್=ಕಾಲಾಳುಗಳು ಇವುಗಳ; ವರ್ಗೇಷು=ಸಮೂಹಗಳಲ್ಲಿ; ಆತ್ತ=ಸ್ವೀಕರಿಸಿದ; ಶರ=ಬಾಣದ; ಆಸನಾತ್=ಆಸನವಾದ ಬಿಲ್ಲುಳ್ಳ; ಮುರ=ಮುರನನ್ನು; ಭಿದಃ=ನಾಶಮಾಡಿದ ಕೃಷ್ಣನಿಂದ; ಭೇದಂ=ಭೇದವನ್ನು; ನಿರ್ಭಿನ್ನ=ನಷ್ಟವಾದ; ಗಾತ್ರೇಷು ಚ=ದೇಹಗಳಲ್ಲಿಯೂ; ಮೃತ್ಯೋಃ=ಮೃತ್ಯುವಿನ; ಲೋಕಂ=ಲೋಕವನ್ನು; ಇತೇಷು=ಹೊಂದಿದವರಲ್ಲಿ; ಸ್ವಜನತಃ=ತನ್ನ ಜನರಿಂದ; ಕಾಯಾತ್=ಶರೀರದಿಂದ; ಮಿಥಃ=ಪರಸ್ಪರ; ಖಂಡಿತೇ=ತುಂಡಾದ; ಹಸ್ತಾದೌ ಚ=ಕೈಗಳಲ್ಲಿಯೂ; ತಂ=ಭೇದವನ್ನು; ಸಾಧಯನ್=ಸಾಧಿಸುತ್ತಾ; ಭಿದಾಂ=ಭೇದಗಳ; ಪಂಚಕಂ=ಐದನ್ನು; ವ್ಯಕ್ತಂ=ಸ್ಪಷ್ಟವನ್ನಾಗಿ; ವಿದಧೇ=ಮಾಡಿತು.

ಮಧ್ವಸಿದ್ಧಾಂತದ ಎಲ್ಲಾ ವಿಚಾರಗಳೂ ಅನುಭವಕ್ಕೆ ಬರತಕ್ಕವುಗಳು. ಪಂಚಭೇದಗಳಂತೂ ಕುರಿಕಾಯುವವರಿಗೆ ತಿಳಿದಿದೆ. ಇತರ ಮತಾಚಾರ್ಯರಿಗೆ ತಿಳಿದಿಲ್ಲ ಎನ್ನುವುದು ಆಶ್ಚರ್ಯದ ಸಂಗತಿ.

ಅಂತಹ ಪಂಚಭೇದಗಳನ್ನು ಕೃಷ್ಣನ ಬಾಣವು ಮತ್ತು ಮಧ್ವರು ತಿಳಿಸುತ್ತಾರೆಂದು ಶ್ರೀ ವಾದಿರಾಜರು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಭೇದ ಎಂಬ ಶಬ್ದವು ಸೀಳುವಿಕೆ ಹಾಗೂ ಅನ್ಯೋನ್ಯಾಭಾವ ಎಂಬ ಎರಡು ಅರ್ಥದಲ್ಲಿ ಇದೆ. ಕೃಷ್ಣನು ಬಿಟ್ಟ ಬಾಣವು ಶತ್ರುಪಾಳಯದ ಆಯುಧಾದಿಗಳಲ್ಲಿ ಭೇದಭೇದವನ್ನು ಉಂಟುಮಾಡಿತು. ಆಯುಧಾದಿಗಳು ಜಡಗಳು. ಇವುಗಳಲ್ಲಿ ಭೇದವನ್ನು ಉಂಟುಮಾಡಿದ್ದು ಬಾಣವು. ಬಾಣವನ್ನು ಪ್ರಯೋಗಿಸಿದವನು ಕೃಷ್ಣನು. ಆದ್ದರಿಂದ ಕೃಷ್ಣನಿಂದ ಭೇದವು ಜಡಗಳಲ್ಲಿ ಆಯಿತು. ಐದು ರೀತಿಯ ಭೇದಗಳಲ್ಲಿ ಇದು ಒಂದು –ಈಶನಿಗೂ ಜಡಕ್ಕೂ ಭೇದ.

ಹಾಗೆಯೇ ಆನೆ, ಕುದುರೆ, ಕಾಲಾಳುಗಳಲ್ಲಿಯೂ ಕೃಷ್ಣನ ಬಾಣವು ಭೇದ ಭೇದಾದಿಗಳನ್ನು ಉಂಟುಮಾಡಿತು. ಆನೆ ಮೊದಲಾದವುಗಳು ಜೀವರುಗಳು. ಕೃಷ್ಣನಿಂದ ಇವುಗಳಲ್ಲಿ ಭೇದವನ್ನು ಬಾಣವು ಮಾಡಿತು. ಇದು ಎರಡನೆಯ ಭೇದ– ಈಶ,

ಜೀವಭೇದ. ಕೃಷ್ಣನ ಬಾಣದಿಂದ ಶತ್ರುಪಾಳಯದವರು ಯುದ್ಧದಲ್ಲಿ ದೇಹವನ್ನು ಬಿಟ್ಟು ಸ್ವರ್ಗಸ್ಥರಾದರು. ಈ ಬಾಣವು ದೇಹಕ್ಕೂ ಚೇತನಕ್ಕೂ ಭೇದವನ್ನು ಅಂದರೆ ವಿಯೋಗವನ್ನು ಉಂಟುಮಾಡಿತು. ದೇಹ ಇಲ್ಲಿಯೇ ಇದೆ. ಚೇತನ ಸ್ವರ್ಗದಲ್ಲಿ. ಇದು ಮೂರನೆಯ ಜಡ-ಜೀವ ಭೇದ. ಯುದ್ಧದಲ್ಲಿ ಬಾಣದಿಂದ ಸತ್ತವರು ಸ್ವರ್ಗದಲ್ಲಿ, ಇವರ ಬಂಧುಗಳು ಇಲ್ಲೇ ಭೂಮಿಯಲ್ಲಿ. ಬಾಣವು ಸೈನಿಕರಿಗೆ ತಮ್ಮ ಬಂಧುಗಳಿಂದ ಭೇದವನ್ನು ಅಂದರೆ ವಿಯೋಗವನ್ನುಂಟುಮಾಡಿತು. ಇದು ನಾಲ್ಕನೆಯ ಜೀವ-ಜೀವ ಭೇದ. ಈ ಬಾಣವು ಶತ್ರುಗಳ ದೇಹಗಳಿಂದ ಅವಯವಗಳನ್ನು ಕತ್ತರಿಸುತ್ತಿತ್ತು. ಅವಯವಗಳನ್ನು ಪುನಃ ಭಿನ್ನಭಿನ್ನಗಳನ್ನಾಗಿ ಮಾಡುತ್ತಿತ್ತು. ಶರೀರವೂ ಒಂದು ಜಡ. ಅವಯವವೂ ಒಂದು ಜಡ. ಇವುಗಳಲ್ಲಿ ಬಾಣವು ಭೇದಭೇದಗಳನ್ನು ಮಾಡಿದ್ದರಿಂದ ಐದನೆಯದಾದ ಜಡ-ಜಡಭೇದವೂ ಸಿದ್ಧವಾಯಿತು. ಮಧ್ವರೂ ತನ್ನ ಪ್ರವಚನಗಳಲ್ಲಿ ಇದನ್ನು ಚೆನ್ನಾಗಿ ಸಾಧಿಸುತ್ತಿದ್ದರು.

**ಅರಿಪ್ರಯುಕ್ತೈರ್ಯುಧಿ ತೈಃ ಶರೌಘೈಃ ಹರಿಪ್ರಿಯಾಸ್ತದ್ಧ್ವಜಿನೀಂ ನಿಜಘ್ನುಃ ।**
**ಸ್ವಪಕ್ಷಮಾಸ್ಥಾಪ್ಯ ಪರೋಕ್ತವಾಕ್ಯೈಃ ವಿಪಕ್ಷಪಕ್ಷಾನಿವ ಮಧ್ವಶಿಷ್ಯಾಃ ॥ ೬೩ ॥**

ಹರಿ=ಕೃಷ್ಣನಿಗೆ; ಪ್ರಿಯಾಃ=ಪ್ರಿಯರಾದ ಸೈನಿಕರು; ಯುಧಿ=ಯುದ್ಧದಲ್ಲಿ; ಅರಿ=ಶತ್ರುಗಳಿಂದ; ಪ್ರಯುಕ್ತೈಃ=ಪ್ರಯೋಗಿಸಲ್ಪಟ್ಟ; ತೈಃ=ಆ; ಶರ=ಬಾಣಗಳ; ಓಘೈಃ=ಸಮೂಹಗಳಿಂದ; ತತ್=ಜರಾಸಂಧನ; ಧ್ವಜಿನೀಂ=ಸೈನ್ಯವನ್ನು; ಮಧ್ವ=ಮಧ್ವರ; ಶಿಷ್ಯಾಃ=ಶಿಷ್ಯರು; ಪರ=ಪರರಿಂದ; ಉಕ್ತ=ಹೇಳಲ್ಪಟ್ಟ; ವಾಕ್ಯೈಃ=ಮಾತುಗಳಿಂದ; ಸ್ವ=ತಮ್ಮ; ಪಕ್ಷಂ=ಪಕ್ಷವನ್ನು; ಆಸ್ಥಾಪ್ಯ=ಸಾಧಿಸಿ; ವಿಪಕ್ಷ=ಪರರ; ಪಕ್ಷಾನ್ ಇವ=ಸಿದ್ಧಾಂತಗಳಂತೆ; ನಿಜಘ್ನುಃ=ನಾಶ ಮಾಡಿದರು.

ಜರಾಸಂಧನ ಸೈನಿಕರು ನಾನಾ ರೀತಿಯ ಆಯುಧಗಳನ್ನು ಕೃಷ್ಣನ ಮೇಲೆ ಪ್ರಯೋಗಿಸಿದರು. ಕೃಷ್ಣನ ಸೈನಿಕರು ಅವರ ಬಾಣಗಳಿಗೆ ತಾವು ಪ್ರತಿಯಾಗಿ ಬಾಣಗಳನ್ನು, ಅವರ ಗದೆಗಳಿಗೆ ತಾವು ಪ್ರತಿಯಾಗಿ ಗದೆಗಳನ್ನು, ಅವರ ಶಕ್ತಿ ಆಯುಧಗಳಿಗೆ ತಾವು ಪ್ರತಿ ಶಕ್ತ್ಯಾಯುಧಗಳನ್ನೇ ಬಳಸುತ್ತಿದ್ದರು. ಆಗ ಜರಾಸಂಧನ ಸೈನಿಕರು ಪ್ರಯೋಗಿಸಿದ ಆಯುಧಗಳು ತಿರುಗಿ ಇವರಿದ್ದಲ್ಲಿಗೆ ಬರುತ್ತಿದ್ದವು. ಇವರನ್ನೇ ಸಂಹರಿಸುತ್ತಿದ್ದವು.

ಇದಕ್ಕೆ ಉದಾಹರಣೆ ಮಧ್ವರ ಶಿಷ್ಯರು. ಮಾಯಾವಾದಿಗಳು 'ಜಗತ್ತು ಸುಳ್ಳು' ಎಂದು ಸಾಧಿಸಲು ಶ್ರುತಿಗಳನ್ನು ಉದಾಹರಿಸುತ್ತಿದ್ದರು. ಮಧ್ವರು ಅವರ ಶ್ರುತಿಗಳನ್ನೇ ಹಿಡಿದುಕೊಂಡು ತಮ್ಮ ಸಿದ್ಧಾಂತವಾದ ಜಗತ್‌ಸತ್ಯತ್ವವನ್ನು ಸಮರ್ಥಿಸುತ್ತಿದ್ದರು. ಜಗತ್‌ಮಿಥ್ಯಾತ್ವಕ್ಕೆ ಈ ಶ್ರುತಿಗಳು ಸಹಕಾರಿ ಆಗುವುದಿಲ್ಲ ಎಂದು ಅವರು ಪ್ರಯೋಗಿಸದ ಶ್ರುತಿಗಳಿಂದ ಅವರಿಗೆ ಬಾಧಕವಾಗುವಂತೆ ಮಾಡುತ್ತಿದ್ದರು.

ಪ್ರಾಣಾಯೋಗಪಲಾಯನಪ್ರಪತನಾಘಾತಾರ್ತಿವಿತ್ತವ್ಯಯ–
ಸ್ವೇದಾಸ್ರೋದಯ ವಕ್ತ್ರನೈಲ್ಯಭಯದುಷ್ಕೀರ್ತ್ಯಾದಿವಿಶ್ವಂ ಯುಧಿ ।
ಸತ್ಯಂ ಶತ್ರುಚಯೇಷು ಚಕ್ರುರಖಿಲಂ ಯದ್ಬ್ರಹ್ಮಸಾಕ್ಷಾತ್ಕೃತೇಃ–
ಲಬ್ಧಂ ತದ್ವಿಪರೀತಮಾತ್ಮಸು ತತಃ ಸಿದ್ಧಂ ಮುರಾರೇರ್ಭಟಾಃ ॥ ೬೪ ॥

ಮುರಾರೇಃ=ಕೃಷ್ಣನ; ಭಟಾಃ=ಸೈನಿಕರು; ಯುಧಿ=ಯುದ್ಧದಲ್ಲಿ; ಬ್ರಹ್ಮ=ದೇವರ; ಸಾಕ್ಷಾತ್‌ಕೃತೇಃ=ಸಾಕ್ಷಾತ್ಕಾರದಿಂದ; ಲಬ್ಧಂ=ಹೊಂದಿದ; ಯತ್=ಯಾವ; ಪ್ರಾಣ=ಪ್ರಾಣಗಳ; ಅಯೋಗ=ವಿಯೋಗವು; ಪಲಾಯನ=ಓಡುವಿಕೆಯು; ಪ್ರಪತನ=ಬೀಳುವಿಕೆಯು; ಆಘಾತ=ಹೊಡೆತವು; ಆರ್ತಿ=ದುಃಖವು; ವಿತ್ತ=ಹಣದ; ವ್ಯಯ=ನಾಶವು; ಸ್ವೇದ=ಬೆವರುವಿಕೆಯು; ಅಸ್ರ=ಕಣ್ಣೀರಿನ; ಉದಯ=ಬರುವಿಕೆಯು; ವಕ್ತ್ರ=ಮುಖದ; ನೈಲ್ಯ=ಕಪ್ಪಿಡುವಿಕೆಯು; ಭಯ=ಭಯವು; ದುಷ್ಕೀರ್ತಿ=ಕೆಟ್ಟ ಕೀರ್ತಿಯು; ಆದಿ=ಮೊದಲಾದ; ವಿಶ್ವಂ=ಜಗತ್ತು; ಅಖಿಲಂ=ಎಲ್ಲವೂ; ಸತ್ಯಂ=ಸತ್ಯ ಎಂದು; ಶತ್ರು=ಶತ್ರುಗಳ; ಚಯೇಷು=ಸಮೂಹದಲ್ಲಿ; ಚಕ್ರುಃ=ಮಾಡಿದರು; ಆತ್ಮಸು=ತಮ್ಮಲ್ಲಿ; ತತಃ=ಸಾಕ್ಷಾತ್ಕಾರ ದಿಂದ; ಸಿದ್ಧಂ=ಸಿದ್ಧವಾದ; ತತ್=ಅದನ್ನು; ವಿಪರೀತಂ=ವ್ಯತ್ಯಸ್ತವನ್ನಾಗಿ; ಚಕ್ರುಃ=ಮಾಡಿದರು.

ಮಾಯಿಗಳು ಈ ಜಗತ್ತು ಬ್ರಹ್ಮಜ್ಞಾನದಿಂದ ನಾಶವಾಗುತ್ತದೆ. ಆದ್ದರಿಂದ ಸುಳ್ಳು ಎನ್ನುತ್ತಾರೆ. ಹಗ್ಗವನ್ನು ಹಾವು ಎಂದು ತಿಳಿದ ವ್ಯಕ್ತಿಗೆ ಹಗ್ಗದ ಜ್ಞಾನಬಂದಾಗ ಹಾವು ಇಲ್ಲವಾಗುತ್ತದೆ. ಅಷ್ಟರ ತನಕ ಕಾಣುತ್ತಿದ್ದ ಹಾವು ಸುಳ್ಳು. ಅದೇ ರೀತಿ ಜಗತ್ತೂ ಕೂಡಾ. ಬ್ರಹ್ಮನ ಜ್ಞಾನ ಬಂದರೂ ಯಾವುದಕ್ಕೆ ನಾಶ ಇಲ್ಲವೋ ಅದು ಸತ್ಯ ಎಂದು ಹೇಳುತ್ತಾರೆ. ಈಗ ಶತ್ರುಗಳಿಗೆ ದೇವರ ದರ್ಶನ ಅಂದರೆ ಕೃಷ್ಣನ ದರ್ಶನ ಆಗಿದೆ. ತಾವು ಸಾಯುವುದನ್ನು, ಓಡುವುದನ್ನು, ಬೀಳುವುದನ್ನು, ಹೊಡೆತವನ್ನು, ದುಃಖವನ್ನು, ಸಂಪತ್ತಿನ ನಾಶವನ್ನು, ಬೆವರನ್ನು, ಕಣ್ಣೀರನ್ನು, ಮುಖ ಕಪ್ಪಿಡುವಿಕೆಯನ್ನು, ಭಯವನ್ನು, ಕೆಟ್ಟ ಕೀರ್ತಿಯನ್ನು ಅನುಭವಿಸುತ್ತಿದ್ದಾರೆ. ಒಂದುವೇಳೆ ಇವೆಲ್ಲಾ ಸುಳ್ಳಾಗಿದ್ದರೆ ದೇವರ ದರ್ಶನದ ಅನಂತರದಲ್ಲಿಯೇ ಇವುಗಳೆಲ್ಲಾ ನಾಶವಾಗಿ ಯಾವುದರ ಅನುಭವವೂ ಬಾರದೆ ಇರಬೇಕಿತ್ತು. ಆದರೂ ಬರುತ್ತಿದೆ. ಆದ್ದರಿಂದ ಸತ್ಯ ಎಂದಾಯಿತು. ಕೃಷ್ಣನ ಸೈನಿಕರಿಗೂ ಕೃಷ್ಣನ ದರ್ಶನ ಆಗಿದೆ. ಇವರು ಶತ್ರುಗಳು ಅನುಭವಿಸಿದ್ದಕ್ಕಿಂತ ವಿರುದ್ಧವಾದ ಆನಂದಾದಿಗಳನ್ನು ಅನುಭವಿಸುತ್ತಿದ್ದಾರೆ. ಆದ್ದರಿಂದ ಆನಂದಾದಿಗಳೂ ದುಃಖಾದಿಗಳಂತೆ ಸತ್ಯ ಎಂದಾಯಿತು. ಈ ರೀತಿ ಕೃಷ್ಣನ ಸೈನಿಕರು ತಾವು ಜಗತ್‌ಸತ್ಯತ್ವಾದಿಗಳನ್ನು ಒಪ್ಪಿದರೂ ಶತ್ರುಗಳಿಂದಲೂ ಒಪ್ಪಿಸಿದರು.

ಮಧ್ವಶಿಷ್ಯರೂ ಕೂಡಾ ತಾವು ಜಗತ್‌ಸತ್ಯತ್ವವನ್ನು ಒಪ್ಪಿದವರಾಗಿ ಮಾಯಿಗಳಿಂದಲೂ ಒಪ್ಪಿಸುತ್ತಾರೆ.

ಈ ರೀತಿಯಾಗಿ ವಾದಿರಾಜರು ಸಮಗ್ರಯುದ್ಧವನ್ನು ಆಧ್ಯಾತ್ಮಿಕವಾಗಿ ಕೂಡಿಸಿದ್ದಾರೆ. ಕೃಷ್ಣನು ನಡೆಸುವ ಪ್ರತಿಯೊಂದು ಕೆಲಸವನ್ನು ಆಧ್ಯಾತ್ಮಿಕವಾಗಿ ಕೂಡಿಸಬೇಕು ಎಂಬ ಸಂದೇಶವನ್ನೂ ಕೊಟ್ಟಿದ್ದಾರೆ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತೋಽಯಮಭೂತ್ ತ್ರಯೋದಶಮಿತಃ ಸರ್ಗೋ ಮುದಾಂ ಸ್ವರ್ಗಿಷು ॥**
**॥ ೬೫ ॥**

**॥ ಇತಿ ತ್ರಯೋದಶಃ ಸರ್ಗಃ ॥**

# ॥ ಚತುರ್ದಶಃ ಸರ್ಗಃ ॥

**ಛತ್ರಂ ಧ್ವಜಂ ಚಾಮರಚರ್ಮವರ್ಮಹಸ್ತ್ಯಶ್ವಪತ್ಯಾದಿಸಮಸ್ತ ವಿತ್ತಮ್ ।**
**ಕೃತ್ವಾ ಸಖಂಡಂ ಯುಧಿ ಕೃಷ್ಣಭೃತ್ಯಾಶ್ಚಕ್ರುರ್ಹ್ಯಖಂಡಾರ್ಥಮವಿದ್ಯಮಾನಮ್ ॥ ೧ ॥**

ಕೃಷ್ಣ=ಕೃಷ್ಣನ; ಭೃತ್ಯಾಃ=ಸೇವಕರು; ಯುಧಿ=ಯುದ್ಧದಲ್ಲಿ; ಛತ್ರಂ=ಕೊಡೆಯನ್ನು; ಧ್ವಜಂ=ಧ್ವಜವನ್ನು; ಚಾಮರ=ಚಾಮರವನ್ನು; ಚರ್ಮ=ಚರ್ಮವನ್ನು; ವರ್ಮ=ಕವಚವನ್ನು; ಹಸ್ತಿ=ಆನೆಯನ್ನು; ಅಶ್ವ=ಕುದುರೆಯನ್ನು; ಪತ್ತಿ=ಕಾಲಾಳುಗಳನ್ನು; ಆದಿ=ಮೊದಲಾದ್ದನ್ನು; ಸಮಸ್ತ=ಎಲ್ಲಾ; ವಿತ್ತಂ=ಸಂಪತ್ತನ್ನು; ಸಖಂಡಂ=ತುಂಡುತುಂಡನ್ನಾಗಿ; ಕೃತ್ವಾ=ಮಾಡಿ; ಅಖಂಡ=ಭಾಗ್ಯ ಇಲ್ಲದ; ಅರ್ಥಂ=ವಸ್ತುವನ್ನು; ಅವಿದ್ಯಮಾನಂ=ಇಲ್ಲದ್ದನ್ನಾಗಿ; ಚಕ್ರುಃ= ಮಾಡಿದರು.

ಮಾಯಾವಾದಿಗಳು ತಮ್ಮ ಸಿದ್ಧಾಂತದಲ್ಲಿ ಭಾಗಗಳಿಲ್ಲದ ಅಂದರೆ ಅವಯವಗಳಿಲ್ಲದ ವಸ್ತು ಇದೆ ಎಂದು ಹೇಳುತ್ತಾರೆ. ಯದ್ಯಪಿ ಇದು ಅನುಭವವಿರುದ್ಧ. ಯಾಕೆಂದರೆ ಒಂದು ವಸ್ತು ಎಂದರೆ ಅದಕ್ಕೆ ಹತ್ತು ದಿಕ್ಕುಗಳ ಸಂಬಂಧ ಆಗಲೇಬೇಕು. ಈ ಸಂಬಂಧ ಒಂದೇ ಕಡೆ ಆಗಲು ಸಾಧ್ಯವಿಲ್ಲ. ಆದ್ದರಿಂದ ಹತ್ತುಭಾಗಗಳನ್ನು ಒಪ್ಪಲೇಬೇಕು. ಮುಖ್ಯವಾಗಿ ಅವರು ತಮ್ಮ ಬ್ರಹ್ಮನನ್ನು 'ನಿರವಯವಿ' ಅಂದರೆ ಯಾವುದೇ ಭಾಗಗಳು ಇಲ್ಲದವ ಎನ್ನುತ್ತಾರೆ. ವಸ್ತು ಇದೆ ಎನ್ನುವುದು; ಅದಕ್ಕೆ ಭಾಗಗಳಿಲ್ಲ ಎನ್ನುವುದು ಇದು ಪರಸ್ಪರ ವಿರುದ್ಧವಾದ ಮಾತು.

ಯುದ್ಧದಲ್ಲಿ ಛತ್ರವೇ ಮೊದಲಾದ ಅನೇಕ ಅಸ್ತ್ರಗಳನ್ನು ಬಳಸುತ್ತಾರೆ. ಜರಾಸಂಧನ ಸೈನಿಕರೂ ಬಳಸಿದ್ದಾರೆ. ಇವುಗಳನ್ನೆಲ್ಲಾ ಕೃಷ್ಣನ ಸೈನಿಕರು ಖಂಡತುಂಡಗಳನ್ನಾಗಿ ಮಾಡಿದರು. ಸಖಂಡಗಳನ್ನಾಗಿ ಮಾಡಿದರು. ಮಾಯಿಗಳು ವಸ್ತುವನ್ನು ಅಖಂಡ ಎಂಬ ಶಬ್ದದಿಂದ ಕರೆಯುತ್ತಾರೆ. ಕೃಷ್ಣನ ಸೈನಿಕರು, ಎಲ್ಲವೂ ಸಖಂಡವೇ ಇರುವುದು. ಅಖಂಡವಾದ ವಸ್ತುವೇ ಇಲ್ಲ ಎಂದು ಯುದ್ಧದಲ್ಲಿ ತೋರಿಸಿಕೊಟ್ಟರು.

ಮಧ್ವರ ಶಿಷ್ಯರೂ ಕೂಡಾ ಇದೇ ರೀತಿ ಮಾಯಾವಾದಿಗಳ ಜೊತೆ ಚರ್ಚೆ ಮಾಡಿ ಅಖಂಡವಾದ ವಸ್ತುವೇ ಇಲ್ಲ ಎಂದು ಸಮರ್ಥಿಸುತ್ತಾರೆ.

**ಸಂಗ್ರಾಮಕೌಶಲ್ಯಚಿದುಜ್ಝಿತಾನಾಂ ಭಂಗಂ ಸಮಾಲಿಂಗ್ಯ ಸುಮೂರ್ಛಿತಾನಾಮ್ ।**
**ಸಿದ್ಧಾಮವಿದ್ಯಾಂ ವಿದಧುರ್ವಿಪಕ್ಷೇ ವಿಜ್ಞಪ್ತ್ಯಭಾವಾಕೃತಿಮೇವ ಯುದ್ಧೇ ॥ ೨ ॥**

ಯುದ್ಧೇ=ಯುದ್ಧದಲ್ಲಿ; ವಿಪಕ್ಷೇ=ಶತ್ರುಪಕ್ಷದಲ್ಲಿ; ಸಂಗ್ರಾಮ=ಯುದ್ಧದ; ಕೌಶಲ್ಯ=

ಚಾಕಚಕ್ಯತೆಯ; ಚಿತ್=ಜ್ಞಾನದಿಂದ; ಉಜ್ಝಿತಾನಾಂ=ರಹಿತರಾದ; ಭಂಗಂ=ಪರಾಜಯ ವನ್ನು; ಸಮಾಲಿಂಗ್ಯ=ಹೊಂದಿ; ಸುಮೂರ್ಛಿತಾನಾಂ=ಮೂರ್ಛೆಗೊಂಡ ಶತ್ರುಗಳಿಗೆ; ಸಿದ್ಧಾಂ=ಉಂಟಾದ; ಅವಿದ್ಯಾಂ=ಅಜ್ಞಾನವನ್ನು; ವಿಜ್ಞಪ್ತಿ=ಜ್ಞಾನದ; ಅಭಾವ=ಅಭಾವದ; ಆಕೃತಿಂ ಏವ=ಸ್ವರೂಪವನ್ನಾಗಿಯೇ; ವಿದಧುಃ=ಮಾಡಿದರು.

ಕೃಷ್ಣನ ಸೈನಿಕರಿಗೂ ಮಧ್ವರ ಶಿಷ್ಯರಿಗೂ ಹೋಲಿಕೆಯು ಈ ಶ್ಲೋಕದಲ್ಲಿಯೂ ಮುಂದುವರಿಯುತ್ತದೆ. ಕೃಷ್ಣನ ಸೈನಿಕರಿಂದಾಗಿ ಜರಾಸಂಧನ ಸೈನಿಕರು ಪರಾಭವ ಗೊಂಡರು. ಅವರಿಗೆ ಯುದ್ಧದ ಕೌಶಲ್ಯದ ತಿಳುವಳಿಕೆ ಇಲ್ಲ. ಇದು ಒಂದು ತಿಳುವಳಿಕೆಯ ಅಭಾವ. ಹಾಗೆಯೇ ಚೆನ್ನಾಗಿ ಸೋಲನ್ನು ಉಂಡು ಮೂರ್ಛೆಗೊಂಡು ಬಿದ್ದರು. ಇದರಿಂದ ತಮ್ಮದ್ದಾಗಲೀ ಶತ್ರುಗಳದ್ದಾಗಲೀ ತಿಳುವಳಿಕೆ ಇಲ್ಲ. ಇದು ಇನ್ನೊಂದು ತಿಳುವಳಿಕೆಯ ಅಭಾವ. ಈ ರೀತಿಯಾಗಿ ಶತ್ರುಗಳಿಗೆ ತಿಳುವಳಿಕೆಯ ಕೊರತೆಯನ್ನು ಕೃಷ್ಣನ ಸೈನಿಕರು ಸಾಧಿಸಿದರು.

ಮಾಯಾವಾದಿಗಳು ತಮ್ಮ ಸಿದ್ಧಾಂತದಲ್ಲಿ ಭಾವರೂಪ ಅಜ್ಞಾನವನ್ನು ಒಪ್ಪಿದ್ದಾರೆ. ಅಂದರೆ ಅಜ್ಞಾನ ಅಂದರೆ ಜ್ಞಾನದ ಅಭಾವ ಅಲ್ಲ. ಮಡಕೆ ಮೊದಲಾದ ವಸ್ತುಗಳಂತೆ ಅದೂ ಒಂದು ಭಾವವಸ್ತು ಎನ್ನುತ್ತಾರೆ. ಇಂತಹ ಅಜ್ಞಾನವನ್ನು ಒಪ್ಪಿದರೆ ಈ ಅಜ್ಞಾನ ಯಾರಿಗೆ, ಯಾವ ವಿಷಯದಲ್ಲಿ ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರಿಸಲು ಅವರು ಸಮರ್ಥರಾಗುವುದಿಲ್ಲ. ಯಾಕೆಂದರೆ ಅಜ್ಞಾನ ಎನ್ನುವುದು ಚೇತನದ ಧರ್ಮ. ವ್ಯಕ್ತಿಗಳನ್ನು ಅಜ್ಞಾನಿಗಳು ಎಂದು ಹೇಳುತ್ತೇವೆ. ಜಡವಾದ ಮಡಕೆ ಮೊದಲಾದ್ದನ್ನು ಅಜ್ಞಾನಿ ಎಂದು ಹೇಳುವುದಿಲ್ಲ. ಮಾಯಿಗಳಲ್ಲಿ ಚೇತನ ಒಂದೇ. ಅದು ಬ್ರಹ್ಮ. ಅದು ಸರ್ವಜ್ಞ. ಸರ್ವಜ್ಞನಿಗೆ ಅಜ್ಞಾನ ಕೂಡುವುದಿಲ್ಲ. ಜೀವನಿಗೆ ಹೇಳೋಣವೆಂದರೆ ಬ್ರಹ್ಮಾತಿರಿಕ್ತ ಜೀವನು ಇಲ್ಲ. ಆದ್ದರಿಂದ ಅಜ್ಞಾನಕ್ಕೆ ಆಶ್ರಯ ಇಲ್ಲ. ವಿಷಯ ಜಗತ್ತು ಎಂದು ಹೇಳಬೇಕು. ಜಗತ್ತು ಅವರ ಪ್ರಕಾರ ಸುಳ್ಳಾದ್ದರಿಂದ ವಿಷಯ ಆಗುವುದಿಲ್ಲ. ಹೀಗೆ ಆಶ್ರಯ ವಿಷಯ ಇಲ್ಲವಾದ್ದರಿಂದ ಭಾವರೂಪ ಅಜ್ಞಾನವೇ ಕೂಡುವುದಿಲ್ಲ. ಆದ್ದರಿಂದ ಅವರು ಅಜ್ಞಾನ ಅಂದರೆ ಜ್ಞಾನಾಭಾವ ಎಂದೇ ಹೇಳಬೇಕು ಹೊರತು ಭಾವರೂಪವಾದ್ದನ್ನು ಹೇಳಲು ಸಾಧ್ಯವಿಲ್ಲ. ಈ ರೀತಿಯಾಗಿ ಕೃಷ್ಣನ ಸೈನಿಕರು ಶತ್ರುಗಳಲ್ಲಿ ತಿಳುವಳಿಕೆಯ ಅಭಾವವನ್ನು ಮಾಧ್ವರು ಮಾಯಿಗಳಲ್ಲಿ ಜ್ಞಾನಾಭಾವವನ್ನೂ ತೋರಿಸಿದರು.

**ಪಲಾಯನಂ ಯೇ ವಿದಧುರ್ನೃಪಾಂಸ್ತಾನ್ವಿಧಾಯ ಸತ್‌ಕೋಟಿಷು ಕೃಷ್ಣಭೃತ್ಯಾಃ ।**
**ಅನ್ಯಾನಸತ್ಕೋಟಿಷು ಸನ್ನಿವೇಶ್ಯ ಶೂನ್ಯಂ ಪ್ರಚಕ್ರುಃ ಸದಸತ್‌ವಿಭಿನ್ನಮ್ ॥ ೩ ॥**

ಕೃಷ್ಣ=ಕೃಷ್ಣನ; ಭೃತ್ಯಾಃ=ಸೈನಿಕರು; ಯೇ=ಯಾವ ಶತ್ರುಗಳು; ಪಲಾಯನಂ= ಓಡುವಿಕೆಯನ್ನು; ವಿದಧುಃ=ಮಾಡಿದರೋ; ತಾನ್=ಅಂತಹ; ನೃಪಾನ್=ರಾಜರನ್ನು;

ಸತ್=ಸತ್ ಎಂಬ; ಕೋಟಿಷು=ಗುಂಪಲ್ಲಿ; ವಿಧಾಯ=ಇಟ್ಟು; ಅನ್ಯಾನ್=ಓಡದವರನ್ನು; ಅಸತ್=ಅಸತ್ ಎಂಬ; ಕೋಟಿಷು=ಗುಂಪಲ್ಲಿ; ಸನ್ನಿವೇಶ್ಯ=ಸೇರಿಸಿ; ಸತ್=ಸತ್‌ಗಿಂತ; ಅಸತ್=ಅಸತಿಗಿಂತ; ವಿಭಿನ್ನಂ=ಬೇರೆಯಾದ್ದನ್ನು; ಶೂನ್ಯಂ=ರಹಿತವನ್ನಾಗಿ; ಪ್ರಚಕ್ರುಃ=ಮಾಡಿದರು.

ಕೃಷ್ಣನ ಹಾಗೂ ಆತನ ಸೈನಿಕರ ಯುದ್ಧಕೌಶಲವನ್ನು ಶತ್ರುಗಳು ನೋಡಿದರು. ಕೃಷ್ಣನ ಶಕ್ತಿಯನ್ನು ಅರಿತರು. ಕೃಷ್ಣನನ್ನು ವಿರೋಧಿಸಿದರೆ ನಮಗೆ ಶ್ರೇಯಸ್ಸು ಇಲ್ಲ ಎಂದು ಮನಗಂಡರು. ಯುದ್ಧದಿಂದ ಓಡಿದರು. ಇವರೆಲ್ಲರೂ ಸಾತ್ವಿಕರು, ಸಜ್ಜನರು. ಇನ್ನು ಕೆಲವರು ಶಕ್ತಿಯನ್ನು ಕಂಡರೂ ವಿರೋಧಿಸುವ ಹಟಮಾರಿತನದಿಂದ ಓಡದೆ ಹೋರಾಡಿದರು. ಇವರು ಅಸಜ್ಜನರು, ದುಷ್ಟರು. ಅಂತೂ ಜರಾಸಂಧನ ಪಾಳಯದಲ್ಲಿ ಒಂದಾ ಸಜ್ಜನರು, ಒಂದಾ ಅಸಜ್ಜನರು ಹೊರತು ಆಚೆ ಸತ್ ಅಲ್ಲ; ಈಚೆ ಅಸತ್ ಅಲ್ಲ; ಅಂತಹ ಸತ್ ಅಸತ್ ವಿಲಕ್ಷಣವಾದ ಒಂದು ಗುಂಪು ಇದೆ ಎನ್ನುವುದನ್ನು ಕೃಷ್ಣನ ಭಟರು ನಿರಾಕರಿಸಿದರು.

ಮಾಯಿಗಳು ಈ ಜಗತ್ತಿನ ಬಗ್ಗೆ ಈ ರೀತಿ ಹೇಳುತ್ತಾರೆ. ಈ ಜಗತ್ತು ಸತ್ ಅಲ್ಲ. ಯಾಕೆಂದರೆ ಒಂದು ದಿನ ಈ ಜಗತ್ತು ನಷ್ಟವಾಗುತ್ತದೆ. ಸತ್ ಆಗಬೇಕಾದರೆ ನಷ್ಟವಾಗಬಾರದು. ಬ್ರಹ್ಮನು ಸತ್. ಅದಕ್ಕೆ ನಾಶ ಇಲ್ಲ. ಈ ಜಗತ್ತಿಗೆ ನಾಶವಿರುವುದರಿಂದ ಇದು ಸತ್ ಅಲ್ಲ. ಅಸತ್ ಎಂದೂ ಹೇಳಲು ಆಗುವುದಿಲ್ಲ. ಯಾಕೆಂದರೆ ಯಾವುದು ಅಸತ್ತು ಅದು ಕಾಣುವುದಿಲ್ಲ. ಉದಾ:- ಮೊಲದ ಕೋಡು. ಇದು ಅಸತ್. ಆದ್ದರಿಂದ ಕಾಣುವುದಿಲ್ಲ. ಈ ಜಗತ್ತು ಈಗ ಕಾಣಿಸುತ್ತಿದೆ. ಆದ್ದರಿಂದ ಅಸತ್ ಅಲ್ಲ. ಹಾಗಾದರೆ ಈ ಜಗತ್ತನ್ನು ಏನೆಂದು ಹೇಳಬೇಕೆಂದರೆ ಸತ್ ಅಸತ್‌ಗಿಂತ ವಿಲಕ್ಷಣ, ಬೇರೆ ಎಂದು ಹೇಳಬೇಕು ಎನ್ನುವ ಮೂಲಕ ಸದಸದ್ವಿಲಕ್ಷಣ ಎಂಬ ವಸ್ತುವನ್ನು ಒಪ್ಪುತ್ತಾರೆ.

ಮಧ್ವರ ಶಿಷ್ಯರು ಇದನ್ನು ಖಂಡಿಸುತ್ತಾರೆ. ಇಂತಹ ಒಂದು ವಸ್ತುವೇ ಇಲ್ಲ. ನಾಶವುಳ್ಳದ್ದೂ ಸತ್ ಆಗಬಹುದು, ಘಟಪಟಗಳಂತೆ. ಅಸತ್ತಾದರೂ ತೋರಬಹುದು, ಶುಕ್ತಿರಜತದಂತೆ. ಮುತ್ತಿನ ಚಿಪ್ಪು ಬೆಳ್ಳಿಯಾಗಿ ತೋರುತ್ತದೆ. ಅದು ಅಸತ್ತೇ ಆಗಿದೆ. ನಮಗೆ ಚಿಪ್ಪಿನ ಜ್ಞಾನ ಬಂದಮೇಲೆ ಅಸತ್ತಾದ ಬೆಳ್ಳಿಯೇ ತೋರಿದ್ದು ಎಂದೇ ತಿಳುವಳಿಕೆ ಬರುವುದು. ಅದರಂತೆ ಜಗತ್ತನ್ನು, ತೋರುವುದರಿಂದ ಅಸದ್ವಿಲಕ್ಷಣ ಎನ್ನಬೇಕಾಗಿಲ್ಲ. ಈ ರೀತಿ ಕೃಷ್ಣನ ಭಟರು ಜರಾಸಂಧನ ಸೈನಿಕರನ್ನು ಸದ್‌ಗುಂಪಿನಲ್ಲಿ ಕೆಲವರನ್ನು, ಅಸದ್‌ಗುಂಪಿನಲ್ಲಿ ಕೆಲವರನ್ನು ಸೇರಿಸಿ ಮೂರನೇ ಗುಂಪನ್ನು ನಿರಾಕರಿಸುವಂತೆ, ಮಧ್ವಶಿಷ್ಯರೂ ಸತ್, ಅಸತ್ ಎಂಬ ಎರಡೇ ರೀತಿಯಾದ್ದು ಇರುವುದು ಹೊರತು ಮೂರನೇ ರೀತಿಯಾದ್ದು ಇಲ್ಲ ಎಂದು ತೋರಿಸಿಕೊಟ್ಟರು.

**ತೇ ಬ್ರಹ್ಮಣಃ ಶಾರ್ಙ್ಗಧರಾದ್ವಿಭಿನ್ನಾ-**
**ನಾಹೂಯ ಹೇಯಾನಪಿ ಗರ್ವಿಣಸ್ತಾನ್ ।**
**ಸ್ವೇಭ್ಯೋऽಪಿ ಭಿನ್ನಾನ್ ವಿರಚಯ್ಯ ಯುದ್ಧೇ**
**ಧಾನುಷ್ಕಚೂಡಾಮಣಯೋ ನಿಜಘ್ನುಃ ॥ ೪ ॥**

ಧಾನುಷ್ಕ=ಧನುರ್ಧಾರಿಗಳಲ್ಲಿ; ಚೂಡಾಮಣಯಃ=ಶ್ರೇಷ್ಠರಾದ; ತೇ=ಆ ಕೃಷ್ಣಭಟರು; ಶಾರ್ಙ್ಗ=ಶಾರ್ಙ್ಗಧನುಸ್ಸನ್ನು; ಧರಾತ್=ಧರಿಸಿರುವ ಕೃಷ್ಣನಿಂದ; ವಿಭಿನ್ನಾನ್=ಬೇರೆಯಾದ; ಹೇಯಾನ್ ಅಪಿ=ತ್ಯಾಜ್ಯರಾದ; ಗರ್ವಿಣಃ=ಅಹಂಕಾರಿಗಳಾದ; ತಾನ್=ಆ ಸೈನಿಕರನ್ನು; ಆಹೂಯ=ಕರೆದು; ಸ್ವೇಭ್ಯಃ ಅಪಿ=ತಮ್ಮಿಂದಲೂ; ಭಿನ್ನಾನ್=ಭಿನ್ನರನ್ನಾಗಿ; ವಿರಚಯ್ಯ=ಮಾಡಿ; ಯುದ್ಧೇ=ಯುದ್ಧದಲ್ಲಿ; ನಿಜಘ್ನುಃ=ಹೊಡೆದರು.

ಈ ಶ್ಲೋಕದಲ್ಲಿ ಪುನಃ ಜೀವ-ಬ್ರಹ್ಮ, ಜೀವ-ಜಡ ಭೇಧವನ್ನು ಸಾಧಿಸುತ್ತಾರೆ.

ಶತ್ರುಸೈನಿಕರು ಮಾತ್ರವಲ್ಲ, ಎಲ್ಲಾ ಜೀವರೂ ದೇವರಿಗಿಂತ ಭಿನ್ನರು. ಆದ್ದರಿಂದಲೇ ಹೇಯರು. ಅಂದರೆ ತ್ಯಾಜ್ಯರು. ಇವರನ್ನೆಲ್ಲಾ ನಾವು ಆಶ್ರಯಿಸಿದರೆ ಇವರು ಕೊನೆತನಕ ನಮ್ಮನ್ನು ಕಾಯುವುದಿಲ್ಲ. ಇವರೇ ಅಸ್ವತಂತ್ರರು. ದೇವರೊಬ್ಬನೇ ಅಹೇಯ, ಅಂದರೆ ಸ್ವೀಕಾರಯೋಗ್ಯ. ಆದ್ದರಿಂದಲೇ ದೇವರಿಗಿಂತ ಭಿನ್ನರು. ದೇವರಾದ ಕೃಷ್ಣನಿಂದ ಭಿನ್ನರು. ಅಂದರೆ ಭಿನ್ನಭಿನ್ನರಾಗಿ ಹೊಡೆಯಲ್ಪಟ್ಟವರು. ಆದ್ದರಿಂದಲೇ ತ್ಯಾಗಕ್ಕೆ ಯೋಗ್ಯರು. ಆದರೂ ತಾವು ಅಹಂಕಾರವನ್ನು ಬಿಟ್ಟಿಲ್ಲ. ಕೃಷ್ಣನನ್ನು ಸೋಲಿಸಿಯೇ ಸಿದ್ಧ ಎಂದು ಮುನ್ನುಗ್ಗುತ್ತಿದ್ದರು. ಅಂತಹವರನ್ನು ಕೃಷ್ಣಭಟರು ತಾವು ಯುದ್ಧಕ್ಕೆ ಕರೆದರು. ಶತ್ರುಗಳ ಕೈಕಾಲುಗಳನ್ನು ಮುರಿದರು. ತಮ್ಮಿಂದಲೂ ಭಿನ್ನಭಿನ್ನರನ್ನಾಗಿ ಮಾಡಿದರು. ಹೀಗೆ ದೇವರಿಂದ ಮಾತ್ರವಲ್ಲ, ತಮ್ಮಿಂದಲೂ ಭಿನ್ನಭಿನ್ನರಾದವರನ್ನಾಗಿ ಕೃಷ್ಣಭಟರು ಮಾಡಿದರು.

ಮಧ್ವಶಿಷ್ಯರೂ ಕೂಡಾ ತಮ್ಮ ಪ್ರವಚನಗಳಲ್ಲಿ ಜೀವರನ್ನು ದೇವರಿಗಿಂತಲೂ ಹಾಗೆಯೇ ಪರಸ್ಪರವಾಗಿಯೂ ಭಿನ್ನರನ್ನಾಗಿ ಸಮರ್ಥಿಸಿದರು.

**ಸುರರ್ಷಿಸಿದ್ಧಾಸ್ತುತಿಭಿಃ ಸಮಂತಾತ್ ಸಮುತ್ಥಿತಾಭಿಃ ಸಮದೂಷಯಂಸ್ತೇ ।**
**ಅನನ್ಯಯೋಗ್ಯಾಭಿರವಾಚ್ಯಭಾವಂ ಮುಕುಂದಮುಖ್ಯಾರ್ಥಪರಾಭಿರಸ್ಯ ॥ ೫ ॥**

ತೇ=ಆ ಕೃಷ್ಣ ಭಟರು; ಅನನ್ಯಯೋಗ್ಯಾಭಿಃ=ಬೇರೆ ಕಡೆ ಯೋಗ್ಯವಲ್ಲದ; ಸಮಂತಾತ್=ಎಲ್ಲಾ ಕಡೆ; ಸಮುತ್ಥಿತಾಭಿಃ=ಉಂಟಾದ; ಸುರ=ದೇವತೆಗಳು; ಋಷಿ=ಋಷಿಗಳು; ಸಿದ್ಧ=ಸಿದ್ಧರು ಇವರ; ಸ್ತುತಿಭಿಃ=ಸ್ತೋತ್ರಗಳಿಂದ; ಮುಕುಂದ=ದೇವರಲ್ಲಿ; ಮುಖ್ಯ=ಮುಖ್ಯವಾದ; ಅರ್ಥ=ಅರ್ಥದಲ್ಲಿ; ಪರಾಭಿಃ=ಆಸಕ್ತವಾದವುಗಳಿಂದ; ಅಸ್ಯ=ಕೃಷ್ಣನಿಗೆ; ಅವಾಚ್ಯ=ಅವಾಚ್ಯತ್ವದ; ಭಾವಂ=ಅಭಿಪ್ರಾಯವನ್ನು; ಸಮದೂಷಯನ್=ಖಂಡಿಸಿದರು.

ಕೃಷ್ಣನು ಜರಾಸಂಧನನ್ನು ಮರ್ದಿಸಿದನು. ಆಗ ಆಕಾಶದಲ್ಲಿ ದೇವತೆಗಳೇ ಮೊದಲಾದವರು ಕೃಷ್ಣನನ್ನು –ಜರಾಸಂಧನನ್ನು ಬಡಿದವನೇ, ಸರ್ವೋತ್ತಮನೇ, ಸರ್ವಜ್ಞನೇ ಇತ್ಯಾದಿ ರೀತಿಯಿಂದ ಹೊಗಳಿದರು. ಈ ಹೊಗಳುವಿಕೆ ದೇವರಿಗೇ ಚೆನ್ನಾಗಿ ಕೂಡುತ್ತದೆ. ಕೃಷ್ಣನ ಸೈನಿಕರಿಗೆ ಚೆನ್ನಾಗಿ ಕೂಡುವುದಿಲ್ಲ. ಸಮಗ್ರವಾಗಿ ಅಲ್ಲದಿದ್ದರೂ ನಮ್ಮ ಶಕ್ತಿಗನುಗುಣವಾಗಿ ದೇವರು ನಮ್ಮ ಪ್ರೀತಿಗೆ ಯೋಗ್ಯನಾಗುತ್ತಾನೆ ಎನ್ನುವುದನ್ನು ಭಟರು ತೋರಿಸಿಕೊಟ್ಟರು.

ಮಧ್ವಶಿಷ್ಯರ ಪರವಾದ ಅರ್ಥ ಈ ರೀತಿ ಇದೆ –ಮಾಯಿಗಳು ದೇವರು ಅವಾಚ್ಯ. ಯಾವ ಶಬ್ದವೂ ದೇವರನ್ನು ಹೇಳುವುದಿಲ್ಲ. ದೇವರು ಅಲಕ್ಷ್ಯನಾಗುತ್ತಾನೆ. ಅಂದರೆ– "ನಿಮ್ಮ ಮನೆ ಎಲ್ಲಿದೆ" ಎಂದು ಕೇಳಿದರೆ ನಾವು ಗಂಗೆಯಲ್ಲಿದೆ ಎನ್ನುತ್ತೇವೆ. ಇಲ್ಲಿ ಗಂಗೆಯಲ್ಲಿ ಅಂದರೆ ಪ್ರವಾಹದಲ್ಲಿ, ನೀರಿನಲ್ಲಿ ಎಂದರ್ಥವಲ್ಲ. ದಡದಲ್ಲಿ ಎಂದರ್ಥ. ಊಟಕ್ಕೆ ಎಲ್ಲರೂ ಎಲೆಯಲ್ಲಿ ಕುಳಿತುಕೊಳ್ಳಿ ಅಂದರೆ ಎಲೆಯ ಮುಂದೆ ಎಂದು ಅರ್ಥ. ಇದು ಲಕ್ಷ್ಯಾರ್ಥ. ಗಂಗೆಯಲ್ಲಿ, ಎಲೆಯಲ್ಲಿ ಎಂಬ ಶಬ್ದಗಳಿಗೆ ಮುಖ್ಯವಾದ ಅರ್ಥ ಗಂಗೆ, ಎಲೆ ಎಂದೇ ಆಗುತ್ತದೆ. ಆ ಅರ್ಥವನ್ನು ಇಲ್ಲಿ ಹೇಳಲು ಬರುವುದಿಲ್ಲ. ಯಾಕೆಂದರೆ ನೀರಿನಲ್ಲಿ ಮನೆ ಇರಲು ಸಾಧ್ಯವಿಲ್ಲ. ಎಲೆಯಲ್ಲೇ ಕುಳಿತರೆ ಊಟ ಮಾಡುವುದು ಎಲ್ಲಿ. ಗಂಗೆ, ಎಲೆ ಎನ್ನುವುದು ವಾಚ್ಯಾರ್ಥ. ಇದೇ ರೀತಿ ಯಾವ ಶಬ್ದವೂ ದೇವರಲ್ಲಿ ಕೂಡುವುದಿಲ್ಲ. ಯಾಕೆಂದರೆ ಯಾವುದಾದರೂ ಶಬ್ದವನ್ನು ದೇವರಲ್ಲಿ ಹೇಳಿದರೆ ಆ ಶಬ್ದದಿಂದ ಹೊರಡುವ ಗುಣವನ್ನು ದೇವರಲ್ಲಿ ಹೇಳಬೇಕಾಗುತ್ತದೆ. ದೇವರು ನಿರ್ಗುಣನಾದ್ದರಿಂದ ಯಾವ ಶಬ್ದಕ್ಕೂ ದೇವರು ವಾಚ್ಯಾರ್ಥನಲ್ಲ. ಲಕ್ಷ್ಯಾರ್ಥ. ವಾಚ್ಯಾರ್ಥ ಬೇರೆ ಯಾವುದಾದರೂ ಇದೆ ಎಂದು ಹೇಳುತ್ತಾರೆ.

ಮಧ್ವರ ಶಿಷ್ಯರು ಇದನ್ನು ಖಂಡಿಸುತ್ತಾರೆ. ದೇವರುಗಳು, ಋಷಿಗಳು, ಸಿದ್ಧರೇ ಮೊದಲಾದವರು ಕೃಷ್ಣನನ್ನು ಜರಾಸಂಧನನ್ನು ಚೆನ್ನಾಗಿ ಸದೆಬಡಿದವನೇ, ಸರ್ವಜ್ಞನೇ ಇತ್ಯಾದಿ ರೂಪದಿಂದ ಹೊಗಳುತ್ತಿದ್ದಾರೆ. ಜರಾಸಂಧನನ್ನು ಕೃಷ್ಣನೇ ಬಡಿದದ್ದು. ಆತನ ಸೈನ್ಯವನ್ನು ಕೃಷ್ಣನ ಸೈನ್ಯವು ಬಡಿದದ್ದು. ಜರಾಸಂಧನು ಬಹಳ ಬಲಿಷ್ಠನು. ಆದ್ದರಿಂದ ಕೃಷ್ಣನ ಸೈನಿಕರು ಆತನ ಜೊತೆ ಕಾದಾಡಲು ಅಸಮರ್ಥರು. ಈ ಹೊಗಳುವಿಕೆಯ ಮಾತಿನಿಂದ ಕೃಷ್ಣನು ವಾಚ್ಯನಾಗದಿದ್ದರೆ ಮತ್ತೆ ಯಾರು ವಾಚ್ಯರು. ಕೃಷ್ಣನು ಲಕ್ಷ್ಯಾರ್ಥವಾಗಬೇಕಾದರೆ ವಾಚ್ಯಾರ್ಥ ಒಂದು ಬೇಕೇ ಬೇಕು. ದಡ ಲಕ್ಷ್ಯವಾಗಬೇಕಾದರೆ ವಾಚ್ಯಾರ್ಥ ಪ್ರವಾಹ ಎಂಬುದು ಇದೆ. ಹಾಗೆಯೇ ಇಲ್ಲಿ ಜರಾಸಂಧನನ್ನು ಬಡಿದವರು ಬೇರೆ ಯಾರು ಇಲ್ಲವಾದ್ದರಿಂದ ವಾಚ್ಯಾರ್ಥ ಇಲ್ಲ. ಕೃಷ್ಣನೂ ವಾಚ್ಯಾರ್ಥನಲ್ಲವಾದರೆ ಈ ಶಬ್ದವೇ ನಿರರ್ಥಕವಾಗುವ ಪ್ರಸಂಗ ಬಂತು. ಶಬ್ದ ಎಂದು ಹೇಳುವುದು ಅರ್ಥ ಇಲ್ಲ ಎನ್ನುವುದು ಇದು ವ್ಯಾಹತ ಮಾತು. ಆದ್ದರಿಂದ ಕೃಷ್ಣನನ್ನೇ ವಾಚ್ಯಾರ್ಥ ಎನ್ನಬೇಕು.

ಇದರಿಂದ ಬ್ರಹ್ಮನು ಅವಾಚ್ಯ, ಯಾಕೆಂದರೆ ಆತ ನಿರ್ಗುಣ ಎಂಬ ಅದ್ವೈತಿಗಳ ಮಾತು ತಪ್ಪಾಯಿತು. ಹೀಗೆ ಕೃಷ್ಣನಿಗೆ ಅವಾಚ್ಯತ್ವವನ್ನು ಕೃಷ್ಣನ ಸೈನಿಕರೂ ಮಧ್ವಶಿಷ್ಯರೂ ಖಂಡಿಸಿದರು.

> ಭಸ್ಮೀಭೂತಮಿವಾರಚಯ್ಯ ಗಿರಿಶೋ ಯಂ ಬಾಹ್ಯದೃಷ್ಟ್ಯಾ ಪುನ-
> ಶ್ಚಿತ್ತಾಂತಸ್ಥಿತಮಾರ್ಪಯದ್ಗಿರಿಸುತಾಗರ್ಭೇಽಹ್ಯನೇಕಾನನಮ್ ।
> ತಂ ಪಂಚಾವಯವೇಷುಮಂಗರುಚಿರಂ ಸೃಷ್ಟ್ವಾಗ್ರ್ಯತರ್ಕೋಪಮಂ
> ಛಂದೋಬಾಹ್ಯಕುತರ್ಕಕಲ್ಪಮಜಯತ್ತೇನೈಕಲವ್ಯಂ ವಿಭುಃ ॥ ೬ ॥

ಗಿರಿಶಃ=ರುದ್ರನು; ಯಂ=ಯಾರನ್ನು; ಬಾಹ್ಯ=ಹೊರಗಿನ; ದೃಷ್ಟ್ಯಾ=ದೃಷ್ಟಿಯಿಂದ; ಭಸ್ಮೀಭೂತಂ ಇವ=ಸುಟ್ಟವನಂತೆ; ಆರಚಯ್ಯ=ಮಾಡಿ; ಪುನಃ=ಮತ್ತು; ಚಿತ್ತ=ಮನಸ್ಸಿನ; ಅಂತಃ=ಒಳಗೆ; ಸ್ಥಿತಂ=ಇರುವವನನ್ನು; ಅನೇಕ=ಬಹಳ; ಆನನಮ್=ಮುಖವುಳ್ಳವನನ್ನು; ಗಿರಿ=ಬೆಟ್ಟದ; ಸುತಾ=ಮಗಳಾದ ಪಾರ್ವತಿಯ; ಗರ್ಭೇ=ಗರ್ಭದಲ್ಲಿ; ಆರ್ಪಯತ್= ಇಟ್ಟನೋ; ಪಂಚ=ಐದು; ಅವಯವ=ಅವಯವಗಳೇ; ಇಷುಂ=ಬಾಣವುಳ್ಳ; ಅಂಗ=ಅವ ಯವಗಳು; ರುಚಿರಂ=ಚಂದವುಳ್ಳ; ಅಗ್ರ್ಯ=ಉತ್ತಮವಾದ; ತರ್ಕ=ತರ್ಕಕ್ಕೆ; ಉಪಮಂ= ಸಮಾನವಾದ; ತಂ=ಆ ಕಾಮನನ್ನು; ಸೃಷ್ಟ್ವಾ=ಹುಟ್ಟಿಸಿ; ಛಂದಃ=ವೇದದಿಂದ; ಬಾಹ್ಯ= ಹೊರಗಿರುವ; ಕುತರ್ಕಕಲ್ಪಂ=ಕೆಟ್ಟ ತರ್ಕದಂತಿರುವ; ಏಕಲವ್ಯಂ=ಏಕ ಲವ್ಯನನ್ನು; ವಿಭುಃ=ಕೃಷ್ಣನು; ತೇನ=ಆ ಕಾಮನಿಂದ; ಅಜಯತ್=ಗೆದ್ದನು.

ಜರಾಸಂಧನ ಜೊತೆಗೆ ಏಕಲವ್ಯನೂ ಬಂದಿದ್ದನು. ಅವನನ್ನು ಕೃಷ್ಣನು ತಾನೇ ಎದುರಿಸಲಿಲ್ಲ. ಮನ್ಮಥನನ್ನು ತನ್ನ ಮನಸ್ಸಿನಿಂದ ಸೃಷ್ಟಿಮಾಡಿದನು. ಆತನಿಂದ ಏಕಲವ್ಯನನ್ನು ಸೋಲಿಸಿದನು. ಈ ವಿಷಯವನ್ನು ರಾಜರು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ.

ಏಕಲವ್ಯನನ್ನು ಸೋಲಿಸಲು ಕೃಷ್ಣನು ಪ್ರದ್ಯುಮ್ನನನ್ನು ತನ್ನ ಮನದಿಂದ ಸೃಷ್ಟಿಸಿದನು ಎಂಬುದನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಪ್ರದ್ಯುಮ್ನನು ಕಾಮನ ಅವತಾರ. ಈ ಕಾಮನನ್ನು ರುದ್ರದೇವರು ಸೃಷ್ಟಿಸಿದ್ದಾರೆ. ಇದು ಲೋಕದ ದೃಷ್ಟಿಯಲ್ಲಿ ಹಾಗೆ ಕಂಡಿದೆ. ಯದ್ಯಪಿ ಕಾಮ ರುದ್ರನ ಮನದಲ್ಲಿ ಇದ್ದೇ ಇದೆ. ಮನಸ್ಸು ಅಂದಮೇಲೆ ಅದಕ್ಕೊಂದು ಕಾಮನೆ ಇರಬೇಕುತಾನೆ. ತನ್ನಲ್ಲಿದ್ದ ಈ ಕಾಮನನ್ನು ರುದ್ರನು ತನ್ನ ಮಡದಿಯಾದ ಪಾರ್ವತಿಯ ಗರ್ಭದಲ್ಲಿ ಇಟ್ಟ, ಪಾರ್ವತಿಯಲ್ಲಿ ಆತನು ಅನೇಕ ಮುಖನಾಗಿ ಜನಿಸಿದನು. ಅವನನ್ನು ಕೃಷ್ಣನೂ ತನ್ನ ಮನದಿಂದ ಹುಟ್ಟಿಸಿದನು. ಈ ಕಾಮನು ಹರಿಪಾರಮ್ಯವನ್ನು ಸಮರ್ಥಿಸುವ ತರ್ಕದಂತೆ ಇದ್ದಾನೆ. ಈ ತರ್ಕವನ್ನು ರುದ್ರದೇವರು ತಾನು ರಚಿಸಿದ ಮೋಹಕ ಶಾಸ್ತ್ರದಿಂದ ಖಂಡಿಸುತ್ತಾರೆ. ಈ ಮೋಹಕಶಾಸ್ತ್ರವು ಶಿವಪಾರಮ್ಯವನ್ನು ತಿಳಿಸುತ್ತದೆ. ರುದ್ರದೇವರಿಗೆ ಮನದಲ್ಲಿ ಸಹಜವಾಗಿ ಹರಿಪಾರಮ್ಯದ ತರ್ಕಗಳು ಇದ್ದೇ

ಇದೆ. ತನ್ನ ಮನದಲ್ಲಿದ್ದ ಈ ಸತ್ತರ್ಕವನ್ನು ರುದ್ರದೇವರು ಪಾರ್ವತಿಗೆ ರಹಸ್ಯದಲ್ಲಿ ಉಪದೇಶಿಸಿದರು. ಈ ಯುಕ್ತಿಗಳು ಆತ್ಮಾಶ್ರಯಾದಿ ನಾನಾ ಮುಖಗಳಿಂದ ಕೂಡಿದೆ. ಇಂತಹ ಷಣ್ಮುಖನನ್ನು ಕೃಷ್ಣನು ಸೃಷ್ಟಿಸಿದನು. ಒಳ್ಳೆಯ ಅಂಗಾಂಗಗಳಿಂದ ಕೂಡಿದ್ದಾನೆ. ಅರವಿಂದಾದಿ ಐದು ರೀತಿಯ ಬಾಣಗಳಿಂದ ಕೂಡಿದ್ದಾನೆ. ಸತ್ತರ್ಕಗಳೂ ಸಾಧಕಗಳಾದ ಲಿಂಗಗಳಿಂದ ಕೂಡಿದೆ. ಇಂತಹ ತರ್ಕಗಳಿಂದ ವೇದವಿರೋಧಿಯನ್ನು ಸೋಲಿಸಬಹುದು. ಅದೇ ರೀತಿ ವೇದವಿರೋಧಿಯಾದ ದೈತ್ಯನಾದ ಏಕಲವ್ಯನನ್ನು ಕೃಷ್ಣನು ಈ ಕಾಮನಿಂದ ಸೋಲಿಸಿದನು.

**ರಣೇ ಕ್ಷಣೇನಾಂಗಜಮುಜ್ಜ್ವಲಾಂಗೈಃ ಸಮಂ ಸಮುತ್ಪಾದ್ಯ ಸಃ ಸರ್ವಶಕ್ತಿಃ ।**
**ಭವಾನುಭಾವಾಗತತತ್ಪಿತೃತ್ವಪ್ರಥಾಂ ಶ್ರಿತಾತ್ಮೀಯಗತಿರ್ದ್ಯತಿ ಸ್ಮ ॥ ೭ ॥**

ಶ್ರಿತ=ಆಶ್ರಯಿಸಿದ; ಆತ್ಮೀಯ=ತನ್ನವರಿಗೆ; ಗತಿಃ=ಆಶ್ರಯನಾದ; ಸರ್ವ=ಎಲ್ಲಾ; ಶಕ್ತಿಃ=ಶಕ್ತಿಯುಳ್ಳ; ಸಃ=ಕೃಷ್ಣನು; ರಣೇ=ಯುದ್ಧದಲ್ಲಿ; ಕ್ಷಣೇನ=ಕೂಡಲೇ; ಅಂಗಜಂ= ಮನ್ಮಥನನ್ನು; ಉಜ್ಜ್ವಲ=ಹೊಳೆಯುವ; ಅಂಗೈಃ=ಅವಯವಗಳಿಂದ; ಸಮಂ=ಕೂಡಿ ಕೊಂಡು; ಸಮುತ್ಪಾದ್ಯ=ಸೃಷ್ಟಿಸಿ; ಭವ=ರುದ್ರನ; ಅನುಭಾವ=ಅನುಗ್ರಹದಿಂದ; ಆಗತ= ಬಂದಿರುವ; ತತ್=ಕಾಮನ; ಪಿತೃತ್ವ=ತಂದೆತನದ; ಪ್ರಥಾಂ=ಪ್ರಸಿದ್ಧಿಯನ್ನು; ದ್ಯತಿ ಸ್ಮ=ಖಂಡಿಸಿದನು.

ಕೃಷ್ಣನು ತನಗೆ ಸಂತತಿಯಾಗುವುದಕ್ಕಾಗಿ ರುದ್ರನ ತಪಸ್ಸನ್ನು ಮಾಡಿದನು. ಒಲಿದ ರುದ್ರನ ಅನುಗ್ರಹದಿಂದ ಆತನಿಗೆ ಸಂತತಿಯಾಯಿತು ಎಂಬ ಒಂದು ಮಾತು ಚಾಲ್ತಿಯಲ್ಲಿ ಇದೆ. ಕೃಷ್ಣನು ತನ್ನನ್ನು ನಂಬಿದವರಿಗೆ ಇಂಬು ಕೊಡುವವನು. ತಾನು ಪರಿಪೂರ್ಣ. ಯಾವುದರ ಕೊರತೆಯೂ ಇಲ್ಲದವ. ಆದ್ದರಿಂದ ತಾನು ಯಾವುದಕ್ಕಾಗಿಯೂ ಯಾರನ್ನೂ ಆಶ್ರಯಿಸುವ ಅಗತ್ಯ ಇಲ್ಲ. ಇದನ್ನು ಸಾತ್ವಿಕರಿಗೆ ತಿಳಿಸಬೇಕಾಗಿದೆ. ಅದಕ್ಕಾಗಿ ಯುದ್ಧರಂಗದಲ್ಲಿಯೇ ಪ್ರದ್ಯುಮ್ನನನ್ನು ತನ್ನ ಮನಸ್ಸಿನಿಂದ ಸೃಷ್ಟಿಸಿದನು. ಬಹಳ ಸುಂದರನೂ ಆಗಿದ್ದನು. ಇದನ್ನು ಕಂಡ ಸಾತ್ವಿಕರು ಈ ರೀತಿ ತಿಳಿದರು– ಕೃಷ್ಣನು ರುದ್ರನ ತಪಸ್ಸುಮಾಡಿ ಸಂತತಿಯನ್ನು ಪಡೆದದ್ದು ಕೇವಲ ನರನಟನೆ ಎಂದು.

**ಈಶಾಪರೋಕ್ಷಸಮಕಾಲಮಶೇಷವಿದ್ಯಾಽಬಾಧ್ಯಂ**
**ಪ್ರಸಾಧ್ಯ ತದಿದಂ ಸಕಲಂ ದ್ವಿಷತ್ಸು ।**
**ಶ್ರೀಶಾರ್ಙ್ಗಪಾಣಿಚರಣೇ ನಿಖಿಲಂ ಸಮರ್ಪ್ಯ**
**ಸ್ವೋಪಾರ್ಜಿತಂ ಸಮಲಭಂತ ಮಹಾಪ್ರಸಾದಮ್ ॥ ೮ ॥**

ಈಶ=ದೇವರ; ಅಪರೋಕ್ಷ=ದರ್ಶನದ; ಸಮ=ಸಮಾನವಾದ; ಕಾಲಂ=ಸಮಯ ವುಳ್ಳ; ದ್ವಿಷತ್ಸು=ಶತ್ರುಗಳಲ್ಲಿ; ತತ್=ಆ; ಇದಂ=ಈ; ಸಕಲಂ=ಎಲ್ಲವನ್ನೂ; ಅಶೇಷ=ಎಲ್ಲಾ;

ವಿದ್ಯಾ=ವಿದ್ಯೆಯಿಂದ; ಅಬಾಧ್ಯಾಂ=ಅಬಾಧ್ಯವನ್ನಾಗಿ; ಪ್ರಸಾಧ್ಯ=ಸಾಧಿಸಿ; ಶ್ರೀ=ಕಾಂತಿವುಳ್ಳ; ಶಾರ್ಙ್ಗ=ಈ ಹೆಸರಿನ ಧನುಸ್ಸು; ಪಾಣಿ=ಕೈಯಲ್ಲಿ; ಚರಣೇ=ಪಾದದಲ್ಲಿ; ಸ್ವ=ತಮ್ಮಿಂದ; ಉಪಾರ್ಜಿತಂ=ಸಂಪಾದಿಸಲ್ಪಟ್ಟ; ನಿಖಿಲಂ=ಎಲ್ಲವನ್ನೂ; ಸಮರ್ಪ್ಯ=ಅರ್ಪಿಸಿ; ಮಹಾ=ದೊಡ್ಡ; ಪ್ರಸಾದಂ=ಪ್ರಸಾದವನ್ನು; ಸಮಲಭಂತ=ಹೊಂದಿದರು.

ಕೃಷ್ಣನ ಭಟರು ಶತ್ರುಸೈನ್ಯದಲ್ಲಿ ಹಿಂದೆ ಹೇಳಿದಂತೆ ಹೊಡೆತ ಬಡಿತಾದಿಗಳನ್ನು ಮಾಡಿದರು. ಇವರು ಹೊಡೆಯುವುದು; ಅವರು ಹೊಡೆತ ತಿನ್ನುವುದು ಇವೆಲ್ಲ ಕೃಷ್ಣನ ದರ್ಶನ ಆಗುತ್ತಿರುವಂತೆ ನಡೆಯುತ್ತಿತ್ತು. ಅದ್ವೈತಶಾಸ್ತ್ರಪ್ರಕಾರ ದೇವರ ದರ್ಶನದಿಂದ ಯಾವುದು ತೋರುವುದಿಲ್ಲವೋ ಅದು ಸುಳ್ಳು. ಹಗ್ಗ ತೋರಿದರೆ ಈ ತನಕ ತೋರುತ್ತಿದ್ದ ಹಾವು ಇಲ್ಲವಾಗುತ್ತದೆ. ಇದರಿಂದ ಹಾವು ಸುಳ್ಳು ಎಂದಾಗುತ್ತದೆ. ಹಗ್ಗ ತೋರಿದಾಗಲೂ ಹಾವು ತೋರುತ್ತಿದ್ದರೆ ಹಾವು ಸತ್ಯ ಎಂದು ಅರ್ಥ. ಹಾಗೆಯೇ ದೇವರ ದರ್ಶನವಾದಾಗಲೂ ಯಾವುದು ಇರುತ್ತದೋ, ತೋರುತ್ತದೋ ಅದು ಸತ್ಯ. ಸದ್ಯ ಈಗ ಯುದ್ಧದಲ್ಲಿ ನಡೆಯುವ ಹೊಡೆತಬಡಿತಾದಿಗಳು ಸತ್ಯ ಎಂದಾಯಿತು. ಯಾಕೆಂದರೆ ದೇವರಾದ ಕೃಷ್ಣನ ದರ್ಶನವನ್ನು ಮಾಡಿಕೊಂಡೇ ಎರಡೂ ಕಡೆಯವರು ಇದನ್ನು ಮಾಡುವುದರಿಂದ. ಆದ್ದರಿಂದ ಈ ಜಗತ್ತು ಪಾರಮಾರ್ಥಿಕ; ವ್ಯಾವಹಾರಿಕ ಅಲ್ಲ ಎಂದು ಕೃಷ್ಣಭಟರು ಸಮರ್ಥಿಸಿದರು. ಇಂತಹ ಸೇವೆಯನ್ನು ಕೃಷ್ಣನ ಭಟರು ಕೃಷ್ಣನ ಚರಣದಲ್ಲಿ ಸಮರ್ಪಿಸಿದರು. ಇದರಿಂದ ದೇವರಿಗೆ ಬಹಳ ಪ್ರೀತಿಯಾಯಿತು. ಈ ಭಟರಿಗೆ ಮೋಕ್ಷರೂಪ ಪ್ರಸಾದವನ್ನೇ ಅನುಗ್ರಹಿಸಿದನು.

**ಸಂದೇಶ** : ಪ್ರತಿಮೆಯಲ್ಲಿ ಅರ್ಚಿಸುವ ಪೂಜೆಗಿಂತ ಪರವಾದಿಗಳನ್ನು ನಿಗ್ರಹಿಸಿ ಜಗತ್‌ಸತ್ಯತ್ವಾದಿಗಳನ್ನು ಸಾಧಿಸುವುದು ಇನ್ನೂ ದೊಡ್ಡ ಪೂಜೆ. ಇದರಿಂದ ದೇವರು ಬಹಳ ಪ್ರೀತನಾಗುತ್ತಾನೆ.

**ಸಂಪ್ರೇಷ್ಯ ಶೈವೀಂ ಪ್ರಥಮಂ ಗದಾಂ ಯೋ ಜರಾಭಿಧಾನಾಂ ಜನನೀಂ ಜಘಾನ ।**
**ಜಾತ್ಯುತ್ತರೇಣೈವ ಪರಾಜಿತೋಽಭೂದಾತ್ಮೋದಿತವ್ಯಾಹತಿಹೇತುನಾಽಸೌ ॥ ೯ ॥**

ಯಃ=ಯಾರು; ಪ್ರಥಮಂ=ಮೊದಲು; ಶೈವೀಂ=ಶಿವಸಂಬಂಧಿಯಾದ; ಗದಾಂ=ಗದೆಯನ್ನು; ಸಂಪ್ರೇಷ್ಯ=ಕಳಿಸಿ; ಜರಾ=ಜರಾ ಎಂದು; ಅಭಿಧಾನಂ=ಹೆಸರುಳ್ಳ; ಜನನೀಂ=ತಾಯಿಯನ್ನು; ಜಘಾನ=ಕೊಂದನೋ; ಅಸೌ=ಅವನು; ಆತ್ಮ=ತನ್ನಿಂದ; ಉದಿತ=ಹೇಳಲ್ಪಟ್ಟ; ವ್ಯಾಹತಿ=ವಿರೋಧಕ್ಕೆ; ಹೇತುನಾ=ಕಾರಣವಾದ; ಜಾತಿ=ಜಾತಿ ಎಂಬ; ಉತ್ತರೇಣ ಏವ=ಉತ್ತರದಿಂದಲೇ; ಪರಾಜಿತಃ=ಸೋತವನು; ಅಭೂತ್=ಆದನು.

ಅಳಿಯ ಕಂಸನು ಸತ್ತ ಸುದ್ದಿಯನ್ನು ಜರಾಸಂಧನು ತಿಳಿದು ಸಿಟ್ಟಾದನು. ಸಮಗ್ರ ಮಧುರೆಯನ್ನೇ ಧ್ವಂಸ ಮಾಡುತ್ತೇನೆಂದು ಸಂಕಲ್ಪ ಮಾಡಿದನು. ಆತನಲ್ಲಿ ರುದ್ರನು

ಕೊಟ್ಟಿರುವ ಒಂದು ಗದೆ ಇತ್ತು. ಅದನ್ನು ಮಧುರೆಗೆ ಬಿಸಾಡಲು ಇಚ್ಛಿಸಿದನು. ಆಗ ನಾರದರು ಬಂದರು. ಅವರಲ್ಲಿ ಮಧುರೆಯ ದೂರವನ್ನು ಕೇಳಿದನು. ಅನಂತರ ಗದೆಯನ್ನು ಬಿಸಾಡಿದನು. ಅದು ಒಂದು ಯೋಜನ ಹಿಂದೆ ಬಿತ್ತು. ಆತನ ತಾಯಿಯಾದ ಜರಾ ಎಂಬ ರಾಕ್ಷಸಿಯನ್ನೇ ಕೊಂದಿತು.

ಇದನ್ನು ರಾಜರು ಪರವಾದಿಗಳ ನಿಗ್ರಹಕ್ಕೆ ಹೋಲಿಸುತ್ತಾರೆ. ಪರವಾದಿಗಳನ್ನು ನಾನಾ ರೀತಿಯಲ್ಲಿ ಸೋಲಿಸಲು ಸಾಧ್ಯ ಇದೆ. ಅದರಲ್ಲಿ ಜಾತಿ ಉತ್ತರದಿಂದ ಸೋಲಿಸುವುದೂ ಒಂದು. ಜಾತಿ ಉತ್ತರ ಅಂದರೆ ತನ್ನ ಮಾತಿಗೆ ತಾನು ವಿರುದ್ಧವಾಗಿ ಮಾತನಾಡುವುದು. ಉದಾ.: "ನಾನು ಮೂಕ. ನನ್ನ ತಾಯಿ ಬಂಜೆ" ಇತ್ಯಾದಿ.

ದೇವರನ್ನು ಹೊರತಾಗಿ ಎಲ್ಲವೂ ಸುಳ್ಳು ಎಂಬುದಕ್ಕೆ ಅದ್ವೈತಿಗಳು ಶ್ರುತಿಯನ್ನು ಉದಾಹರಿಸುತ್ತಾರೆ. ಆ ಶ್ರುತಿಯು ದೇವರಿಗಿಂತ ಬೇರೆಯಾದುದರಿಂದ ಅದು ಸುಳ್ಳು ಎಂದಾಯಿತು. ಯಾವುದು ಸುಳ್ಳೋ ಅದು ಏನನ್ನೂ ಸಾಧಿಸುವುದಿಲ್ಲ. ಉದಾ.: ಹಾವಾಗಿ ಕಂಡ ಹಗ್ಗವು ಕಚ್ಚುವುದಿಲ್ಲ. ಆದ್ದರಿಂದ ಈ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವುದಿಲ್ಲ. ಶ್ರುತಿಯು ಸತ್ಯವಾದರೆ ಬ್ರಹ್ಮಾತಿರಿಕ್ತವಾಗಿ ಎಲ್ಲವೂ ಸುಳ್ಳು ಎಂಬ ಮಾತು ಸುಳ್ಳಾಯಿತು. ಹೀಗೆ ಅವರ ಮಾತಿನಿಂದಲೇ ಅವರನ್ನು ಸೋಲಿಸಲು ಆಗುತ್ತದೆ.

ಈ ರೀತಿ ಜರಾಸಂಧನು ತಾನು ಬೀಸಿದ ಗದೆಯು ತನಗೆ ಮುಳುವಾದಂತೆ ಮಾಯಾವಾದಿಗಳ ಮಾತು ಅವರಿಗೇ ಮುಳುವಾಯಿತು.

**ಸಂವಾದಂ ಕಿಲ ಕೇऽಪಿ ಬಭ್ರುರಪರೇऽನುಕ್ತಿಂ ಶರೈಸ್ತಾಡಿತಾಃ**
**ನಿರ್ಯಾಂತಃ ಕಟಕಾನ್ನಿರುಂಧತಿ ನಿಜೇ ಕ್ರುದ್ಧಾ ವಿರೋಧಂ ಪರೇ ।**
**ಧ್ವಸ್ತಾಃ ಕೇಚಿದಸಂಗತಿಂ ನಿಜಜನ್ಯೈಃ ಸರ್ವೇ ಜಯ್ಯೆರ್ನ್ಯೂನತಾ–**
**ಮಾಧಿಕ್ಯಂ ಹತಿಭಿಃ ಪರಾಜಿತಮಭೂದಿತ್ಥಂ ತದದ್ವೈತಿವತ್ ॥ ೧೦ ॥**

ಕೇ ಅಪಿ=ಕೆಲವರು; ಸಂವಾದಂ=ಒಳ್ಳೆಯ ಮಾತನ್ನು; ಬಭ್ರುಃ ಕಿಲ=ಧರಿಸಿದರು; ಶರೈಃ=ಬಾಣಗಳಿಂದ; ತಾಡಿತಾಃ=ಹೊಡೆಯಲ್ಪಟ್ಟ; ಅಪರೇ=ಕೆಲವರು; ಅನುಕ್ತಿಂ=ಮೌನವನ್ನು; ಕ್ರುದ್ಧಾಃ=ಸಿಟ್ಟುಗೊಂಡ; ಪರೇ=ಕೆಲವರು; ಕಟಕಾತ್=ಸೈನ್ಯದಿಂದ; ನಿರ್ಯಾಂತಃ= ಹೊರಟವರಾಗಿ; ನಿಜೇ=ತನ್ನವರು; ನಿರುಂಧತಿ=ತಡೆಯುತ್ತಿರಲು; ವಿರೋಧಂ=ವಿರೋಧವನ್ನು; ಧ್ವಸ್ತಾಃ=ನಷ್ಟರಾದ; ಕೇಚಿತ್=ಕೆಲವರು; ನಿಜ=ತನ್ನ; ಜನ್ಯೈಃ=ಜನರಿಂದ; ಅಸಂಗತಿಂ=ಅಸಂಬಂಧವನ್ನು; ಸರ್ವೇ=ಎಲ್ಲರೂ; ಜಯ್ಯೈಃ=ಜಯಗಳಿಂದ; ನ್ಯೂನತಾಂ= ನ್ಯೂನತೆಯನ್ನು; ಹತಿಭಿಃ=ಹೊಡೆತಗಳಿಂದ; ಆಧಿಕ್ಯಂ=ಆಧಿಕ್ಯವನ್ನು; ಬಭ್ರುಃ=ಹೊಂದಿದರು; ಇತ್ಥಂ=ಈ ರೀತಿಯಾಗಿ; ತತ್=ಆ ಸೈನ್ಯವು; ಅದ್ವೈತಿವತ್=ಅದ್ವೈತಿಗಳಂತೆ; ಪರಾಜಿತಂ=ಸೋತದ್ದು; ಅಭೂತ್=ಆಯಿತು.

ಇನ್ನೊಂದು ಕ್ರಮದಿಂದ ಶತ್ರುಗಳ ಪರಾಜಯವನ್ನು ತಿಳಿಸುತ್ತಾರೆ. ಯುದ್ಧ

ನಡೆಯುತ್ತಿದೆ. ಆಗ ಕೆಲವರು ಯುದ್ಧ ರಂಗಸ್ಥಳಕ್ಕೆ ಬಂದರು. ಜರಾಸಂಧನು ನೋಡುತ್ತಿರುವಂತೆ ಅವರು ಕೃಷ್ಣನ ಬಳಿಗೆ ಬಂದರು. ಕೃಷ್ಣ ನಿನಗೆ ಜಯವಾಗಲಿ ಎಂದು ಸಂವಾದವನ್ನು ಅಂದರೆ ಒಳ್ಳೆಯ ಮಾತನ್ನು ಹೇಳಿದರು. ಜರಾಸಂಧನ ಬಳಿಗೆ ಬಂದು ಯಾರೂ ಏನೂ ಹೇಳಲಿಲ್ಲ. ಇದು ಜರಾಸಂಧನಿಗೆ ಒಂದು ಅಪಶಕುನದಂತೆ ಆಯಿತು. ಇದೂ ಒಂದು ಆತನಿಗೆ ಸೋಲು. ಕೃಷ್ಣನ ಭಟರು ಪ್ರಯೋಗಿಸುವ ಬಾಣಗಳ ಹೊಡೆತದಿಂದ ಕೆಲವರಿಗೆ ಮಾತನಾಡಲೂ ಆಗುತ್ತಿರಲಿಲ್ಲ. ಬಾಣದ ಹೊಡೆತ ಅಷ್ಟು ತೀಕ್ಷ್ಣವಾಗಿತ್ತು. ಮೂರ್ಛೆಗೊಂಡೇ ಬೀಳುತ್ತಿದ್ದರು. ಇದು ಎರಡನೆಯ ಸೋಲು. ಇನ್ನು ಕೆಲವು ಸೈನಿಕರು ಜರಾಸಂಧನ ಮೇಲೆಯೇ ಸಿಟ್ಟಿನಿಂದ ಆತನ ಸೈನ್ಯವನ್ನು ಬಿಟ್ಟು ಓಡುತ್ತಿದ್ದರು. ಆಗ ಆತನ ಸೈನಿಕರೇ ಕೆಲವರು ತಡೆಯುತ್ತಿದ್ದರು. ಇವರು ತಡೆದವರನ್ನೇ ಬಡಿದು ಓಡುತ್ತಿದ್ದರು. ತಮ್ಮವರಿಗೇ ವಿರೋಧವನ್ನು ಮಾಡುತ್ತಿದ್ದರು. ಇದು ಜರಾಸಂಧನಿಗೆ ಮೂರನೆಯ ಸೋಲು. ಕೃಷ್ಣನ ಸೈನಿಕರ ಹೊಡೆತದಿಂದ ಕೆಲವರ ದೇಹಗಳು ಎಷ್ಟು ಛಿದ್ರಗಳಾಗಿತ್ತೆಂದರೆ ಇವರ ಬಂಧುಗಳಿಗೆ ಹೆಣಗಳ ಪರಿಚಯವೂ ಆಗುತ್ತಿರಲಿಲ್ಲ. ಹೆಣಗಳ ಜೊತೆ ಸಂಗತಿಯನ್ನು, ಸಂಪರ್ಕವನ್ನು ಬೆಳೆಸಲು ಹೆಣಗುತ್ತಿದ್ದರು. ಜರಾಸಂಧ ನನ್ನು ಬೈಯುತ್ತಿದ್ದರು. ಈ ಬೈಗಳನ್ನು ಕೇಳಿಕೊಂಡ ಜರಾಸಂಧನು ಬಳಲುತ್ತಿದ್ದನು. ಇದು ನಾಲ್ಕನೆಯ ಸೋಲು. ಈ ಶತ್ರುಗಳು ತಡೆದುಕೊಳ್ಳಲು ಸಾಧ್ಯವಾಗುವುದಕ್ಕಿಂತಲೂ ಅಧಿಕವಾದ ಹೊಡೆತಗಳನ್ನು ತಿನ್ನುತ್ತಿದ್ದರು. ಇದು ಐದನೆಯ ಸೋಲು. ಅಂತೂ ಜರಾಸಂಧನ ಸೈನಿಕರಿಗೆ ಯಾರಿಗೂ ಯಾವುದೇ ರೀತಿಯಾದ ಜಯ ಇರಲಿಲ್ಲ. ಜಯದ ನ್ಯೂನತೆ ಎದ್ದುಕಾಣುತ್ತಿತ್ತು. ಇದು ಆರನೆಯ, ಕೊನೆಯ ಸೋಲು.

ಮಧ್ವರ ಶಿಷ್ಯರು ಅದ್ವೈತಿಗಳನ್ನೂ ಇದೇ ರೀತಿ ಸೋಲಿಸುತ್ತಿದ್ದರು. ಆರು ರೀತಿಯ ನಿಗ್ರಹಸ್ಥಾನಗಳು ಸೋಲಿಗೆ ಕಾರಣಗಳು. ಒಂದು ಸಂವಾದ– ಮಧ್ವಶಿಷ್ಯರು ಹೇಳಿದ ವಿಷಯಗಳನ್ನು ಅದ್ವೈತಿಗಳು ಒಪ್ಪಿದರೆ ಇದಕ್ಕೆ ಸಂವಾದ ಎಂದು ಹೆಸರು. ಈ ಶಿಷ್ಯರು ಹೇಳುವ ವಿಷಯವು ಯದ್ಯಪಿ ಮಾಯಿಗಳಿಗೆ ರುಚಿಸುವುದಿಲ್ಲ. ಆದರೂ ಒಪ್ಪಿದರೆಂದರೆ ಮಾಯಿಗಳಿಗೆ ಸೋಲು ಬಂತೆಂದೇ ಅರ್ಥ. ಇಷ್ಟೇ ಅಲ್ಲ– ಇವರ ಮಾತಿಗೆ ಪುಷ್ಟಿಯೂ ಬಂತು. ಯಾಕೆಂದರೆ ಪರವಾದಿಗಳೇ ಒಪ್ಪಿದ್ದರಿಂದ. ಈ ಸಂವಾದದಿಂದ ಮಾಯಿಗಳ ನಿಗ್ರಹವಾಯಿತು.

ಈ ಶಿಷ್ಯರು ಮಾಯಿಗಳಿಗೆ ಒಂದು ಪ್ರಶ್ನೆಯನ್ನು ಹಾಕಿದರು. ಆ ಪ್ರಶ್ನೆಗೆ ಉತ್ತರಿಸಲು ಅಸಮರ್ಥರಾದರು. ನಿರುತ್ತರರಾದರು. ಇದು ಅನುಕ್ತಿ– ಅಂದರೆ ಮಾತಿಲ್ಲ ಎಂಬ ನಿಗ್ರಹಸ್ಥಾನ. ಇದರಿಂದಾಗಿ ಮಾಯಿಗಳು ಸೋತರು ಎಂದು ಪ್ರತ್ಯಕ್ಷವಾಗಿ ಹೇಳಬೇಕಾಗಿಲ್ಲ ತಾನೆ?

ಮೂರನೆಯದ್ದು ವಿರೋಧ ಎಂಬ ನಿಗ್ರಹ– ಜರಾಸಂಧನ ಸೈನ್ಯದಲ್ಲಿ ಪರಸ್ಪರ

ಕೊಟ್ಟಿರುವ ಒಂದು ಗದೆ ಇತ್ತು. ಅದನ್ನು ಮಧುರೆಗೆ ಬಿಸಾಡಲು ಇಚ್ಛಿಸಿದನು. ಆಗ ನಾರದರು ಬಂದರು. ಅವರಲ್ಲಿ ಮಧುರೆಯ ದೂರವನ್ನು ಕೇಳಿದನು. ಅನಂತರ ಗದೆಯನ್ನು ಬಿಸಾಡಿದನು. ಅದು ಒಂದು ಯೋಜನ ಹಿಂದೆ ಬಿತ್ತು. ಆತನ ತಾಯಿಯಾದ ಜರಾ ಎಂಬ ರಾಕ್ಷಸಿಯನ್ನೇ ಕೊಂದಿತು.

ಇದನ್ನು ರಾಜರು ಪರವಾದಿಗಳ ನಿಗ್ರಹಕ್ಕೆ ಹೋಲಿಸುತ್ತಾರೆ. ಪರವಾದಿಗಳನ್ನು ನಾನಾ ರೀತಿಯಲ್ಲಿ ಸೋಲಿಸಲು ಸಾಧ್ಯ ಇದೆ. ಅದರಲ್ಲಿ ಜಾತಿ ಉತ್ತರದಿಂದ ಸೋಲಿಸುವುದೂ ಒಂದು. ಜಾತಿ ಉತ್ತರ ಅಂದರೆ ತನ್ನ ಮಾತಿಗೆ ತಾನು ವಿರುದ್ಧವಾಗಿ ಮಾತನಾಡುವುದು. ಉದಾ.: "ನಾನು ಮೂಕ. ನನ್ನ ತಾಯಿ ಬಂಜೆ" ಇತ್ಯಾದಿ.

ದೇವರನ್ನು ಹೊರತಾಗಿ ಎಲ್ಲವೂ ಸುಳ್ಳು ಎಂಬುದಕ್ಕೆ ಅದ್ವೈತಿಗಳು ಶ್ರುತಿಯನ್ನು ಉದಾಹರಿಸುತ್ತಾರೆ. ಆ ಶ್ರುತಿಯು ದೇವರಿಗಿಂತ ಬೇರೆಯಾದುದರಿಂದ ಅದು ಸುಳ್ಳು ಎಂದಾಯಿತು. ಯಾವುದು ಸುಳ್ಳೋ ಅದು ಏನನ್ನೂ ಸಾಧಿಸುವುದಿಲ್ಲ. ಉದಾ.: ಹಾವಾಗಿ ಕಂಡ ಹಗ್ಗವು ಕಚ್ಚುವುದಿಲ್ಲ. ಆದ್ದರಿಂದ ಈ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವುದಿಲ್ಲ. ಶ್ರುತಿಯು ಸತ್ಯವಾದರೆ ಬ್ರಹ್ಮಾತಿರಿಕ್ತವಾಗಿ ಎಲ್ಲವೂ ಸುಳ್ಳು ಎಂಬ ಮಾತು ಸುಳ್ಳಾಯಿತು. ಹೀಗೆ ಅವರ ಮಾತಿನಿಂದಲೇ ಅವರನ್ನು ಸೋಲಿಸಲು ಆಗುತ್ತದೆ.

ಈ ರೀತಿ ಜರಾಸಂಧನು ತಾನು ಬೀಸಿದ ಗದೆಯು ತನಗೆ ಮುಳುವಾದಂತೆ ಮಾಯಾವಾದಿಗಳ ಮಾತು ಅವರಿಗೇ ಮುಳುವಾಯಿತು.

**ಸಂವಾದಂ ಕಿಲ ಕೇಽಪಿ ಬಭ್ರುರಪರೇಽನುಕ್ತಿಂ ಶರೈಸ್ತಾಡಿತಾಃ**
**ನಿರ್ಯಾಂತಃ ಕಟಕಾನ್ನಿರುಂಧತಿ ನಿಜೇ ಕ್ರುದ್ಧಾ ವಿರೋಧಂ ಪರೇ ।**
**ಧ್ವಸ್ತಾಃ ಕೇಚಿದಸಂಗತಿಂ ನಿಜಜನ್ಯೈಃ ಸರ್ವೇ ಜಯ್ಯೈರ್ನ್ಯೂನತಾ-**
**ಮಾಧಿಕ್ಯಂ ಹತಿಭಿಃ ಪರಾಜಿತಮಭೂದಿತ್ಥಂ ತದದ್ವೈತಿವತ್ ॥ ೧೦ ॥**

ಕೇ ಅಪಿ=ಕೆಲವರು; ಸಂವಾದಂ=ಒಳ್ಳೆಯ ಮಾತನ್ನು; ಬಭ್ರುಃ ಕಿಲ=ಧರಿಸಿದರು; ಶರೈಃ=ಬಾಣಗಳಿಂದ; ತಾಡಿತಾಃ=ಹೊಡೆಯಲ್ಪಟ್ಟ; ಅಪರೇ=ಕೆಲವರು; ಅನುಕ್ತಿಂ=ಮೌನ ವನ್ನು; ಕ್ರುದ್ಧಾಃ=ಸಿಟ್ಟುಗೊಂಡ; ಪರೇ=ಕೆಲವರು; ಕಟಕಾತ್=ಸೈನ್ಯದಿಂದ; ನಿರ್ಯಾಂತಃ= ಹೊರಟವರಾಗಿ; ನಿಜೇ=ತನ್ನವರು; ನಿರುಂಧತಿ=ತಡೆಯುತ್ತಿರಲು; ವಿರೋಧಂ=ವಿರೋಧ ವನ್ನು; ಧ್ವಸ್ತಾಃ=ನಷ್ಟರಾದ; ಕೇಚಿತ್=ಕೆಲವರು; ನಿಜ=ತನ್ನ; ಜನ್ಯೈಃ=ಜನರಿಂದ; ಅಸಂಗತಿಂ=ಅಸಂಬಂಧವನ್ನು; ಸರ್ವೇ=ಎಲ್ಲರೂ; ಜಯ್ಯೈಃ=ಜಯಗಳಿಂದ; ನ್ಯೂನತಾಂ= ನ್ಯೂನತೆಯನ್ನು; ಹತಿಭಿಃ=ಹೊಡೆತಗಳಿಂದ; ಆಧಿಕ್ಯಂ=ಆಧಿಕ್ಯವನ್ನು; ಬಭ್ರುಃ=ಹೊಂದಿ ದರು; ಇತ್ಥಂ=ಈ ರೀತಿಯಾಗಿ; ತತ್=ಆ ಸೈನ್ಯವು; ಅದ್ವೈತಿವತ್=ಅದ್ವೈತಿಗಳಂತೆ; ಪರಾಜಿತಂ=ಸೋತದ್ದು; ಅಭೂತ್=ಆಯಿತು.

ಇನ್ನೊಂದು ಕ್ರಮದಿಂದ ಶತ್ರುಗಳ ಪರಾಜಯವನ್ನು ತಿಳಿಸುತ್ತಾರೆ. ಯುದ್ಧ

ನಡೆಯುತ್ತಿದೆ. ಆಗ ಕೆಲವರು ಯುದ್ಧ ರಂಗಸ್ಥಳಕ್ಕೆ ಬಂದರು. ಜರಾಸಂಧನು ನೋಡುತ್ತಿರುವಂತೆ ಅವರು ಕೃಷ್ಣನ ಬಳಿಗೆ ಬಂದರು. ಕೃಷ್ಣ ನಿನಗೆ ಜಯವಾಗಲಿ ಎಂದು ಸಂವಾದವನ್ನು ಅಂದರೆ ಒಳ್ಳೆಯ ಮಾತನ್ನು ಹೇಳಿದರು. ಜರಾಸಂಧನ ಬಳಿಗೆ ಬಂದು ಯಾರೂ ಏನೂ ಹೇಳಲಿಲ್ಲ. ಇದು ಜರಾಸಂಧನಿಗೆ ಒಂದು ಅಪಶಕುನದಂತೆ ಆಯಿತು. ಇದೂ ಒಂದು ಆತನಿಗೆ ಸೋಲು. ಕೃಷ್ಣನ ಭಟರು ಪ್ರಯೋಗಿಸುವ ಬಾಣಗಳ ಹೊಡೆತದಿಂದ ಕೆಲವರಿಗೆ ಮಾತನಾಡಲೂ ಆಗುತ್ತಿರಲಿಲ್ಲ. ಬಾಣದ ಹೊಡೆತ ಅಷ್ಟು ತೀಕ್ಷ್ಣವಾಗಿತ್ತು. ಮೂರ್ಛೆಗೊಂಡೇ ಬೀಳುತ್ತಿದ್ದರು. ಇದು ಎರಡನೆಯ ಸೋಲು. ಇನ್ನು ಕೆಲವು ಸೈನಿಕರು ಜರಾಸಂಧನ ಮೇಲೆಯೇ ಸಿಟ್ಟಿನಿಂದ ಆತನ ಸೈನ್ಯವನ್ನು ಬಿಟ್ಟು ಓಡುತ್ತಿದ್ದರು. ಆಗ ಆತನ ಸೈನಿಕರೇ ಕೆಲವರು ತಡೆಯುತ್ತಿದ್ದರು. ಇವರು ತಡೆದವರನ್ನೇ ಬಡಿದು ಓಡುತ್ತಿದ್ದರು. ತಮ್ಮವರಿಗೇ ವಿರೋಧವನ್ನು ಮಾಡುತ್ತಿದ್ದರು. ಇದು ಜರಾಸಂಧನಿಗೆ ಮೂರನೆಯ ಸೋಲು. ಕೃಷ್ಣನ ಸೈನಿಕರ ಹೊಡೆತದಿಂದ ಕೆಲವರ ದೇಹಗಳು ಎಷ್ಟು ಛಿದ್ರಗಳಾಗಿತ್ತೆಂದರೆ ಇವರ ಬಂಧುಗಳಿಗೆ ಹೆಣಗಳ ಪರಿಚಯವೂ ಆಗುತ್ತಿರಲಿಲ್ಲ. ಹೆಣಗಳ ಜೊತೆ ಸಂಗತಿಯನ್ನು, ಸಂಪರ್ಕವನ್ನು ಬೆಳೆಸಲು ಹೆಣಗುತ್ತಿದ್ದರು. ಜರಾಸಂಧ ನನ್ನು ಬೈಯುತ್ತಿದ್ದರು. ಈ ಬೈಗಳನ್ನು ಕೇಳಿಕೊಂಡ ಜರಾಸಂಧನು ಬಳಲುತ್ತಿದ್ದನು. ಇದು ನಾಲ್ಕನೆಯ ಸೋಲು. ಈ ಶತ್ರುಗಳು ತಡೆದುಕೊಳ್ಳಲು ಸಾಧ್ಯವಾಗುವುದಕ್ಕಿಂತಲೂ ಅಧಿಕವಾದ ಹೊಡೆತಗಳನ್ನು ತಿನ್ನುತ್ತಿದ್ದರು. ಇದು ಐದನೆಯ ಸೋಲು. ಅಂತೂ ಜರಾಸಂಧನ ಸೈನಿಕರಿಗೆ ಯಾರಿಗೂ ಯಾವುದೇ ರೀತಿಯಾದ ಜಯ ಇರಲಿಲ್ಲ. ಜಯದ ನ್ಯೂನತೆ ಎದ್ದುಕಾಣುತ್ತಿತ್ತು. ಇದು ಆರನೆಯ, ಕೊನೆಯ ಸೋಲು.

ಮಧ್ವರ ಶಿಷ್ಯರು ಅದ್ವೈತಿಗಳನ್ನೂ ಇದೇ ರೀತಿ ಸೋಲಿಸುತ್ತಿದ್ದರು. ಆರು ರೀತಿಯ ನಿಗ್ರಹಸ್ಥಾನಗಳು ಸೋಲಿಗೆ ಕಾರಣಗಳು. ಒಂದು ಸಂವಾದ– ಮಧ್ವಶಿಷ್ಯರು ಹೇಳಿದ ವಿಷಯಗಳನ್ನು ಅದ್ವೈತಿಗಳು ಒಪ್ಪಿದರೆ ಇದಕ್ಕೆ ಸಂವಾದ ಎಂದು ಹೆಸರು. ಈ ಶಿಷ್ಯರು ಹೇಳುವ ವಿಷಯವು ಯದ್ಯಪಿ ಮಾಯಿಗಳಿಗೆ ರುಚಿಸುವುದಿಲ್ಲ. ಆದರೂ ಒಪ್ಪಿದರೆಂದರೆ ಮಾಯಿಗಳಿಗೆ ಸೋಲು ಬಂತೆಂದೇ ಅರ್ಥ. ಇಷ್ಟೇ ಅಲ್ಲ– ಇವರ ಮಾತಿಗೆ ಪುಷ್ಟಿಯೂ ಬಂತು. ಯಾಕೆಂದರೆ ಪರವಾದಿಗಳೇ ಒಪ್ಪಿದ್ದರಿಂದ. ಈ ಸಂವಾದದಿಂದ ಮಾಯಿಗಳ ನಿಗ್ರಹವಾಯಿತು.

ಈ ಶಿಷ್ಯರು ಮಾಯಿಗಳಿಗೆ ಒಂದು ಪ್ರಶ್ನೆಯನ್ನು ಹಾಕಿದರು. ಆ ಪ್ರಶ್ನೆಗೆ ಉತ್ತರಿಸಲು ಅಸಮರ್ಥರಾದರು. ನಿರುತ್ತರರಾದರು. ಇದು ಅನುಕ್ತಿ– ಅಂದರೆ ಮಾತಿಲ್ಲ ಎಂಬ ನಿಗ್ರಹಸ್ಥಾನ. ಇದರಿಂದಾಗಿ ಮಾಯಿಗಳು ಸೋತರು ಎಂದು ಪ್ರತ್ಯಕ್ಷವಾಗಿ ಹೇಳಬೇಕಾಗಿಲ್ಲ ತಾನೆ?

ಮೂರನೆಯದ್ದು ವಿರೋಧ ಎಂಬ ನಿಗ್ರಹ– ಜರಾಸಂಧನ ಸೈನ್ಯದಲ್ಲಿ ಪರಸ್ಪರ

ವಿರೋಧದಂತೆ, ಮಾಯಿಗಳು ಪರಸ್ಪರ ವಿರುದ್ಧವಾಗಿ ಮಾತನಾಡಿದರೆ ಆ ವಿರೋಧವನ್ನು ಈ ಶಿಷ್ಯರು ತೋರಿಸಿಕೊಡುತ್ತಾರೆ. ಆಗ ಮಾಯಿಗಳು ತಲೆಕೆಳಗೆಹಾಕಿ ಸೋಲನ್ನು ಒಪ್ಪಿಕೊಳ್ಳಲೇಬೇಕು.

ನಾಲ್ಕನೆಯದ್ದು ಅಸಂಗತಿ ಎಂಬುದು– ಈ ಶಿಷ್ಯರು ಏನೋ ಒಂದು ಪ್ರಶ್ನೆಯನ್ನು ಕೇಳಿದರು. ಉತ್ತರಿಸದೆ ಸುಮ್ಮನಿರಲಾಗಲಿಲ್ಲ. ಉತ್ತರ ಗೊತ್ತಿಲ್ಲ. ಆಗ ಏನೇನೋ ಹೇಳಿದರೆ ಈ ಪ್ರಶ್ನೆಗೆ ಸಂಬಂಧಿಸದ ಮಾತನ್ನು ಹೇಳಿದರೆ ಆಗ ಈ ಶಿಷ್ಯರು ಮಾಯಿಗಳನ್ನು 'ಅಸಂಗತ ಮಾತನಾಡಬೇಡ' ಎಂದು ಗದರಿಸುತ್ತಾರೆ. ಸೋಲು ಸಿದ್ಧ ಎಂದಾದಾಗ ಅಸಂಗತವಾದ ಮಾತು ಬರುತ್ತದೆ.

ಐದು ಮತ್ತು ಆರನೆಯ ನಿಗ್ರಹಸ್ಥಾನಗಳು ನ್ಯೂನ ಮತ್ತು ಆಧಿಕ್ಯ– ವಿಷಯವನ್ನು ಹೇಳಲು ಆರಂಭಿಸುವಾಗ ಮಾಯಿಗಳು ಅದಕ್ಕೆ ಬೇಕಾದ ಪ್ರಮಾಣಾದಿಗಳನ್ನು ಒದಗಿಸದೆ ಮುಗಿಸಿದರೆ ಆಗ ನ್ಯೂನತೆಯೆಂಬ ನಿಗ್ರಹಸ್ಥಾನ. ಈ ಸಂದರ್ಭದಲ್ಲಿ ಮಧ್ವರು "ನಿನ್ನ ಮಾತಿನಲ್ಲಿ ನ್ಯೂನತೆಯಿದೆ" ಎನ್ನುವ ಮೂಲಕ ಸೋಲಿಸುತ್ತಾರೆ. ನೇರವಾಗಿ ವಿಷಯವನ್ನು ಮಂಡಿಸದೆ ಸುತ್ತಿಬಳಸಿ ಮಾತನಾಡುವುದು ಪ್ರಕೃತಕ್ಕೆ ಸಂಬಂಧಿಸಿದ್ದು ಆದರೂ ಅನುಪಯುಕ್ತ. ಇಂತಹ ಮಾತುಗಳನ್ನಾಡಿ ಕಾಲಹರಣ ಮಾಡುವ ಮಾಯಿಗಳನ್ನು ಮಾಧ್ವರು ತರಾಟೆಗೆ ತೆಗೆದುಕೊಳ್ಳುತ್ತಾರೆ– ಅಧಿಕಪ್ರಸಂಗ ಯಾಕೆ ಮಾಡುತ್ತಿ. ಈ ಪ್ರಸಂಗಕ್ಕೆ ಎಷ್ಟು ಬೇಕೋ ಅಷ್ಟೇ ಮಾತನಾಡು. ಅಧಿಕವಾದ್ದು ಬೇಡ ಎಂದು. ಸುತ್ತಿಬಳಸಿ ಯಾವಾಗ ಮಾತನಾಡುವುದು ಅಂದರೆ ತನಗೆ ಸೋಲಿನ ಭೀತಿ ಇರುವಾಗ.

ಹೀಗೆ ಮಾಧ್ವರು ಮಾಯಿಗಳನ್ನು ಆರು ರೀತಿಯಲ್ಲಿ ಸೋಲಿಸುವಂತೆ ಕೃಷ್ಣಭಟರು ಜರಾಸಂಧನ ಸೈನಿಕರನ್ನು ಆರು ರೀತಿಯಲ್ಲಿ ಸೋಲಿಸಿದರು.

**ಸಂಚೂರ್ಣಿತಾಂಗಾಃ ಸಮರೇ ಶರೌಘೈಃ ಸಂಭಿನ್ನಪಾದೋದರಕಂಠಹಸ್ತಾಃ ।**
**ವಿರೇಜುರಶ್ನಂತ ಇವಾಸೃಗಬ್ಧೌ ಫಲಂ ನಿರಾಕಾರಮತಸ್ಯ ತಾವತ್ ॥ ೧೧ ॥**

ಸಮರೇ=ಯುದ್ಧದಲ್ಲಿ; ಸಂಚೂರ್ಣಿತ=ಚೆನ್ನಾಗಿ ಪುಡಿಯಾದ; ಅಂಗಾಃ=ಅವಯವವುಳ್ಳವರಾಗಿ; ಶರ=ಬಾಣಗಳ; ಓಘೈಃ=ಸಮೂಹಗಳಿಂದ; ಸಂಭಿನ್ನ=ಪುಡಿಯಾದ; ಪಾದ=ಕಾಲುಗಳು; ಉದರ=ಹೊಟ್ಟೆಯು. ಕಂಠ=ಕುತ್ತಿಗೆಯು; ಹಸ್ತಾಃ=ಕೈವುಳ್ಳವರಾಗಿ; ನಿರಾಕಾರ=ನಿರಾಕಾರದ; ಮತಸ್ಯ=ಮತದ; ಫಲಂ=ಫಲವನ್ನು; ಅಶ್ನಂತ ಇವ=ಉಣ್ಣುವವರಾಗಿ; ಅಸೃಕ್=ನೆತ್ತರಿನ; ಅಬ್ಧೌ=ಸಮುದ್ರದಲ್ಲಿ; ವಿರೇಜುಃ ತಾವತ್=ಶೋಭಿಸಿದರು.

ಜರಾಸಂಧನ ಸೈನಿಕರು ಸತ್ತು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದಾರೆ. ಯಾವ ಹೆಣಕ್ಕೂ ಒಂದು ಸರಿಯಾದ ಆಕಾರವೇ ಇಲ್ಲ. ಯಾವ ಹೆಣದ ಪರಿಚಯವೂ ಆಗುತ್ತಿಲ್ಲ. ದೇಹದಿಂದ ಹಸ್ತಪಾದಾದಿಗಳು ಕತ್ತರಿಸಲ್ಪಟ್ಟದ್ದು ಮಾತ್ರವಲ್ಲ, ಹಸ್ತಪಾದಾದಿ ಅವಯವ

ಗಳನ್ನು ಪುನಃ ಕೃಷ್ಣಭಟರು ಕತ್ತರಿಸಿ ಚೂರುಚೂರು ಮಾಡಿದ್ದರು. ಆದ್ದರಿಂದ ಹಸ್ತಾದಿಗಳಿಗೂ ಒಂದು ಆಕಾರವೆಂಬುದೇ ಇಲ್ಲ. ಅಂತೂ ಹೆಣಗಳೆಲ್ಲಾ ರಕ್ತದ ಮಡುವಿನಲ್ಲಿ ಬಿದ್ದಿದ್ದವು. ಪ್ರಾಣಹೋಗದ ಸೈನಿಕರು ಅಸಹಾಯಕರಾಗಿ ಅಲ್ಲೇ ಬಿದ್ದಿದ್ದರು. ಮಾಯಿಗಳಿಗೂ ನಿತ್ಯನರಕದಲ್ಲಿ ಇದೇ ಅವಸ್ಥೆ ಬರುವುದು. ಅಲ್ಲಿ ಇದಕ್ಕಿಂತಲೂ ಜಾಸ್ತಿ ದುಃಖವೇ ಇರುತ್ತದೆ. ವೇದದಲ್ಲಿ "ತಂ ಯಥಾ ಯಥಾ ಉಪಾಸತೇ ತಥೈವ ಭವತಿ" ದೇವರನ್ನು ನಾವು ಹೇಗೆ ತಿಳಿಯುತ್ತೇವೋ ದೇವರು ನಮ್ಮನ್ನು ಹಾಗೆಯೇ ಇಡುತ್ತಾನೆ ಎಂದು ಒಂದು ಮಾತಿದೆ. ಈ ಅದ್ವೈತಿಗಳು ತಾವು ದೇವರನ್ನು ನಿರ್ಗುಣ, ನಿರಾಕಾರ ಇತ್ಯಾದಿ ರೂಪದಿಂದಲೇ ಉಪಾಸಿಸುತ್ತಾರೆ. ಅನಂತರ ಸತ್ತು ನಿತ್ಯನರಕಕ್ಕೆ ಹೋಗುತ್ತಾರೆ. ಅಲ್ಲಿ ಇದೇ ರೀತಿ ಆನಂದಾದಿ ಗುಣಗಳಿಂದ ರಹಿತರಾಗಿ ಒಳ್ಳೆಯ ಒಂದು ಆಕಾರ ಶೂನ್ಯರಾಗಿ ದುಃಖ ಸಮುದ್ರದಲ್ಲಿ ಮುಳುಗುತ್ತಾರೆ ಎಂಬುದನ್ನು ಕೃಷ್ಣನ ಭಟರು ಜರಾಸಂಧನ ಸೈನಿಕರನ್ನು ನೆತ್ತರಿನಲ್ಲಿ ಮುಳುಗಿಸುವ ಮೂಲಕ ತೋರಿಸಿಕೊಟ್ಟರು. ಜರಾಸಂಧನ ಸೈನಿಕರು ಕೃಷ್ಣನನ್ನು ಈ ರೀತಿ ಮಾಡಬೇಕೆಂದು ಆಲೋಚಿಸಿದ್ದರು. ಆದ್ದರಿಂದ ತಾವೇ ಅಂತಹ ಅವಸ್ಥೆಗೆ ಒಳಗಾದರು.

<u>**ಸಂದೇಶ**</u> : ಮುಂದೆ ಬರುವ ಅನರ್ಥದಿಂದ ಪಾರಾಗಲು ದೇವರನ್ನು ಈಗ ಶಾಸ್ತ್ರದಲ್ಲಿ ಹೇಳಿದಂತೆ ಉಪಾಸಿಸಬೇಕು.

**ಸ್ವಾಂಗಾಚ್ಛಾದಿತಶತ್ರುಶೌರ್ಯತರಣಿಃ ಶಾರ್ಙ್ಗೇಂದ್ರಚಾಪೋಜ್ಜ್ವಲಃ ।**
**ಶ್ರೀದೇವೀಸ್ಥಿರವಿದ್ಯುದದ್ಭುತರಥಶ್ರೀಮತ್‌ಸಮೀರೇರಿತಃ ।**
**ಕಾವ್ಯೋದ್ಗೀತಕಥ ಶರೌಘಕರಕಾವರ್ಷೈಃ ಸ ಕೃಷ್ಣಾಂಬುದೋ**
**ರಾಜನ್ಯಾನನಪಾಣಿಪಾದಕಮಲವ್ರಾತಾನಲಾವೀತ್ ಕ್ಷಣೇ ॥ ೧೨ ॥**

ಸ್ವ=ತನ್ನ; ಅಂಗ=ಸೈನ್ಯದಿಂದ; ಆಚ್ಛಾದಿತ=ಆವೃತವಾದ; ಶತ್ರು=ಶತ್ರುಗಳ; ಶೌರ್ಯ= ಶಕ್ತಿ ಎಂಬ; ತರಣಿಃ=ಸೂರ್ಯನುಳ್ಳ; ಶಾರ್ಙ್ಗ=ಧನುಸ್ಸೆಂಬ; ಇಂದ್ರಚಾಪ=ಕಾಮನ ಬಿಲ್ಲಿನಿಂದ; ಉಜ್ಜ್ವಲಃ=ಶೋಭಿಸುವ; ಶ್ರೀದೇವೀ=ರಮೆ ಎಂಬ; ಸ್ಥಿರ=ಸ್ಥಿರವಾದ; ವಿದ್ಯುತ್= ಮಿಂಚುಳ್ಳ; ಅದ್ಭುತ=ಆಶ್ಚರ್ಯವಾದ; ರಥ=ರಥ ಎಂಬ; ಶ್ರೀಮತ್=ಕಾಂತಿವುಳ್ಳ; ಸಮೀರ= ವಾಯುವಿನಿಂದ; ಈರಿತಃ=ಒಯ್ಯಲ್ಪಡುವ; ಕಾವ್ಯ=ಶಾಸ್ತ್ರದಲ್ಲಿ; ಉದ್ಗೀತ=ಹೇಳಲ್ಪಡುವ; ಕಥಃ=ಚರಿತ್ರೆವುಳ್ಳ; ಸಃ=ಆ; ಕೃಷ್ಣ=ಕೃಷ್ಣನೆಂಬ; ಅಂಬುದಃ=ಮೋಡವು; ಶರ=ಬಾಣಗಳ; ಓಘ=ಸಮೂಹವೆಂಬ; ಕರಕಾ=ಆಲಿಕಲ್ಲುಗಳ; ವರ್ಷೈಃ=ಮಳೆಯಿಂದ; ರಾಜನ್ಯ= ರಾಜರುಗಳ; ಆನನ=ಮುಖವೆಂಬ; ಪಾಣಿ=ಕೈಗಳೆಂಬ; ಪಾದ=ಕಾಲುಗಳೆಂಬ; ಕಮಲ= ತಾವರೆಗಳ; ವ್ರಾತಾನ್=ಸಮೂಹಗಳನ್ನು; ಕ್ಷಣೇ=ಕ್ಷಣದಲ್ಲಿ; ಅಲಾವೀತ್=ಮುರಿಯಿತು.

ಕೃಷ್ಣನ ಶತ್ರುರಾಜರುಗಳ ಕೈಕಾಲುಗಳನ್ನು ಕತ್ತರಿಸಿ ಹಾಕಿದನು ಎನ್ನುವುದನ್ನು ರಾಜರು ಇಲ್ಲಿ ಆಲಂಕಾರಿಕವಾಗಿ ವರ್ಣಿಸುತ್ತಾರೆ.

ಕೃಷ್ಣನು ಮೋಡದಂತೆ ಇದ್ದಾನೆ. ಮೋಡಕ್ಕೂ ಕೃಷ್ಣನಿಗೂ ಅನೇಕರೀತಿಯ ಹೋಲಿಕೆಯನ್ನು ಈ ಶ್ಲೋಕದಲ್ಲಿ ಕೊಡುತ್ತಾರೆ ರಾಜರು. ಮೋಡವು ತನ್ನ ಶರೀರದಿಂದ ಸೂರ್ಯನನ್ನು ಮುಚ್ಚುತ್ತದೆ. ಕೃಷ್ಣನು ತನ್ನ ಅಂಗದಿಂದ ಅಂದರೆ ತನ್ನ ಸೈನ್ಯದ ಅಂಗಗಳಾದ ಆನೆಯೇ ಮೊದಲಾದ್ದರಿಂದ ಜರಾಸಂಧನ ಸೈನ್ಯದ ಪ್ರತಾಪ ಎಂಬ ಸೂರ್ಯನನ್ನು ಮರೆಮಾಚಿದನು. ಸೂರ್ಯನ ಪ್ರಕಾಶವು ನಮಗೆ ತಾಪವನ್ನು ಕೊಡುತ್ತದೆ. ಜರಾಸಂಧನ ಶಕ್ತಿಯೂ ಸಾತ್ವಿಕರಿಗೆ ತಾಪವನ್ನು ಕೊಡುತ್ತದೆ. ಆದ್ದರಿಂದ ಜರಾಸಂಧನ ಶಕ್ತಿಗೂ ಸೂರ್ಯನಿಗೂ ಹೋಲಿಕೆ. ಜರಾಸಂಧನ ಶಕ್ತಿ ಕೃಷ್ಣನ ಸೈನ್ಯದ ಮುಂದೆ ಮಸುಕಾಯಿತು. ಮೋಡವು ಸೂರ್ಯನನ್ನು ಮರೆಮಾಚಿದಂತೆ. ಮೋಡದ ಜೊತೆಗೆ ಆಕಾಶದಲ್ಲಿ ಕಾಮನಬಿಲ್ಲು ಇರುತ್ತದೆ. ಕೃಷ್ಣನ ಕೈಯಲ್ಲಿ ಧನುಸ್ಸು ಇದೆ. ಕಾಮನಬಿಲ್ಲಿನಲ್ಲಿ ನಾನಾ ಬಣ್ಣಗಳಿವೆ. ಈ ಧನುಸ್ಸು ದೇವರದ್ದು. ಆದ್ದರಿಂದ ಬಣ್ಣಬಣ್ಣದ ನವರತ್ನಾದಿಗಳಿಂದ ಖಚಿತವಾಗಿದೆ. ಹೀಗೆ ಕಾಮನಬಿಲ್ಲಿಗೂ ಕೃಷ್ಣನ ಧನುಸ್ಸಿಗೂ ಸಾಮ್ಯ ಇದೆ. ಮೋಡದಲ್ಲಿ ಮಿಂಚು ಇದೆ. ಕೃಷ್ಣನ ವಕ್ಷಸ್ಥಳದಲ್ಲಿ ಲಕ್ಷ್ಮಿಯು ಸದಾ ಇದ್ದಾಳೆ. ಲಕ್ಷ್ಮಿಯ ಹಾಗೂ ಮಿಂಚಿನ ಬಣ್ಣ ಬಂಗಾರದ್ದು. ಮೋಡವನ್ನು ಗಾಳಿಯು ಆಚೆ ಈಚೆ ಒಯ್ಯುತ್ತದೆ. ಕೃಷ್ಣನು ರಥದಲ್ಲಿ ಇದ್ದಾನೆ. ರಥಕ್ಕೆ ಕಟ್ಟಿದ ಕುದುರೆಗಳು ಬಹಳ ಉತ್ತಮ ಜಾತಿಯದ್ದು. ಅವುಗಳು ಯುದ್ಧದಲ್ಲಿ ಬಹಳ ಪಳಗಿದವುಗಳು. ಅವುಗಳು ಈ ರಥವನ್ನು ಅತ್ತಿತ್ತ ಓಡಿಸುತ್ತವೆ. ಆಗ ರಥದಲ್ಲಿದ್ದ ಕೃಷ್ಣನೂ ಅತ್ತಿತ್ತ ಸಂಚರಿಸುತ್ತಾನೆ. ಈ ರಥವೇ ಒಂದು ಗಾಳಿಯಂತೆ. ಇಷ್ಟೇ ವ್ಯತ್ಯಾಸ– ಮೋಡವನ್ನು ಒಯ್ಯುವ ಗಾಳಿ ಕಣ್ಣಿಗೆ ಕಾಣಿಸುವುದಿಲ್ಲ. ರಥವೆಂಬ ಗಾಳಿಯು ಕಣ್ಣಿಗೆ ಕಾಣಿಸುತ್ತದೆ. ಗಾಳಿಗೆ ಅಭಿಮಾನಿಯಾದ ವಾಯುದೇವರು ಕೃಷ್ಣನಿಗೆ ಮೊದಲಿನ ವಾಹನ. ಸಹಸ್ರನಾಮಗಳಲ್ಲಿ ದೇವರಿಗೆ 'ವಾಯುವಾಹನ' ಎಂಬುದೂ ಒಂದು ನಾಮ. ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಕೃತಿಯನ್ನು, ಋತುಗಳನ್ನು ವರ್ಣಿಸುವಂತೆ ಮೋಡಗಳನ್ನು ವರ್ಣಿಸುತ್ತಾರೆ. ಎಲ್ಲಾ ಜ್ಞಾನಿಗಳೂ ತಮ್ಮ ಶಾಸ್ತ್ರಗಳನ್ನು ಕೃಷ್ಣನಿಗೆ ವರ್ಣಿಸುವ ಸಲುವಾಗಿ ಮೀಸಲಿಟ್ಟಿದ್ದಾರೆ. ಮೋಡಗಳು ಮೈಮನಗಳಿಗೆ ಹಿತಕರವಾಗಿ ಮಳೆಗೆಯ್ಯುತ್ತವೆ. ಹಾಗೆಯೇ ಕುಂಭದ್ರೋಣ ರೂಪದಲ್ಲಿಯೂ ಮಳೆಗುಟ್ಟು ಎಲ್ಲಾ ರೀತಿಯ ಪುಷ್ಪಾದಿಗಳೂ ಮುರಿದು ಬೀಳುವಂತೆ ಮಾಡುತ್ತವೆ. ಹಾಗೆಯೇ ಕೃಷ್ಣನು ಜರಾಸಂಧನ ಪಕ್ಷವನ್ನು ಬಲಾತ್ಕಾರವಾಗಿ ಸೇರಿದ ತನ್ನ ಭಕ್ತರಾದ ರಾಜರಿಗೆ ಮೈಮನಗಳಿಗೆ ನೋವಾಗದಂತೆ ಬಾಣಗಳ ಮಳೆಗರೆದನು. ತಾಮಸರಾದ ರಾಜರುಗಳ ಮುಖಾದಿಗಳೆಂಬ ಕಮಲಪುಷ್ಪಗಳು ಛಿದ್ರಗಳಾಗುವಂತೆ ಕುಂಭದ್ರೋಣರೂಪದಲ್ಲಿ ಬಾಣಗಳೆಂಬ ಮಳೆಯನ್ನು ಸುರಿಸಿದನು.

**ಸಂದೇಶ** : ಕುಂಭದ್ರೋಣರೂಪದಲ್ಲಿ ಮಳೆ ಬಂದಾಗ ದೇವರು ನಮ್ಮಲ್ಲಿರುವ ಪಾಪಗಳನ್ನು ಹೊಡೆದು ಉರುಳಿಸುತ್ತಾನೆ ಎಂದು ಅನುಸಂಧಾನ ಮಾಡಬೇಕು.

**ಮುಹುಃ ಸಮಾಕೃಷ್ಯ ರಣಾವನೌ ರಿಪೂನ್**
**ಕಠೋರಮೃತ್‌ಪಿಂಡಸಮಾನ್ ಪ್ರಚೂರ್ಣಯನ್ ।**
**ಹಲಾಯುಧಃ ಸನ್ಮುಸಲೋ ಹ್ಯಸಾಧಯತ್**
**ಯಶೋಂಕುರಾನ್ ಶೌರ್ಯಮನೋಜ್ಞಬೀಜಜಾನ್ ॥ ೧೩ ॥**

ಹಲ=ನೇಗಿಲು; ಆಯುಧಃ=ಆಯುಧವಾಗಿವುಳ್ಳ; ಸನ್=ಒಳ್ಳೆಯ; ಮುಸಲಃ=ಒನಕೆವುಳ್ಳ ಬಲರಾಮನು; ರಣ=ಯುದ್ಧವೆಂಬ; ಅವನೌ=ಭೂಮಿಯಲ್ಲಿ; ಕಠೋರ=ಗಟ್ಟಿಯಾದ; ಮೃತ್=ಮಣ್ಣಿನ; ಪಿಂಡ=ಹೆಂಟೆಗೆ; ಸಮಾನ್=ಸಮಾನರಾದ; ರಿಪೂನ್=ಶತ್ರುಗಳನ್ನು; ಮುಹುಃ=ಪುನಃ ಪುನಃ; ಸಮಾಕೃಷ್ಯ=ಎಳೆದು; ಪ್ರಚೂರ್ಣಯನ್=ಪುಡಿಮಾಡಿ; ಶೌರ್ಯ=ಪರಾಕ್ರಮವೆಂಬ; ಮನೋಜ್ಞ=ಚಂದದ; ಬೀಜ=ಬೀಜಗಳಿಂದ; ಜಾನ್=ಹುಟ್ಟಿದ; ಯಶಃ=ಕೀರ್ತಿ ಎಂಬ; ಅಂಕುರಾನ್=ಚಿಗುರನ್ನು; ಅಸಾಧಯತ್=ಸಂಪಾದಿಸಿದನು; ಹಿ=ಪ್ರಸಿದ್ಧ.

ಕೃಷಿಕನು ತನ್ನ ನೇಗಿಲಿನಿಂದ ಭೂಮಿಯ ಮಣ್ಣನ್ನು ಎಬ್ಬಿಸುತ್ತಾನೆ. ಆಗ ಎದ್ದಿರುವ ದೊಡ್ಡ ದೊಡ್ಡ ಹೆಂಟೆಗಳನ್ನು ಒನಕೆಯಿಂದ ಕುಟ್ಟಿ ಪುಡಿಮಾಡುತ್ತಾನೆ. ಅನಂತರ ಬೀಜವನ್ನು ಬಿತ್ತಿ ಒಳ್ಳೆಯ ರೀತಿಯಲ್ಲಿ ಚಿಗುರುವಂತೆ ಮಾಡುತ್ತಾನೆ.

ವಾದಿರಾಜರು ಈ ಉದಾಹರಣೆಯ ಮೂಲಕ ಬಲರಾಮನು ಮಾಡುವ ಯುದ್ಧವನ್ನು ವರ್ಣಿಸುತ್ತಾರೆ– ಬಲರಾಮನಿಗೆ ನೇಗಿಲು ಮತ್ತು ಒನಕೆ ಎರಡು ಆಯುಧಗಳು. ಬಲರಾಮನು ತನ್ನ ನೇಗಿಲಿನಿಂದ ಶತ್ರುಗಳನ್ನು ತನ್ನ ಬಳಿಗೆ ಎಳೆದುಕೊಳ್ಳುತ್ತಾನೆ. ಶತ್ರುಗಳು ಗಟ್ಟಿಯಾದ ಮಣ್ಣಿನ ಹೆಂಟೆಯಂತೆ ಬಹಳ ಬಲಿಷ್ಠರು. ತನ್ನ ಒನಕೆಯಿಂದ ಅವರನ್ನು ಚೆನ್ನಾಗಿ ಬಡಿದನು. ಶತ್ರುಗಳು ನೆಲಸಮವಾದರು. ಇಷ್ಟೆಲ್ಲ ಮಾಡಬೇಕಾದರೆ ಬಹಳ ಬಲ ಬೇಕು. ಈತನ ಹೆಸರೇ ಬಲರಾಮತಾನೆ. ಉತ್ತಮ ಬಲದಿಂದಲೇ ದುಷ್ಟರನ್ನು ಬಡಿಯಬಹುದು. ಇದರಿಂದ ಒಳ್ಳೆಯ ಕೀರ್ತಿ ಬರುವುದು. ಕ್ಷತ್ರಿಯರಿಗೆ ಕೀರ್ತಿ ಬರುವುದೇ ಬಲಪ್ರಯೋಗದಿಂದ. ಆದ್ದರಿಂದ ಬಲವೇ ಒಂದು ಧಾನ್ಯದಂತೆ. ಈ ಧಾನ್ಯದಿಂದ ಉಂಟಾದದ್ದು ಕೀರ್ತಿ ಎಂಬ ಸಸ್ಯಗಳು. ಇಂತಹ ಪೈರನ್ನು ಬೆಳೆದ ಕೃಷಿಕನು ಬಲರಾಮನು.

<u>**ಸಂದೇಶ**</u> : ದೇಹದ ಪೋಷಣೆಗೆ ಕಾರಣವಾದ ಆಹಾರವನ್ನು ಬೆಳೆಯುವಾಗಲೂ ಬಲರಾಮನು ಮಾಡುವ ಯುದ್ಧವನ್ನು ಚಿಂತಿಸಿಕೊಳ್ಳಬೇಕು.

**ತತಶ್ಚೈದ್ಯಃ ಕ್ರುದ್ಧಃ ಕರಧೃತಧನುರ್ಮಾರ್ಗಣಗಣಾನ್**
**ವಿಭೌ ವರ್ಷನ್ ವಿಷ್ಣೋಃ ಪ್ರಶಿಖವಿಶಿಖೈರ್ಗ್ಲಾನಿಮಗಮತ್ ।**
**ತದಾ ಭೂಪಾಃ ಕೋಪೋಜ್ಜ್ವಲಿತವದನಾಃ ಕಾರ್ಮುಕಕರಾಃ**
**ಪರೀಯುಃ ಪಾಪಾಂಧಾಃ ಪರಮಪುರುಷಂ ಪಾವಕಮಿವ ॥ ೧೪ ॥**

ತತಃ=ಅನಂತರ; ಕ್ರುದ್ಧಃ=ಸಿಟ್ಟುಗೊಂಡ; ಚೈದ್ಯಃ=ಶಿಶುಪಾಲನ; ಕರ=ಕೈಯಲ್ಲಿ; ಧೃತ=ಧರಿಸಿದ; ಧನುಃ=ಬಿಲ್ಲುಳ್ಳವನಾಗಿ; ಮಾರ್ಗಣ=ಬಾಣಗಳ; ಗಣಾನ್=ಸಮೂಹ ಗಳನ್ನು; ವಿಭೌ=ಕೃಷ್ಣನಲ್ಲಿ; ವರ್ಷನ್=ಪ್ರಯೋಗಿಸಿದವನಾಗಿ; ವಿಷ್ಣೋಃ=ಕೃಷ್ಣನ; ಪ್ರಶಿಖ= ತೀಕ್ಷ್ಣವಾದ ತುದಿವುಳ್ಳ; ವಿಶಿಖೈಃ=ಬಾಣಗಳಿಂದ; ಗ್ಲಾನಿಂ=ದುಃಖವನ್ನು; ಅಗಮತ್= ಹೊಂದಿದನು; ತದಾ=ಆಗ; ಕೋಪ=ಕೋಪದಿಂದ; ಉಜ್ಜ್ವಲಿತ=ಕೆಂಪಾದ; ವದನಾಃ= ಮುಖವುಳ್ಳ; ಕಾರ್ಮುಕ=ಬಿಲ್ಲು; ಕರಾಃ=ಕೈಯಲ್ಲಿವುಳ್ಳ; ಭೂಪಾ=ರಾಜರುಗಳು; ಪಾಪ= ಪಾಪದಿಂದ; ಅಂಧಾಃ=ಕುರುಡರಾಗಿ; ಪಾವಕಂ ಇವ=ಬೆಂಕಿಯನ್ನು ಎಂಬಂತೆ; ಪರಮ= ಸರ್ವೋತ್ತಮನಾದ; ಪುರುಷಂ=ಪುರುಷನಾದ ಕೃಷ್ಣನನ್ನು; ಪರಿ=ಸುತ್ತಲೂ; ಈಯುಃ= ಮುತ್ತಿದರು.

ಕೃಷ್ಣನು ಈ ರೀತಿ ಎಲ್ಲರನ್ನು ಸೋಲಿಸುತ್ತಿದ್ದನು. ಇದನ್ನು ಕಂಡು ಶಿಶುಪಾಲನು ಸಿಟ್ಟಿಗೆದ್ದನು. ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದುಕೊಂಡು ಕೃಷ್ಣನ ಮೇಲೆ ಬಾಣಗಳ ಮಳೆಗೆರೆದನು. ಕೃಷ್ಣನು ಈ ಬಾಣಗಳನ್ನು ತಡೆದನು. ಇದಕ್ಕಿಂತಲೂ ತೀಕ್ಷ್ಣಗಳಾದ ಬಾಣಗಳಿಂದ ಶಿಶುಪಾಲನನ್ನು ಹೊಡೆದನು. ಶಿಶುಪಾಲನು ಇದರಿಂದ ಬಹಳ ಬಸವಳಿದನು. ಇದನ್ನು ಕಂಡ ಇತರ ರಾಜರುಗಳು ಸಿಟ್ಟಾಗಿ ಕೃಷ್ಣನ ಮೇಲೆ ಬಾಣಗಳ ಮಳೆಗೆರೆಯುತ್ತಾ ಬಂದರು. ಇವರೆಲ್ಲ ತುಂಬಾ ಪಾಪಿಗಳು. ಆದ್ದರಿಂದ ಕೃಷ್ಣನ ಶಕ್ತಿಯನ್ನು ತಿಳಿಯುವ ದೃಷ್ಟಿಯು ಇರಲಿಲ್ಲ. ಫಲಿತಾಂಶ– ಬೆಂಕಿಗೆ ಇರುವೆ ಮುತ್ತಲು ಬರುವಂತೆ ಕೃಷ್ಣನನ್ನು ಮುತ್ತಿದರು.

**ಕೃಷ್ಣೋಽಪಿ ವಕ್ಷಸಿ ಮುಖೇ ದ್ವಿಷತಾಂ ಲಲಾಟೇ**<br>
**ಲಗ್ನೈಃ ಶರೈಃ ಲಸಿತಲಾಂಛನಚಿತ್ರಪತ್ರೈಃ ।**<br>
**ಸ್ವಧ್ಯಾನಕೀರ್ತನ ಸದೂರ್ಧ್ವಲಲಾಮಶೂನ್ಯಾನ್**<br>
**ಸಾರ್ಥಾಭಿಧಾನಕೃತಶೋಣಿತಶೋಣಗಾತ್ರಾನ್** ॥ ೧೫ ॥

ಕೃಷ್ಣಃ ಅಪಿ=ಕೃಷ್ಣನಾದರೂ; ದ್ವಿಷತಾಂ=ಶತ್ರುಗಳ; ವಕ್ಷಸಿ=ಎದೆಯಲ್ಲಿ; ಮುಖೇ= ಮುಖದಲ್ಲಿ; ಲಲಾಟೇ=ಹಣೆಯಲ್ಲಿ; ಲಗ್ನೈಃ=ಸಂಬಂಧವುಳ್ಳ; ಲಸಿತ=ಶೋಭಿಸುವ; ಲಾಂಛನ=ಗುರುತು; ಚಿತ್ರ=ಬೇರೆಬೇರೆ ರೀತಿಯ; ಪತ್ರೈಃ=ರೆಕ್ಕೆಗಳುಳ್ಳ; ಶರೈಃ=ಬಾಣ ಗಳಿಂದ; ಸ್ವ=ತನ್ನ; ಧ್ಯಾನ=ಧ್ಯಾನವು; ಕೀರ್ತನ=ಹೇಳುವಿಕೆಯು; ಸತ್=ಒಳ್ಳೆಯ; ಊರ್ಧ್ವ=ಉದ್ದವಾದ; ಲಲಾಮ=ನಾಮವು ಇವುಗಳಿಂದ; ಶೂನ್ಯಾನ್=ರಹಿತರಾದ ರಾಜರನ್ನು; ಶೋಣಿತ=ರಕ್ತದಿಂದ; ಶೋಣ=ಕೆಂಪಾದ; ಗಾತ್ರಾನ್=ದೇಹವುಳ್ಳವರನ್ನು; ಸಾರ್ಥ=ಅನ್ವರ್ಥಕವಾದ; ಅಭಿಧಾನ್=ಹೆಸರುಳ್ಳವರನ್ನು; ಅಕೃತ=ಮಾಡಿದನು.

ಕೃಷ್ಣನ ಬಾಣಗಳಲ್ಲಿ ಆತನ ಹೆಸರು ಇತ್ತು. ನಾನಾ ಆಕಾರಗಳ ರೆಕ್ಕೆಗಳಿಂದಲೂ ಕೂಡಿತ್ತು. ಇಂತಹ ಬಾಣಗಳನ್ನು ಕೃಷ್ಣನು ಶತ್ರುಗಳ ಮೇಲೆ ಪ್ರಯೋಗಿಸಿದನು. ವಿಶೇಷವಾಗಿ

ಅವರ ಎದೆಗೆ, ಬಾಯಿಗೆ, ಹಣೆಗೆ ಗುರಿಯಿಟ್ಟು ಹೊಡೆಯುತ್ತಿದ್ದನು. ಇದಕ್ಕೆ ಕಾರಣವೂ ಇದೆ– ಈ ಶತ್ರುಗಳು ಯಾರೂ ತಮ್ಮ ಹೃದಯದಲ್ಲಿ ದೇವರನ್ನು ಧ್ಯಾನಿಸುತ್ತಿರಲಿಲ್ಲ. ಬಾಯಿಯಿಂದ ಹರಿನಾಮಸಂಕೀರ್ತನೆ ಬರುತ್ತಿರಲಿಲ್ಲ. ಹಣೆಯಲ್ಲಿ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸುತ್ತಿರಲಿಲ್ಲ. ಇಂತಹ ಅವಯವಗಳು ಇರಬಾರದು. ಇವುಗಳನ್ನು ಕತ್ತರಿಸಿ ಬಿಸಾಡಬೇಕು ಎಂದು ಶಾಸ್ತ್ರ ಹೇಳುತ್ತದೆ. ಅದರಂತೆ ಕೃಷ್ಣನು ಮಾಡಿದನು.

ಇವರ ಅವಯವಗಳನ್ನು ಕತ್ತರಿಸಿ ಇವರನ್ನು ರಕ್ತದಿಂದ ಮಿಂದವರನ್ನಾಗಿ ಮಾಡಿದನು. ಇದೂ ಯುಕ್ತವೇ ಆಗಿದೆ– ಜರಾಸಂಧನ ಪಕ್ಷವಹಿಸಿ ಬಂದವರು ತುಂಡರಸರು ಆಗಿದ್ದರು. ಇವರೂ ರಾಜರುಗಳೇ. ಆದರೆ ಪ್ರಜೆಗಳನ್ನು ರಂಜಿಸುತ್ತಿರಲಿಲ್ಲ. ಅವರಿಗೆ ಮಾನಸಿಕನೆಮ್ಮದಿಯನ್ನು ಕೊಡುತ್ತಿರಲಿಲ್ಲ. ಯದ್ಯಪಿ ಪ್ರಜಾರಂಜಕತ್ವಾತ್ ರಾಜಾ ಎಂಬ ಹೆಸರು. ಹಾಗಾದರೆ ಇವರಿಗೆ ಈ ಹೆಸರು ಹೇಗೆ ಸಾರ್ಥಕವಾಗುತ್ತದೆ? ಇದಕ್ಕೆ ಉತ್ತರರೂಪವಾಗಿ ಕೃಷ್ಣನು ಇವರನ್ನು ರಕ್ತದಲ್ಲಿ ತೋಯಿಸಿದ. ರಾಜ ಅಂದರೆ ರಂಜಕ ಎಂಬ ಅರ್ಥ ಇರುವಂತೆ ಕೆಂಪುಬಣ್ಣದಿಂದ ಕೂಡಿದವ ಎಂಬ ಅರ್ಥವೂ ಇದೆ. ಸದ್ಯ ಇವರು ಪ್ರಜಾರಂಜಕತ್ವಾತ್ ರಾಜರಾಗದಿದ್ದರೂ ಕೆಂಪುಬಣ್ಣವನ್ನು ಅಂದರೆ ರಕ್ತವನ್ನು ಇವರಿಗೆ ಹತ್ತಿಸಿ ಇವರನ್ನು 'ರಾಜರು' ಎಂಬ ಸಾರ್ಥಕ ಹೆಸರಿನವರನ್ನಾಗಿ ಮಾಡಿದನು.

**ಸಂದೇಶ** : ದೇವರಿಗೆ ಸಂಬಂಧಿಸದ ಯಾವುದೂ ನಮ್ಮ ಜೊತೆ ಇರಬಾರದು.

**ಮಾದ್ಯಂತಂ ಶಿಶುಪಾಲಮೇತ್ಯ ಮಧುಜಿತ್ ಶಾರ್ಙ್ಗಚ್ಯುತೈಃ ಸಾಯಕೈಃ**
**ಚಾಪಚ್ಛತ್ರಕಿರೀಟಕೇತುರಹಿತಂ ಚಕ್ರೇ ಶಿಶೂನಾಂ ಪ್ರಭುಮ್ ।**
**ರಾಮಶ್ಚೂರ್ಣಿತವಾಜಿಸಾರಥಿರಥಂ ಕೃತ್ವಾ ಜರಾಸಂಹಿತ–**
**ಪ್ರಾಯಂ ಮಾಗಧ ಮಾಗೃಹೀತಮಪಿ ತಂ ವಾಚಾ ಮುಮೋಚ ಪ್ರಭೋಃ॥ ೧೬ ॥**

ಮಧು=ಮಧುವೆಂಬ ದೈತ್ಯನನ್ನು; ಜಿತ್=ಕೊಂದಿರುವ ಕೃಷ್ಣನು; ಮಾದ್ಯಂತಂ= ಮದಭರಿತನಾದ; ಶಿಶುಪಾಲಂ=ಶಿಶುಪಾಲನನ್ನು; ಏತ್ಯ=ಹೊಂದಿ; ಶಾರ್ಙ್ಗ=ಧನುಸ್ಸಿನಿಂದ; ಚ್ಯುತೈಃ=ಹೊರಟಿರುವ; ಸಾಯಕೈಃ=ಬಾಣಗಳಿಂದ; ಚಾಪ=ಬಿಲ್ಲು; ಛತ್ರ=ಕೊಡೆಯು, ಕಿರೀಟ=ಕಿರೀಟವು; ಕೇತು=ಧ್ವಜವು ಇವುಗಳಿಂದ ರಹಿತಂ=ರಹಿತನನ್ನು; ಶಿಶೂನಾಂ= ಮಗುಗಳಿಗೆ; ಪ್ರಭುಂ=ಪಾಲಕನನ್ನಾಗಿ; ಚಕ್ರೇ=ಮಾಡಿದನು; ರಾಮಃ=ಬಲರಾಮನು; ಚೂರ್ಣಿತ=ಪುಡಿಯಾದ; ವಾಜಿ=ಕುದುರೆಗಳು; ಸಾರಥಿ=ಸಾರಥಿಯು; ರಥಂ=ರಥವುಳ್ಳ ಜರಾಸಂಧನನ್ನು; ಜರಾ=ಮುದಿತನದಿಂದ; ಸಂಹಿತಪ್ರಾಯಂ=ಕೂಡಿದವನನ್ನಾಗಿ; ಕೃತ್ವಾ=ಮಾಡಿ; ಆಗೃಹೀತಂ ಅಪಿ=ನೆರೆಸಿಕ್ಕಿದರೂ; ಪ್ರಭೋಃ=ಕೃಷ್ಣನ; ವಾಚಾ=ಮಾತಿನಿಂದ; ತಂ=ಅವನನ್ನು; ಮುಮೋಚ=ಬಿಟ್ಟನು.

ಕೃಷ್ಣಬಲರಾಮರು ಶಿಶುಪಾಲ ಜರಾಸಂಧರ ಹೆಸರನ್ನು ಸಾರ್ಥಕಗೊಳಿಸಿದರು–

ಕೃಷ್ಣನು ಮಧುಕೈಟಭರನ್ನೇ ಕೊಂದವನು. ಈ ಶಿಶುಪಾಲಾದಿಗಳು ನಗಣ್ಯರು. ಈ ಶಿಶುಪಾಲನು ಬಹಳ ಅಹಂಕಾರಿಯಾಗಿದ್ದನು. ಆತನ ತಲೆಗೆ ಏರಿದ ಅಹಂಕಾರವನ್ನು ಕೃಷ್ಣನು ತನ್ನ ಬಾಣಗಳಿಂದ ಇಳಿಸಿದನು. ಆತ ಬಿಲ್ಲುಬಾಣ, ಕಿರೀಟ, ಧ್ವಜ ಎಲ್ಲವನ್ನೂ ಪುಡಿಗೈದನು. ಶಿಶುಪಾಲನು ದಿಙ್ಮೂಢನಾಗಿ ನಿಂತನು. ಈತನು ಈಗ ನಿಜವಾಗಿಯೂ ಶಿಶು ಪಾಲನಾದನು. ಮಕ್ಕಳನ್ನು ಆಡಿಸುವವರು ಬೇರೆ ಏನನ್ನು ತಿಳಿದಿರುವುದಿಲ್ಲ. ಲೋಕದಲ್ಲಿಯೂ ಈ ಕ್ರಮ ಇದೆ. ಜನರು ತಮ್ಮ ತಮ್ಮ ಮನೆಗಳಲ್ಲಿರುವ ಸ್ತನ್ಯಪಾನ ಮಾಡುವ ಮಕ್ಕಳನ್ನು ಆಡಿಸಲು ಏನೂ ತಿಳಿಯದ ಪೆದ್ದುಗಳನ್ನು ಉಪಯೋಗಿಸುತ್ತಾರೆ. ಈ ಶಿಶುಪಾಲನೂ ಕೃಷ್ಣನ ಮುಂದೆ ಯುದ್ಧಾದಿಗಳನ್ನು ಏನೂ ತಿಳಿಯದ ಮೂರ್ಖನಾಗಿ ಹೋದ. ಆತನನ್ನು ಕೃಷ್ಣನು "ಎಲೋ ಶಿಶುಪಾಲ, ನೀನು ಯುದ್ಧವಿಷಯದಲ್ಲಿ ಪೆದ್ದನಿದ್ದಿ. ಆದ್ದರಿಂದ ಪುಟ್ಟ ಪುಟ್ಟ ಮಕ್ಕಳನ್ನು ಲಾಲನೆಪಾಲನೆ ಮಾಡು" ಎಂದು ಮೂದಲಿಸಿದನು.

ಜರಾಸಂಧನ ಜೊತೆ ರಾಮನು ಕಾದಾಡಿದನು. ಆತನ ಕುದುರೆ, ಸಾರಥಿ, ರಥಾದಿಗಳನ್ನು ಪುಡಿಗೈದನು. ಜರಾಸಂಧನು ಬಹಳ ಸುಸ್ತಾದನು. ಆತನ ದೇಹಕ್ಕೆ ಮುದಿತನ ಬಂದಂತಹ ಅನುಭವ ಬಂತು. ಆ ರೀತಿ ಬಲರಾಮನು ಹೊಡೆದಿದ್ದನು. ಜರಾಸಂಧ ಎಂಬ ಶಬ್ದವು ಜರಾ ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಅವಯವವುಳ್ಳವನು ಎಂಬ ಅರ್ಥವನ್ನು ಕೊಡುತ್ತದೆ. ಹಾಗೆಯೇ ದೇಹದ ಸಂಧಿಗಳಲ್ಲಿ ಜರೆ ಅಂದರೆ ಮುದಿತನವುಳ್ಳವನು ಎಂಬ ಅರ್ಥವನ್ನು ಕೊಡುತ್ತದೆ. ಬಲರಾಮನು ಯುದ್ಧದ ಮೂಲಕ ಆತನ ದೇಹಕ್ಕೆ ಹೆಸರಿಗೆ ಸರಿಯಾಗಿ ಮುದಿತನ ಬರುವಂತೆ ಮಾಡಿದನು. ಅನಂತರ ಕೊಲ್ಲುವ ಸಲುವಾಗಿ ಸೆರೆಹಿಡಿದನು. ಆಗ ಕೃಷ್ಣನು ಜರಾಸಂಧನನ್ನು ಬಲರಾಮನಿಂದ ಬಿಡಿಸಿದನು.

<u>**ಸಂದೇಶ**</u> : ನಮ್ಮ ಮಕ್ಕಳಿಗೆ ಒಳ್ಳೆಯ ಹೆಸರನ್ನೇ ಇಡಬೇಕು. ಕೆಟ್ಟ ಹೆಸರನ್ನಿಟ್ಟರೆ ದೇವರು ಅದನ್ನು ಈ ರೀತಿ ಅರ್ಥ ಬರುವಂತೆ ಮಾಡುತ್ತಾನೆ.

**ಪುನಶ್ಚ ತಾವತೀಂ ಸೇನಾಂ ಸಂಪಾದ್ಯ ಸ ತು ದುರ್ಮತಿಃ ।**
**ಮಧುರಾಂ ವಿಧುರೀಕರ್ತುಂ ಪರಂ ಪಾರಂ ಉಪಾಗಮತ್ ॥ ೧೭ ॥**

ದುರ್ಮತಿಃ=ದುಷ್ಟಬುದ್ಧಿವುಳ್ಳ; ಸಃ=ಜರಾಸಂಧನು, ಪುನಃ ಚ=ಪುನಃ; ತಾವತೀಂ= ಅಷ್ಟೇ; ಸೇನಾಂ=ಸೈನ್ಯವನ್ನು; ಸಂಪಾದ್ಯ=ಒಟ್ಟುಸೇರಿಸಿ; ಮಧುರಾಂ=ಮಧುರೆಯನ್ನು; ವಿಧುರೀಕರ್ತುಂ=ರಹಿತವನ್ನಾಗಿ ಮಾಡಲು; ಪರಂ=ಇನ್ನೊಂದು; ಪಾರಂ=ದಡವನ್ನು; ಉಪಾಗಮತ್=ಬಂದನು.

ಕೃಷ್ಣನಿಂದ ಇಷ್ಟು ಹೊಡೆತ ತಿಂದರೂ ಜರಾಸಂಧನು ತನ್ನ ದುಷ್ಟತನವನ್ನು ಇನ್ನೂ ಬಿಟ್ಟಿಲ್ಲ. ತನ್ನ ಹಠಮಾರಿತನದಿಂದ ಪ್ರಥಮಬಾರಿಗೆ ತಂದಷ್ಟೇ ೨೩ ಅಕ್ಷೋಹಿಣೀ

ಸೈನ್ಯವನ್ನು ಪುನಃ ಕಟ್ಟಿಕೊಂಡು ಯಮುನೆಯ ತೀರಕ್ಕೆ ಬಂದನು. ಮಧುರೆಯ ಸಂಪತ್ತನ್ನು ಪೂರಾ ಸೂರೆಗೊಳ್ಳಬೇಕು ಎಂದು ಆಲೋಚಿಸಿದನು.

**ಸಂದೇಶ** : ಯೋಗ್ಯತೆ ಸರಿಯಿಲ್ಲದವರು ಎಂತಹ ಸಂದರ್ಭದಲ್ಲಿಯೂ ತಿದ್ದಿಕೊಳ್ಳುವುದಿಲ್ಲ.

**ಅಪಿ ಪುಣ್ಯನದೀತೀರಂ ಉಪವ್ರಜ್ಯ ಸ ಮಾಗಧಃ ।**
**ಅಮೂಮುದದ್ಗೀಯಮಾನಃ ವಿಮೂಢಪ್ರಕೃತಿರ್ಹಿ ಸಾ ॥ ೧೮ ॥**

ಸಃ=ಆ; ಮಾಗಧಃ=ಜರಾಸಂಧನು; ಪುಣ್ಯ=ಒಳ್ಳೆಯ; ನದೀ=ನದಿಯ; ತೀರಂ= ದಡವನ್ನು; ಉಪವ್ರಜ್ಯ ಅಪಿ=ಹೊಂದಿದರೂ; ಗೀಯಮಾನಃ=ಹೊಗಳಲ್ಪಟ್ಟು; ಅಮೂಮುದತ್=ಸಂತೋಷಪಟ್ಟನು; ಸಾ=ಅದು; ವಿಮೂಢ=ಮೂರ್ಖರ; ಪ್ರಕೃತಿಃ= ಸ್ವಭಾವವು; ಹಿ=ಪ್ರಸಿದ್ಧ.

ಯಾತ್ರೆ ಮಾಡುತ್ತಾ ಪವಿತ್ರ ನದೀತೀರಕ್ಕೆ ಬಂದು ಅಲ್ಲಿ ಸ್ನಾನ ಜಪ ತಪಾದಿಗಳನ್ನು ಮಾಡುವುದು ಸಹಜ. ಆದರೆ ಜರಾಸಂಧನು ಮಗಧದೇಶದಿಂದ ಮಧುರೆಯ ಯಮುನೆಯ ತನಕ ಯಾತ್ರೆಯ ರೂಪದಲ್ಲಿ ತನ್ನ ಪರಿವಾರದೊಂದಿಗೆ ಬಂದನು. ಆದರೂ ಅಲ್ಲಿ ಸ್ನಾನ, ದೇವರ ಧ್ಯಾನ ಇತ್ಯಾದಿ ಯಾವುದನ್ನೂ ಮಾಡಲಿಲ್ಲ. ತಾನು ಬರುವಾಗ ಕೆಲವು ಮಂದಿ ಹೊಗಳುಭಟರನ್ನು ಕರೆದುತಂದಿದ್ದ. ಅವರು ಇವನನ್ನು ಹೊಗಳಿದರು. ಇವನು ಉಬ್ಬಿದನು. ಅಷ್ಟೇ ವಿನಾ ತಾನು ದೇವರನ್ನು ಹೊಗಳಲೂ ಇಲ್ಲ. ಆತನನ್ನು ತೃಪ್ತಿ ಪಡಿಸಲೂ ಇಲ್ಲ. ಪಾಪಿಗಳ ಸ್ವಭಾವವೇ ಹೀಗೆ.

**ಸಂದೇಶ** : 'ಪಾಪಿ ಹೋದಲ್ಲ ಮೊಣಕಾಲು ನೀರು' ಎಂಬ ಗಾದೆಯಂತೆ ಆತನಿಗೆ ಸತ್‌ಕರ್ಮ ಮಾಡಲು ದೈವ ಬಿಡುವುದೂ ಇಲ್ಲ. ಈತನಿಗೆ ಮನಸ್ಸಾಗುವುದೂ ಇಲ್ಲ.

**ಕುಹಕಸ್ಯ ಕುಬುದ್ಧಿಂ ತಾಮಭಿವೀಕ್ಷ್ಯೇವ ಭಾಸ್ಕರಃ ।**
**ಕುಪಿತಸ್ತದ್ವಿಘಾತಾರ್ಥಂ ಪರದೇಶಮಪೀಪದತ್ ॥ ೧೯ ॥**

ಕುಹಕಸ್ಯ=ಕಪಟಿಯ: ತಾಂ=ಆ; ಕುಬುದ್ಧಿಂ=ದುರ್ಬುದ್ಧಿಯನ್ನು; ಅಭಿವೀಕ್ಷ್ಯ= ನೋಡಿ; ಭಾಸ್ಕರಃ=ಸೂರ್ಯನು; ಕುಪಿತ ಇವ=ಸಿಟ್ಟಾದವನಂತೆ; ತತ್=ಅದರ; ವಿಘಾತಾರ್ಥಂ=ನಾಶಕ್ಕೋಸ್ಕರ; ಪರದೇಶಂ=ಬೇರೆ ಊರನ್ನು; ಅಪೀಪದತ್=ಹೊಂದಿದನು.

ಜರಾಸಂಧ ಅಲ್ಲಿಗೆ ಬರುವಾಗ ಸಾಯಂಕಾಲ ಆಗಿತ್ತು. ಈ ಸೂರ್ಯಾಸ್ತವನ್ನು ರಾಜರು ವರ್ಣಿಸುತ್ತಾರೆ. ಹಿಂದಿನ ಕಾಲದಲ್ಲಿ ರಾತ್ರಿ ಹೊತ್ತು ಯುದ್ಧ ಜರಗುತ್ತಿರಲಿಲ್ಲ. ಸೂರ್ಯನು ಆಕಾಶದಲ್ಲಿ ಕಾಣಿಸುತ್ತಿದ್ದರೆ ಹಗಲೇ ಇರುತ್ತದೆ. ಆಗ ಜರಾಸಂಧನು ತನ್ನ ದುರ್ಬುದ್ಧಿಯನ್ನು ಕಾರ್ಯರೂಪಕ್ಕೆ ಇಳಿಸಿಯೇ ಬಿಡುತ್ತಾನೆ. ಅದು ಸೂರ್ಯನಿಗೆ

ಇಷ್ಟವಿಲ್ಲ. ಜರಾಸಂಧನ ಮೇಲೆ ಸಿಟ್ಟಾದ. ಸಿಟ್ಟಾಗುವವರ ಮುಖ ಕೆಂಪಾಗುತ್ತದೆ. ಸಾಯಂಕಾಲದ ಸೂರ್ಯ ಕೆಂಪಾಗುವುದು ಸಹಜ. ತಾನಿದ್ದರೆ ಜರಾಸಂಧನು ತನ್ನ ಕೆಲಸವನ್ನು ಮಾಡಲು ತೊಡಗುತ್ತಾನೆ. ಇದರಿಂದ ಒಂದು ರೀತಿ ತಾನೂ ಆತನಿಗೆ ಸಹಾಯ ಮಾಡಿದಂತೆ. ಇದರಿಂದ ತನಗೂ ಪಾಪ. ಪಾಪದಿಂದ ದೂರವಿರಲು ಸೂರ್ಯನು ಬೇರೆ ಊರಿಗೆ ಹೋದ. ಅಂದರೆ ಅಸ್ತಮಿಸಿದ. ಕತ್ತಲಾಯಿತು. ಜರಾಸಂಧನು ತನ್ನ ಕೆಲಸವನ್ನು ಮಾಡಲು ಅಸಮರ್ಥನಾದ.

**ಸಂದೇಶ** : ದುಷ್ಟರಿಗೆ ಎಂದೂ ಪ್ರೋತ್ಸಾಹವನ್ನು ಕೊಡಬಾರದು.

**ಅಥೋಪ ಸಮಯೇ ಶೌರೀ ರಥಮಾರುಹ್ಯ ನಿರ್ಯಯೌ ।**
**ಸವಿತೇವ ಸಹ ಸ್ವೀಯೈರ್ನಿಶಾಚರಬಲಾಂತಕಃ ॥ ೨೦ ॥**

ಅಥ=ಅನಂತರ; ನಿಶಾಚರ=ರಾಕ್ಷಸರ; ಬಲ=ಬಲಕ್ಕೆ; ಅಂತಕಃ=ನಾಶಕನಾದ; ಶೌರಿಃ= ಕೃಷ್ಣನು; ಉಪಃ=ಬೆಳಗಿನ; ಸಮಯೇ=ಕಾಲದಲ್ಲಿ; ರಥಂ=ರಥವನ್ನು; ಆರುಹ್ಯ= ಏರಿ; ಸ್ವೀಯೈಃ=ತನ್ನವರಿಂದ; ಸಹ=ಕೂಡಿಕೊಂಡು; ಸವಿತಾ ಇವ=ಸೂರ್ಯನಂತೆ; ನಿರ್ಯಯೌ=ಹೊರಟನು.

ಮರುದಿನ ಬೆಳಗಾಯಿತು. ಕೃಷ್ಣನು ರಥವನ್ನು ಏರಿದನು, ರಾಕ್ಷಸರ ಸೊಕ್ಕನ್ನು ಮುರಿಯಲು. ತನ್ನವರು ಕೃಷ್ಣನ ಜೊತೆ ಸೇರಿದರು. ಕೃಷ್ಣನು ಸೂರ್ಯನಂತೆ ಇದ್ದಾನೆ. ಇಬ್ಬರೂ ಪ್ರಖರವಾದ ಪ್ರಭೆಯವರು. ರಥದ ಮೂಲಕ ಸಂಚರಿಸುವವರು. ಕೃಷ್ಣನು ನಿಶಾಚರರ ಅಂದರೆ ರಾತ್ರಿ ಸಂಚರಿಸುವವರ ಅಂದರೆ ರಾಕ್ಷಸರ ಬಲವನ್ನು ಧ್ವಂಸಮಾಡುವವನು. ಸೂರ್ಯನು ರಾತ್ರಿ ಚರರಾದ ಕಳ್ಳರ, ಗೂಗೆ ಪಕ್ಷಿಗಳ ಶಕ್ತಿಯನ್ನು ಕುಗ್ಗಿಸುವವನು.

**ರಾಜನೀತಿಂ ಪ್ರಕಟಯನ್ ರಾಜೀವನಯನಸ್ತ್ರಿಧಾ ।**
**ಅಮೇಯವಿಭವಃ ಸ್ವೀಯಾಮಯೂಯುಜದನೀಕಿನೀಮ್ ॥ ೨೧ ॥**

ಅಮೇಯ=ತಿಳಿಯಲಸಾಧ್ಯವಾದ; ವಿಭವಃ=ವೈಭವವುಳ್ಳ; ರಾಜೀವ=ಕಮಲದಂತೆ; ನಯನಃ=ಕಣ್ಣುಳ್ಳ ಕೃಷ್ಣನು; ರಾಜನೀತಿಂ=ರಾಜನೀತಿಯನ್ನು; ಪ್ರಕಟಯನ್=ತಿಳಿಸುವವ ನಾಗಿ; ಸ್ವೀಯಾಂ=ತನ್ನ; ಅನೀಕಿನೀಂ=ಸೈನ್ಯವನ್ನು; ತ್ರಿಧಾ=ಮೂರು ರೀತಿಯಲ್ಲಿ; ಅಯೂಯುಜತ್=ಕಳಿಸಿದನು.

ಕೃಷ್ಣನು ಯಾವ ಸಮಯದಲ್ಲಿ ಏನನ್ನು, ಯಾಕೆ ಮಾಡುತ್ತಾನೆ ಎಂದು ತಿಳಿಯುವುದು ತುಂಬಾ ಕಷ್ಟ. ಇಂತಹ ಕೃಷ್ಣನು ತನ್ನ ಸೈನ್ಯವನ್ನು ಮೂರುವಿಭಾಗ ಮಾಡಿದನು. ದುರ್ಬಲ ರಾಜರು ಪ್ರಬಲ ಶತ್ರುಗಳನ್ನು ಹೇಗೆ ಗೆಲ್ಲಬೇಕು ಎಂಬುದನ್ನು ತೋರಿಸಿದನು.

ಜರಾಸಂಧನು ಪುನಃ ಬಂದಾಗಲೂ ಕೃಷ್ಣನು ಯಾವುದೇ ರೀತಿಯ ಗಾಬರಿಗೊಳ್ಳಲಿಲ್ಲ ಎಂದು ತಿಳಿಸಲು ರಾಜರು ಕೃಷ್ಣನನ್ನು ರಾಜೀವಲೋಚನ ಎಂದು ಕರೆದಿದ್ದಾರೆ. ಕೃಷ್ಣನು ತನ್ನ ಸೈನ್ಯದ ಒಂದು ಭಾಗವನ್ನು ಜರಾಸಂಧನ ಸೈನ್ಯದ ಮುಂದೆ ಕಳಿಸಿದನು. ಇನ್ನೆರಡು ಭಾಗಗಳನ್ನು ಸೈನ್ಯದ ಎರಡು ಬದಿಗಳಲ್ಲಿ ಕಳಿಸಿದನು. ಜರಾಸಂಧನ ಸೈನಿಕರಿಗೆ ಮಧುರೆ ಹೊಸ ಊರು. ಆದ್ದರಿಂದ ಮಧುರೆಯ ಕೋಟೆಯ ಯಾವ ಭಾಗದಿಂದ ಬಾಣಗಳು ಬರುತ್ತವೆಯೆಂದು ತಿಳಿಯುವುದೇ ಕಷ್ಟವಾಯಿತು. ಮುಂಭಾಗದಿಂದ ಶಸ್ತ್ರಾಸ್ತ್ರಗಳು ಬರುತ್ತಿವೆಯೆಂದು ಅಲ್ಲಿಗೆ ನುಗ್ಗಿದಾಗ ಎರಡು ಬದಿಗಳಿಂದಲೂ ಪ್ರಹಾರ ಆರಂಭವಾಯಿತು. ಬದಿಗಳಿಗೆ ತಿರುಗಿದಾಗ ಮುಂದಿನಿಂದ ಹೊಡೆತ ಮುಂದುವರಿಯುತ್ತಲೇ ಇತ್ತು. ಜರಾಸಂಧನ ಸೈನ್ಯವು ಜರ್ಝರಿತವಾಯಿತು. ಜರಾಸಂಧನ ಸೈನ್ಯಕ್ಕಿಂತ ತನ್ನ ಸೈನ್ಯದ ಪ್ರಮಾಣವನ್ನು ಕೃಷ್ಣನು ಈ ಬಾರಿ ಕಮ್ಮಿ ಮಾಡಿದ್ದನು. ಕಮ್ಮಿ ಬಲದವರು ಶತ್ರುಗಳನ್ನು ಹೇಗೆ ಗೆಲ್ಲಬೇಕು ಎಂಬುದನ್ನು ತೋರಿಸಿದನು.

<u>**ಸಂದೇಶ**</u> : ಬುದ್ಧಿವಂತ ದುರ್ಬಲರು ಪ್ರಬಲರಿಗೆ ಎಂದೂ ಹೆದರಬಾರದು.

**ಸೂರ್ಯೇಣೋದಯಶೈಲಮೂರ್ಧ್ನಿಲಸತಾ ಶೌರ್ಯೋನ್ನತಿಂ ಶ್ರೀಪತೇಃ**
**ತತ್ ಪೋಷ್ಯೋದಯಮಂಬುಜೈರ್ಮಧುಕರೈಸ್ತದ್ಬಂದಿನಾಂ ಸಂಪದಮ್ ।**
**ಧ್ವಸ್ತೈಃ ಸಂತಮಸೈಶ್ಚ ತಾಮಸದಶಾಂ ನೀಡೇ ಕ್ವಣದ್ಭಿಃ ಖಗೈಃ**
**ವೇಶ್ಮಾಂತಃ ಪರವೈಭವಂ ಪ್ರಕಟಯನ್ ಸ ಸ್ಯಾತ್ ಮುಹೂರ್ತೋ ಮುದೇ**
**॥ ೨೨ ॥**

ಉದಯ=ಉದಯದ; ಶೈಲ=ಪರ್ವತದ; ಮೂರ್ಧ್ನಿ=ತಲೆಯಲ್ಲಿ; ಲಸತಾ= ಶೋಭಿಸುವ; ಸೂರ್ಯೇಣ=ಸೂರ್ಯನಿಂದ; ಶ್ರೀಪತೇಃ=ಕೃಷ್ಣನ; ಶೌರ್ಯ=ಶಕ್ತಿಯ; ಉನ್ನತಿಂ=ಮಹತ್ತ್ವವನ್ನು; ಅಂಬುಜೈಃ=ಕಮಲಗಳಿಂದ; ತತ್=ಕೃಷ್ಣನಿಂದ; ಪೋಷ್ಯ= ರಕ್ಷಿತರ; ಉದಯಂ=ಉನ್ನತಿಯನ್ನು; ಮಧುಕರೈಃ=ದುಂಬಿಗಳಿಂದ; ತತ್=ಸೈನಿಕರ; ಬಂದಿನಾಂ=ಪಾಠಕರ; ಸಂಪದಂ=ಸಂಪತ್ತನ್ನು; ಧ್ವಸ್ತೈಃ=ನಾಶಗೊಂಡ; ಸಂತಮಸೈಃ= ಕತ್ತಲೆಗಳಿಂದ; ತಾಮಸ=ದುಷ್ಟರ; ದಶಾಂ=ಅವಸ್ಥೆಯನ್ನು; ನೀಡೇ=ಗೂಡಲ್ಲಿ; ವೇಶ್ಮ =ಮನೆಯ; ಅಂತಃ=ಒಳಗೆ; ಕ್ವಣದ್ಭಿಃ=ಕೂಗುವ; ಖಗೈಃ=ಪಕ್ಷಿಗಳಿಂದ; ಪರ=ಶತ್ರುಗಳ; ವೈಭವಂ=ತಯಾರಿಯನ್ನು; ಪ್ರಕಟಯನ್=ತಿಳಿಸುವ; ಸಃ=ಆ; ಮುಹೂರ್ತಃ=ಸಮಯವು; ಮುದೇ=ನೆಮ್ಮದಿಗಾಗಿ; ಸ್ಯಾತ್=ಆಗಲಿ.

ಈ ಬಾರಿಯೂ ಜರಾಸಂಧನು ಸೋತನು. ಕೃಷ್ಣನು ರಾತ್ರಿಯಲ್ಲಿ ಬಂದು ಎನಗೆ ಮೋಸ ಮಾಡಿದನು ಎಂದು ಜರಾಸಂಧನು ತನ್ನವರಲ್ಲಿ ತನ್ನ ಸೋಲಿಗೆ ಕಾರಣವನ್ನು ಕೊಟ್ಟನು. ಇದು ತಪ್ಪು. ಕೃಷ್ಣನು ರಾತ್ರಿಯಲ್ಲಿ ಯುದ್ಧಕ್ಕೆ ಹೋಗಲೇ ಇಲ್ಲ. ಹಗಲಿಗೇ ಹೋದದ್ದು ಎಂದು ರಾಜರು ಯುದ್ಧದ ಸಮಯವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

ಕೃಷ್ಣನು ಯುದ್ಧಕ್ಕೆ ಹೊರಟಾಗ ಪೂರ್ವದಲ್ಲಿ ಸೂರ್ಯನು ಉದಿಸುತ್ತಿದ್ದನು. ಉದಿಸುತ್ತಾ ಹೆಚ್ಚು ಹೆಚ್ಚು ಪ್ರಕಾಶವನ್ನು ಕೊಡುವಂತೆ ಕೃಷ್ಣನೂ ತನ್ನ ಶಕ್ತಿಯನ್ನು ಹೆಚ್ಚಾಗಿ ಪ್ರಕಟಿಸಲು ಆರಂಭಿಸಿದನು. ನಿಧಾನವಾಗಿ ಆರಂಭವಾದ ಯುದ್ಧವು ಕ್ರಮೇಣ ವೇಗವನ್ನು ಹೆಚ್ಚಿಸಿಕೊಂಡಿತು. ಸೂರ್ಯನು ಉದಿಸಿದಂತೆ ಕಮಲಗಳು ಅರಳಲು ಆರಂಭಿಸಿದವು. ಕೃಷ್ಣನು ತನ್ನ ಶಕ್ತಿಯನ್ನು ಹೆಚ್ಚಿಸಿದಂತೆ ಕೃಷ್ಣನ ಸೈನಿಕರಿಗೆ ಉತ್ಸಾಹ ಜಾಸ್ತಿಯಾಯಿತು. ಕಮಲಗಳನ್ನು ಸೂರ್ಯನು ರಕ್ಷಿಸುತ್ತಾನೆ. ಸೈನ್ಯವು ಕೃಷ್ಣನ ರಕ್ಷಣೆಯಲ್ಲಿ ಇದೆ. ಬೆಳಗಿನ ಸಮಯದಲ್ಲಿ ದುಂಬಿಗಳು ಝೇಂಕರಿಸಲು ಆರಂಭಿಸಿದವು. ದುಂಬಿಗಳ ಝೇಂಕಾರದಂತೆ ಕೃಷ್ಣನನ್ನು ಹಾಗೂ ಆತನ ಸೈನಿಕರನ್ನು ಸ್ತುತಿಪಾಠಕರು ಹೊಗಳಲು ಆರಂಭಿಸಿದರು. ಹೊಗಳಲು ಹೊಸ ಹೊಸ ವಿಷಯಗಳನ್ನು ಕೃಷ್ಣನು ಒದಗಿಸುತ್ತಿದ್ದನು. ದುಂಬಿಗಳು ಹೊಸ ಹೊಸ ಹೂಗಳ ಬಳಿಗೆ ಹೋಗಿ ಝೇಂಕರಿಸುವಂತೆ. ಸೂರ್ಯೋದಯದಿಂದ ಕತ್ತಲು ಪೂರಾ ನಾಶವಾಯಿತು ಎಷ್ಟೇ ದಟ್ಟವಾಗಿದ್ದರೂ ಕೂಡಾ. ಕತ್ತಲೆಗೆ ತಮಸ್ಸು ಎಂದು ಹೆಸರು. ಈ ಶತ್ರುಪಕ್ಷದವರು ತಾಮಸರು. ಈ ಕತ್ತಲೆಯಂತೆ ಕೃಷ್ಣನ ಶಕ್ತಿಯ ಉದಯದಿಂದ ಈ ತಾಮಸರು ನಷ್ಟವಾದರು. ಸೂರ್ಯೋದಯದ ಸಂದರ್ಭದಲ್ಲಿ ಮನೆಯೊಳಗಿರುವ ಗೂಡುಗಳಲ್ಲಿ ಪಕ್ಷಿಗಳು ಚಿಲಿಪಿಲಿಸುತ್ತವೆ. ಇದು ಶತ್ರುಗಳ ಯುದ್ಧ ತಯಾರಿಯನ್ನು ಕೃಷ್ಣನ ಸೈನಿಕರಿಗೆ ತಿಳಿಸುವಂತಿತ್ತು. ಶತ್ರುಗಳ ಯುದ್ಧತಯಾರಿ ಬಹಳ ರಹಸ್ಯವಾಗಿ ಇರುತ್ತೆ. ಈ ರಹಸ್ಯ ತೋರಿದರೆ ಶತ್ರುಗಳಿಗೆ ಪರಾಜಯ ನಿಶ್ಚಿತ. ಹೀಗೆ ಸೂರ್ಯೋದಯವನ್ನು ಆರಂಭಿಸಿ ಆ ಸಮಯದಲ್ಲಿ ಏನೆಲ್ಲಾ ಜರಗಿತೋ ಅವೆಲ್ಲಾ ಕೃಷ್ಣನ ಸೈನ್ಯದ ಶಕ್ತಿಯನ್ನು ಹೆಚ್ಚಿಸಿ ಜರಾಸಂಧನ ಸೊಕ್ಕನ್ನು ಅಡಗಿಸಿತು. ಇಂತಹ ಒಳ್ಳೆಯ ಮುಹೂರ್ತದಲ್ಲಿ ಹಗಲಿನಲ್ಲಿ ಕೃಷ್ಣನು ಯುದ್ಧಕ್ಕೆ ಹೊರಟನು. ಇಂತಹ ಮುಹೂರ್ತವೂ ನಮಗೂ ಜೀವನದಲ್ಲಿ ನೆಮ್ಮದಿಯನ್ನು ಕೊಡಲಿ ಎಂದು ರಾಜರು ದೇವರಲ್ಲಿ ಪ್ರಾರ್ಥಿಸುತ್ತಾರೆ.

**ಸಂದೇಶ** : ಪ್ರಯಾಣಕ್ಕೆ ಹೊರಟಾಗ ಈ ಶ್ಲೋಕದ ಅರ್ಥಾನುಸಂಧಾನವು ನಮಗೆ ಜಯಪ್ರದವು.

**ತ್ರಿಷು ಸ್ಥಾನೇಷು ವಿಸ್ತೀರ್ಣಾ ಮಧುಸೂದನವಾಹಿನೀ ।**
**ತ್ರಿಪದೀ ವೇದಮಾತೇವ ರಿಪುಸೇನಾಮಹನ್ ಕ್ಷಣಾತ್ ॥ ೨೩ ॥**

ತ್ರಿಷು=ಮೂರು; ಸ್ಥಾನೇಷು=ಜಾಗಗಳಲ್ಲಿ; ವಿಸ್ತೀರ್ಣಾ=ಹರಡಿದ; ಮಧುಸೂದನ=ಕೃಷ್ಣನ; ವಾಹಿನೀ=ಸೈನ್ಯವು; ತ್ರಿ=ಮೂರು; ಪದೀ=ಭಾಗವುಳ್ಳ; ವೇದಮಾತಾ ಇವ=ವೇದ ಮಾತೆಯಂತೆ; ರಿಪು=ಶತ್ರುಗಳ; ಸೇನಾಂ=ಸೈನ್ಯವನ್ನು; ಕ್ಷಣಾತ್=ಕೂಡಲೇ; ಅಹನ್=ಕೊಂದಿತು.

ಕೃಷ್ಣನು ತನ್ನ ಸೈನ್ಯವನ್ನು ಮೂರುಭಾಗ ಮಾಡಿದ್ದನು. ಮೂರು ಭಾಗವು ಮೂರು

ಕಡೆಗಳಲ್ಲಿ ಶತ್ರುಸೈನ್ಯದ ಮೇಲೆ ಮುಗಿಬಿತ್ತು. ಶತ್ರುಸೈನ್ಯವನ್ನು ಕ್ಷಣದಲ್ಲಿ ಮುಗಿಸಿತು. ಇದನ್ನು ಉದಾಹರಣೆಯ ಮೂಲಕ ರಾಜರು ತಿಳಿಸುತ್ತಾರೆ.

ಸೂರ್ಯನು ರಥ ಹತ್ತಿ ತನ್ನ ಕರ್ತವ್ಯದಲ್ಲಿ ತೊಡಗುವಾಗ ಮಂದೇಹ ನಾಮಕ ಅಸುರರಿಂದ ತೊಡಕಾಗುತ್ತದೆ. ಆಗ ಬ್ರಾಹ್ಮಣರು ಸೂರ್ಯೋದಯಾತ್ ಪೂರ್ವದಲ್ಲಿ ಎದ್ದು ಸ್ನಾನಾದಿಗಳನ್ನು ತೀರಿಸಿ ಸೂರ್ಯನಿಗೆ ಗಾಯತ್ರಿಮಂತ್ರದ ಉಚ್ಚಾರಣೆಯ ಮೂಲಕ ಮೂರು ಅರ್ಘ್ಯಗಳನ್ನು ಕೊಡುತ್ತಾರೆ. ಈ ಅರ್ಘ್ಯದ ಉದಕ ಅಸುರರಿಗೆ ಮಾರಕವಾಗಿ ಪರಿಣಮಿಸುತ್ತದೆ. ಗಾಯತ್ರಿಗೆ ಇನ್ನೊಂದು ಹೆಸರು 'ತ್ರಿಪದೀ' ಎಂದು. ಅಂದರೆ ಮೂರು ಪಾದಗಳುಳ್ಳದ್ದು. ಅವು ಈ ರೀತಿ ಇವೆ– ತತ್ ಸವಿತುಃ ವರೇಣ್ಯಂ/ ಭರ್ಗಃ ದೇವಸ್ಯ ಧೀಮಹಿ/ಧಿಯೋ ಯೋ ನಃ ಪ್ರಚೋದಯಾತ್ –ಎಂದು. ಮೂರು ವೇದಗಳ ಎಲ್ಲಾ ವಿಚಾರಗಳು ಈ ಮೂರು ಪಾದಗಳಲ್ಲಿ ತುಂಬಿದೆ. ಆದ್ದರಿಂದ ಈ ಗಾಯತ್ರಿಯನ್ನು ವೇದಮಾತಾ– ವೇದಗಳ ತಾಯಿ ಎಂದೂ ಕರೆಯುತ್ತಾರೆ.

ಕೃಷ್ಣನು ಸೂರ್ಯನಂತೆ ಇದ್ದಾನೆ. ಕೃಷ್ಣನಿಗೆ ಯಾದವರು ಸೈನಿಕರಾದರೆ ಸೂರ್ಯನಿಗೆ, ಬ್ರಾಹ್ಮಣರೇ ಸೈನಿಕರು. ಯಾದವರು ಬಾಣಗಳಿಗೆ ಮಂತ್ರವನ್ನು ಜಪಿಸಿ ಜರಾಸಂಧನ ಮೇಲೆ ಪ್ರಯೋಗಿಸಿದಂತೆ, ಬ್ರಾಹ್ಮಣರು ಬಾಣಗಳಂತಿರುವ ಉದಕಕ್ಕೆ ಗಾಯತ್ರಿಯನ್ನು ಜಪಿಸಿ ಮಂದೇಹ ಅಸುರರ ಮೇಲೆ ಪ್ರಯೋಗಿಸುವರು.

**<u>ಸಂದೇಶ</u>** : ಬ್ರಾಹ್ಮಣರು ನಿತ್ಯ ಸಂಧ್ಯಾವಂದನೆಯ ಮೂಲಕ ಆಧ್ಯಾತ್ಮಿಕ ಕ್ಷಾತ್ರಧರ್ಮವನ್ನು ಆಚರಿಸಬೇಕು.

**ಅಮೂಮುಚನ್ ಶರವ್ರಾತಮಮತೇಷು ಹರೇರ್ಭಟಾಃ ।**
**ಖಲೇಷು ತ್ರಿದಶಾಧೀಶಾಃ ಜ್ವಲತ್ತಾಪತ್ರಯಂ ಯಥಾ ॥ ೨೪ ॥**

ಹರೇಃ=ಕೃಷ್ಣನ; ಭಟಾಃ=ಸೈನಿಕರು; ಅಮತೇಷು=ಶತ್ರುಗಳಲ್ಲಿ; ಶರ=ಬಾಣಗಳ; ವ್ರಾತಂ=ಸಮೂಹವನ್ನು; ತ್ರಿದಶ=ದೇವತೆಗಳಿಗೆ; ಅಧೀಶಾಃ=ಒಡೆಯರು; ಖಲೇಷು= ದುಷ್ಟರಲ್ಲಿ; ಜ್ವಲತ್=ದೊಡ್ಡದಾದ; ತಾಪತ್ರಯಂ=ಕಷ್ಟಗಳನ್ನು; ಯಥಾ=ಹೇಗೋ; ಹಾಗೆ. ಅಮೂಮುಚನ್=ಪ್ರಯೋಗಿಸಿದರು.

ಪ್ರಾಯಶಃ ದುಷ್ಟರು ಬಹಳ ಸಮಸ್ಯೆಗಳಿಂದ ಬಳಲುತ್ತಾರೆ. ಆ ಸಮಸ್ಯೆಗಳು– ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂದು ಮೂರು ವಿಧ. ಈ ಸಮಸ್ಯೆಗಳನ್ನು ಕೊಡು ವವರು ಕರ್ಮಾಧ್ಯಕ್ಷರಾದ ದೇವತೆಗಳು. ದೇವರು ಈ ದೇವತೆಗಳ ಮೂಲಕ ಸಮಸ್ಯೆಗಳನ್ನು ಒದಗಿಸುತ್ತಾರೆ. ಆ ದೇವತೆಗಳು ಈಗ ಯಾದವರಾಗಿ ಹುಟ್ಟಿದ್ದಾರೆ. ದೇವರು ಕೃಷ್ಣನಾಗಿ ಬಂದಿದ್ದಾನೆ. ಜರಾಸಂಧಾದಿಗಳೆಲ್ಲರೂ ದುಷ್ಟರು. ಇವರಿಗೆ ಕೃಷ್ಣನು ತ್ರಿವಿಧ ಸಮಸ್ಯೆಗಳಂತೆ ಮೂರು ಕಡೆಗಳಿಂದ ಬಾಣಗಳ ಹೊಡೆತವನ್ನು ಯಾದವರಿಂದ ಕೊಡಿಸಿದನು.

**ಪ್ರಮತ್ತಾ ಧ್ವಜಿನೀ ಶತ್ರೋರ್ಯಮುನಾತೀರಗಾಪ್ಯಭೂತ್ ।**
**ಅಸತಾಂ ಪುಣ್ಯಸರಿದಪ್ಯನಿಷ್ಟಸ್ಯ ಹಿ ಕಾರಣಮ್ ॥ ೨೫ ॥**

ಶತ್ರೋಃ=ಶತ್ರುವಿನ; ಧ್ವಜಿನೀ=ಸೇನೆಯು; ಯಮುನಾ=ಯಮುನೆಯ; ತೀರ=ದಡದಲ್ಲಿ; ಗಾ ಅಪಿ=ಇದ್ದರೂ; ಪ್ರಮತ್ತಾ=ಮರೆತದ್ದು; ಅಭೂತ್=ಆಯಿತು; ಅಸತಾಂ=ದುಷ್ಟರಿಗೆ; ಪುಣ್ಯ=ಪುಣ್ಯದ; ಸರಿತ್ ಅಪಿ=ನದಿಯೂ ಕೂಡಾ; ಅನಿಷ್ಟಸ್ಯ= ಅನರ್ಥಕ್ಕೆ; ಕಾರಣಂ ಹಿ=ಕಾರಣವು.

ಜರಾಸಂಧಾದಿಗಳಿಗೆ ಯಾವ ರೀತಿ ಹೋರಾಡಬೇಕೆಂಬುದೇ ತಿಳಿಯಲಿಲ್ಲ. ಯುದ್ಧದಲ್ಲಿ ಬಹಳ ಪಳಗಿದ್ದಿರಬಹುದು. ಆದರೆ ಈ ಸಂದರ್ಭದಲ್ಲಿ ಯಾವುದೂ ನೆನಪಿಗೇ ಬರಲಿಲ್ಲ. ಈ ಸೈನಿಕರು ಪುಣ್ಯಕ್ಷೇತ್ರದಲ್ಲಿ, ಪುಣ್ಯತೀರ್ಥದ ಬಳಿಯೇ ಇದ್ದಾರೆ. ಯದ್ಯಪಿ ತೀರ್ಥಕ್ಷೇತ್ರ ವಾಸದಿಂದ ಒಳ್ಳೆದೇ ಆಗಬೇಕು. ಆದರೂ ಇವರಿಗೆ ಆಗಲಿಲ್ಲ. ಕಾರಣ– ಕ್ಷೇತ್ರವಾಸದಿಂದ ನಮ್ಮ ಸ್ವರೂಪದಲ್ಲಿ ಇದ್ದದ್ದು ಪ್ರಕಟವಾಗುತ್ತದೆ. ಸಾತ್ವಿಕರ ಸ್ವರೂಪದಲ್ಲಿ ಸತ್ವಗುಣ ಸುಖ ಇರುತ್ತದೆ. ಅದು ವ್ಯಕ್ತವಾಗುತ್ತದೆ. ತಾಮಸರ ಸ್ವರೂಪದಲ್ಲಿ ದ್ವೇಷಾಸೂಯೆದುಃಖಗಳು ಇರುತ್ತವೆ. ಅವು ಬೆಳಕಿಗೆ ಬರುತ್ತವೆ. ಸದ್ಯ ಜರಾಸಂಧಾದಿಗಳು ದುಷ್ಟರು. ಅವರ ಸ್ವರೂಪದಲ್ಲಿರುವ ದುಃಖಾದಿಗಳು ಹೊರಗೆ ಬರಬೇಕು. ಅದಕ್ಕಾಗಿ ಯುದ್ಧದ ಕ್ರಮ ಮರೆಯಬೇಕು. ಆಗ ಪರರಿಂದ ಬರುವ ಬಾಣಗಳನ್ನು ತಡೆಯಲು ಆಗದೆ ತುಂಬಾ ದುಃಖಪಡುತ್ತಾರೆ. ಆದ್ದರಿಂದ ತೀರ್ಥಕ್ಷೇತ್ರದ ಲಾಭ ಸಾತ್ವಿಕರಿಗಷ್ಟೇ. ತಾಮಸರಿಗಲ್ಲ.

**<u>ಸಂದೇಶ</u>** : ದುಷ್ಟರ ಸಂಗಡ ಎಂದೂ ತೀರ್ಥಯಾತ್ರೆ ಮಾಡಬಾರದು.

**ಶರೈರಪಾರೈಸ್ತತ್ಸೈನ್ಯಂ ಚತುರಂಗಂ ಸ ಪೂರಯನ್ ।**
**ಮಮೇಷುವಾರಿಧೇರ್ನಾಲಂ ತವ ಸೇನೇತಿ ಶಂಸತಿ ॥ ೨೬ ॥**

ಸಃ=ಕೃಷ್ಣನು; ಅಪಾರೈಃ=ಬಹಳ; ಶರೈಃ=ಬಾಣಗಳಿಂದ; ಚತುರ್=ನಾಲ್ಕು; ಅಂಗಂ=ಅವಯವವುಳ್ಳ; ತತ್=ಆ; ಸೈನ್ಯಂ=ಸೈನ್ಯವನ್ನು; ಪೂರಯನ್=ತುಂಬಿಸುವವನಾಗಿ; ಮಮ=ನನ್ನ; ಇಷು=ಬಾಣಗಳೆಂಬ; ವಾರಿಧೇಃ=ಸಮುದ್ರಕ್ಕೆ; ತವ=ನಿನ್ನ; ಸೇನಾ=ಸೈನ್ಯವು; ನ ಅಲಂ=ಸಾಲದು; ಇತಿ=ಎಂದು; ಶಂಸತಿ=ತಿಳಿಸುತ್ತಾನೆ.

ಕೃಷ್ಣನು ಜರಾಸಂಧನ ಸೈನ್ಯಕ್ಕೆ ಬಾಣಬಿಟ್ಟ ಕ್ರಮವನ್ನು ಭಾಗವತವು ವರ್ಣಿಸುತ್ತದೆ– ಒಬ್ಬೊಬ್ಬ ಭಟನಿಗೆ ಹತ್ತು ಹತ್ತು ಬಾಣಗಳು; ಕುದುರೆಗಳಿಗೆ ನೂರು ನೂರು; ರಥಗಳಿಗೆ ಸಾವಿರ ಸಾವಿರ; ಆನೆಗಳಿಗೆ ಹತ್ತುಹತ್ತು ಸಾವಿರ ಎಂದು. ಕೃಷ್ಣನು ಯಾಕೆ ಈ ರೀತಿ ಒಂದೊಂದು ಅಂಗಕ್ಕೆ ಬಹಳ ಬಹಳ ಬಾಣ ಪ್ರಯೋಗ ಮಾಡಿದ ಎಂಬ ಪ್ರಶ್ನೆಗೆ ರಾಜರು ಈ ಶ್ಲೋಕದಲ್ಲಿ ಉತ್ತರಿಸುತ್ತಾರೆ– ಕೃಷ್ಣನಲ್ಲಿ ಬಾಣಗಳು ಅನಂತ ಇವೆ. ಈ ಬಾಣಗಳಿಗೆ ಬೇಕಾಗುವಷ್ಟು ಸೈನ್ಯ ಜರಾಸಂಧನಲ್ಲಿ ಇಲ್ಲ. ಜರಾಸಂಧನ ನಾಲ್ಕು ಅಂಗಗಳ

ಈ ಸೈನ್ಯದಲ್ಲಿ ಒಂದೊಂದು ಅಂಗಕ್ಕೆ ಒಂದೊಂದೇ ಬಾಣ ಬಿಟ್ಟರೆ ಉಳಿದ ಬಾಣಗಳಿಗೆ ಗತಿ ಏನು? ಅದಕ್ಕೆ ಒಂದೊಂದು ಅಂಗಕ್ಕೂ ಬಹಳ ಬಾಣಗಳನ್ನು ಪ್ರಯೋಗಿಸಿ ತನ್ನ ಅಪಾರ ಬಾಣಸಮುದ್ರದ ಮುಂದೆ ಜರಾಸಂಧನ ಸೈನ್ಯ ಚಿಕ್ಕ ಹೊಂಡದಲ್ಲಿ ತುಂಬಿದ ನೀರಿನಂತೆ ಎಂದು ತಿಳಿಸುವ ಉದ್ದೇಶ.

<u>**ಸಂದೇಶ**</u> : ದೇವರು ತನ್ನ ಪೂರಾ ಶಕ್ತಿಯನ್ನು ಉಪಯೋಗಿಸಿ ಮಾಡುವಂತಹ ಕೆಲಸ ಯಾವುದೂ ಇಲ್ಲ.

**ಶಾರ್ಙ್ಗಂ ಬಿಭ್ರನ್ನಿಷಂಗಾನ್ನಿಶಿತಶರಚಯಾನಾದಧಾನೋ ಮುಹುರ್ಜ್ಯಾ-**
**ಮಾಕರ್ಣಾಂತಂ ವಿಕರ್ಷನ್ ಪ್ರಬಲರಿಪುವಪುಃ ಪೂರಯನ್ ಮಾರ್ಗಣೌಘೈಃ ।**
**ಅನ್ಯಾತಂಕಂ ಸ್ವಶಂಖಂ ರಣಧುರಿ ರಣಯನ್ನಂಘ್ರಿಮೂಲೇ ನತಾನಾಂ**
**ತನ್ವನ್ದೋಷ್ಣಾಽಭಯಂ ಚ ಪ್ರಥಯತಿ ಮುರಜಿತ್ ವಿಶ್ವತಃ ಪಾಣಿತಾಂ ಸ್ವಾಮ್**
**॥ ೨೭ ॥**

ಮುರ=ಮುರನನ್ನು; ಜಿತ್=ಗೆದ್ದಿರುವ ಕೃಷ್ಣನು; ರಣ=ಯುದ್ಧದ; ಧುರಿ=ಕೈಯಿಂದ; ಶಾರ್ಙ್ಗಂ=ಧನುಸ್ಸನ್ನು; ಬಿಭ್ರನ್=ಧರಿಸುತ್ತಾ; ನಿಷಂಗಾತ್=ಬತ್ತಳಿಕೆಯಿಂದ; ನಿಶಿತ= ಹರಿತವಾದ; ಶರ=ಬಾಣಗಳ; ಚಯಾನ್=ಸಮೂಹಗಳನ್ನು; ಆದಧಾನಃ= ಸ್ವೀಕರಿಸಿದವನಾಗಿ; ಮುಹುಃ=ಮತ್ತು; ಜ್ಯಾಂ=ಹಗ್ಗವನ್ನು; ಆಕರ್ಣಾಂತಂ=ಕಿವಿಯತನಕ; ವಿಕರ್ಷನ್=ಎಳೆಯುತ್ತಾ; ಪ್ರಬಲಂ=ಬಲಿಷ್ಠರಾದ; ರಿಪು=ಶತ್ರುಗಳ; ವಪುಃ=ಶರೀರವನ್ನು; ಮಾರ್ಗಣ=ಬಾಣಗಳ; ಓಘೈಃ=ಸಮೂಹಗಳಿಂದ; ಪೂರಯನ್=ತುಂಬಿಸುತ್ತಾ; ಅನ್ಯ=ಶತ್ರುಗಳಿಗೆ; ಆತಂಕಂ=ಗಾಬರಿಯನ್ನು ಮಾಡುವ; ಸ್ವ=ತನ್ನ; ಶಂಖಂ=ಶಂಖವನ್ನು; ರಣಯನ್=ಊದುತ್ತಾ; ಅಂಘ್ರಿ=ಪಾದದ; ಮೂಲೇ=ಬುಡದಲ್ಲಿ; ನತಾನಾಂ= ಬಗ್ಗಿರುವವರಿಗೆ; ಅಭಯಂ=ಅಭಯವನ್ನು; ತನ್ವನ್=ಉಂಟುಮಾಡುತ್ತಾ; ಸ್ವಾಂ=ತನ್ನ; ವಿಶ್ವತಃ=ಸರ್ವತ್ರ; ಪಾಣಿತಾಂ=ಕೈ ಇರುವಿಕೆಯನ್ನು; ಪ್ರಥಯತಿ=ತಿಳಿಸುತ್ತಾನೆ.

ಯುದ್ಧದಲ್ಲಿ ಕೃಷ್ಣನು ಒಂದು ಕೈಯಿಂದ ಧನುಸ್ಸನ್ನು ಹಿಡಿದುಕೊಂಡಿದ್ದನು. ಇನ್ನೊಂದು ಕೈಯಿಂದ ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುತ್ತಿದ್ದನು. ಮತ್ತೊಂದು ಕೈಯಿಂದ ಧನುಸ್ಸಿನ ಹಗ್ಗವನ್ನು ಎಳೆದು ಶಬ್ದ ಬರಿಸುತ್ತಿದ್ದನು. ಮಗದೊಂದು ಕೈಯಿಂದ ಶತ್ರುಗಳ ದೇಹಗಳಿಗೆ ಬಾಣಗಳನ್ನು ಬಿಡುತ್ತಿದ್ದನು. ಬೇರೊಂದು ಕೈಯಿಂದ ಶಂಖವನ್ನು ಊದುತ್ತಿದ್ದನು. ಗಂಭೀರವಾದ ಶಂಖಧ್ವನಿಯಿಂದ ಶತ್ರುಗಳ ಎದೆಯು ಜೋರಾಗಿ ಬಡಿಯುತ್ತಿತ್ತು. ಕೃಷ್ಣನ ಈ ಅದ್ಭುತ ದೃಶ್ಯವನ್ನು ಕಂಡು ಕೆಲವರು ಹೆದರಿ ಕೃಷ್ಣನಿಗೆ ಶರಣುಬಂದರು. ಅಂತಹವರನ್ನು ತನ್ನ ಕೈಗಳಿಂದ ಎಬ್ಬಿಸಿ ಅವರಿಗೆ ಸಮಾಧಾನವನ್ನು ಹೇಳುತ್ತಿದ್ದನು. ಈ ರೀತಿ ಕೃಷ್ಣನು ಪುರುಷಸೂಕ್ತದಲ್ಲಿ ಹೇಳಿದ ತನ್ನ ಅನಂತ ಕೈಗಳನ್ನು ಎಲ್ಲರಿಗೂ ತೋರಿಸಿದನು. ವೇದದ ಪ್ರಾಮಾಣಿಕತೆಯನ್ನು ದೃಢಪಡಿಸಿದನು.

**ಯೇ ಸಂಧ್ಯಾಸಮಯೇಽಪಿ ಭಾಸ್ವದುದಯೇ ನಿದ್ರಾಂ ದ್ವಿಷೋಽಚೀಕರಂ-**
**ಸ್ತೇಭ್ಯೋದೀದಿಶದಚ್ಯುತಃ ಶುಭಕೃತೇಃ ಸಾಕ್ಷೀ ಸುದೀರ್ಘಾಂ ಹಿ ತಾಮ್ ।**
**ಯೈರೀಕ್ಷಾ ನ ಕೃತಾ ರವೇಃ ಕುಮತಿಭಿಃ ತೇಷಾಂ ದೃಶೋ ಮೀಲಯತ್**
**ಯೇ ಶುದ್ಧಾಂಬುನಿ ನೋ ಮಮಜ್ಜುರಹಿತಾಂಸ್ತಾಂಶ್ಶೋಣಿತೇಽಮಜ್ಜಯತ್॥ ೨೮ ॥**

ಯೇ=ಯಾವ; ದ್ವಿಷಃ=ಶತ್ರುಗಳು; ಭಾಸ್ವತ್=ಸೂರ್ಯನ; ಉದಯೇ=ಉದಯವುಳ್ಳ; ಸಂಧ್ಯಾ=ಸಂಧಿಯ; ಸಮಯೇ ಅಪಿ=ಕಾಲದಲ್ಲಿಯೂ; ನಿದ್ರಾಂ=ನಿದ್ರೆಯನ್ನು; ಅಚೀಕರನ್ =ಮಾಡಿದರೋ; ತೇಭ್ಯಃ=ಅವರಿಗೆ; ಶುಭ=ಒಳ್ಳೆಯ; ಕೃತೇಃ=ಕೆಲಸಗಳಿಗೆ; ಸಾಕ್ಷೀ= ಸಾಕ್ಷಿಯಾದ; ಅಚ್ಯುತಃ=ಕೃಷ್ಣನು; ಸುದೀರ್ಘಾಂ=ದೀರ್ಘವಾದ; ತಾಂ=ಅದನ್ನು; ಅದೀದಿಶತ್=ಕೊಟ್ಟನು; ಯೈಃ=ಯಾವ; ಕು=ಕೆಟ್ಟ; ಮತಿಭಿಃ=ಬುದ್ಧಿವುಳ್ಳವರಿಂದ; ರವೇಃ= ಸೂರ್ಯನ; ಈಕ್ಷಾ=ದರ್ಶನವು ; ನ ಕೃತಾ=ಮಾಡಲ್ಪಡಲಿಲ್ಲವೋ; ತೇಷಾಂ=ಅವರ; ದೃಶಃ=ಕಣ್ಣುಗಳನ್ನು; ಅಮೀಲಯತ್=ಮುಚ್ಚಿಸಿದನು; ಯೇ=ಯಾರು; ಶುದ್ಧ=ಒಳ್ಳೆಯ; ಅಂಬುನಿ=ನೀರಿನಲ್ಲಿ; ನೋ ಮಮಜ್ಜುಃ=ಮುಳುಗಲಿಲ್ಲವೋ; ಅಹಿತಾನ್=ಕೆಟ್ಟವರಾದ; ತಾನ್=ಅವರನ್ನು; ಶೋಣಿತೇ=ರಕ್ತದಲ್ಲಿ; ಅಮಜ್ಜಯತ್=ಮುಳುಗಿಸಿದನು.

ಸಂಧ್ಯಾಕಾಲದಲ್ಲಿ ಮಲಗಬಾರದು. ಆ ಕಾಲದಲ್ಲಿ ಜಪತಪಾದಿಗಳನ್ನು ಮಾಡಬೇಕು. ಅವುಗಳನ್ನು ಮಾಡದೆ ಮಲಗಿಕೊಂಡಿದ್ದರೆ ಅಥವಾ ಬೇರೆ ಏನಾದರೂ ಮಾಡುತ್ತಿದ್ದರೆ ನರಕದಲ್ಲಿ ಅನರ್ಥಕ್ಕೆ ಗುರಿಯಾಗಬೇಕು. ಯಾಕೆಂದರೆ ಇದು ಮಹಾಪಾಪ. ಜರಾಸಂಧನ ಸೈನ್ಯದಲ್ಲಿ ಹಲವರು ತಾವು ಯುದ್ಧ ಇಲ್ಲದ ಸಮಯದಲ್ಲಿ ಸಂಧ್ಯಾಕಾಲದಲ್ಲಿಯೂ ಮಲಗುತ್ತಿದ್ದರು. ಅಂತಹವರಿಗೆ ಕೃಷ್ಣನು ಶಿಕ್ಷೆ ಕೊಡಲು ನರಕ ತನಕ ಕಾಯುತ್ತಿರಲಿಲ್ಲ. ಇಲ್ಲೇ ಶಿಕ್ಷೆ ವಿಧಿಸುತ್ತಿದ್ದನು. ಅದೇ ದೀರ್ಘನಿದ್ರೆ, ಅಂದರೆ ಮರಣ. ಇವರು ನಿದ್ರಾಳುಗಳು ಎಂದರ್ಥ. ಅವರಿಗೆ ಅದನ್ನೇ ಒದಗಿಸಿದನು. ಸೂರ್ಯೋದಯದ ಕಾಲದಲ್ಲಿ ಮಲಗು ವುದು ಆರೋಗ್ಯದ ದೃಷ್ಟಿಯಿಂದಲೂ ಒಳ್ಳೆಯದಲ್ಲ. ಅನಾರೋಗ್ಯಪ್ರಯುಕ್ತ ಬೇಗ ಸಾಯುತ್ತಾರೆ.

ಸಂಧ್ಯಾವಂದನೆಯನಂತರ ಸೂರ್ಯದರ್ಶನವನ್ನು ಮಾಡಬೇಕು, ಮಂತ್ರವನ್ನು ಹೇಳಿಕೊಂಡು. ಈ ಸೈನಿಕರು ಅದನ್ನೂ ಮಾಡುತ್ತಿರಲಿಲ್ಲ. ನಮಗೆ ಬೆಳಕನ್ನು ಕೊಟ್ಟ, ನಮ್ಮನ್ನು ಬದುಕಿಸುವ ಸೂರ್ಯನನ್ನು ನೋಡದಿದ್ದರೆ ಕಣ್ಣಿದ್ದೂ ಪ್ರಯೋಜನವಿಲ್ಲ. ಅದಕ್ಕೋಸ್ಕರ ಕೆಲವರ ಕಣ್ಣನ್ನೇ ತೆಗೆದುಬಿಟ್ಟನು.

ಹಾಗೆಯೇ ಅರುಣೋದಯದಲ್ಲಿ ಏಳಬೇಕು. ಸ್ನಾನ ಮಾಡಬೇಕು. ಅನಂತರ ಜಪಾದಿಗಳಲ್ಲಿ ತೊಡಗಬೇಕು. ಔದಾಸೀನ್ಯದಿಂದ ಸ್ನಾನಮಾಡದ ಈ ಮಂದಿಯನ್ನು ಕೃಷ್ಣನು ರಕ್ತದ ಮಡುವಿನಲ್ಲಿ ಮುಳುಗಿಸಿದನು.

ಕೃಷ್ಣನು ಕರ್ಮಾಧ್ಯಕ್ಷ. ನಾವು ಮಾಡುವ ಪ್ರತಿಯೊಂದು ಕರ್ಮಗಳನ್ನೂ ನೋಡುತ್ತಾನೆ. ಅದಕ್ಕೆ ಸರಿಯಾದ ಫಲವನ್ನು ಕೊಡುವ ಅಧಿಕಾರವುಳ್ಳವನು. ಇಂತಹ ಶಿಕ್ಷೆಗಳು ಯದ್ಯಪಿ ನರಕದಲ್ಲಿ. ಪಾಪಪುಣ್ಯಗಳು ಬಹಳವಾಗಿದ್ದರೆ ಇದೇ ಜನ್ಮದಲ್ಲಿ ಒದಗಿಸುತ್ತಾನೆ. ಕ್ಷೇತ್ರದಲ್ಲಿ ಮಾಡುವ ಸ್ವಲ್ಪ ಕೆಲಸವೂ ಅಧಿಕ ಫಲವುಳ್ಳದ್ದು. ಸದ್ಯ ಈ ಸೈನಿಕರು ಮಧುರಾಕ್ಷೇತ್ರದಲ್ಲಿದ್ದಾರೆ. ಪಾಪಕರ್ಮಗಳನ್ನು ಮಾಡಿದ್ದಾರೆ. ಆದ್ದರಿಂದ ಅಧಿಕಫಲ. ಆದ್ದರಿಂದ ಇಲ್ಲೇ ಫಲ.

**ಸಂದೇಶ** : ಸಂಧ್ಯಾವಂದನೆಯೇ ಮೊದಲಾದ ಸತ್ಕರ್ಮಗಳನ್ನು ಮಾಡದಿದ್ದರೆ ನರಕದಲ್ಲಿ ಇಂತಹ ದುಃಖವು ಬರುವುದು.

**ಪಾದಾಬ್ಜೇ ಸ್ವಮನೀನಮನ್ ಕತಿಪಯೇ ಮೂರ್ಧಾನಮಾತ್ಮೇಶಿತುಃ**
**ಶಾಙ್ರ್ಗಾನ್ಮುಕ್ತಶರೈರ್ವಿಶೀರ್ಣತನವಃ ಕೇಽಪ್ಯಾತ್ಮನೋಽಮೀಮಿರನ್ ।**
**ಅನ್ಯೇ ಕೇಽಪಿಹರಿಂ ಜರಾಸುತಮಪಿ ತ್ಯಕ್ತ್ವಾ ತತೋ ದುದ್ರುವುಃ**
**ಜೀವಾನಾಂ ತ್ರಿತಯೇನ ಸಂಚಿತದಶಾಂ ಸಂದರ್ಶಯಂತೋ ಯುಧಿ ॥ ೨೯ ॥**

ಕತಿಪಯೇ=ಕೆಲವರು; ಸ್ವಂ=ತಮ್ಮ; ಮೂರ್ಧಾನಂ=ತಲೆಯನ್ನು; ಆತ್ಮ=ತಮಗೆ; ಈಶಿತುಃ=ಸ್ವಾಮಿಯಾದ ಕೃಷ್ಣನ; ಪಾದ=ಚರಣವೆಂಬ; ಅಬ್ಜೇ=ಕಮಲದಲ್ಲಿ; ಅನೀನ-ಮನ್=ಮಣಿಸಿದರು; ಕೇ ಅಪಿ=ಕೆಲವರು; ಶಾಙ್ರ್ಗಾತ್=ಧನುಸ್ಸಿನಿಂದ; ಮುಕ್ತ=ಹೊರಟಿರುವ; ಶರೈಃ=ಬಾಣಗಳಿಂದ; ವಿಶೀರ್ಣ=ಸೀಳಿದ; ತನವಃ=ಶರೀರವುಳ್ಳವರಾಗಿ; ಆತ್ಮನಃ= ತಮ್ಮನ್ನು; ಅಮೀಮರನ್=ಕೊಲ್ಲಿಸಿಕೊಂಡರು; ಅನ್ಯೇ=ಬೇರೆ; ಕೇ ಅಪಿ=ಕೆಲವರು; ಹರಿಂ=ಕೃಷ್ಣನನ್ನು; ಜರಾಸುತಂ ಅಪಿ=ಜರಾಸಂಧನನ್ನು; ತ್ಯಕ್ತ್ವಾ=ಬಿಟ್ಟು; ತತಃ=ಅಲ್ಲಿಂದ; ದುದ್ರುವುಃ=ಓಡಿದರು; ಜೀವಾನಾಂ=ಜೀವರುಗಳ; ತ್ರಿತಯೇನ=ತ್ರಿತ್ವದಿಂದ; ಸಂಚಿತ= ಸಂಪಾದಿಸಿದ; ದಶಾಂ=ಅವಸ್ಥೆಯನ್ನು; ಯುಧಿ=ಯುದ್ಧದಲ್ಲಿ; ದರ್ಶಯಂತಃ= ತೋರಿಸಿದವರು; ಆಸನ್=ಆದರು.

ಮೂರು ರೀತಿಯ ಜೀವರುಗಳು –ಸಾತ್ವಿಕರು, ರಾಜಸರು, ತಾಮಸರು ಎಂದು ಇದ್ದಾರೆ. ಈ ಮಾತು ಶಾಸ್ತ್ರದಲ್ಲಿ ಇದೆ. ಇದನ್ನೂ ಮಧ್ವರು ಆಧ್ಯಾತ್ಮಿಕ ಪ್ರಪಂಚಕ್ಕೆ ತಿಳಿಸಿದ್ದಾರೆ. ಅದನ್ನು ರಾಜರು ಈ ಯುದ್ಧದಲ್ಲಿ ಉದಾಹರಣೆಯ ಮೂಲಕ ತೋರಿಸುತ್ತಾರೆ– ಕೃಷ್ಣನ ಯುದ್ಧದ ಕೌಶಲ್ಯಕ್ಕೆ ಕೆಲವರು ಮಣಿದರು. ಶಸ್ತ್ರಸನ್ಯಾಸ ಮಾಡಿದರು. ತಮ್ಮ ಒಡೆಯನಾದ ಕೃಷ್ಣನ ಪಾದಗಳಲ್ಲಿ ತಮ್ಮ ತಲೆಗಳನ್ನು ಇಟ್ಟರು. ಇವರು ಸಾತ್ವಿಕರು. ಜನ್ಮಾಂತರದ ಪ್ರಾರಬ್ಧದಿಂದಾಗಿ ಜರಾಸಂಧನ ಪಕ್ಷವನ್ನು ಸೇರಿದ್ದರು. ಇನ್ನು ಕೆಲವರು ಕೃಷ್ಣನ ಯುದ್ಧವನ್ನು ಅನುಭವಿಸುತ್ತಿದ್ದರು. ಆದರೂ ಶರಣು ಬರಬೇಕು ಎಂದು ತೋರಲಿಲ್ಲ. ಬಾಣಗಳಿಗೆ ಎದೆಯೊಡ್ಡಿದರು. ಮಡಿದರು. ಇವರು ತಾಮಸರು. ಸತ್ತರೂ ಅಡ್ಡಿ ಇಲ್ಲ. ಕೃಷ್ಣನನ್ನು ವಿರೋಧಿಸಬೇಕು ಎಂಬ ಛಲ. ಇನ್ನು ಕೆಲವರು ಕೃಷ್ಣನೂ ಬೇಡ, ಜರಾಸಂಧನೂ ಬೇಡ ಎಂದು ಹೆದರಿ ಓಡಿದರು. ಸಾತ್ವಿಕ ಪಕ್ಷವನ್ನೂ

ತಾಮಸ ಪಕ್ಷವನ್ನೂ ಬಿಟ್ಟರು. ಬದುಕುವುದು ಒಂದೇ ಗುರಿಯಾಗಿತ್ತು. ಇವರು ರಾಜಸರು. ತಾವು ಜನ್ಮಾಂತರದಲ್ಲಿ ಮಾಡಿದ ಕರ್ಮಗಳಿಗೆ ಅನುಸಾರವಾಗಿ ನಡೆದರು.

**ಸಂದೇಶ** : ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡುವವರು ಸಾತ್ವಿಕರು. ವಿರೋಧಿಸುವವರು ತಾಮಸರು. ಎರಡನ್ನೂ ಮಾಡದವರು ರಾಜಸರು.

**ಯೋ ಮಾಗಧಸ್ಯ ಸಾಧರ್ಮ್ಯಮಾಪನ್ನಾನಪಿ ನಾವಧೀತ್ ।**
**ಸ ಮಾಗಧವಧಂ ಹೀನಂ ಮೇನೇ ವೀರಶಿರೋಮಣಿಃ ॥ ೩೦ ॥**

ಯಃ=ಯಾರು; ಮಾಗಧಸ್ಯ=ಮಾಗಧನ; ಸಾಧರ್ಮ್ಯಂ=ಸಾಮ್ಯವನ್ನು; ಆಪನ್ನಾನ್ ಅಪಿ=ಹೊಂದಿದವರನ್ನೂ; ನ ಅವಧೀತ್=ಕೊಲ್ಲಲಿಲ್ಲ; ವೀರ=ವೀರರಿಗೆ; ಶಿರೋಮಣಿಃ= ಶಿಖಾಮಣಿಯಾದ; ಸಃ=ಕೃಷ್ಣನು; ಮಾಗಧ=ಜರಾಸಂಧನ; ವಧಂ=ನಾಶವನ್ನು; ಹೀನಂ= ತುಚ್ಛವನ್ನಾಗಿ; ಮೇನೇ=ತಿಳಿದನು.

ಮಾಗಧ ಎಂಬ ಹೆಸರು ಜರಾಸಂಧನಿಗೆ, ಹಾಗೆಯೇ ಹೊಗಳುಭಟರಿಗೂ ಇದೆ. ಯುದ್ಧದಲ್ಲಿ ಯಾರು ಕೃಷ್ಣನನ್ನು ಪರಪಕ್ಷದಲ್ಲಿ ಇದ್ದುಕೊಂಡು ಹೊಗಳಿದರೋ, ಅವಮಾಗಧರಾದರು. ಹೆಸರಿನಿಂದ ಜರಾಸಂಧನಿಗೆ ಸಮಾನರಾದರು. ಯುದ್ಧದಲ್ಲಿ ಹೊಗಳುವವರು ಪರಪಕ್ಷದಲ್ಲಿದ್ದರೂ ಅವರನ್ನು ಕೊಲ್ಲುವುದು ಕ್ಷತ್ರಿಯನಿಗೆ ಧರ್ಮವಲ್ಲ. ಹೀಗೆ ಮಾಗಧನಿಗೆ ಸಮಾನರನ್ನೇ ಕೊಲ್ಲುವುದು ಸರಿಯಲ್ಲ, ವೀರನಿಗೆ ಉಚಿತಧರ್ಮವಲ್ಲ ಎಂದ ಮೇಲೆ ಸ್ವಯಂ ಮಾಗಧನನ್ನೇ ಕೊಲ್ಲುವುದು ಎಷ್ಟು ಯೋಗ್ಯವಾದೀತು ಎಂಬ ಅಭಿಪ್ರಾಯದಿಂದ ಕೃಷ್ಣನು ಮಾಗಧನಾದ ಜರಾಸಂಧನನ್ನು ಕೊಲ್ಲಲಿಲ್ಲ. ಜರಾಸಂಧನನ್ನು ಕೃಷ್ಣನು ಯುದ್ಧದಲ್ಲಿ ಯಾಕೆ ಕೊಲ್ಲಲಿಲ್ಲ ಎಂಬ ಪ್ರಶ್ನೆಗೆ ಉತ್ತರ. ಕೃಷ್ಣನಿಗೆ ಸಾಧ್ಯವಾಗಲಿಲ್ಲ; ಆದ್ದರಿಂದ ಕೊಲ್ಲಲಿಲ್ಲ ಎಂದು ಕೆಲವರು ಹೇಳುವುದುಂಟು. ಈ ಹೇಳಿಕೆಗೆ ರಾಜರು ಈ ರೀತಿ ಉತ್ತರಿಸಿದ್ದಾರೆ.

**ಸಂದೇಶ** : ಬದುಕುವ ಉಪಾಯ ದೇವರಿಗೆ ಶರಣುಬರುವುದು.

**ಸ ಇತ್ಥಮಾಜೌ ಬಹುವಾರಮೇನಂ ವಿಜಿತ್ಯ ಬಾರ್ಹದ್ರಥಮುಗ್ರಸೇನಮ್ ।**
**ಪುರಂ ಹಿರಣ್ಯಾಮಲರತ್ನಚಿತ್ರಮರಿಂದಮೋಽಚೀಕರದಬ್ಧಿಮಧ್ಯೇ ॥ ೩೧ ॥**

ಅರಿಂ=ಶತ್ರುವನ್ನು; ದಮಃ=ಮಣಿಸುವ; ಸಃ=ಕೃಷ್ಣನು; ಇತ್ಥಂ=ಈ ರೀತಿಯಾಗಿ; ಉಗ್ರ=ಕ್ರೂರವಾದ; ಸೇನಂ=ಸೈನ್ಯವುಳ್ಳ; ಏನಂ=ಈ; ಬಾರ್ಹದ್ರಥಂ=ಜರಾಸಂಧನನ್ನು; ಬಹುವಾರಂ=ಬಹಳ ಸಲ; ವಿಜಿತ್ಯ=ಸೋಲಿಸಿ; ಅಬ್ಧಿ=ಸಮುದ್ರದ; ಮಧ್ಯೇ=ಮಧ್ಯದಲ್ಲಿ; ಹಿರಣ್ಯ=ಚಿನ್ನವು; ಅಮಲ=ಶುದ್ಧವಾದ; ರತ್ನ=ರತ್ನಗಳಿಂದ; ಚಿತ್ರಂ=ವಿಚಿತ್ರವಾದ; ಪುರಂ=ಊರನ್ನು; ಅಚೀಕರತ್=ಮಾಡಿದನು.

ಬೃಹದ್ರಥ ಎಂಬ ರಾಜನ ಮಗನು ಈ ಜರಾಸಂಧನು. ಇವನು ೧೮ ಸಲ

ಕೃಷ್ಣನಲ್ಲಿ ಯುದ್ಧಕ್ಕೆ ಬಂದಿದ್ದನು. ಪ್ರತಿಸಲವೂ ೨೩ ಅಕ್ಷೋಹಿಣೀ ಸೈನ್ಯವನ್ನು ತರುತ್ತಿದ್ದನು. ಆ ಸೈನ್ಯವನ್ನೆಲ್ಲಾ ಕೃಷ್ಣನು ಬಡಿದು ಜರಾಸಂಧನನ್ನು ಮಾತ್ರ ಹಿಂದಕ್ಕೆ ಕಳಿಸುತ್ತಿದ್ದನು. ಕೃಷ್ಣನ ಅನೇಕ ಕೆಲಸಗಳಲ್ಲಿ ಶತ್ರುಗಳನ್ನು ಬಡಿಯುವುದೂ ಒಂದು. ಆದ್ದರಿಂದಲೇ ದೇವರಿಗೆ ಅರಿಂದಮ ಎಂದು ಹೆಸರು. ಇದರಿಂದ ಕೃಷ್ಣನಿಗೆ ಯಾವ ರೀತಿಯಾದ ಆಯಾಸವೂ ಆಗಲಿಲ್ಲ. ಆದರೆ ಯಾದವರು ಮಾತ್ರ ತುಂಬಾ ಬಳಲಿದರು. ಇವರ ರಕ್ಷಣೆಗಾಗಿ ಕೃಷ್ಣನು ಸಮುದ್ರದ ಮಧ್ಯದಲ್ಲಿ ಒಂದು ಮನೆಯನ್ನು ನಿರ್ಮಿಸಿದನು. ಉತ್ತಮವಾದ ಚಿನ್ನ ಹಾಗೂ ನವರತ್ನಗಳಿಂದ ಅದರ ನಿರ್ಮಾಣವಾಯಿತು.

**ನಿಧಾಯ ತಸ್ಯಾಂ ಮಧುರಾಪುರಸ್ಥಾನ್**
**ನಿಜಾನ್ ಕ್ಷಣೇನಾಪರಿಮೇಯಶಕ್ತಿಃ ।**
**ವಿದುದ್ರುವೇಽಥೋ ಯವನಂ ದಿಧಕ್ಷುಃ**
**ಸ್ವಭಕ್ತಹರ್ಯಕ್ಷದರೀಮರಿಘ್ನಃ ॥ ೩೨ ॥**

ಅಪರಿಮೇಯ=ತಿಳಿಯಲು ಸಾಧ್ಯವಿಲ್ಲದ; ಶಕ್ತಿಃ=ಶಕ್ತಿಯುಳ್ಳ; ಅರಿ=ಶತ್ರುಗಳನ್ನು; ಘ್ನಃ=ನಾಶಮಾಡುವ ಕೃಷ್ಣನು; ಅಥೋ=ಅನಂತರ; ಮಧುರಾ=ಮಧುರೆ ಎಂಬ; ಪುರ=ಪಟ್ಟಣದಲ್ಲಿ; ಸ್ಥಾನ್=ಇರುವ; ನಿಜಾನ್=ತನ್ನವರನ್ನು; ಕ್ಷಣೇನ=ಒಂದು ಕ್ಷಣದಿಂದ; ತಸ್ಯಾಂ=ಅಲ್ಲಿ; ನಿಧಾಯ=ಇಟ್ಟು; ಯವನಂ=ಯವನನನ್ನು; ದಿಧಕ್ಷುಃ=ಸುಡುವ ಅಪೇಕ್ಷೆ ಉಳ್ಳವನಾಗಿ; ಸ್ವ=ತನ್ನ; ಭಕ್ತ=ಭಕ್ತನೆಂಬ; ಹರ್ಯಕ್ಷ=ಸಿಂಹದ; ದರೀಂ=ಗುಹೆಯನ್ನು; ವಿದುದ್ರುವೇ=ಓಡಿದನು.

ಯಾದವರು ಮಧುರೆಯಲ್ಲಿ ಇರುವಂತೇ ಅವರನ್ನು ರಕ್ಷಿಸುವ ಶಕ್ತಿ ಕೃಷ್ಣನಿಗೆ ಇದ್ದೇ ಇದೆ. ಯಾಕೆಂದರೆ ಆತನ ಶಕ್ತಿಯ ಅಳತೆಯನ್ನು ತಿಳಿದವರು ಯಾರೂ ಇಲ್ಲ. ಆದರೂ ಸಮುದ್ರದ ಮಧ್ಯದಲ್ಲಿ ಊರು. ಅದರಲ್ಲಿ ಯಾದವರನ್ನು ನೆಲೆಗೊಳಿಸಿದ. ಇದೂ ಒಂದು ಆತನ ಅದ್ಭುತಶಕ್ತಿ. ತನ್ನ ಭಕ್ತರು ತನ್ನನ್ನು ನಾನಾ ರೀತಿಯಿಂದ ಆರಾಧಿಸಲು ಅನುಕೂಲವಾಗುವಂತೆ ದೇವರು ತನ್ನ ಒಂದೊಂದೇ ಶಕ್ತಿಯನ್ನು ಪ್ರದರ್ಶಿಸುತ್ತಾನೆ.

ಕೃಷ್ಣ–ಜರಾಸಂಧರ ಹದಿನೆಂಟು ಬಾರಿ ಯುದ್ಧದ ಮಧ್ಯದಲ್ಲಿ ನಡೆದ ಒಂದು ಘಟನೆಯನ್ನು ರಾಜರು ಈ ಶ್ಲೋಕದಲ್ಲಿ ತುಂಬಿಸುತ್ತಾರೆ –೩೭ನೇ ಶ್ಲೋಕದ ತನಕ.

ಯಾದವರ ಪುರೋಹಿತರಾದ ಗರ್ಗಾಚಾರ್ಯರಿಗೆ ಒಂದು ಪ್ರಸಂಗದಲ್ಲಿ ಕೃಷ್ಣನಲ್ಲಿ ಸಿಟ್ಟು ಬಂತು. ಅನಂತರ ಊರನ್ನು ಬಿಟ್ಟು ಕಾಡು ಸೇರಿದರು. ಅಲ್ಲಿ ಯಾರದೋ ಸ್ತ್ರೀಯ ಸಂಸರ್ಗವಾಯಿತು. ಅಲ್ಲಿ ಒಂದು ಮಗು ಹುಟ್ಟಿತು. ಅದರ ಹೆಸರು ಕಾಲಯವನ. ಗರ್ಗರು ಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಪಡೆದ ಮಗುವಾಗಿತ್ತು. ಯವನ ಜಾತಿಗೆ ಸೇರಿದ್ದು. ಕೃಷ್ಣನನ್ನು ಯಾವಾಗ ಕೊಲ್ಲುವುದು ಎಂದು ಕಾಲವನ್ನು ನಿರೀಕ್ಷಿಸುತ್ತಿತ್ತು. ಆದ್ದರಿಂದ ಕಾಲಯವನವಾಯಿತು.

ಬಹಳ ಸಲ ಕೃಷ್ಣನಲ್ಲಿ ಹೋರಾಡಿದರೂ ಆತನನ್ನು ಕೊಲ್ಲಲು ಸಾಧ್ಯವಾಗದ ಜರಾಸಂಧನು ಈತನನ್ನು ಮೊರೆಹೋದನು. ಈತನು ಬಹಳ ಸೈನ್ಯದಿಂದ ಕೂಡಿಕೊಂಡು ಕೃಷ್ಣನಲ್ಲಿ ಯುದ್ಧಕ್ಕೆ ಬಂದನು. ಕೃಷ್ಣನು ಈತನ ಸೈನ್ಯವನ್ನೆಲ್ಲಾ ಧ್ವಂಸಮಾಡಿದನು. ಈತನನ್ನು ಯುದ್ಧದಲ್ಲಿ ಕೆಡವಿ ಈತನಿಗೆ ಕಾಣಿಸುವಂತೆ ತಾನು ಓಡಿದನು. ಒಂದು ಗುಹೆಯನ್ನು ಸೇರಿದನು. ಆ ಗುಹೆಯಲ್ಲಿ ಮುಚುಕುಂದನೆಂಬ ರಾಜನು ಮಲಗಿದ್ದನು. ಇವನಿಂದ ಈ ಕಾಲಯವನನನ್ನು ಸುಡಿಸುವ ಸಂಕಲ್ಪ ಕೃಷ್ಣನಿಗೆ.

**ಪರಾಙ್ಮುಖೋಽಸೌ ಪರಮಃ ಪಲಾಯನ್ ಖಲಾಗ್ರತಃ ಕಂಜದಲಾಯತಾಕ್ಷಃ ।**
**ದುರಾತ್ಮನಾಂ ವಕ್ತ್ರನಿರೀಕ್ಷಣಂ ಸ್ವೈರ್ಜನೈರ್ನಕಾರ್ಯಂ ತ್ವಿತಿ ಶಂಸತಿ ಸ್ಮ ॥ ೩೩ ॥**

ಕಂಜ=ಕಮಲದ; ದಲ=ದಳದಂತೆ; ಆಯತ=ವಿಶಾಲವಾದ; ಅಕ್ಷ=ಕಣ್ಣುಳ್ಳ; ಪರಮಃ=ಉತ್ತಮನಾದ; ಅಸೌ=ಕೃಷ್ಣನು; ಖಲ=ದುಷ್ಟನ; ಅಗ್ರತಃ=ಮುಂದಿನಿಂದ; ಪರಾಕ್=ಹಿಂದೆ; ಮುಖಃ=ಮುಖವುಳ್ಳವನಾಗಿ; ಪಲಾಯನ್=ಓಡುತ್ತಾ; ದುರ್=ಕೆಟ್ಟ; ಆತ್ಮನಾಂ=ಸ್ವಭಾವದವರ; ವಕ್ತ್ರ=ಮುಖದ; ನಿರೀಕ್ಷಣಂ=ನೋಡುವಿಕೆಯು; ಸ್ವೈಃ=ತನ್ನ; ಜನೈಃ=ಜನರಿಂದ; ನ ಕಾರ್ಯಂ=ಮಾಡಲ್ಪಡಬಾರದು; ಇತಿ=ಎಂದು; ಶಂಸತಿ ಸ್ಮ= ಹೇಳುತ್ತಿದ್ದನು.

ಕೃಷ್ಣನು ಕಾಲಯವನನಿಗೆ ಬೆನ್ನುಹಾಕಿ ಓಡುತ್ತಿದ್ದಾನೆ. ಹೆದರಿ ಓಡುತ್ತಿಲ್ಲ ಎಂದು ತಿಳಿಸಲು ರಾಜರು ಕೃಷ್ಣನನ್ನು ಕಮಲದ ದಳದಂತೆ ಅರಳಿದ ಕಣ್ಣುಳ್ಳವನು ಎಂದಿದ್ದಾರೆ. ಹೆದರಿ ಓಡುವುದಾದರೆ ಕಣ್ಣುಗಳು ಚಿಕ್ಕದಾಗುತ್ತವೆ. ಅರಳುವುದು ಆನಂದದಲ್ಲಿ ಹಾಗೂ ಧೈರ್ಯದಲ್ಲಿ ಇರುವಾಗ. ಹಾಗಾದರೆ ಯಾಕೆ ಓಡಬೇಕಿತ್ತು? ತತ್ರಾಪಿ ಹೆದರಿದವರಂತೆ ಬೆನ್ನುಹಾಕಿ ಯಾಕೆ ಓಡಬೇಕಿತ್ತು? ಇದಕ್ಕೆ ಒಂದು ನೀತಿಯನ್ನು ತೋರಿಸಲು ಎಂದು ರಾಜರು ಉತ್ತರಿಸುತ್ತಾರೆ –ಕೆಟ್ಟವರ ಮುಖಾವಲೋಕನವನ್ನು ಎಂದೂ ಮಾಡಬಾರದು ಎಂದು ತಿಳಿಸಲು ಬೆನ್ನುಹಾಕಿದ. ದುಷ್ಟರ ಸಹವಾಸ ಸ್ವಲ್ಪವಾದರೂ ಅನಿಷ್ಟ ಬಹಳ ಇದೆ. ಆದ್ದರಿಂದ ಆದಷ್ಟು ಬೇಗ ಅವರಿಂದ ದೂರವಾಗಬೇಕು ಎಂದು ತಿಳಿಸಲು ಓಡಿದ.

**ಅಧಿಕ್ಷಿಪ್ತೋಽಪಿ ತೇನಾಧ್ವನ್ಯದತ್ತೋತ್ತರ ಈಶ್ವರಃ ।**
**ಅಸಲ್ಲಾಪಮಸದ್ವರ್ಗೈಃ ಸತಾಂ ಸಂಶಿಕ್ಷಯನ್ನಿವ ॥ ೩೪ ॥**

ತೇನ=ಯವನನಿಂದ; ಅಧ್ವನಿ=ದಾರಿಯಲ್ಲಿ; ಅಧಿಕ್ಷಿಪ್ತಃ ಅಪಿ=ಬೈಸಿಕೊಂಡರೂ; ಈಶ್ವರಃ=ಕೃಷ್ಣನು; ಅದತ್ತ=ಕೊಡದ; ಉತ್ತರಃ=ಉತ್ತರವುಳ್ಳವನಾಗಿ; ಅಸತ್=ದುಷ್ಟರ; ವರ್ಗೈಃ=ಸಮೂಹದಿಂದ; ಸತಾಂ=ಸಜ್ಜನರಿಗೆ; ಅಸಲ್ಲಾಪಂ=ಅಸಂಭಾಷಣೆಯನ್ನು; ಸಂಶಿಕ್ಷಯನ್ ಇವ=ಶಿಕ್ಷಿಸುವವನಂತೆ.

ಕೃಷ್ಣನು ಓಡುತ್ತಿರುವಾಗ ಯವನನು ಕೃಷ್ಣನನ್ನು ತುಂಬಾ ಹೀಯಾಳಿಸಿದನು– "ನಿಲ್ಲು, ಹೆದರಿ ಓಡಬೇಡ" ಇತ್ಯಾದಿ ರೀತಿಯಿಂದ. ಆದರೂ ಕೃಷ್ಣನು ಆತನ ಮಾತನ್ನು ಲೆಕ್ಕಿಸದೆ ಓಡಿದನು. ಆತನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಯಾಕೆಂದರೆ ಸಜ್ಜನರಿಗೆ ಒಂದು ನೀತಿಯನ್ನು ತೋರಿಸಲು– ಸಜ್ಜನರು ದುಷ್ಟರ ಜೊತೆ ಎಂದೂ ಯಾವುದೇ ರೀತಿಯ ವ್ಯವಹಾರವನ್ನು ಇಟ್ಟುಕೊಳ್ಳಬಾರದು ಎಂದು.

**ನಿದ್ರಾಲೋರ್ಮುಚುಕುಂದಭೂವರಮಣೇರ್ವಿದ್ಯೋತಮಾನಾಂ ಗುಹಾ–**
**ಮಧ್ಯಾಸೀನಮಗಮ್ಯಮಲ್ಪಮತಿಭಿಶ್ಶುದ್ಧಂ ಪ್ರಬುದ್ಧಂ ಸ್ವತಃ ।**
**ಹೃದ್ವ್ಯೋಮಸ್ಥಿತಮುಗ್ಧಜೀವನಿಕರಾದ್ದುರ್ಧೀರಭಿನ್ನಂ ವದ–**
**ನ್ನದ್ವೈತೀವ ನೃಪಾತ್ಸ ಭೇದರಹಿತಂ ಬುದ್ಧ್ಯಾನ್ವಮಂಸ್ತಾಸುರಃ ॥ ೩೫ ॥**

ಅಸುರಃ=ದೈತ್ಯನಾದ; ಸಃ=ಅವನು; ನಿದ್ರಾಲೋಃ=ನಿದ್ರಿಸುತ್ತಿರುವ; ಮುಚುಕುಂದ= ಮುಚುಕುಂದನೆಂಬ; ಭೂ=ಭೂಮಿಯ; ವರ=ಉತ್ತಮವಾದ; ಮಣೇಃ=ಮಣಿಯ; ವಿದ್ಯೋತಮಾನಾಂ=ಶೋಭಿಸುವ; ಗುಹಾಂ=ಗುಹೆಯನ್ನು; ಅಧ್ಯಾಸೀನಂ=ಇರುವ; ಅಲ್ಪ= ಸ್ವಲ್ಪ; ಮತಿಭಿಃ=ಬುದ್ಧಿಯವರಿಂದ; ಅಗಮ್ಯಂ=ತಿಳಿಯಲು ಸಾಧ್ಯವಿಲ್ಲದ; ಸ್ವತಃ=ಸಹಜ ವಾಗಿ; ಪ್ರಬುದ್ಧಂ=ನಿದ್ರೆ ಇಲ್ಲದ; ಶುದ್ಧಂ=ಶುದ್ಧನಾದ ಕೃಷ್ಣನನ್ನು; ಹೃತ್=ಹೃದಯವೆಂಬ; ವ್ಯೋಮ=ಗುಹೆಯಲ್ಲಿ; ಸ್ಥಿತ=ಇರುವ; ಮುಗ್ಧ=ಮುಗ್ಧನಾದ; ಜೀವ=ಜೀವರ; ನಿಕರಾತ್= ಸಮೂಹದಿಂದ; ಅಭಿನ್ನಂ=ಅಭಿನ್ನನನ್ನಾಗಿ; ವದನ್=ಹೇಳುವ; ದುರ್=ಕೆಟ್ಟ; ಧೀಃ= ಬುದ್ಧಿವುಳ್ಳ; ಅದ್ವೈತೀ ಇವ=ಮಾಯಿಗಳಂತೆ; ನೃಪಾತ್=ರಾಜನಿಂದ; ಭೇದ= ಭೇದದಿಂದ; ರಹಿತಂ=ರಹಿತನನ್ನಾಗಿ; ಬುದ್ಧ್ಯಾ=ಬುದ್ಧಿಯಿಂದ; ಅನ್ವಮಂಸ್ತ=ತಿಳಿದನು.

ದೇವದೈತ್ಯರಿಗೆ ಒಮ್ಮೆ ಯುದ್ಧವಾಯಿತು. ಆಗ ಭೂಮಿಯಲ್ಲಿ ಮುಚುಕುಂದನೆಂಬ ಉತ್ತಮ ರಾಜನ ಕಾಲ. ದೇವತೆಗಳಿಗೆ ಸೋಲಿನ ಭಯ ಕಾಡಿತು. ಆಗ ಮುಚುಕುಂದನು ದೇವತೆಗಳ ಸಹಾಯಕ್ಕೆ ನಿಂತನು. ದೈತ್ಯರನ್ನು ಬಡಿದನು. ಈ ಯುದ್ಧದಿಂದ ರಾಜನು ಬಹಳ ಬಳಲಿದ್ದನು. ದೇವತೆಗಳು ಆತನನ್ನು ವರ ಬೇಡುವಂತೆ ಕೇಳಿದರು. ಆತನು ನಿದ್ರೆಯನ್ನು ವರವನ್ನಾಗಿ ಪಡೆದನು. ಯಾರು ನನ್ನನ್ನು ನಿದ್ರೆಯಿಂದ ಎಬ್ಬಿಸುತ್ತಾರೋ ಅವರು ಸುಟ್ಟು ಹೋಗಲಿ ಎಂದೂ ಕೇಳಿದನು. ದೇವತೆಗಳು ಆಗಲಿ ಎಂದರು.

ಈ ರಾಜನು ಅನಂತರ ರೈವತಬೆಟ್ಟದ ಗುಹೆಯಲ್ಲಿ ಮಲಗಿದನು. ಈತನ ಈ ಕ್ಷುಲ್ಲಕ ವರದಿಂದ ಖಿನ್ನರಾದ ದೇವತೆಗಳು ಕೃಷ್ಣನಲ್ಲಿ ವಿಷಯವನ್ನು ತಿಳಿಸಿದರು. ವರವನ್ನು ಸಾರ್ಥಕಗೊಳಿಸುವಂತೆ ಬೇಡಿದರು.

ಇಂತಹ ಗುಹೆಯನ್ನು ಕೃಷ್ಣನು ಪ್ರವೇಶಿಸಿದನು. ತನ್ನ ಆಭರಣಗಳನ್ನೆಲ್ಲಾ ಮುಚುಕುಂದನಿಗೆ ಮಲಗಿದಲ್ಲೇ ತೊಡಿಸಿದನು. ತನ್ನಂತೆ ತೋರುವಂತೆ ಮಾಡಿದನು.

ತಾನು ಆ ಗುಹೆಯಲ್ಲಿ ಅಡಗಿ ಕುಳಿತನು. ಯವನನು ಗುಹೆಗೆ ನುಗ್ಗಿದನು. ಮಲಗಿರುವ ರಾಜನನ್ನು ಕೃಷ್ಣನೆಂದೇ ತಿಳಿದನು. ಇಷ್ಟು ಬೇಗ ಇಲ್ಲಿ ಮಲಗಿದೆಯಾ ಎನ್ನುತ್ತ ಕಾಲಿನಿಂದ ರಾಜನನ್ನು ಒದ್ದನು. ರಾಜನು ಎದ್ದನು. ಯವನನು ಬಿದ್ದನು.

ಈ ಚಿತ್ರಣವನ್ನು ರಾಜರು ಸಮಗ್ರವಾಗಿ ಅದ್ವೈತಿಗಳಿಗೆ ಹೋಲಿಸುತ್ತಾರೆ– ಬೆಟ್ಟದ ಗುಹೆಯಲ್ಲಿ ರಾಜನು ಮಲಗಿದ್ದಾನೆ. ಮಾನವರ ಶರೀರ ಎಂಬುದೇ ಒಂದು ಬೆಟ್ಟ. ಅದರಲ್ಲಿ ಹೃದಯ ಎಂಬುದು ಒಂದು ಗುಹೆ. ಈ ಗುಹೆಯಲ್ಲಿ ಜೀವ–ಈಶ ಇಬ್ಬರೂ ಇದ್ದಾರೆ. ಬೆಟ್ಟದ ಗುಹೆಯಲ್ಲಿ ಜೀವನಾದ ರಾಜ ಹಾಗೂ ಈಶನಾದ ಕೃಷ್ಣನಿರುವಂತೆ. ಇದನ್ನು 'ದ್ವಾ ಸುಪರ್ಣಾ' ಎಂಬ ಶ್ರುತಿಯು ಚೆನ್ನಾಗಿ ವಿವರಿಸುತ್ತಿದೆ. ಈ ಜೀವ–ಈಶರು ಬಿಂಬ ಪ್ರತಿಬಿಂಬ ಭಾವವುಳ್ಳವರು. ಆದ್ದರಿಂದ ಮುಚುಕುಂದ–ಕೃಷ್ಣರಂತೆ ಸಾದೃಶ್ಯ ಇದೆ.

ಮಾಯಾವಾದಿಗಳು "ಅಹಂ ಬ್ರಹ್ಮ ಅಸ್ಮಿ, ತತ್ ತ್ವಂ ಅಸಿ" ನಾನು ದೇವರಾಗಿದ್ದೇನೆ. ನೀನು ದೇವರು ಆಗಿದ್ದಿ ಎಂದು ಶ್ರುತಿಗೆ ಜೀವ–ಈಶರಿಗೆ ಐಕ್ಯಪರವಾಗಿ ಅರ್ಥ ಮಾಡುತ್ತಾರೆ. ಇವರು ಯವನನಂತೆ ದುರ್ಬುದ್ಧಿವುಳ್ಳವರು.

ಗುಹೆಯಲ್ಲಿ ಮಲಗಿದ ಮುಚುಕುಂದನು ಕೃಷ್ಣನು ಆ ಗುಹೆಯಲ್ಲಿ ಇರುವುದನ್ನು ತಿಳಿಯಲಿಲ್ಲ. ಆದರೂ ಆತನಿಗೆ ಕೃಷ್ಣನು ಸಾದೃಶ್ಯವನ್ನು ಕೊಟ್ಟನು. ನಾಲ್ಕು ವಿಧ ಮೋಕ್ಷಗಳಲ್ಲಿ ಸಾದೃಶ್ಯ ಎಂಬುದೂ ಒಂದು.

ಹೃದಯಗುಹೆಯಲ್ಲಿರುವ ಜೀವನೂ ದೇವರು ತನ್ನ ಜೊತೆಗೆ ಈ ಗುಹೆಯಲ್ಲಿ ಇದ್ದಾನೆ ಎಂಬುದನ್ನು ಮರೆತಿದ್ದಾನೆ. ಆದರೂ ದೇವರು ಆತನನ್ನು ಈ ಗುಹೆಯಲ್ಲಿ ರಕ್ಷಿಸುತ್ತಿದ್ದಾನೆ.

ಸಾಮಾನ್ಯ ಜೀವನಾದ ಮುಚುಕುಂದನನ್ನು ಕೃಷ್ಣನನ್ನಾಗಿ ಯವನನು ತಿಳಿದನು. ಜೀವ–ಈಶರಿಗೆ ಐಕ್ಯವನ್ನು ತಿಳಿದನು ಎಂದರ್ಥ.

<u>ಸಂದೇಶ</u> : ನಾವು ಸಾಧ್ಯವಾದಷ್ಟು ಸಜ್ಜನರಿಗೆ ಸಹಾಯ ಮಾಡಬೇಕು. ಆಗ ದೇವರು ನಾವು ಬಯಸಿದ್ದೆಲ್ಲವನ್ನು ಕೊಡುತ್ತಾನೆ. ಹಾಗೆಯೇ ಅದನ್ನು ಸಾರ್ಥಕಗೊಳಿಸುತ್ತಾನೆಯೂ ಕೂಡಾ.

**ಐಕ್ಯಂ ಪಿಪಾಠಯಿಷಿತಂ ಯದಿ ತತ್ ಕಿಮರ್ಥಂ**
**ರಕ್ಷೋಽಚ್ಯುತತ್ವಮತಿರಾಜ್ಞಿ ಶುಕೋ ನ ಸೇಹೇ ।**
**ಅಸ್ಮಚ್ಯುತೋಽಹಮಿತಿ ದಿಕ್ಷು ವಿಘೋಷಯಂತಂ**
**ಕಸ್ಮಾತ್ ಸ ಪೌಂಡ್ರಕಮಗರ್ಹಯದರ್ಹಣೀಯಃ ॥ ೩೭ ॥**

ಯದಿ=ಒಂದು ವೇಳೆ; ಐಕ್ಯಂ=ಐಕ್ಯವು; ಸಿಷಾಧಯಿಷಿತಂ=ಸಾಧಿಸಲು ಇಚ್ಛಿಸಲ್ಪಟ್ಟಿದ್ದರೆ; ತತ್=ಅದನ್ನು; ಶುಕಃ=ಶುಕಾಚಾರ್ಯರು; ರಾಜ್ಞಿ=ರಾಜನಲ್ಲಿ; ಅಚ್ಯುತತ್ವ=ದೇವತ್ವದ; ಮತಿ=ಬುದ್ಧಿವುಳ್ಳ; ರಕ್ಷಃ=ದೈತ್ಯನನ್ನು; ಕಿಮರ್ಥಂ=ಯಾಕೆ; ನ ಸೇಹೇ=ಸಹಿಸಲಿಲ್ಲ; ಅರ್ಹಣೀಯಃ=ಪೂಜ್ಯರಾದ; ಸಃ=ಶುಕರು; ಅಹಂ=ನಾನು; ಅಚ್ಯುತಃ=ದೇವರು; ಅಸ್ಮಿ=ಆಗಿದ್ದೇನೆ; ಇತಿ=ಎಂದು; ದಿಕ್ಷು=ದಿಕ್ಕುಗಳಲ್ಲಿ; ವಿಘೋಷ-ಯಂತಂ=ಹೇಳುತ್ತಿರುವ; ಪೌಂಡ್ರಕಂ=ಪೌಂಡ್ರಕನನ್ನು, ಕಸ್ಮಾತ್=ಯಾಕೆ; ಅಗರ್ಹಯತ್=ನಿಂದಿಸಿದರು.

ಯವನನು ಜೀವನಾದ ಮುಚುಕುಂದನನ್ನು ದೇವರೆಂದು ತಿಳಿದನು. ಜೀವ ಈಶರಿಗೆ ಐಕ್ಯ ತಿಳಿಯುವುದು ಸರಿಯೋ ತಪ್ಪೋ? ಎಂದು ರಾಜರು ಈ ಶ್ಲೋಕದಲ್ಲಿ ವಿವರಿಸುತ್ತಾರೆ.

ಕೃಷ್ಣನಿಗೂ ರಾಜನಿಗೂ ಐಕ್ಯವನ್ನು ತಿಳಿದ ಯವನನನ್ನು ಶುಕಾಚಾರ್ಯರು ಮೂರ್ಖನೆಂಬ ಶಬ್ದದಿಂದ ನಿಂದಿಸಿದ ವಿಚಾರ ಭಾಗವತದಲ್ಲಿ ಇದೆ. ತತ್ ತ್ವಂ ಅಸಿ ಇತ್ಯಾದಿ ವೇದವಾಕ್ಯಗಳಿಗೆ ಐಕ್ಯವನ್ನೇ ಹೇಳುವ ಅಭಿಪ್ರಾಯವಾಗಿದ್ದರೆ ಶುಕರು ಯವನನನ್ನು ಬೈಯುತ್ತಿರಲಿಲ್ಲ. ಶುಕರು ರುದ್ರನ ಅವತಾರ. ವೇದವನ್ನು ಚೆನ್ನಾಗಿ ಅಧ್ಯಯನ ಮಾಡಿದವರು. ವೇದಾರ್ಥವಾದ ಭಾಗವತದಲ್ಲಿ ತುಂಬಾ ಆದರವುಳ್ಳವರು. ವಾಯುದೇವರನ್ನು ಹೊರತು ಶುಕರು ವೇದವನ್ನು ಭಾಗವತವನ್ನು ಅರ್ಥೈಸಿಕೊಂಡಷ್ಟು ಯಾರೂ ಅರ್ಥ ಮಾಡಿಕೊಂಡಿಲ್ಲ. ಯವನನ ಈ ತಿಳುವಳಿಕೆಯಿಂದ ಶುಕರಿಗೆ ಬೇಸರವಾಗಿದೆ ಅಂದರೆ ವೇದಕ್ಕೆ ಐಕ್ಯ ಅಭಿಪ್ರೇತವಲ್ಲ ಎಂದು ಅರ್ಥವಾಗುತ್ತದೆ. ಈ ವೇದದ ಸಾರ ಭಾಗವತ. ಆದ್ದರಿಂದ ಭಾಗವತವೂ ಪಂಚಭೇದಗಳನ್ನೇ ತಿಳಿಸಬೇಕು ಹೊರತು ಅಭೇದವನ್ನಲ್ಲ.

ಅನಿಷ್ಟಗಳ ಪರಿಹಾರಕ್ಕೆ ನಾನಾ ರೀತಿಯ ಪ್ರಾಯಶ್ಚಿತ್ತಗಳಲ್ಲಿ ಭಾಗವತ ಪಾರಾಯಣವೂ ಒಂದು. ಒಂದುವೇಳೆ ಭಾಗವತವು ಹೇಳುವ ಭೇದವು ಸುಳ್ಳಾಗಿದ್ದರೆ ಭಾಗವತವು ಅಪ್ರಮಾಣವೆಂದಾಗುತ್ತದೆ. ಅಪ್ರಾಮಾಣಿಕ ಗ್ರಂಥಗಳ ಪಾರಾಯಣದಿಂದ ಅನಿಷ್ಟ ಪರಿಹಾರವಾಗುವುದಿಲ್ಲ. ಈ ಪರಿಹಾರವನ್ನು ತ್ರಿಮತಸ್ಥರೂ ಹೇಳುತ್ತಾರೆ. ಆದ್ದರಿಂದ ಸಾಮ್ಯವಾದಿಗಳಾದ ರಾಮಾನುಜರು, ಐಕ್ಯವಾದಿಗಳಾದ ಶಾಂಕರರು ಎಲ್ಲರೂ ಭೇದವನ್ನು ಪಾರಮಾರ್ಥಿಕವನ್ನಾಗಿ ಒಪ್ಪಲೇಬೇಕು.

ಇಷ್ಟೇ ಅಲ್ಲ, ಪೌಂಡ್ರಕವಾಸುದೇವನೆಂಬ ಒಬ್ಬನು ವಸುದೇವನಿಗೆ ಮಗನಿದ್ದನು. ಆತನು ಅಹಂ ಬ್ರಹ್ಮ ಅಸ್ಮಿ –ನಾನು ದೇವರು ಆಗಿದ್ದೇನೆ ಎನ್ನುತ್ತಾ ದ್ವಾಪರಯುಗದಲ್ಲಿ ಕೃಷ್ಣನ ಕಾಲದಲ್ಲಿ ಇದ್ದನು. ಆತನನ್ನು ಕೃಷ್ಣನು ಯುದ್ಧದಲ್ಲಿ ಕೊಂದಿದ್ದನು. ಈ ಪೌಂಡ್ರಕನನ್ನು ಶುಕಾಚಾರ್ಯರು ಬಹಳವಾಗಿ ತರಾಟೆಗೆ ತೆಗೆದುಕೊಳ್ಳುತ್ತಾರೆ. ಹೀಗೆ ಸಮಗ್ರ ಭಾಗವತದಲ್ಲಿ ಐಕ್ಯವಾದಿಗಳನ್ನು ಶುಕಾಚಾರ್ಯರು ನಿಂದಿಸುತ್ತಾರೆ. ಲೋಕದಲ್ಲಿ ಅದ್ವೈತಿಗಳು

ರುದ್ರದೇವರನ್ನು ತುಂಬಾ ಆರಾಧಿಸುತ್ತಾರೆ. ರುದ್ರನಿಗೆ ಅಸಮ್ಮತವಾದ ಕ್ರಮದಿಂದ ಉಪಾಸಿಸುತ್ತಾರೆ. ಆದ್ದರಿಂದ ರುದ್ರದೇವರು ಇವರ ಪೂಜೆಯನ್ನು ಖಂಡಿತವಾಗಿಯೂ ಸ್ವೀಕರಿಸುವುದಿಲ್ಲ.

**ಸಂದೇಶ** : ಐಕ್ಯವಾದಿಗಳನ್ನು ಯಾವ ದೇವತೆಗಳೂ ಕ್ಷಮಿಸುವುದಿಲ್ಲ.

**ಪ್ರದಹ್ಯ ನಯನಾಗ್ನಿನಾ ಯವನಕಾನನಂ ಭೂಪತೇ–**
**ರ್ಭವಾಖ್ಯಗಹನಂ ಪುನಃ ಸ್ವಪದಪದ್ಮವೀಕ್ಷಾಗ್ನಿನಾ ।**
**ವಿನಾಶ್ಯ ಮುಚುಕುಂದಹೃತ್ಸರಸಿಜಾತಭಾನುಃ ಶನೈ–**
**ರಿಯಾಯ ಪುರಮಾತ್ಮನೋ ಜಲಧಿಮಧ್ಯರತ್ನಾಯಿತಾಮ್ ೩೭ ॥**

ಮುಚುಕುಂದ=ಮುಚುಕುಂದನ; ಹೃತ್=ಹೃದಯವೆಂಬ; ಸರಸಿ=ಕೊಳದಲ್ಲಿ; ಜಾತ=ಹುಟ್ಟಿದ ಕಮಲಕ್ಕೆ; ಭಾನುಃ=ಸೂರ್ಯನಂತಿರುವ ಕೃಷ್ಣನು; ಭೂಪತೇಃ=ರಾಜನ; ನಯನ=ಕಣ್ಣಿನ; ಅಗ್ನಿನಾ=ಬೆಂಕಿಯಿಂದ; ಯವನ=ಯವನನೆಂಬ; ಕಾನನಂ=ವನವನ್ನು; ಪ್ರದಾಹ್ಯ=ಸುಟ್ಟು; ಪುನಃ=ಅನಂತರ; ಸ್ವ=ತನ್ನ ಪದ=ಚರಣವೆಂಬ; ಪದ್ಮ=ಕಮಲದ; ವೀಕ್ಷಾ=ದರ್ಶನವೆಂಬ; ಅಗ್ನಿನಾ=ಬೆಂಕಿಯಿಂದ; ಭವ=ಸಂಸಾರವೆಂಬ; ಆಖ್ಯಾ=ಹೆಸರಿನ; ಗಹನಂ=ಕಾಡನ್ನು; ವಿನಾಶ್ಯ=ನಾಶಮಾಡಿ; ಶನೈಃ=ಮೆಲ್ಲನೆ; ಜಲಧಿ=ಸಮುದ್ರದ; ಮಧ್ಯ=ಮಧ್ಯದಲ್ಲಿ; ರತ್ನಾಯಿತಾಂ=ರತ್ನದಂತಿರುವ; ಆತ್ಮನಃ=ತನ್ನ; ಪುರಂ=ಊರನ್ನು; ಇಯಾಯ=ಸೇರಿದನು.

ಯವನನನ್ನು ಕೃಷ್ಣನೇ ಕೊಂದದ್ದು. ಮುಚುಕುಂದನ ಕಣ್ಣಿನಲ್ಲಿ ಕೃಷ್ಣನು ಬೆಂಕಿಯ ರೂಪದಲ್ಲಿ ಸೇರಿಕೊಂಡನು. ಯವನನಿಗೆ ರುದ್ರನ ವರವಿತ್ತು. ಆದ್ದರಿಂದ ಮುಚುಕುಂದನಿಗೆ ಕೊಲ್ಲಲು ಸಾಧ್ಯವಿಲ್ಲ. ಮುಚುಕುಂದನು ಕೃಷ್ಣನ ಭಕ್ತನು. ಆತನ ಹೃದಯವೆಂಬ ಕಮಲವನ್ನು ಅರಳಿಸಲು ಕೃಷ್ಣನು ಸೂರ್ಯನ ರೂಪದಲ್ಲಿ ಆತನಲ್ಲಿ ಸೇರಿದನು. ಆ ಸೂರ್ಯನ ತಾಪವೇ ಬಹಳವಾಗಿ ಯವನನೆಂಬ ಕಾಡನ್ನು ಸುಟ್ಟಿತು. ಸೂರ್ಯನ ತಾಪಕ್ಕೆ ಕಾಳ್ಗಿಚ್ಚು ಉಂಟಾಗುವುದು ಸಹಜ. ಎಚ್ಚರಗೊಂಡ ರಾಜನು ಕೃಷ್ಣನ ಪಾದಪದ್ಮದ ದರ್ಶನ ಮಾಡಿದನು. ಈ ದರ್ಶನ ಎಂಬ ಅಗ್ನಿಯು ರಾಜನ ಸಂಸಾರವೆಂಬ ಕಾಡನ್ನು ಸುಟ್ಟಿತು. ಜ್ಞಾನಾಗ್ನಿಯು ಸಂಸಾರಕಾರಣವಾದ ಕರ್ಮಕಾಡನ್ನು ಸುಡುತ್ತದೆ ಎಂದು ಶಾಸ್ತ್ರ ಇದೆ. ಅನಂತರ ಕೃಷ್ಣನು ನಿಧಾನವಾಗಿ ತನ್ನ ಮನೆಗೆ ಹೋದನು. ತಾನು ಸಮುದ್ರದ ಮಧ್ಯದಲ್ಲಿ ಭವ್ಯವಾದ ಊರನ್ನೇ ನಿರ್ಮಾಣ ಮಾಡಿದ್ದ ತಾನೆ.

**ಸಂದೇಶ** : ಭಗವನ್ನಿಂದಕರನ್ನು ನಾವು ಮರ್ದಿಸಬೇಕು. ಆಗ ದೇವರು ನಮ್ಮ ಕ್ಲೇಶಗಳನ್ನು ನಾಶಮಾಡುತ್ತಾನೆ.

**ನಿಜೈಃ ಸಹ ದ್ವಾರವತ್ಯಾಂ ನಿವಸತ್ಯಂಬುಜೇಕ್ಷಣೇ ।**
**ಅಜಯಾ ಪ್ರೇಷಿತಂ ಪತ್ರಂ ದ್ವಿಜಃ ಕಶ್ಚಿತ್ ಉಪಾಹರತ್ ॥ ೩೮ ॥**

ಅಂಬುಜ=ಕಮಲದಂತೆ; ಈಕ್ಷಣೇ=ಕಣ್ಣುಳ್ಳ ಕೃಷ್ಣನು; ನಿಜೈಃ=ತನ್ನವರಿಂದ; ಸಹ=ಕೂಡಿಕೊಂಡು; ದ್ವಾರವತ್ಯಾಂ=ದ್ವಾರಾವತಿಯಲ್ಲಿ; ನಿವಸತಿ=ವಾಸಿಸುತ್ತಿರಲು; ಅಜಯಾ=ರಮೆಯಿಂದ; ಪ್ರೇಷಿತಂ=ಕಳಿಸಲ್ಪಟ್ಟ; ಪತ್ರಂ=ಪತ್ರವನ್ನು; ಕಶ್ಚಿತ್=ಒಬ್ಬ; ದ್ವಿಜಃ=ಬ್ರಾಹ್ಮಣನು; ಉಪಾಹರತ್=ತಂದನು.

ದುಷ್ಟರನ್ನು ಮರ್ದಿಸಿದ ಕೃಷ್ಣ. ಆತನಿಗೆ ಯಾವ ಕ್ಲೇಶವೂ ಆಗಲಿಲ್ಲ. ಸದಾ ಅರಳಿದ ಕಣ್ಣುಳ್ಳವನು. ದ್ವಾರಕೆಯಲ್ಲಿ ಯಾದವರಿಂದ ಕೂಡಿಕೊಂಡು ಆರಾಮವಾಗಿದ್ದ. ಒಂದು ದಿನ ಒಬ್ಬ ಬ್ರಾಹ್ಮಣನು ಬಂದನು. ಆತನ ಕೈಯಲ್ಲಿ ಒಂದು ಪತ್ರ ಇತ್ತು. ಅದನ್ನು ಕುಂಡಿನಪುರದ ರಾಜನ ಮಗಳಾದ ರುಗ್ಮಿಣಿಯು ಕಳಿಸಿದ್ದಳು.

**ಸಂದೇಶ** : ಬ್ರಾಹ್ಮಣಾದಿಗಳು ತಮ್ಮ ಅಧ್ಯಯನಾದಿಗಳನ್ನು ಮುಗಿಸಿ ವಿವಾಹಾದಿ ಕಾರ್ಯಗಳಲ್ಲಿ ತೊಡಗಬೇಕು.

**ಧನ್ಯಾಽಬಲಾ ಸಾ ವಿಭವೇ ಭವೇದ್ಯಾ**
**ವೇದ್ಯಾಯ ಭೂಮ್ನೇ ಪುರುಷಾಯ ಸಾಮ್ನಾ ।**
**ಸಾಮ್ನಾಯಶಾಸ್ತ್ರೋದಿತಧರ್ಮಪಾತ್ರೇ**
**ಪಾತ್ರೇಷು ದತ್ತಾತ್ಮಪದಾಯ ದತ್ತಾ** ॥ ೩೯ ॥

ಯಾ=ಯಾವ; ಅಬಲಾ=ಕನ್ಯೆಯು; ವಿಭವೇ=ಶಕ್ತನಾದ; ಭೂಮ್ನೇ=ಪೂರ್ಣನಾದ; ಸಾಮ್ನಾ=ಸಾಮವೇದದಿಂದ; ವೇದ್ಯಾಯ=ತಿಳಿಯಲ್ಪಡುವ; ಸಾಮ್ನಾಯ=ವೇದದಿಂದ ಕೂಡಿದ; ಶಾಸ್ತ್ರ=ಶಾಸ್ತ್ರಗಳಲ್ಲಿ; ಉದಿತ=ಹೇಳಲ್ಪಡುವ; ಧರ್ಮ=ಧರ್ಮಗಳ; ಪಾತ್ರೇ= ರಕ್ಷಕನಾದ; ಪಾತ್ರೇಷು=ಯೋಗ್ಯರಲ್ಲಿ; ದತ್ತ=ಕೊಡಲ್ಪಡುವ; ಆತ್ಮ=ತನ್ನ; ಪದಾಯ= ಸ್ಥಾನವುಳ್ಳ; ಪುರುಷಾಯ=ಪೂರ್ಣವಾದ ಗುಣಗಳುಳ್ಳ ಕೃಷ್ಣನಿಗೆ; ದತ್ತಾ=ಕೊಡಲ್ಪಡುವವಳು; ಭವೇತ್=ಆಗುತ್ತಾಳೋ; ಸಾ=ಅವಳು; ಧನ್ಯಾ=ಧನ್ಯಳು.

ಪತ್ರದಲ್ಲಿರುವ ವಿಷಯವನ್ನು ರಾಜರೇ ತಿಳಿಸುತ್ತಾರೆ– ರುಗ್ಮಿಣಿಯು ಮಾಡುವ ನಮಸ್ಕಾರಗಳು. ನಾನು ನಿನ್ನನ್ನೇ ಲಗ್ನವಾಗಬೇಕೆಂದು ಆಶಿಸುತ್ತೇನೆ. ನಿನಗೆ ಬಹಳ ಶಕ್ತಿಯಿದೆ ಎಂದು ತಿಳಿದಿದ್ದೇನೆ. 'ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ' ಬಹು ಚಿತ್ರವಾದ ಈ ಜಗತ್ತನ್ನು ನಿರ್ಮಾಣ ಮಾಡುವವನು. ಮಾಡದೆ ಇರಲೂ ಸಮರ್ಥನೇ ಆಗಿದ್ದಿ. ಯಾಕೆ ಮಾಡಿಲ್ಲ ಎಂದು ಪ್ರಶ್ನಿಸುವವರು ಯಾರೂ ಇಲ್ಲ. ಸಾಮಾನ್ಯವಾಗಿ ಒಂದು ವಸ್ತುವಿಗೆ ಆಕಾರ, ಬಣ್ಣ, ರುಚಿ ಹೀಗೆ ಇರಬೇಕೆಂದು ನಿಯಮ ಇದೆ. ಆ ನಿಯಮವನ್ನು ಬದಲಾಯಿಸುವ ಶಕ್ತಿಯೂ ನಿನಗೆ ಇದೆ. ಇಂತಹ ವ್ಯಕ್ತಿಯನ್ನು ವಿಭು ಎಂದು ಕರೆಯುವರು. ನೀನು ವಿಭು ಆಗಿದ್ದಿ. ಕನ್ಯೆಯು ತಾನು ಮದುವೆ ಆಗುವ ಹುಡುಗನನ್ನು ಎಲ್ಲರೂ ಹೊಗಳುತ್ತಿರಬೇಕು ಎಂದು ಆಶಿಸುತ್ತಾಳೆ. ನಿನ್ನನ್ನು ಸಮಾಜ ಏನು? ವೇದಗಳೇ

ಬಹಳ ಉತ್ಸಾಹದಿಂದ ಹೊಗಳುತ್ತವೆ. ಜ್ಞಾನ, ಆನಂದ, ಸೌಂದರ್ಯಾದಿ ಯಾವ ಗುಣಗಳಿಗೂ ನಿನ್ನಲ್ಲಿ ಕೊರತೆ ಇಲ್ಲ. ಇಷ್ಟೇ ಅಲ್ಲ. ಅವು ನಿನ್ನಲ್ಲಿ ಪೂರ್ಣವಾಗಿಯೇ ಇವೆ. ನಿನ್ನಲ್ಲಿ ಇರುವುದಕ್ಕಿಂತ ಹೆಚ್ಚು ಬೇರೆ ಯಾರಲ್ಲಿಯೂ ಇಲ್ಲ. ಆದ್ದರಿಂದ ನಿನ್ನನ್ನು 'ಭೂಮಾ' ಎನ್ನುತ್ತಾರೆ.

ಜನರು ನೆಮ್ಮದಿಯಿಂದ ಬದುಕಲು ಧಾರ್ಮಿಕತನ ಅಗತ್ಯ. ಅಂತಹ ಧರ್ಮಗಳನ್ನು ವೇದಾದಿ ಶಾಸ್ತ್ರಗಳು ಹೇಳುತ್ತವೆ. ಆದರೆ ಬಹಳ ದುಷ್ಟರು ವೈದಿಕ ಧರ್ಮಾಚರಣೆಗೆ ಅಡ್ಡಿ ಮಾಡುತ್ತಾರೆ. ಜನರ ನೆಮ್ಮದಿಯ ಜೀವನವನ್ನು ಕೆಡಿಸಿ ತಾವು ತೃಪ್ತಿ ಪಡುತ್ತಾರೆ. ಅಂತಹ ಸಂದರ್ಭದಲ್ಲಿ ನೀನು ಆ ದುಷ್ಟರನ್ನು ಬಡಿದು ಸಾತ್ವಿಕರಿಗೆ ಧರ್ಮವನ್ನು ಒದಗಿಸುತ್ತಿ. ತನ್ಮೂಲಕ ಧರ್ಮರಕ್ಷಕನಾಗಿ ಅವರನ್ನು ಸಂತೋಷದಲ್ಲಿ ಇಡುತ್ತಿ.

ಇಂತಹ ಸಾತ್ವಿಕರು ತಮ್ಮ ಸಾಧನಾನುಷ್ಠಾನಾದಿಗಳನ್ನು ಮಾಡಿ ನಿನ್ನ ಅಪರೋಕ್ಷ ಜ್ಞಾನವನ್ನು ಪಡೆಯುತ್ತಾರೆ. ಅನಂತರ ಪ್ರಾರಬ್ಧವನ್ನು ಕಳೆದುಕೊಳ್ಳುತ್ತಾರೆ. ಅಂತಹ ಮಂದಿಗೆ ನೀನು ನಿನ್ನ ಲೋಕವನ್ನೇ ಕೊಡುವಷ್ಟು ಔದಾರ್ಯವನ್ನು ತೋರುತ್ತಿ. ಇಂತಹ ಗುಣಗಳಿಂದ ಕೂಡಿದ ಹುಡುಗನು ಯಾವ ಹೆಣ್ಣಿಗೆ ಸಿಗುತ್ತಾನೋ ಅವಳೇ ಧನ್ಯಳು. ಆ ಧನ್ಯತಾಭಾವ ನನಗೆ ಬರಬೇಕಾಗಿದೆ.

**ಕುರ್ವಂತಿ ಕಾಮವಶಗಾ ಮಯಿ ಚಿತ್ತಮನ್ಯೇ**
**ಕುರ್ವಂತಿಕಾಗತಯಮಾನುಚರಾನ್ರಣೇ ತಾನ್ ।**
**ದೇಹ್ಯಂಗಜಾಕೃತಿಶತೋರ್ಜಿತರಮ್ಯರೂಪ**
**ದೇಹ್ಯಂಗಜಾತನಿಲಯಾಂಘ್ರಿಸರೋಜಸೇವಾಮ್** ॥ ೪೦ ॥

ಅಂಗ=ದೇಹದಿಂದ; ಜ=ಹುಟ್ಟಿದ ಕಾಮನ; ಆಕೃತಿ=ದೇಹಗಳ; ಶತ=ನೂರಕ್ಕಿಂತ; ಊರ್ಜಿತ=ಹೆಚ್ಚಾದ; ರಮ್ಯ=ಚಂದದ; ರೂಪ=ರೂಪವುಳ್ಳ; ದೇಹಿ=ಪ್ರಾಣಿಗಳ; ಅಂಗ= ದೇಹಗಳ; ಜಾತ=ಸಮೂಹವೇ; ನಿಲಯ=ಆಶ್ರಯವಾಗಿ ಉಳ್ಳ ಕೃಷ್ಣನೇ; ಅನ್ಯೇ=ದುಷ್ಟರು; ಕಾಮ=ಕಾಮನ; ವಶ=ಅಧೀನವನ್ನು; ಗಾಃ=ಹೊಂದಿದವರಾಗಿ; ಮಯಿ=ನನ್ನಲ್ಲಿ; ಚಿತ್ತಂ=ಮನಸ್ಸನ್ನು; ಕುರ್ವಂತಿ=ಮಾಡುತ್ತಾರೆ; ತಾನ್=ಅವರನ್ನು; ರಣೇ=ಯುದ್ಧದಲ್ಲಿ; ಅಂತಿಕ=ಸಮೀಪ; ಆಗತ=ಬಂದಿರುವ; ಯಮ=ಯಮನ; ಅನುಚರಾನ್=ಸೇವಕರು ಉಳ್ಳವರನ್ನಾಗಿ; ಕುರು=ಮಾಡು; ಅಂಘ್ರಿ=ಚರಣವೆಂಬ ಸರೋಜ=ಕಮಲದ; ಸೇವಾಂ=ಸೇವೆಯನ್ನು; ದೇಹಿ=ಕೊಡು.

ನನ್ನ ತಂದೆಯಾದ ಭೀಷ್ಮಕನು ನನಗೆ ಸ್ವಯಂವರವನ್ನು ಏರ್ಪಡಿಸಿದ್ದಾನೆ. ಬಹಳಷ್ಟು ದುಷ್ಟರಾಜರು ನನ್ನನ್ನು ಮೋಹಿಸುತ್ತಿದ್ದಾರೆ. ನನ್ನನ್ನು ಪಡೆಯಬೇಕೆಂದು ತುಂಬಾ ಹಂಬಲಿಸುತ್ತಾರೆ. ಆದರೆ ಅವರಲ್ಲಿ ಏನೂ ಸೌಂದರ್ಯ ಇಲ್ಲ. ನೀನಾದರೂ ತುಂಬಾ

ಚಂದದವ. ಕನ್ಯೆಯರು ಹುಡುಗನಲ್ಲಿ ಸೌಂದರ್ಯವನ್ನು ನಿರೀಕ್ಷಿಸುತ್ತಾರೆ. ನೀನು ಮನ್ಮಥನಿಗಿಂತಲೂ ಚಂದ. ಒಬ್ಬ ಮನ್ಮಥ ಅಲ್ಲ; ನೂರಾರು ಮನ್ಮಥರನ್ನು ಒಟ್ಟು ಸೇರಿಸಿದರೂ ನಿನ್ನ ಸೌಂದರ್ಯದ ಮುಂದೆ ಅವರ ಆಟ ಏನೂ ನಡೆಯೋಲ್ಲ. ನಾನು ನಿನ್ನ ಚರಣದ ಸೇವೆಯನ್ನಲ್ಲದೆ ಬೇರೆ ಯಾವ ರಾಜರನ್ನೂ ಬಯಸುವವಳಲ್ಲ. ಅವರೆಲ್ಲಾ ತುಂಬಾ ಬಲಿಷ್ಠರು. ಆದ್ದರಿಂದ ಹೇಗೆ ನಿನ್ನನ್ನು ವರಿಸಲಿ ಎಂದು ಚಿಂತಿಸಬೇಡ. ನೀನು ಸರ್ವಪ್ರಾಣಿಗಳ ಹೃದಯದಲ್ಲಿ ವಾಸಿಸುವವನು. ಪ್ರತಿಯೊಬ್ಬರಿಗೂ ಶಕ್ತಿಯು ನಿನ್ನಿಂದಲೇ ಬರುವುದು. ಆ ದುಷ್ಟರಿಗೆ ಶಕ್ತಿಯನ್ನು ಕೊಡಬೇಡ. ನಾನು ಅವರ ಬಳಿಗೆ ಹೋಗದಂತೆ ಮಾಡು. ಯಮನ ಸೇವಕರು ಅವರ ಬಳಿಗೆ ಬರುವಂತೆ ಮಾಡು. ಅಂದರೆ ಯುದ್ಧದಲ್ಲಿ ಅವರನ್ನೆಲ್ಲಾ ಸಾಯಿಸಿ ನನ್ನನ್ನು ವರಿಸು.

**ಭವತಾಪಹರಾಪಾಂಗ ಭವತಾಪಹೃತೈವ ಧೀಃ ।**
**ಚರಣಾಂಕಕೃತಾಂಕಾಂ ಮಾಂ ಚ ರಣಾಂಗಣತೋ ನಯ ॥ ೪೧ ॥**

ಭವ=ಸಂಸಾರದ; ತಾಪ=ದುಃಖವನ್ನು; ಹರ=ಅಪಹರಿಸುವ; ಅಪಾಂಗ= ಕಡೆಗಣ್ಣುಳ್ಳವನೇ; ಭವತಾ=ನಿನ್ನಿಂದ; ಧೀಃ=ಮನಸ್ಸು; ಅಪಹೃತಾ ಏವ=ಅಪಹರಿಸಲ್ಪಟ್ಟಿದೆ; ಚರಣ=ಪಾದದ; ಅಂಕ=ಚಿಹ್ನೆಯಿಂದ; ಕೃತ=ಮಾಡಲ್ಪಟ್ಟ; ಅಂಕಾಂ=ಚಿಹ್ನೆವುಳ್ಳ; ಮಾಂ ಚ=ನನ್ನನ್ನಾದರೂ; ರಣ=ಯುದ್ಧದ; ಅಂಗಣತಃ=ಅಂಗಳದಿಂದ; ನಯ=ಒಯ್ಯು.

ನಿನ್ನ ಬಗ್ಗೆ ನನಗೆ ನಾರದರು ಬಹಳ ತಿಳಿಸಿದ್ದರು. ಅಂದಿನಿಂದ ನನ್ನ ಮನಸ್ಸು ನಿನ್ನನ್ನೇ ಚಿಂತಿಸುತ್ತಿದೆ. ನೀನು ಸಂಸಾರಿಗಳ, ಸಾತ್ವಿಕರ ಮನಸ್ಸಿನ ತಾಪವನ್ನು ನಿನ್ನ ಕಡೆಗಣ್ಣ ನೋಟದಿಂದಲೇ ಅಪಹರಿಸುತ್ತಿ. ಆದರೆ ನನ್ನ ಮನಸ್ಸನ್ನೇ ಅಪಹರಿಸಿದ್ದಿ. ನಾನು ಶ್ರೀರೂಪ ದಿಂದ ನಿನ್ನ ಪಾದಸೇವೆ ಮಾಡುತ್ತಿದ್ದೆ. ಆಗ ನಿನ್ನ ಪಾದದ ಚಿಹ್ನೆಯಾದ ಧ್ವಜಾದಿಗಳು ನನ್ನ ಎದೆಗೆ ಹಚ್ಚಿದ ಗಂಧದಲ್ಲಿ ಮೂಡಿದೆ. ಇದರಿಂದ ನಾನು ಅನಾದಿಯಿಂದಲೂ ನಿನಗೇ ಮೀಸಲು ಎಂದು ತಿಳಿಯುತ್ತದೆ. ಇಂತಹ ನನ್ನನ್ನು ನೀನು ಹೇಡಿಯಂತೆ ಗುಟ್ಟಾಗಿ ಕರೆದುಕೊಂಡು ಹೋಗಬೇಡ. ರಾಜರುಗಳೆಲ್ಲಾ ನಿನ್ನನ್ನು ನಿಂದಿಸಿಯಾರು. ಆದ್ದರಿಂದ ಯುದ್ಧದಲ್ಲಿ ಆ ರಾಜರುಗಳನ್ನೆಲ್ಲಾ ಬಡಿದು ನನ್ನನ್ನು ಕರೆದುಕೊಂಡು ಹೋಗು.

**ಧಿಕೃತ್ಯಾಹಮುಮೇಶಹಂಸಗಮನೌ ಸ್ವರ್ಗೀಶ್ವರಾಗ್ನೀ ಭವ-**
**ತ್ಸೂಕ್ತಾಸಕ್ತಹೃದಂಗ ಲೋಕಮಖಿಲಂ ದೇವೌಘಮಾನ್ಯಾನ್ ಮುನೀನ್ ।**
**ಸಚ್ಛಾಸ್ತ್ರಾರ್ಥ್ಯನಿಕೋವಿದಾನಪಿ ಬುಧಾನ್ ತ್ವಯ್ಯೇವ ಯತ್ ಸಸ್ಪೃಹಾ**
**ವಿಶ್ವಾಧೀಶ್ವರತಾಂ ಭವಘ್ನ ಭವತಃ ತನ್ನಿಶ್ಚಿನೋಮಿ ಪ್ರಭೋ ॥ ೪೨ ॥**

ಭವ=ಸಂಸಾರವನ್ನು:ಪ ಘ್ನ=ನಾಶಮಾಡುವ; ಅಂಗ=ಪ್ರಿಯನಾದ ಕೃಷ್ಣನೇ; ಭವತ್=ನಿನ್ನ; ಸು=ಒಳ್ಳೆಯ; ಉಕ್ತ=ಮಾತಿನಿಂದ; ಆಸಕ್ತ=ಇಷ್ಟವಾದ; ಹೃತ್=ಮನಸ್ಸುಳ್ಳ;

ಅಹಂ=ನಾನು; ಉಮಾ=ಪಾರ್ವತಿಯ; ಈಶ=ಒಡೆಯನಾದ ರುದ್ರನನ್ನು; ಹಂಸ=ಹಂಸದಿಂದ; ಗಮನೌ=ಸಂಚಾರವುಳ್ಳ ಬ್ರಹ್ಮನನ್ನು; ಸ್ವರ್ಗ=ಸ್ವರ್ಗದ; ಈಶ್ವರ=ಒಡೆಯನಾದ ಇಂದ್ರನನ್ನು; ಅಗ್ನೀ=ಅಗ್ನಿಯನ್ನು; ಅಖಿಲಂ=ಎಲ್ಲಾ; ಲೋಕಂ=ಜಗತ್ತನ್ನು; ದೇವ=ದೇವತೆಗಳ; ಓಘ=ಸಮೂಹದಿಂದ; ಮಾನ್ಯಾನ್=ಆದೃತರಾದ; ಮುನೀನ್= ಋಷಿಗಳನ್ನು; ಸತ್=ಒಳ್ಳೆಯ; ಶಾಸ್ತ್ರ=ಶಾಸ್ತ್ರಗಳ; ಅಧ್ವನಿ=ದಾರಿಯಲ್ಲಿ; ಕೋವಿದಾನ್ ಅಪಿ=ಜ್ಞಾನಿಗಳಾದ; ಬುಧಾನ್=ಪಂಡಿತರನ್ನು; ಧಿಕೃತ್ಯ=ತಿರಸ್ಕರಿಸಿ; ಯತ್=ಯಾವ ಕಾರಣದಿಂದ; ತ್ವಯಿ ಏವ=ನಿನ್ನಲ್ಲೇ; ಸಸ್ಪೃಹಾ=ಇಚ್ಛೆವುಳ್ಳವಳೋ; ತತ್=ಆದ್ದರಿಂದ; ಭವತಃ=ನಿನಗೆ; ವಿಶ್ವ=ಜಗತ್ತಿನ; ಅಧೀಶ್ವರತಾಂ=ಒಡೆತನವನ್ನು; ಪ್ರಭೋ=ಕೃಷ್ಣನೇ; ನಿಶ್ಚಿನೋಮಿ=ನಿಶ್ಚಯಿಸುತ್ತೇನೆ.

ನನ್ನ ಬಗ್ಗೆ ನಾರದರು ನಿನ್ನಲ್ಲಿ ತಿಳಿಸಿದ್ದರು. ಅದನ್ನು ಕೇಳಿದ ನೀನು ರುಗ್ಮಿಣಿಯನ್ನು ವರಿಸುತ್ತೇನೆ ಎಂದಿದ್ದಿಯಂತೆ. ನಿನ್ನ ಆ ಸು ಉಕ್ತ=ಒಳ್ಳೆಯ ಮಾತನ್ನು ಕೇಳಿದ ನನ್ನ ಮನವು ನಿನ್ನಲ್ಲೇ ಲಗ್ನವಾಗಿದೆ. ಸ್ವಯಂವರಕ್ಕೆ ದೈತ್ಯರಲ್ಲದೆ ಬ್ರಹ್ಮ, ರುದ್ರ, ಇಂದ್ರ, ಅಗ್ನಿ, ಋಷಿಗಳು, ಜ್ಞಾನಿಗಳು ಯಾರು ಬಂದರೂ ನಾನು ಅವರನ್ನೆಲ್ಲಾ ಕಡೆಗಣಿಸುತ್ತೇನೆ. ನೀನೇ ಎಲ್ಲರಿಗಿಂತ ದೊಡ್ಡವ. ನಿನ್ನನ್ನೇ ವರಿಸಬೇಕು ಎಂದು ನನ್ನ ಒಳಮನಸ್ಸು ಹೇಳುತ್ತಿದೆ.

ಇದು ಲೌಕಿಕವಾದ ಅರ್ಥ. ಆಧ್ಯಾತ್ಮಿಕ ಅರ್ಥದಲ್ಲಿಯೂ ರಾಜರು ಈ ಶ್ಲೋಕವನ್ನು ಬಳಸಿದ್ದಾರೆ. ಆ ಅರ್ಥ ಈ ರೀತಿ ಇದೆ– ವೇದಗಳು ಅಗ್ನಿ, ಇಂದ್ರ, ವರುಣ, ವಾಯು, ಅಂಭ್ರಿಣೀ ಇತ್ಯಾದಿ ಹೆಸರುಗಳಿಂದ ಕೂಡಿದ ಸೂಕ್ತರೂಪವಾಗಿವೆ. ಈ ಹೆಸರುಗಳು ಮೇಲ್ನೋಟಕ್ಕೆ ಇಂದ್ರಾದಿದೇವತೆಗಳನ್ನು ಹೇಳುವಂತಿದೆ. ಆದ್ದರಿಂದ ಸೂಕ್ತಗಳೂ ತತ್ಪರವಾಗಿಯೇ ಇವೆ ಎಂದು ತೋರುತ್ತದೆ. ಈ ಹೆಸರುಗಳೆಲ್ಲಾ ಮುಖ್ಯವಾಗಿ ದೇವರನ್ನೇ ಹೇಳುತ್ತವೆ. ಆದ್ದರಿಂದ ಸೂಕ್ತಗಳೂ ದೇವರನ್ನೇ ಹೇಳಬೇಕು. ಈ ಮಾತನ್ನು ಕೃಷ್ಣನು ಗೀತೆಯಲ್ಲಿ 'ವೇದೈಶ್ಚ ಸರ್ವೈಃ ಅಹಂ ಏವ ವೇದ್ಯಃ' ಎಂದು ಹೇಳಿದ್ದಾನೆ. ದೇವರನ್ನು ಹೇಳುವಾಗ ಮಾತ್ರ ಅವುಗಳಿಗೆ ಸೂಕ್ತ ಸು=ಚೆನ್ನಾಗಿ ಉಕ್ತ=ಹೇಳುವುದು ಎಂಬ ಹೆಸರು ಅನ್ವರ್ಥವಾಗುವುದು. ಬೇರೆ ದೇವತೆಗಳನ್ನು ಹೇಳುತ್ತವೆ ಹೊರತು ಚೆನ್ನಾಗಿ ಹೇಳೋಲ್ಲ. ಚೆನ್ನಾಗಿ ಹೇಳಬೇಕಾದರೆ ಬೇಕಾದ ಗುಣಗಳು ಅವರಲ್ಲಿ ಇಲ್ಲ ಆದ್ದರಿಂದ.

ಈ ಮಾತನ್ನು ರಮಾರೂಪಳಾದ ರುಗ್ಮಿಣಿಯು ತನ್ನ ಪತ್ರದಲ್ಲಿ ಬರೆದಿದ್ದಾಳೆ ಎಂದು ರಾಜರು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ವೇದದಲ್ಲಿ ಅಂಭ್ರಿಣೀ ಎಂಬ ಹೆಸರಿನ ಸೂಕ್ತ ಇದೆ. ಅಂಭ್ರಿಣೀ ಎಂದು ರಮೆಯ ಹೆಸರು. ಆದ್ದರಿಂದ ಇದು ಶ್ರೀಸೂಕ್ತ ಎಂದಾಯಿತು. ರುಗ್ಮಿಣಿಯು ಹೇಳುತ್ತಾಳೆ– ಕೃಷ್ಣ, ಇದೂ ಕೂಡಾ ಭವತ್ಸೂಕ್ತವೇ=ನಿನ್ನ ಸೂಕ್ತವೇ; ನಿನ್ನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸುತ್ತದೆ. ಅಂ=ಅಕಾರಶಬ್ದವಾಚ್ಯನಾದ

ನಿನ್ನನ್ನು ಭ್ರಿಣೀ=ಚೆನ್ನಾಗಿ ಧರಿಸುತ್ತಿದೆ, ತಿಳಿಸುತ್ತಿದೆ. ಆದ್ದರಿಂದ ನನಗಾಗಲೀ ಈ ಸೂಕ್ತಕ್ಕಾಗಲೀ ಅಂಭ್ರಿಣೀ ಎಂದು ಹೆಸರು. ನಿನ್ನ ಅನಂತರದಲ್ಲಿ ನನ್ನನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಈ ಸೂಕ್ತದಲ್ಲಿ ನಾನು ವಿಶೇಷವಾಗಿ ಸನ್ನಿಹಿತಳಾಗಿದ್ದೇನೆ. ಈ ಸೂಕ್ತದಲ್ಲಿ ನಾನು ರುದ್ರಬ್ರಹ್ಮರನ್ನು ಧಿಕ್ಕರಿಸುವ ಮಂತ್ರ ಇದೆ– "ಅಹಂ ರುದ್ರಾಯ ಧನುಃ ಆತನೋಮಿ" ರುದ್ರನ ಸಂಹಾರಕ್ಕೋಸ್ಕರ ಧನುಸ್ಸನ್ನು ಸಿದ್ಧಗೊಳಿಸುತ್ತೇನೆ. "ಅಹಂ ಸುವೆ ಪಿತರಂ ಅಸ್ಯ" ಈ ಜಗತ್ತಿಗೆ ತಂದೆಯಾದ ಬ್ರಹ್ಮನನ್ನು ನಾನು ಸೃಷ್ಟಿ ಮಾಡುತ್ತೇನೆ. ಇಂದ್ರನನ್ನು ಅಗ್ನಿಯನ್ನು ತಿರಸ್ಕರಿಸುವ ಮಂತ್ರ ಈ ರೀತಿ ಇದೆ– "ಬಿಭರ್ಮಿ ಅಹಂ ಇಂದ್ರಾಗ್ನೀ" ಇಂದ್ರಾಗ್ನಿಗಳನ್ನು ಪೋಷಿಸುತ್ತೇನೆ. ಋಷಿಗಳನ್ನು ಹಾಗೂ ಪಂಡಿತರನ್ನು ಮಾಡಿದ್ದು ನಾನೇ ಎಂದು. "ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಂ ಋಷಿಂ ತಂ ಸುಮೇಧಾಂ" ಈ ಮಂತ್ರವು ತಿಳಿಸುತ್ತದೆ. "ಯಃ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತಿ ಮಯಾ ಸಃ ಅನ್ನ ಅತ್ತಿ" ಈ ಲೋಕದಲ್ಲಿ ಬದುಕುವ ಪ್ರತಿಯೊಬ್ಬರೂ ನಾನು ಒದಗಿಸುವ ಆಹಾರದಿಂದಲೇ ದರ್ಶನಾದಿ ಕ್ರಿಯೆಗಳನ್ನು ಮಾಡುವುದು. ಹೀಗೆ ಸಮಸ್ತ ಜಗತ್ತಿಗಿಂತ ನಾನು ದೊಡ್ಡವಳೆಂದು ಈ ಸೂಕ್ತವೇ ಹೇಳುತ್ತಿದೆ. ಹೀಗಿರುವಾಗ ವಿವಾಹದಲ್ಲಿ ನನಗಿಂತ ಚಿಕ್ಕವರಾದ ಇವರನ್ನು ನಾನು ಹೇಗೆ ವರಿಸಲಿ? ಹಾಗಾದರೆ ನನಗೆ ಪತಿ ಯಾರು? ಎಂಬ ಪ್ರಶ್ನೆಗೆ ಅದೇ ಸೂಕ್ತದಲ್ಲಿ "ಮಮ ಯೋನಿಃ ಅಪ್ಸು ಅಂತಃ ಸಮುದ್ರೇ" ನನಗೆ ಪತಿಯಾಗುವವನು ಸಮುದ್ರದ ಮಧ್ಯದಲ್ಲಿ ಮನೆಯ ಮಾಡಿರು ವನು ಎಂದು ಹೇಳಿದೆ. ನನಗೆ ಕಾರಣನು ಸಮುದ್ರದಲ್ಲಿದ್ದಾನೆ ಎಂದರ್ಥ. ಸಮುದ್ರದಲ್ಲಿ ಮನೆ ಇರುವವನು ನೀನೇ. ನನಗಿಂತ ದೊಡ್ಡವನೂ ಆಗಿದ್ದೀಯಾ. ನಾನು ನಿನ್ನನ್ನು ಹೊರತು ಬೇರೆ ಯಾರನ್ನಾದರೂ ವರಿಸಿದರೆ, ನೀನು ನನಗೆ ಪತಿಯಾಗಿ ಬಾರದಿದ್ದರೆ ವೇದಕ್ಕೆ ಅಪ್ರಾಮಾಣ್ಯ ಬಂದೀತು. ಆದ್ದರಿಂದ ನನ್ನನ್ನು ಪತ್ನಿಯನ್ನಾಗಿ ಸ್ವೀಕರಿಸು.

**ಸಂದೇಶ** : ದಾಂಪತ್ಯಜೀವನಕ್ಕೆ ವೈದಿಕಹಿನ್ನೆಲೆ ಇರಬೇಕು.

**ಶಂಭುಃ ಪುತ್ರಸಮಃ ಸಮೇ ಪುರರಿಪುಃ ಪೌತ್ರಃ ಶಶೀ ಸೋದರಃ**
**ಸಿಂಧುರ್ಮೇ ಜನಕಾಯಿತಃ ಮಧುಸಖೋ ಮತ್ಸೂನುಕಲ್ಪ ಪ್ರಭೋ ।**
**ಅಂಬಾಹಂ ಸಕಲಸ್ಯ ಚೇತಿ ಕಮಲಾ ಕೃಷ್ಣೈಕಲಗ್ನಂ ಮನೋ–**
**ಭೃಂಗಂ ದರ್ಶಯಿತಂ ಕೃತೋಗ್ರಶಪಥಾ ಸ್ವಂ ರೂಪಮಸ್ಪಷ್ಟಯತ್ ॥ ೪೩ ॥**

ಕಮಲಾ=ರುಗ್ಮಿಣಿಯು; ಮನಃ=ಮನವೆಂಬ; ಭೃಂಗಂ=ದುಂಬಿಯನ್ನು; ಕೃಷ್ಣ=ಕೃಷ್ಣನಲ್ಲಿ; ಏಕ=ಮುಖ್ಯವಾಗಿ; ಲಗ್ನಂ=ಬದ್ಧವನ್ನಾಗಿ; ದರ್ಶಯಿತುಂ=ತೋರಿಸಲು; ಕೃತ=ಮಾಡಲ್ಪಟ್ಟ; ಉಗ್ರ=ಕಠಿಣವಾದ; ಶಪಥಾ=ಪ್ರತಿಜ್ಞೆ ಉಳ್ಳವಳಾಗಿ; ಸಃ=ಆ; ಶಂಭುಃ=ಬ್ರಹ್ಮನು; ಮೇ=ನನಗೆ; ಪುತ್ರ=ಮಗನಿಗೆ; ಸಮಃ=ಸಮಾನನು; ಪುರ=ಪುರಗಳಿಗೆ; ರಿಪುಃ=ಶತ್ರುವಾದ ರುದ್ರನು; ಪೌತ್ರಃ=ಮೊಮ್ಮಗನು; ಶಶೀ=ಚಂದ್ರನು; ಸೋದರಃ=ಸೋದರನು; ಸಿಂಧುಃ=

ವರುಣನು; ಮೇ=ನನಗೆ; ಜನಕಾಯಿತಃ=ತಂದೆಯಂತೆ ಇರುವವನು; ಮಧು=ದುಂಬಿಗೆ; ಸಖಃ=ಗೆಳೆಯನಾದ ಕಾಮನು; ಮತ್=ನನ್ನ; ಸೂನುಕಲ್ಪಃ=ಮಗನಂತೆ; ಅಹಂ=ನಾನು; ಸಕಲಸ್ಯ=ಎಲ್ಲರಿಗೂ; ಅಂಬಾ=ತಾಯಿಯು; ಪ್ರಭೋ=ಕೃಷ್ಣನೇ; ಇತಿ=ಎಂದು; ಸ್ವಂ=ತನ್ನ; ರೂಪಂ=ರೂಪವನ್ನು; ಅಸ್ಪಷ್ಟಯತ್=ಸ್ಪಷ್ಟಪಡಿಸಿದಳು.

ರಾಜರು ರುಗ್ಮಿಣಿಯಿಂದ ಪತ್ರವನ್ನು ಬರೆಸುವಾಗ ಲೌಕಿಕ ವೈದಿಕ ಎರಡೂ ಅರ್ಥ ಬರುವಂತೆ ಬರೆಸುತ್ತಾರೆ- ಲೋಕದಲ್ಲಿಯೂ ಅನೇಕ ಹುಡುಗರು ಮದುವೆಯ ಸಲುವಾಗಿ ಹುಡುಗಿಯರನ್ನು ಅರಸುತ್ತಾರೆ. ಒಂದು ಹುಡುಗಿಯನ್ನು ಒಬ್ಬ ಹುಡುಗ ಮೆಚ್ಚಿದ. ಆದರೆ ಆಕೆಗೆ ಆತನು ಇಷ್ಟವಿಲ್ಲ. ಇದನ್ನು ಖಂಡತುಂಡವಾಗಿ ತಿರಸ್ಕರಿಸಿದರೆ ನಾಳೆ ಆತನು ಉಪದ್ರವ ಮಾಡಿಯಾನು. ಆದ್ದರಿಂದ ಬಂದ ಹುಡುಗನನ್ನು ಆಕೆ ಅಣ್ಣನೆಂದೋ ತಮ್ಮನೆಂದೋ ಅಥವಾ ನೀವು ನನಗೆ ತಂದೆಗೆ ಸಮಾನರು ಇತ್ಯಾದಿ ಶಬ್ದಗಳಿಂದ ವಿನಯಪೂರ್ವಕವಾಗಿ ಹೇಳಲಿ. ಆಗ ಆ ಹುಡುಗ ಅನಿವಾರ್ಯವಾಗಿ ಹಿಂದೆ ಹೋಗಲೇಬೇಕು. ಇದು ಲೋಕಕ್ಕೆ ಒಂದು ಸಂದೇಶ.

ಸ್ವಾಮಿಯಾದ ಕೃಷ್ಣನೇ, ನನ್ನ ಮನವೆಂಬ ದುಂಬಿಯು ನಿನ್ನ ಪಾದಕಮಲವನ್ನೇ ಆಶಿಸುತ್ತದೆ ಹೊರತು ಬೇರೆ ಯಾರ ಪಾದಕಮಲವನ್ನು ಅಲ್ಲ. ಇದು ನನ್ನ ಪ್ರಾಮಾಣಿಕವಾದ ಮಾತು. ನಾನು ಶಪಥಪೂರ್ವಕವಾಗಿ ಹೇಳಬಲ್ಲೆ.

ಬ್ರಹ್ಮನನ್ನು ಮದುವೆ ಆಗಲು ಸಾಧ್ಯವಿಲ್ಲ. ಆತನನ್ನು ನಾನು ಹಡೆದದ್ದರಿಂದ ನನಗೆ ಮಗನಂತೆ ಇದ್ದಾನೆ. ಈತನ ಮಗನೇ ರುದ್ರನು. ನನಗೆ ಮೊಮ್ಮಗನು. ಸಮುದ್ರಮಥನ ಕಾಲದಲ್ಲಿ ನಾನು ಸಮುದ್ರದಿಂದ ಉದಿಸಿದ್ದೆ. ನನಗಿಂತ ಮೊದಲು ಚಂದ್ರನು ಅಲ್ಲೇ ಉದಿಸಿದ್ದ. ನಾವು ಇಬ್ಬರೂ ಒಂದೇ ಜಾಗದಿಂದ ಬಂದಿದ್ದರಿಂದ ಆತನು ಎನಗೆ ಸೋದರನಂತೆ. ವರುಣನು ಸಮುದ್ರದ ಅಭಿಮಾನಿ. ಆತನು ಎನಗೆ ತಂದೆಗೆ ಸಮಾನನು. ಮನ್ಮಥನು ನನಗೆ ಮಗನಿಗೆ ಸಮಾನನು. ಇಡೀ ಜಗತ್ತಿಗೇ ನಾನು ತಾಯಿಯಂತೆ, ಕುಟುಂಬದವರನ್ನು ಮದುವೆ ಆಗುವುದು ನಿಷಿದ್ಧ. ಆದ್ದರಿಂದ ನಿನ್ನನ್ನೇ ಮದುವೆ ಆಗುವುದು ಎಂದು ರಮೆಯು ತನ್ನ ಲಕ್ಷ್ಮೀರೂಪವನ್ನು ಇಲ್ಲಿ ತೋರಿಸಿದಳು.

<u>**ಸಂದೇಶ**</u> : ರೂಪಕ್ಕೆ ಮರುಳಾಗಿ ಸಗೋತ್ರ, ಸಕುಟುಂಬವಿವಾಹ ಕೂಡದು.

ರಮೆಯ ರೂಪವು ಜ್ಞಾನಾನಂದಮಯ. ಆಕೆಯ ದೇಹದ ವಿಕಾರದಿಂದ ಆಕೆಗೆ ಸಂತತಿ ಆಗುವುದಿಲ್ಲ ಲೋಕದ ನಾರಿಯರಂತೆ ಎಂದು ತಿಳಿಸಲು ಮಗನಂತೆ, ತಂದೆಯಂತೆ ಎಂಬ ಶಬ್ದವನ್ನು ರಾಜರು ಪ್ರಯೋಗಿಸಿದ್ದಾರೆ ಹೊರತು ಮಗ, ತಂದೆ ಎಂದು ಹೇಳಲಿಲ್ಲ.

**ನಿತ್ಯಾನಂದ ಚಿದಾಕೃತಿಂ ಯದುಪತೇ ತ್ವಾಮೇವ ಮನ್ಯೇ ಪತಿಂ**
**ಯತ್ತೇऽಸ್ತ್ಯಚ್ಯುತನಾಮ ವಿಶ್ವವಿದಿತಂ ವೀರಾಗ್ರ್ಯ ನಾನನ್ಯಗಮ್ ।**

**ತಚ್ಚಿನ್ಮಾತ್ರಸಮೀಕ್ಷಯಾ ಯದಿ ತದಾ ಸರ್ವೇಽಪಿ ಕಿಂ ನಾಚ್ಯುತಾಃ**
**ಯದ್ಯೇತಚ್ಚಿರಕಾಲಸಂಸ್ಥಿತಿಕೃತಂ ಪುತ್ರೇ ತವ ಸ್ಯಾತ್ತದಾ ॥ ೪೪ ॥**

ವೀರ=ವೀರರಲ್ಲಿ; ಅಗ್ರ್ಯ=ಉತ್ತಮನೇ; ಯದು=ಯಾದವರಿಗೆ; ಪತೇ=ಒಡೆಯನೇ; ನಿತ್ಯ=ನಿತ್ಯವಾದ; ಆನಂದ=ಆನಂದವು; ಚಿತ್=ಜ್ಞಾನವು ಇವುಗಳೇ; ಆಕೃತಿಂ= ಶರೀರವಾಗಿವುಳ್ಳ; ತ್ವಾಂ ಏವ=ನಿನ್ನನ್ನೇ; ಪತಿಂ=ಪತಿಯನ್ನಾಗಿ; ಮನ್ಯೇ=ತಿಳಿಯುತ್ತೇನೆ; ಯತ್=ಯಾವ ಕಾರಣದಿಂದ; ತೇ=ನಿನಗೆ; ವಿಶ್ವ=ಜಗತ್ತಿಗೆ; ವಿದಿತಂ=ತಿಳಿದಿರುವ; ಅನನ್ಯಗಂ=ಬೇರೆಯವರಿಗೆ ಇಲ್ಲದಿರುವ; ಅಚ್ಯುತ=ಅಚ್ಯುತನೆಂಬ; ನಾಮ=ಹೆಸರು; ಅಸ್ತಿ=ಇದೆ; ತತ್=ಅದು; ಚಿತ್=ಜೀವದ; ಮಾತ್ರ=ಕೇವಲ; ಸಮೀಕ್ಷಯಾ=ವಿವಕ್ಷೆಯಿಂದ; ಯದಿ=ಒಂದುವೇಳೆ; ತದಾ=ಆಗ; ಸರ್ವೇ ಅಪಿ=ಎಲ್ಲರೂ ಕೂಡಾ; ಕಿಂ ನ ಅಚ್ಯುತಾಃ= ಅಚ್ಯುತರಲ್ಲವೋ?; ಯದಿ=ಒಂದುವೇಳೆ; ಏತತ್=ಇದು; ಚಿರ=ಬಹಳ; ಕಾಲ=ಕಾಲದಲ್ಲಿ; ಸಂಸ್ಥಿತಿ=ಇರುವಿಕೆಯಿಂದ; ಕೃತಂ=ಮಾಡಿದ್ದರೆ; ತದಾ=ಆಗ; ತವ=ನಿನ್ನ; ಪುತ್ರೇ=ಮಗನಲ್ಲಿ; ಕಿಂ=ಯಾಕೆ?; ನ ಸ್ಯಾತ್=ಇಲ್ಲ.

ಕೃಷ್ಣ, ನೀನು ಒಂದು ಕೆಲಸವನ್ನು ಆರಂಭಿಸಿದರೆ ಅದು ಮುಗಿಯುವ ತನಕ ವಿರಮಿಸುವುದಿಲ್ಲ. ನಿನ್ನ ದೇಹವು ಜ್ಞಾನಾನಂದಮಯವಾದದ್ದು. ಈ ಜ್ಞಾನಾನಂದಗಳಿಗೆ ಎಂದೂ ನಾಶವಿಲ್ಲ. ಅಂತೂ ನೀನು ದೇಹದಿಂದಲೂ ನಾಶ ಇಲ್ಲದವನು ಎಂದಾಯಿತು. ಆದ್ದರಿಂದಲೇ ಅಚ್ಯುತ ಎಂಬ ಹೆಸರು ನಿನಗೆ ಮಾತ್ರ ಇರುವುದು. ಅಚ್ಯುತ ಎಂಬ ಶಬ್ದಕ್ಕೆ ದೇಹತಃ ಚೇತನತಃ ಎರಡೂ ರೀತಿಯಿಂದ ನಾಶ ಇಲ್ಲದ್ದು ಅರ್ಥ. ದೇಹ ನಷ್ಟವಾದರೂ ಅಡ್ಡಿ ಇಲ್ಲ. ಚೇತನ ನಿತ್ಯವಾದರೂ ಅಚ್ಯುತ ಎಂಬ ಹೆಸರು ಕೂಡುತ್ತದೆ ಎಂದು ಹೇಳಲು ಆಗುವುದಿಲ್ಲ. ಆ ರೀತಿ ಅರ್ಥ ಮಾಡಿದರೆ ಎಲ್ಲಾ ಚೇತನರೂ ನಾಶ ಇಲ್ಲದವರಾದ್ದರಿಂದ ಎಲ್ಲರಿಗು ಅಚ್ಯುತ ಎಂಬ ಹೆಸರು ಬರಬೇಕಿತ್ತು. ಆದರೆ ಇಲ್ಲ. ಆದ್ದರಿಂದ ಅರ್ಥ ಸಂಕೋಚ ಮಾಡಬಾರದು.

ಇನ್ನೊಂದು ಪ್ರಶ್ನೆ ಬರಬಹುದು– ದೇವರಿಗೆ ದೇಹಕ್ಕೆ ನಾಶ ಇದೆ. ಹಾಗಾದರೆ ಅಚ್ಯುತ ಎಂಬ ಹೆಸರು ಹೇಗೆ ಕೂಡುತ್ತದೆ? ಉತ್ತರ– ನಮ್ಮಕ್ಕಿಂತ ಬಹಳ ಹೆಚ್ಚು ವರ್ಷಗಳ ತನಕ ಆತನಿಗೆ ದೇಹ ಇರುತ್ತದೆ. ಅನಂತರ ನಾಶವಾಗುತ್ತದೆ. ತುಂಬಾ ಬೆಲೆಬಾಳುವ ವಸ್ತುವನ್ನು ಅಮೂಲ್ಯ ಎಂದು ಹೇಳುವಂತೆ ಎಂದು. ಇದಕ್ಕೆ ರುಗ್ಮಿಣಿಯು ಪತ್ರದಲ್ಲಿ ಬರೆಯುತ್ತಾಳೆ. ಹಾಗಾದರೆ ಚತುರ್ಮುಖಬ್ರಹ್ಮನಿಗೆ ಅಚ್ಯುತ ಎಂಬ ಹೆಸರು ಬರಲಿ. ಆತನ ದೇಹವೂ ನಮ್ಮ ದೇಹಕ್ಕಿಂತ ಹೆಚ್ಚು ಕಾಲ ಇರುತ್ತದೆ. ಮಾನವರ ೪೩೨ ಕೋಟಿ ವರ್ಷಗಳು ಬ್ರಹ್ಮನ ಒಂದು ಹಗಲು. ಇಷ್ಟೇ ಸಮಯದ ಒಂದು ರಾತ್ರಿ. ಹೀಗೇ ಸಪ್ತಾಹ, ಪಕ್ಷ, ಮಾಸ, ಋತು, ಅಯನ, ವರ್ಷಗಳು. ಇಂತಹ ನೂರು ವರ್ಷಗಳ ತನಕ ಆತನ ದೇಹಕ್ಕೆ ನಾಶ ಇಲ್ಲ. ಮಾನವರ ದೇಹಕ್ಕಿಂತ ಬಹಳ ಬಹಳ

ವರ್ಷ ಹೆಚ್ಚು ಕಾಲ ಆತನ ದೇಹ ಇದೆ. ಆದರೂ ಆತನಿಗೆ ಅಚ್ಯುತ ಎಂಬ ಹೆಸರು ಇಲ್ಲ. ಆತನಿಗೆ ಈಗ ೫೦ ವರ್ಷ ಆಗಿದೆ. ಇದಕ್ಕಿಂತ ಮೊದಲು ಆತನಿಗೆ ದೇಹ ಇರಲಿಲ್ಲ. ಇನ್ನು ೫೦ ವರ್ಷದನಂತರ ದೇಹ ಇರುವುದಿಲ್ಲ.

ಜ್ಞಾನಿಗಳೆಲ್ಲಾ ನನ್ನನ್ನು ನಿತ್ಯ ಮುದಿಐದೆ ಎಂದು ಭಜಿಸುವರು. ಇದು ಪ್ರಾಮಾಣಿಕವಾಗಬೇಕಾದರೆ ನಿತ್ಯ ದೇಹವುಳ್ಳ ಎಂದೆಂದೂ ಸಾವು ಇಲ್ಲದ ನಿನ್ನನ್ನೇ ಮದುವೆ ಆಗುತ್ತೇನೆ. ಯಾವ ಕನ್ಯೆಯೂ ವೈಧವ್ಯವನ್ನು ಆಶಿಸಿ ಮದುವೆ ಆಗುವುದಿಲ್ಲ.

**ಸಂದೇಶ** : ಮದುವೆ ಆಗುವ ಹುಡುಗಿಯು ಭಾವೀಪತಿಯಲ್ಲಿ ನಾರಾಯಣನನ್ನು ಅಚ್ಯುತ ರೂಪದಿಂದ ಧ್ಯಾನಿಸಬೇಕು. ಇವಳ ಜೀವನಪೂರ್ತಿ ಮಾಂಗಲ್ಯ ಇರುತ್ತದೆ.

**ಶೇಷೇಽಂಗ ಶೇಷೇ ಯದಶೇಷಮಂತೇ**
**ಬಿಭ್ರತ್ತ್ವಮಭ್ರದ್ಯುತಿರಾತ್ಮಗರ್ಭೇ ।**
**ಆನಂದಸಾಂದ್ರಾಕೃತಿಮಚ್ಯುತಂ ತ್ವಾಂ**
**ಶ್ರೀಶಂ ತದೀಶಂ ವರಯಾಮಿ ನಾನ್ಯಮ್** ॥ ೪೫ ॥

ಹೇ ಅಂಗ=ಎಲೋ ಪ್ರಿಯನೇ. ಅಭ್ರ=ಮೋಡದಂತೆ; ದ್ಯುತಿಃ=ಕಾಂತಿವುಳ್ಳ; ತ್ವಂ= ನೀನು; ಯತ್=ಯಾವ ಕಾರಣದಿಂದ; ಅಂತೇ=ಪ್ರಳಯ ಕಾಲದಲ್ಲಿ; ಅಶೇಷಂ=ಎಲ್ಲವನ್ನೂ; ಆತ್ಮ=ತನ್ನ; ಗರ್ಭೇ=ಉದರದಲ್ಲಿ; ಬಿಭ್ರತ್=ಧರಿಸಿದವನಾಗಿ; ಶೇಷೇ=ಶೇಷನಲ್ಲಿ; ಶೇಷೇ= ಮಲಗುತ್ತಿ; ತತ್=ಆದ್ದರಿಂದ; ಆನಂದ=ಆನಂದವೇ; ಸಾಂದ್ರ=ನಿಬಿಡವಾದ; ಆಕೃತಿಂ=ದೇಹವಾದ; ತ್ವಾಂ=ನಿನ್ನನ್ನು; ಈಶಂ=ಪತಿಯನ್ನಾಗಿ; ವರಯಾಮಿ=ವರಿಸುತ್ತೇನೆ; ಅನ್ಯಂ=ಇನ್ನೊಬ್ಬನನ್ನು; ನ=ಅಲ್ಲ.

ನಿನ್ನ ದೇಹಕ್ಕೂ ಸಾವು ಇಲ್ಲ. ಪ್ರಳಯಕಾಲದಲ್ಲಿ ನೀನು ಎಲ್ಲಾ ಜೀವರನ್ನೂ ನಿನ್ನ ಉದರದಲ್ಲಿ ಇಟ್ಟುಕೊಳ್ಳುತ್ತಿ. ಆಗ ಅವರೆಲ್ಲಾ ದೈಹಿಕವಾಗಿ ಸತ್ತಿರುತ್ತಾರೆ. ನೀನು ಶೇಷನ ಮೇಲೆ ಮಲಗಿರುತ್ತಿ. ಆ ಶೇಷನು ಮುಕ್ತನಾದವನು ಅಥವಾ ಶೇಷ ಅಂದರೆ ಉಳಿದದ್ದು ಎಂದರ್ಥ. ಲಕ್ಷ್ಮಿಯು ಆಗ ಎಲೆಯ ರೂಪದಲ್ಲಿ ಇರುತ್ತಾಳೆ. ನೀನು ಆ ಆಲದೆಲೆಯ ಮೇಲೆ ಪವಡಿಸಿಕೊಂಡಿರುತ್ತಿ. ನೀಲಬಣ್ಣದ ಮೈಯ ನೀನು ನಿರ್ಭೀತಿಯಿಂದ ಇರುವಿ. ಉದರ, ನೀಲಬಣ್ಣ ಇವು ಇರಬೇಕಾದರೆ ನಿನಗೆ ಆ ಸಮಯದಲ್ಲಿಯೂ ಶರೀರ ಇದೆ ಎಂದಾಯಿತು. ಆ ದೇಹವು ಆನಂದಮಯವಾದ್ದರಿಂದಲೇ ಆಗ ನಿನಗೆ ಭಯಾದಿಗಳು ಯಾವುದೂ ಇಲ್ಲ. ನೀನು ರಮಾಪತಿ. ನಾನು ರಮೆಯ ಅವತಾರ. ಆದ್ದರಿಂದ ನಾನು ನಿನ್ನನ್ನೇ ಲಗ್ನವಾಗುವುದು. ಇನ್ನೊಬ್ಬನನ್ನಲ್ಲ. ಪ್ರಳಯಕಾಲದಲ್ಲಿಯೂ ನೀನು ಇರುವಿ ಎಂಬುದರಿಂದ ನಿನಗೆ ಹುಟ್ಟು ಸಾವು ಎರಡೂ ಇಲ್ಲ ಎಂದಾಗುತ್ತದೆ- ಹೊಸ್ತಿಲಲ್ಲಿ ಇಟ್ಟ ದೀಪದಂತೆ.

**ದಶಾವೃತೀದಂ ಕಿಲ ಪದ್ಮಜಾಂಡಮನೇಕಧಾ ಯಸ್ಯ ಹಿ ರೋಮಕೂಪೇ ।**
**ಪರಾಣುವತ್ತಿಷ್ಠತಿ ಪಂಚಭೂತಭವಃ ಕಥಂ ತಸ್ಯ ತವಾಂಗ ದೇಹಃ ॥ ೪೬ ॥**

ಹೇ ಅಂಗ=ಎಲೋ ಪ್ರಿಯನೇ; ದಶ=ಹತ್ತು; ಆವೃತಿ=ಆವರಣವುಳ್ಳ; ಇದಂ=ಈ; ಪದ್ಮಜ=ಬ್ರಹ್ಮನ; ಅಂಡಂ=ಅಂಡವು; ಅನೇಕಧಾ=ಬಹಳವಾಗಿ; ಯಸ್ಯ=ಯಾರ; ರೋಮ=ರೋಮಗಳ; ಕೂಪೇ=ರಂಧ್ರದಲ್ಲಿ; ಪರಾಣುವತ್=ಪರಮಾಣುವಂತೆ; ತಿಷ್ಠತಿ=ಇದೆಯೋ; ತಸ್ಯ=ಅಂತಹ; ತವ=ನಿನ್ನ; ದೇಹಃ=ಶರೀರವು; ಪಂಚ=ಐದು; ಭೂತ=ಭೂತಗಳಿಂದ; ಭವಃ=ಹುಟ್ಟಿದ್ದು; ಕಥಂ=ಹೇಗೆ?

ಯಾರ ದೇಹವು ಪಂಚಭೂತಗಳಿಂದ ನಿರ್ಮಾಣಗೊಂಡಿದೆಯೋ ಅವರ ದೇಹವು ನಶ್ವರ. ನಿನ್ನ ದೇಹವು ಪಂಚಭೂತಗಳಿಂದ ತಯಾರಾದದ್ದು ಅಲ್ಲ. ಯಾಕೆಂದರೆ ಈ ಬ್ರಹ್ಮಾಂಡವು ಹತ್ತು ಆವರಣಗಳಿಂದ ಕೂಡಿದೆ– ಪಂಚ ಮಹಾಭೂತಗಳು, ಅನಂತರ ಅಹಂಕಾರತತ್ವ, ಅದರ ಹೊರಗೆ ಮಹತ್ತತ್ವ, ಇದರ ಹೊರಗೆ ತಮಸ್ಸು, ರಜಸ್ಸು, ಸತ್ವಗಳೆಂಬ ಮೂರು ಗುಣಗಳು. ಇಂತಹ ಆವರಣಗಳಿಂದ ಕೂಡಿದ ಬ್ರಹ್ಮಾಂಡವು ನಿನ್ನ ದೇಹದ ಒಂದೊಂದು ರೋಮರಂಧ್ರದಲ್ಲಿ ತುಂಬಿದೆ. ಹೇಗೆಂದರೆ ಅಣುವಿನಂತೆ ಇದೆ. ಅಂದರೆ ರೋಮರಂಧ್ರವು ದೊಡ್ಡ ಸರೋವರದಂತೆ ಇದೆ. ಅದರಲ್ಲಿ ಈ ಬ್ರಹ್ಮಾಂಡವು ಒಂದು ಹನಿಯಂತೆ.

ಈ ಪಂಚಭೂತಗಳ ಆವರಣವು ಅಹಂಕಾರತತ್ವರೂಪ ಆವರಣಕ್ಕಿಂತ ಮೊದಲೇ ಇರುವುದು. ಅನಂತರ ಇಲ್ಲ. ಆದರೆ ನಿನ್ನ ದೇಹವು ಹತ್ತು ಆವರಣಗಳಿಗಿಂತ ಅನಂತರವೂ ಇದೆ. ಕಾರ್ಯ ಇದ್ದಲ್ಲೆಲ್ಲಾ ಕಾರಣ ಇರಬೇಕು ಎಂದು ನಿಯಮ. ಮಡಕೆ ಇರುವಲ್ಲೆಲ್ಲಾ ಮಣ್ಣು ಇರಲೇಬೇಕು. ಬಟ್ಟೆ ಇರುವಲ್ಲೆಲ್ಲಾ ನೂಲು ಇರಬೇಕು. ಅದೇ ರೀತಿ ನಿನ್ನ ದೇಹ ಪ್ರಾಕೃತ ಪಂಚಭೂತಗಳಿಂದ ನಿರ್ಮಾಣಗೊಂಡಿದ್ದರೆ ನಿನ್ನ ದೇಹ ಇರುವಲ್ಲೆಲ್ಲಾ ಪಂಚಭೂತಗಳೂ ಇರಬೇಕಾಗುತ್ತದೆ. ಆದರೆ ಪಂಚಭೂತಗಳಿಗೆ ಹಾಗೆ ಇರಲು ಶಾಸ್ತ್ರದ ವಿಧಿಯಿಲ್ಲ. ಆದ್ದರಿಂದ ನಿನ್ನ ದೇಹವು ಅಪ್ರಾಕೃತ. ನಿತ್ಯ ಜ್ಞಾನಾನಂದಮಯ. ಕಾರಣದಲ್ಲಿ ಕಾರ್ಯ ಅಂದರೆ ಮಣ್ಣಿನಲ್ಲಿ ಮಡಕೆ, ನೂಲಿನಲ್ಲಿ ಬಟ್ಟೆ ಮಣ್ಣು ನೂಲಿಗಿಂತಲೂ ಹೊರಗೆ ಮಡಕೆ, ಬಟ್ಟೆ ಇದ್ದರೆ ಮಣ್ಣು, ನೂಲುಗಳು ಬಟ್ಟೆಗೆ ಕಾರಣವಾಗುವುದಿಲ್ಲ. ಪಂಚಭೂತ ಗಳಿಂದಲೂ ಹೊರಗಿನ ಇತರ ಐದು ಆವರಣಗಳಿಂದ ಕೂಡಿದ ಈ ಬ್ರಹ್ಮಾಂಡವು ನಿನ್ನ ಒಂದು ರೋಮಕೂಪವನ್ನು ತುಂಬಲು ಅಸಮರ್ಥಗಳು. ರೋಮಕೂಪವೆಂಬುದು ನಿನ್ನ ದೇಹದ ಒಂದು ಭಾಗ. ಹೀಗೆ ನಿನ್ನ ದೇಹದ ಒಂದು ಭಾಗವನ್ನೇ ತುಂಬಲು ಅಸಮರ್ಥಗಳಾಗಿರುವಾಗ ಸಮಗ್ರದೇಹವನ್ನು ಹೇಗೆ ತುಂಬಿಸಿಯಾವು?

**ಗೋಪೀರಗೋಪೀಃ ಕಿಲ ಲೋಕನಾಥ**
**ಸ್ವಾಪಚ್ಛಿದಾಪಾದನವಿಕ್ರಮೌಘ ।**

ಏವಂ ವಿಭೋ ವಂಚಿತದುರ್ದಶಾಂ ಮಾಂ
ಸ್ವೀಯಾಂ ದಯಾವಾರಿನಿಧೇ ವಿಧೇಹಿ ॥ ೪೭ ॥

ಸ್ವ=ತನ್ನವರ; ಆಪತ್=ಅನಿಷ್ಟಗಳಿಗೆ; ಛಿತ್=ನಾಶವನ್ನು; ಆಪಾದನ=ಕೊಡುವ; ವಿಕ್ರಮ=ಪರಾಕ್ರಮಗಳ; ಓಘ=ಸಮೂಹವುಳ್ಳ; ದಯಾ=ದಯೆಯಿಂದ; ವಾರಿನಿಧೇ= ಸಮುದ್ರದಂತೆ ಇರುವ; ವಿಭೋ=ಕೃಷ್ಣನೇ; ಲೋಕ=ಜಗತ್ತಿಗೆ; ನಾಥ=ಒಡೆಯನೇ; ಗೋಪೀಃ=ಗೋಪಿಯರನ್ನು ಅಗೋಪೀಃ ಕಿಲ=ರಕ್ಷಿಸಿದ್ದಿ ತಾನೆ; ಏವಂ=ಇದೇ ರೀತಿಯಾಗಿ; ವಂಚಿತ=ಮೋಸಗೊಳಿಸಿದ; ದುರ್ದಶಾಂ=ಕೆಟ್ಟ ಆಸೆವುಳ್ಳ; ಮಾಂ=ನನ್ನನ್ನು; ಸ್ವೀಯಾಂ= ನಿನ್ನವಳನ್ನಾಗಿ; ವಿಧೇಹಿ=ಮಾಡು.

ಕೃಷ್ಣ, ನೀನು ಮೂರು ಜಗತ್ತಿಗೂ ಒಡೆಯ. ಆದ್ದರಿಂದ ಯಾರಿಗೆ ಏನೂ ಕೊಡಲು ಶಕ್ತನು. ನಿನ್ನ ಭಕ್ತರಿಗೆ ಯಾವ ಆಪತ್ತೂ ಬಾರದಂತೆ ನೋಡುವವನು. ಆಪತ್ತನ್ನು ಪರಿಹರಿಸಲು ಬೇಕಾದ ಶಕ್ತಿಯಿಂದ ತುಂಬಿದವನು. ಇಂತಹ ನೀನು ವೃಂದಾವನದಲ್ಲಿರುವಾಗ ಗೋಪಿಯರನ್ನು ರಕ್ಷಿಸಿದವನು. ಅವರಿಗೆ ಕಂಸನಿಂದ ನಾನಾ ತೊಂದರೆಗಳು ಬಂದಿತ್ತು. ಆ ಗೋಪಿಯರು ಸಾಮಾನ್ಯರು. ತಾವು ಮನೆಯಲ್ಲಿ ಪತಿ, ಪುತ್ರರೆಂದು ಸಂಸಾರ ಮಾಡಿಕೊಂಡು ಇದ್ದವರು. ನಾನಾದರೂ ಯಾರನ್ನೂ ಲಗ್ನವಾಗಿಲ್ಲ. ಶಿಶುಪಾಲಾದಿಗಳು ನನ್ನಲ್ಲಿ ತುಂಬಾ ಆಸೆವುಳ್ಳವರು ಆಗಿದ್ದಾರೆ. ಅವರ ಆಸೆಯನ್ನು ನಾನು ಭಂಗ ಮಾಡಿದ್ದೇನೆ. ಅವರಿಗೆ ಮೋಸ ಮಾಡಿದ್ದೇನೆ. ಹೀಗಿದ್ದರೂ ನಿನಗೆ ನನ್ನ ಮೇಲೆ ದಯ ಇಲ್ಲವೋ. ನೀನು ದಯೆಯಿಂದ ಸಮುದ್ರದಂತೆ ಇರುವವನು. ಸಮುದ್ರದಲ್ಲಿ ಎಂದೂ ನೀರು ಇಲ್ಲ ಎಂದು ಆಗುವುದಿಲ್ಲ. ಆದ್ದರಿಂದ ದಯಮಾಡಿ ನನ್ನನ್ನು ನಿನ್ನವಳನ್ನಾಗಿ ಮಾಡಿಕೋ.

ಕಿಂ ರುಗ್ಮಿಣಾ ಭೀಷ್ಮಕೇಣ ಕಿಮನ್ಯೈರ್ನೃಪಸಂಜ್ಞಿತೈಃ ।
ಅನಾದಿಸಿದ್ಧಾಂ ಮಾಂ ಜಾಯಾಂ ನಯತಸ್ತೇ ಪ್ರಯೋಜನಮ್ ॥ ೪೮ ॥

ಅನಾದಿ=ಅನಾದಿಕಾಲದಿಂದ; ಸಿದ್ಧಾಂ=ಸಿದ್ಧಳಾದ; ಜಾಯಾಂ=ಪತ್ನಿಯಾದ; ಮಾಂ= ನನ್ನನ್ನು; ನಯತಃ=ಒಯ್ಯುವ; ತೇ=ನಿನಗೆ; ರುಗ್ಮಿಣಾ=ರುಗ್ಮಿಯಿಂದ; ಭೀಷ್ಮಕೇಣ= ಭೀಷ್ಮಕನಿಂದ; ಕಿಂ=ಏನು?; ನೃಪ=ರಾಜರೆಂದು; ಸಂಜ್ಞಿತೈಃ=ಹೆಸರುಳ್ಳ; ಅನ್ಯೈಃ= ಬೇರೆಯವರಿಂದ; ಕಿಂ ಪ್ರಯೋಜನಮ್=ಏನು ಲಾಭವು?

ಕೃಷ್ಣ, ನನ್ನ ತಂದೆ, ಅಣ್ಣ ಇವರ ಒಪ್ಪಿಗೆ ಇಲ್ಲದೆ ನನ್ನನ್ನು ಒಯ್ಯುವುದು ಹೇಗೆ ಎಂದು ಆಲೋಚಿಸಬೇಡ. ಅವರನ್ನು ಯಾಕೆ ಕೇಳಬೇಕು? ನಾನು ಲಕ್ಷ್ಮೀರೂಪದಿಂದ ಅನಾದಿಕಾಲದಿಂದಲೂ ನಿನ್ನ ಪತ್ನಿಯಾಗಿಯೇ ಇರುವವಳು. ಆಗ ಯಾರಲ್ಲಾದರೂ ಕೇಳಿದ್ದರೆ ಈಗ ಕೇಳಬೇಕೆಂಬುದು ಸರಿ. ಆವಾಗಲೇ ಕೇಳಲಿಲ್ಲ. ಯಾಕೆಂದರೆ ಕೇಳಲು

ನಮ್ಮ ದಾಂಪತ್ಯಕ್ಕೆ ಆದಿ ಇದ್ದರೆ ತಾನೆ? ಅವರು ಯಾರೂ ನನಗೆ ಅಣ್ಣನೂ ಅಲ್ಲ, ಅಪ್ಪನೂ ಅಲ್ಲ. ಇನ್ನು ನನ್ನ ಬಂಧುಗಳಾದ ರಾಜರು. ಅವರಾರೂ ರಾಜರೇ ಅಲ್ಲ. ನೃಪರೂ ಅಲ್ಲ– ನರರನ್ನು ಪಾಲನೆ ಮಾಡುವವರು ನೃಪರು. ಪ್ರಜೆಗಳನ್ನ ರಂಜಿಸುವವರು ರಾಜರು. ಇವರೆಲ್ಲಾ ದೈತ್ಯರೇ ರಾಜರಾಗಿ ಹುಟ್ಟಿದವರು. ಆದ್ದರಿಂದ ಪ್ರಜಾಪೀಡಕರು. ಇವರು ಎಂದೂ ಕೂಡಾ ವೈದಿಕವಾದ ಕೆಲಸಕ್ಕೆ ಅನುಮತಿ ಕೊಡುವವರೇ ಅಲ್ಲ.

<u>ಸಂದೇಶ</u> : ಧಾರ್ಮಿಕವಾದ ಕೆಲಸಕ್ಕೆ ಯಾರ ಅನುಮತಿಯೂ ಬೇಡ.

**ನಯೇಶ ಮಾಮನ್ಯಜನೈರಭೋಗ್ಯಾಂ**
**ತ್ವದಂಘ್ರಿಯುಗ್ಮಾರ್ಚನಕರ್ಮಯೋಗ್ಯಾಮ್ ।**
**ಇಮಾಮವಸ್ಥಾಮವಧೂಯ ನೋ ಚೇತ್**
**ಭವಾಮಿ ಭೂಮ್ನೋ ಹೃದಯಸ್ಯ ಯೋಗ್ಯಾ ॥ ೪೯ ॥**

ಹೇ ಈಶ= ಎಲೋ ಒಡೆಯನೇ; ತ್ವತ್=ನಿನ್ನ; ಅಂಘ್ರಿ=ಪಾದಗಳ; ಯುಗ್ಮ=ಎರಡರ; ಅರ್ಚನ=ಪೂಜೆ ಎಂಬ; ಕರ್ಮ=ಕೆಲಸಕ್ಕೆ; ಯೋಗ್ಯಾಂ=ಯೋಗ್ಯಳಾದ; ಅನ್ಯ=ಬೇರೆ; ಜನೈಃ=ಜನರಿಂದ; ಅಭೋಗ್ಯಾಂ=ಸ್ವೀಕರಿಸಲು ಅಯೋಗ್ಯಳಾದ; ಮಾಂ=ನನ್ನನ್ನು; ನಯ=ಒಯ್ಯು; ನೋ ಚೇತ್=ಇಲ್ಲದಿದ್ದರೆ; ಇಮಾಂ=ಈ; ಅವಸ್ಥಾಂ=ಅವಸ್ಥೆಯನ್ನು; ಅವಧೂಯ=ಬಿಟ್ಟು; ಭೂಮ್ನಃ=ಪೂರ್ಣನ; ಹೃದಯಸ್ಯ=ಮನಸ್ಸಿಗೆ; ಯೋಗ್ಯಾ= ಯೋಗ್ಯಳು; ಭವಾಮಿ=ಆಗುತ್ತೇನೆ.

ಕೃಷ್ಣ ನನ್ನ ಜೊತೆ ವಿಹರಿಸುವುದು ದೂರ ಇರಲಿ. ನನ್ನನ್ನು ಮುಟ್ಟಲೂ ಯೋಗ್ಯರಾದ ಜನರು ನಿನ್ನನ್ನು ಹೊರತು ಯಾರೂ ಇಲ್ಲ. ನಿನ್ನ ಚರಣಸೇವೆಯನ್ನು ಸದಾ ಮಾಡಿಕೊಂಡಿರಲು ಬೇಕಾದ ಯೋಗ್ಯತೆ ಉಳ್ಳವಳು ನಾನು. ನನ್ನನ್ನು ಲಗ್ನ ಆಗು. ಇಲ್ಲದಿದ್ದರೆ ನಾನು ಈ ದೇಹವನ್ನು ಬಿಡಬೇಕಾಗುತ್ತದೆ. ನೀನು ನನ್ನನ್ನು ಸದಾ ಮನಸ್ಸಿನಿಂದ ಎಣಿಸಿಕೊಂಡು ಇರುವಂತೆ ಮಾಡುತ್ತೇನೆ. ಲೌಕಿಕವಾಗಿ ಹೇಳುವುದಾದರೆ ನೀನು ಪಶ್ಚಾತ್ತಾಪ ಪಡಬೇಕಾಗುತ್ತದೆ. ಯಾಕೆಂದರೆ ಒಳ್ಳೆಯ ಕನ್ಯೆಯನ್ನು ಲಗ್ನವಾಗಲಿಲ್ಲವಲ್ಲಾ ಎಂದು. ಆಧ್ಯಾತ್ಮಿಕವಾದ ಅರ್ಥ– ನನ್ನನ್ನು ನೀನು ಈ ರೂಪದಿಂದ ವರಿಸದಿದ್ದರೆ ನಾನು ಶ್ರೀರೂಪದಿಂದ ನಿನ್ನ ವಕ್ಷಸ್ಥಳದಲ್ಲಿ ಬಂದು ನೆಲೆಸುತ್ತೇನೆ. ಲಕ್ಷ್ಮಿಯು ರುಗ್ಮಿಣಿ ರೂಪದಿಂದ ಕುಂಡಿನಪುರದಲ್ಲಿಯೂ ಶ್ರೀರೂಪದಿಂದ ದೇವರ ಎದೆಯಲ್ಲಿ ಸದಾ ಇದ್ದಾಳೆ.

**ದಿಶಾಸುನಾಥೇಕ್ಷಣಮಾಶ್ರಿತಾಯಾ ಮುಕುಂದ ಸೌಂದರ್ಯಸಮುದ್ರಸಾಂದ್ರ ।**
**ದಿಶಾಸು ನಾಥೇ ಕ್ಷಣಮಾಶ್ರಿತಾಯಾಸ್ತದೀಯಭಾಗ್ಯಸ್ಯ ನ ಚೇಚ್ಚರಂತೀ ॥ ೫೦ ॥**

ಸೌಂದರ್ಯ=ಸೌಂದರ್ಯವೆಂಬ; ಸಮುದ್ರ=ಸಮುದ್ರದಿಂದ; ಸಾಂದ್ರ=ನಿಬಿಡನೇ;

ಮುಕುಂದ=ಕೃಷ್ಣನೇ; ಅಸು=ಪ್ರಾಣಿಗಳಿಗೆ; ನಾಥ=ಒಡೆಯನೇ; ಆಶ್ರಿತಾಯಾಃ=ಸೇವಕಿಗೆ; ಈಕ್ಷಣಂ=ದರ್ಶನವನ್ನು; ದಿಶ=ಕೊಡು; ನ ಚೇತ್=ಇಲ್ಲದಿದ್ದರೆ; ದಿಶಾಸು=ದಿಕ್ಕುಗಳಲ್ಲಿ; ಚರಂತೀ=ತಿರುಗುವವಳಾಗಿ; ಯಾಃ=ಯಾವ ನಾರಿಯರು; ಕ್ಷಣಂ=ಕ್ಷಣಕಾಲ; ಆಶ್ರಿತಾಃ=ಆಶ್ರಯಿಸಿದ್ದಾರೋ; ತದೀಯ=ಅವರ; ಭಾಗ್ಯಸ್ಯ=ಭಾಗ್ಯವನ್ನು; ದಿಶ=ಕೊಡು; ನಾಥೇ=ಯಾಚಿಸುವೆ.

ಕೃಷ್ಣ, ನೀನು ಬಹಳ ಚಂದದ ಹುಡುಗ. ಸಮುದ್ರದಲ್ಲಿ ನೀರು ಹೇಗೆ ಬಹಳ ಇದೆಯೋ ಹಾಗೆಯೇ ನಿನ್ನಲ್ಲಿ ಸೌಂದರ್ಯವೂ ಇದೆ. ನಿನ್ನ ಭಕ್ತರ ಕಷ್ಟಗಳನ್ನು ಬಿಡಿಸುವವನು. ಆದ್ದರಿಂದ ಮುಕುಂದನು. ನನ್ನ ಪ್ರಾಣ ನಿನ್ನ ಕೈಯಲ್ಲಿದೆ. ನನಗೆ ನಿನ್ನ ದರ್ಶನ ಆಗಬೇಕಿದೆ. ಒದಗಿಸು. ಇಲ್ಲದಿದ್ದರೆ, ನಿನ್ನ ದರ್ಶನದ ಹಂಬಲದಿಂದ ಎಲ್ಲೆಲ್ಲೋ ಅಡ್ಡಾಡುತ್ತಿರುತ್ತೇನೆ. ನಿನ್ನ ಭೇಟಿಯನ್ನು ನೀನು ಕೊಡದಿದ್ದರೆ ಇದನ್ನಾದರೂ ಕೊಡು– ನೀನು ಹೊರಗೆ ಅಡ್ಡಾಡುವಾಗ ಬಹಳ ನಾರಿಯರು ನಿನ್ನನ್ನು ನೋಡುತ್ತಿರುತ್ತಾರೆ. ಅವರು ತುಂಬಾ ಅದೃಷ್ಟವಂತರು. ಅಂತಹ ಪುಣ್ಯವನ್ನಾದರೂ ಎನಗೆ ಒದಗಿಸು. ನನಗೆ ನೀನು ಪ್ರತ್ಯೇಕವಾದ ದರ್ಶನ ಕೊಡಬೇಕು. ಅಷ್ಟು ಪುಣ್ಯವನ್ನು ನಾನು ಮಾಡಿಲ್ಲವಾದರೆ ಸಾಮಾನ್ಯರಿಗೆ ಕೊಡುವ ದರ್ಶನದ ಪುಣ್ಯವನ್ನಾದರೂ ಒದಗಿಸು.

<u>**ಸಂದೇಶ**</u> : ದೇವರ ದರ್ಶನವಾಗಬೇಕಾದರೂ ನಾವು ತುಂಬಾ ಪುಣ್ಯವನ್ನು ಮಾಡಿರಬೇಕು.

**ತ್ವದೈಕ್ಯಮಂತಃ ಸ್ಮರತಾಂ ಜನಾನಾಂ ಭವತ್ಯನಿಷ್ಟಂ ಕಿಲ ದೈತ್ಯಜುಷ್ಟಮ್ ।**
**ತ್ವದೇಕಪತ್ನೀಮಭಿಕಾಂಕ್ಷತಸ್ತದುಪೇಕ್ಷಿತುಂ ನಾರ್ಹಸಿ ತಾನಿಮಾಂಸ್ತ್ವಮ್ ॥ ೫೧ ॥**

ಅಂತಃ=ಮನದಲ್ಲಿ; ತ್ವತ್=ನಿನ್ನಿಂದ; ಐಕ್ಯಂ=ಐಕ್ಯವನ್ನು; ಸ್ಮರತಾಂ=ಸ್ಮರಿಸುವ; ಜನಾನಾಂ=ಜನರಿಗೆ; ದೈತ್ಯ=ದೈತ್ಯರಿಂದ; ಜುಷ್ಟಮ್=ಸೇವಿಸಲ್ಪಡುವ; ಅನಿಷ್ಟಂ=ದುಃಖವು; ಭವತಿ ಕಿಲ=ಆಗುತ್ತದೆಯಷ್ಟೇ; ತ್ವತ್=ನಿನ್ನ; ಏಕ=ಮುಖ್ಯವಾಗಿ ಪತ್ನಿಯಾದ ನನ್ನನ್ನು; ಅಭಿಕಾಂಕ್ಷತಃ=ಆಶಿಸುವ; ತಾನ್=ಅಂತಹ; ಇಮಾನ್=ಇವರನ್ನು; ತ್ವಂ=ನೀನು; ಉಪೇಕ್ಷಿತುಂ=ಕಡೆಗಣಿಸಲು; ನ ಅರ್ಹಸಿ=ಯೋಗ್ಯನಲ್ಲ.

ಕೃಷ್ಣ, ತಾಮಸ ಜನರು ತಮ್ಮಿಂದ ನಿನಗೆ ಐಕ್ಯವನ್ನು ಚಿಂತಿಸುತ್ತಾರೆ. ಅಹಂ ಬ್ರಹ್ಮ ಅಸ್ಮಿ ಎಂದು ಧ್ಯಾನಿಸುತ್ತಾರೆ. ಇವರಿಗೆ ನೀನು ಬಹಳವಾದ ನರಕಾದಿ ಅನರ್ಥವನ್ನು ಕೊಡುತ್ತಿ. ಈಗ ಇಲ್ಲಿ ಶಿಶುಪಾಲಾದಿಗಳು ನನ್ನನ್ನು ತಮ್ಮ ಪತ್ನಿಯನ್ನಾಗಿ ಮಾಡಿಕೊಳ್ಳಲು ಹೊರಟಿದ್ದಾರೆ. ನಾನು ಕೇವಲ ನಿನಗೇ ಮೀಸಲು. ನನ್ನನ್ನು ಮದುವೆಯಾಗಿ ನಿನ್ನ ಗುಣವಾದ ಶ್ರೀಪತಿತ್ವವನ್ನೂ ಪಡೆಯಲು ಆಶಿಸುತ್ತಾರೆ. ಇದೂ ಇನ್ನೂ ಹೆಚ್ಚಿನ ದೋಷ. ಕೆಲವರು ನಿನ್ನಿಂದ ಐಕ್ಯವನ್ನು ಮಾತ್ರ ಆಶಿಸುತ್ತಾರೆ. ಇವರು ನಿನ್ನ ಗುಣಗಳನ್ನು

ಆಶಿಸುತ್ತಾರೆ ಅಂದರೆ ಎರಡು ತಪ್ಪು ಮಾಡುತ್ತಾರೆ– ಒಂದು, ನಿನ್ನಿಂದ ಐಕ್ಯ; ಎರಡು, ನಿನ್ನ ಗುಣಗಳು ಎಂದರ್ಥ. ಅಂತಹ ಶಿಶುಪಾಲಾದಿಗಳನ್ನು ಖಂಡಿತವಾಗಿಯೂ ಕಡೆಗಣಿಸಬೇಡ.

**ತ್ವಮಂಗ ಲಕ್ಷ್ಮೀರಮಣಃ ಸ್ವತಂತ್ರಸ್ತ್ವದೀಯಜಾಯಾ ಕಮಲಾಽಹಮಸ್ಮಿ ।**
**ಅಸಜ್ಜನಾನಾಮಭಿಮಾನಹಾನಿಂ ಮದರ್ಥಿತಾಯಾಶ್ಚಲತೋ ವಿಧತ್ಸ್ವ ॥ ೫೨ ॥**

ಅಂಗ=ಪ್ರಿಯನೇ; ತ್ವಂ=ನೀನು; ಲಕ್ಷ್ಮೀ=ಲಕ್ಷ್ಮಿಯ; ರಮಣಃ=ಪತಿಯು; ಸ್ವತಂತ್ರಃ= ಸ್ವತಂತ್ರನು. ಅಹಂ=ನಾನು; ತ್ವದೀಯ=ನಿನ್ನ ಸಂಬಂಧಿಯಾದ; ಜಾಯಾ= ಪತ್ನಿಯಾದ; ಕಮಲಾ=ಲಕ್ಷ್ಮಿಯು; ಅಸ್ಮಿ=ಆಗಿದ್ದೇನೆ; ಮತ್=ನನ್ನಿಂದ; ಅರ್ಥಿತಾಯಾಃ= ಪ್ರಾರ್ಥನೆಯ, ಛಲತಃ=ನೆಪದಿಂದ; ಅಸತ್=ಕೆಟ್ಟ; ಜನಾನಾಂ=ಜನರ; ಅಭಿಮಾನ= ಅಭಿಮಾನದ; ಹಾನಿಂ=ನಾಶವನ್ನು; ವಿಧತ್ಸ್ವ=ಮಾಡು.

ಪ್ರಿಯನಾದ ಕೃಷ್ಣನೇ, ನೀನು ಲಕ್ಷ್ಮೀಪತಿ. ನಾನು ಲಕ್ಷ್ಮಿಯಾಗಿದ್ದೇನೆ. ನೀನು ನನ್ನನ್ನು ವರಿಸಿದರೆ ಮಾತ್ರ ನಿನ್ನ ಹೆಸರು ಸಾರ್ಥಕವಾಗುವುದು. ಬೇರೆ ಯಾವ ಕನ್ಯೆಗೂ ಲಕ್ಷ್ಮೀ ಎಂಬ ಹೆಸರು ಇಲ್ಲ. ನನ್ನ ಮಾತನ್ನು ನೀನು ಕೇಳಲೇಬೇಕೆಂದು ನಾನು ಹೇಳುತ್ತಿಲ್ಲ. ಯಾಕೆಂದರೆ ನೀನು ಸ್ವತಂತ್ರನು. ನಿನಗೆ ನನ್ನಿಂದ ಏನೂ ಆಗಬೇಕಿಲ್ಲ. ಆದರೆ ನನಗೆ ನಿನ್ನಿಂದ ಆಗಬೇಕಾದ್ದು ಬಹಳ ಇದೆ. ಅವುಗಳಲ್ಲಿ ಒಂದು ದುಷ್ಟರ ದುರಭಿಮಾನಕ್ಕೆ ಧಕ್ಕೆ ತರುವುದು. ನೀನು ಭೂಮಿಯಲ್ಲಿ ಇರುವಂತೆಯೇ ಅವರು ಬಹಳ ಕೊಬ್ಬಿದ್ದಾರೆ. ನನ್ನನ್ನು ಹೇಗಾದರೂ ಮಾಡಿ ನಿನಗೆ ಸಿಗದಂತೆ ಮಾಡಬೇಕೆಂದು ಸಂಕಲ್ಪಿಸಿದ್ದಾರೆ. ಇಂತಹ ಸಂಕಲ್ಪವನ್ನು ಸುಳ್ಳಾಗಿಸಬೇಕಾಗಿದೆ. ಅದಕ್ಕಾಗಿಯಾದರೂ ನನ್ನನ್ನು ಇಲ್ಲಿಂದ ಕರೆದೊಯ್ಯು.

**ಇತಿ ಪತ್ರಗತಾಲಾಪಂ ಸಮಾಲೋಕ್ಯ ಸ ಮಾಧವಃ ।**
**ರಥಮಾರುಹ್ಯ ತರಸಾ ಪ್ರತಸ್ಥೇ ಯತ್ರ ಸಾ ಪ್ರಿಯಾ ॥ ೫೩ ॥**

ಮಾ=ರಮೆಯ; ಧವಃ=ಪತಿಯಾದ; ಸಃ=ಕೃಷ್ಣನು; ಇತಿ=ಈ ರೀತಿಯಾದ; ಪತ್ರ= ಕಾಗದದಲ್ಲಿ; ಗತ=ಇರುವ; ಆಲಾಪಂ=ವಿಷಯವನ್ನು; ಸಮಾಲೋಕ್ಯ=ನೋಡಿ; ರಥಂ= ರಥವನ್ನು; ಆರುಹ್ಯ=ಏರಿ; ಯತ್ರ=ಎಲ್ಲಿ; ಪ್ರಿಯಾ=ಇಷ್ಟಳಾದ; ಸಾ=ರುಗ್ಮಿಣಿಯೋ; ತತ್ರ= ಅಲ್ಲಿಗೆ; ತರಸಾ=ಕೂಡಲೇ; ಪ್ರತಸ್ಥೇ=ಹೊರಟನು.

ಕೃಷ್ಣನು ಪತ್ರವನ್ನು ಚೆನ್ನಾಗಿ ಓದಿದನು. ರುಗ್ಮಿಣಿಯ ಅಭಿಪ್ರಾಯವನ್ನು ಸರಿಯಾಗಿ, ಪೂರ್ಣವಾಗಿ ಅರ್ಥೈಸಿಕೊಳ್ಳುವವನು ಅವನೊಬ್ಬನೆ. ಕೃಷ್ಣನು ತನ್ನ ರಥವನ್ನೂ ರುಗ್ಮಿಣಿಯ ಮನೋರಥವನ್ನೂ ಏರಿದನು. ಕೂಡಲೇ ರುಗ್ಮಿಣಿಯ ಊರಿಗೆ ಹೊರಟನು.

<u>**ಸಂದೇಶ**</u> : ಭಕ್ತನ ಬಲವಾದ ಭಾವುಕತೆಗೆ ಭಗವಂತನು ಶೀಘ್ರವಾಗಿ ಬರುತ್ತಾನೆ.

**ಸಂದೇಶಂ ಭೀಷ್ಮಕನ್ಯಾಯಾಃ ಸಂದೃಶ್ಯ ಕಮಲೇಕ್ಷಣಃ ।**
**ತಂ ದೇಶಂ ದಯಯಾಽಗಚ್ಛನ್ಮಂದಸ್ಮಿತಮುಖೋಽಚ್ಯುತಃ ॥ ೫೪ ॥**

ಕಮಲ=ಕಮಲದಂತೆ; ಈಕ್ಷಣಃ=ಕಣ್ಣುಳ್ಳ; ಅಚ್ಯುತಃ=ಕೃಷ್ಣನು; ಭೀಷ್ಮ=ಭೀಷ್ಮಕನ; ಕನ್ಯಾಯಾಃ=ಮಗಳ; ಸಂದೇಶಂ=ಸಂದೇಶವನ್ನು; ಸಂದೃಶ್ಯ=ನೋಡಿ; ಮಂದ=ಸ್ವಲ್ಪ; ಸ್ಮಿತ=ನಗುವಿನ; ಮುಖಃ=ಮುಖವುಳ್ಳವನಾಗಿ; ದಯಯಾ=ದಯೆಯಿಂದ; ತಂ=ಆ; ದೇಶಂ=ಪ್ರದೇಶವನ್ನು; ಆಗಚ್ಛತ್=ಹೊರಟನು.

ಹುಡುಗಿ ಬರೆದ ಪತ್ರವನ್ನು ಕೃಷ್ಣನು ಓದಿದನು. ಮುಖದಲ್ಲಿ ನಗು ಬಂದಿತು. ಆಕೆಯಲ್ಲಿ ದಯಾ ಹುಟ್ಟಿತು. ರಥವನ್ನು ಹತ್ತಿದನು. ಕನ್ಯೆಯ ಊರಿನ ಕಡೆ ಹೊರಟನು. ಈತನು ಅಚ್ಯುತನಾದ್ದರಿಂದ ಭಕ್ತರ ಕರೆಗೆ ಸ್ಪಂದಿಸುವುದು ತಡವಾದರೆ ಈತನಿಗೇ ಚ್ಯುತಿ ಬರುವ ಸಂಭವ. ಭಕ್ತರ ಪ್ರಾರ್ಥನೆಗೆ ಭಗವಂತನು ಬಹಳ ಪ್ರಸನ್ನನಾಗುತ್ತಾನೆ ಎಂದು ತಿಳಿಸಲು ರಾಜರು ಕೃಷ್ಣನನ್ನು ಕಮಲೇಕ್ಷಣಃ ಎಂದು ಕರೆದಿದ್ದಾರೆ.

**ಭೈಷ್ಮೀಕರಗ್ರಹಣಮೇಷ ಕರಿಷ್ಯತೀತಿ**
**ವಕ್ತವ್ಯಮಸ್ತಿ ಕಿಮಿಹಾಶ್ರಿತಪಕ್ಷಪಾತೀ ।**
**ಯದ್ಬ್ರಾಹ್ಮಣಸ್ಯ ಸದಯಃ ಕರಪಲ್ಲವೇನ**
**ಪ್ರತ್ಯಗ್ರಹೀದ್ವಚನಮಾತ್ರಹೃತೋಽಪಿ ಹಸ್ತಮ್ ॥ ೫೫ ॥**

ಆಶ್ರಿತ=ಆಶ್ರಯಿಸಿದವರ; ಪಕ್ಷ=ಪಕ್ಷದಲ್ಲಿ; ಪಾತೀ=ಇರುವ; ಏಷಃ=ಇವನು; ಭೈಷ್ಮೀ=ರುಗ್ಮಿಣಿಯ; ಕರ=ಕೈಯ; ಗ್ರಹಣಂ=ಹಿಡಿಯುವಿಕೆಯನ್ನು; ಕರಿಷ್ಯತಿ=ಮಾಡುತ್ತಾನೆ; ಇತಿ=ಎಂದು; ಇಹ=ಇಲ್ಲಿ; ಕಿಂ=ಏನು; ವಕ್ತವ್ಯಂ=ಹೇಳತಕ್ಕದ್ದು; ಅಸ್ತಿ=ಇದೆ; ಯತ್=ಯಾವ ಕಾರಣದಿಂದ; ಸದಯಃ=ದಯದಿಂದ ಕೂಡಿದ ಕೃಷ್ಣನು; ಕರ=ಕೈಯೆಂಬ; ಪಲ್ಲವೇನ=ಕಿಸಲಯದಿಂದ; ವಚನಮಾತ್ರ=ಕೇವಲ ಮಾತನ್ನು; ಹೃತಃ=ತಂದಿರುವ; ಬ್ರಾಹ್ಮಣಸ್ಯ ಅಪಿ=ಬ್ರಾಹ್ಮಣನದ್ದೂ; ಹಸ್ತಂ=ಕೈಯನ್ನು; ಪ್ರತ್ಯಗ್ರಹೀತ್=ಹಿಡಿದನು.

ರುಗ್ಮಿಣಿಯು ಬಹಳ ದೀರ್ಘವಾದ ಪತ್ರವನ್ನು ಬರೆದಿದ್ದಳು. ಈ ಪತ್ರಕ್ಕೆ ಕೃಷ್ಣನು ಸ್ಪಂದಿಸುತ್ತಾನಾ? ಯದ್ಯಪಿ ಈತನು ತನ್ನ ಭಕ್ತರ ಪಕ್ಷವನ್ನು ವಹಿಸುವವನು. ತನ್ನ ಭಕ್ತರು ಹೇಳಿದಂತೆ ಕೇಳುವವನು. ಆದರೆ ಈತನಿಗೆ ಯಾರಿಂದಲೂ ಏನೂ ಆಗಬೇಕಿಲ್ಲ.

ಈ ಪ್ರಶ್ನೆಗೆ ರಾಜರು ಉತ್ತರಿಸುತ್ತಾರೆ– ಕೃಷ್ಣನು ಖಂಡಿತವಾಗಿಯೂ ರುಗ್ಮಿಣಿಯ ಕೈಯನ್ನು ಹಿಡಿಯುತ್ತಾನೆ. ಪತ್ರವನ್ನು ತಂದಿರುವ ಬ್ರಾಹ್ಮಣನ ಕೈಯನ್ನೇ ಕೃಷ್ಣನು ದೃಢವಾಗಿ ಹಿಡಿದಿರಬೇಕಾದರೆ ಆಕೆಯ ಕೈಯನ್ನು ಹಿಡಿಯುತ್ತಾನೆ ಎಂದು ಏನು ಹೇಳತಕ್ಕದ್ದು.

ಲೋಕದಲ್ಲಿಯೂ ಈ ನಿಯಮ ಇದೆ– ನಮಗೆ ಬೇಕಾದ ವಸ್ತುವನ್ನು ಯಾರಾದರೂ

ತಂದುಕೊಟ್ಟರೆ ಅವರಿಗೆ ನಾವು ಬಹುಮಾನವನ್ನು ಕೊಡುತ್ತೇವೆ. ಕಳಿಸಿದವರಿಗಂತೂ ಆದರವನ್ನು ಮಾಡಿಯೇ ಮಾಡುತ್ತೇವೆ.

**ಸಂದೇಶ** : ಮತ್ತೊಬ್ಬನ ವಸ್ತುವನ್ನು ಆತನ ಅಪೇಕ್ಷೆಯಂತೆ ನಾವು ದೇವರಿಗೆ ತಲುಪಿಸಿದರೂ ನಮ್ಮ ಉದ್ಧಾರವಾಗುತ್ತದೆ.

**ಉದ್ಯನ್ಮರೀಚಿಶತಭಾಸಿತಸರ್ವದೇಶಃ**
**ಪದ್ಮೋದಯಾಯ ಸ ನಿಶಾಚರಘೂಕಶೋಕಮ್ ।**
**ಪುಷ್ಣನ್ ಲಲಾಸ ದಿನರಾಡಿವ ಪೂರ್ವಸಿಂಧೋಃ**
**ಸಚ್ಚಕ್ರಮಾನಿತಗತಿರ್ಹಿ ತದೋಪಕಂಠೇ ॥ ೫೬ ॥**

ತದಾ=ಅದೇ ದಿನ; ಪದ್ಮ=ರುಗ್ಮಿಣಿಯ; ಉದಯಾಯ=ಅಭಿವೃದ್ಧಿಗೋಸ್ಕರ; ಉದ್ಯತ್=ಶೋಭಿಸುವ; ಮರೀಚಿ=ಕಿರಣಗಳ; ಶತ=ನೂರರಿಂದ; ಭಾಸಿತ=ಬೆಳಗಿಸಿದ; ಸರ್ವ=ಎಲ್ಲಾ; ದೇಶಃ=ಜಾಗವುಳ್ಳ; ನಿಶಾ=ರಾತ್ರಿಯಲ್ಲಿ; ಚರ=ಸಂಚರಿಸುವ ದೈತ್ಯರೆಂಬ; ಘೂಕ=ಗೂಬೆಗಳ; ಶೋಕಂ=ದುಃಖವನ್ನು; ಪುಷ್ಣನ್=ಹೆಚ್ಚಿಸುವ; ಸತ್=ಸಜ್ಜನರ; ಚಕ್ರ=ಸಮೂಹದಿಂದ; ಮಾನಿತ=ಆದೃತವಾದ; ಗತಿಃ=ಸಂಬಂಧವುಳ್ಳ; ಸಃ=ಕೃಷ್ಣನು; ದಿನ=ದಿನಗಳಿಗೆ; ರಾಟ್ ಇವ=ರಾಜನಂತೆ; ಪೂರ್ವಸಿಂಧೋಃ=ಪೂರ್ವಸಮುದ್ರದ; ಉಪಕಂಠೇ=ಸಮೀಪದಲ್ಲಿ; ಲಲಾಸ=ಶೋಭಿಸಿದನು.

ರುಗ್ಮಿಣಿಯ ಪತ್ರವನ್ನು ಓದಿದ ದಿನವೇ ಕೃಷ್ಣನು ಕುಂಡಿನಪುರಕ್ಕೆ ಹೊರಟನು. ಅದು ಸುಮಾರಾಗಿ ಪೂರ್ವಸಮುದ್ರದ ತೀರದಲ್ಲಿದೆ. ಆದ್ದರಿಂದಲೇ ಕೃಷ್ಣನನ್ನು ಪೂರ್ಣವಾಗಿ ಸೂರ್ಯನಿಗೆ ಹೋಲಿಸುತ್ತಾರೆ. ಸೂರ್ಯನು ಉದಿಸುವವನು ಪೂರ್ವಸಮುದ್ರದಲ್ಲಿ ಕಾಣಿಸುತ್ತಾನೆ. ತನ್ನ ಕಿರಣಗಳಿಂದ ಎಲ್ಲಾ ದಿಕ್ಕುಗಳನ್ನೂ ಬೆಳಗಿಸುತ್ತಾನೆ. ಕೃಷ್ಣನು ಯಾವಾಗಲೂ ಒಂದೇ ರೀತಿ ಇರುವವನು. ಆದರೂ ಈಗ ವಿವಾಹದ ಸಂದರ್ಭವಾದ್ದರಿಂದ ಅಜ್ಞರಿಗೆ ಕೃಷ್ಣನು ಹೆಚ್ಚು ಸೌಂದರ್ಯಾದಿ ಗುಣಗಳಿಂದ ಶೋಭಿಸುವಂತೆ ತೋರಿಸಿದನು. ಸೂರ್ಯನು ತನ್ನ ಕಿರಣಗಳಿಂದ ಎಲ್ಲರಿಗೂ ಕಾಣಿಸಿದರೆ, "ಕೃಷ್ಣನಿಗೆ ರುಗ್ಮಿಣಿಯಿಂದ ವಿವಾಹವಂತೆ" ಎಂಬ ಮಾತಿನ ಮೂಲಕ ಎಲ್ಲರಿಗೂ ಇನ್ನೂ ಹೆಚ್ಚಾಗಿ ತಿಳಿದನು.

ರಾತ್ರಿಯಲ್ಲಿ ಗೂಬೆಗಳು ಆರಾಮವಾಗಿರುತ್ತವೆ. ಯಾಕೆಂದರೆ ಆಗ ಸೂರ್ಯನು ಇರುವುದಿಲ್ಲ. ಸೂರ್ಯನು ಉದಿಸಿದನೆಂದರೆ ಅವುಗಳಿಗೆ ಬಹಳ ದುಃಖ. ಕೃಷ್ಣನು ಕುಂಡಿನಪುರಕ್ಕೆ ಬರುತ್ತಾನೆಂದರೆ ದೈತ್ಯರಿಗೆ ಬಹಳ ದುಃಖ– ಕೃಷ್ಣನ ಹೊಡೆತದ ರುಚಿಯನ್ನು ಕಂಡವರು. ಹೀಗೆ ಕೃಷ್ಣನೆಂಬ ಸೂರ್ಯನು ದೈತ್ಯರೆಂಬ ಗೂಬೆಗಳಿಗೆ ದುಃಖವನ್ನು ಕೊಡುತ್ತಾನೆ. ರುಗ್ಮಿಣಿಯು ಬಹಳ ಆನಂದ ಪಡುತ್ತಾಳೆ– ಕೃಷ್ಣನು ತನ್ನಲ್ಲಿಗೆ

ಬರುತ್ತಾನೆಂದರೆ. ಹೇಗೆಂದರೆ ಸೂರ್ಯನು ಬರುವಾಗ ಕಮಲವು ಅರಳುವಂತೆ. ತಾವರೆಗೂ ಲಕ್ಷ್ಮಿಗೂ ಇಬ್ಬರಿಗೂ, ಪದ್ಮ ಎಂಬ ಹೆಸರಿದೆ. ಚಕ್ರ ಎಂಬ ಶಬ್ದಕ್ಕೆ ಸಮೂಹ, ಚಕ್ರವಾಕ ಎಂಬ ಒಂದು ಜಾತಿಯ ಪಕ್ಷಿ ಎಂಬ ಎರಡು ಅರ್ಥ ಇದೆ. 'ಸತ್ ಚಕ್ರ' ಅಂದರೆ ಸಜ್ಜನರ ಸಮೂಹ; ಹಾಗೆಯೇ ಒಳ್ಳೆಯ ಚಕ್ರವಾಕಪಕ್ಷಿಗಳು ಎಂಬ ಅರ್ಥ ಆಗುತ್ತದೆ. ಈ ಪಕ್ಷಿಗಳು ಸೂರ್ಯೋದಯವನ್ನು ನಿರೀಕ್ಷಿಸುತ್ತವೆ. ಕುಂಡಿನಪುರದ ಸಜ್ಜನರೂ ಕೃಷ್ಣನು ಅಲ್ಲಿಗೆ ಬರಬೇಕು ಎಂದು ಆಶಿಸುತ್ತಿದ್ದರು. ಹೀಗೆ ಸೂರ್ಯನು ಪೂರ್ವಸಮುದ್ರದ ತೀರದಲ್ಲಿ ಕಾಣುವಾಗ ಉಂಟಾಗುವ ವಾತಾವರಣ ಕೃಷ್ಣನು ಕುಂಡಿನಪುರದಲ್ಲಿ ಕಾಣುವಾಗ ಉಂಟಾಯಿತು.

**ದುಷ್ಟೌಘಪೂರ್ಣಾಂ ನಗರೀಂ ಪ್ರವೇಷ್ಟುಂ**
**ಕೃಷ್ಣೋಽಹ್ಯನಿಚ್ಛನ್ ಬಹಿರೇವ ವಾಸಮ್ ।**
**ಚಕ್ರೇ ಸ್ಥಲೀ ನಾಗರಿಕೈರ್ವೃತಾ ಸಾ**
**ತದೀಕ್ಷಣೋತ್ಕೈರಜಯತ್ ಪುರೀಂ ತಾಮ್** ॥ ೫೭ ॥

ಕೃಷ್ಣಃ=ಕೃಷ್ಣನು; ದುಷ್ಟ=ಕೆಟ್ಟವರ; ಓಘ=ಸಮೂಹದಿಂದ; ಪೂರ್ಣಾಂ=ತುಂಬಿದ; ನಗರೀಂ=ಊರನ್ನು; ಪ್ರವೇಷ್ಟುಂ=ಪ್ರವೇಶಿಸಲು; ಅನಿಚ್ಛನ್=ಇಚ್ಛಿಸದೆ; ಬಹಿಃ ಏವ= ಹೊರಗೆಯೇ; ವಾಸಂ=ವಸತಿಯನ್ನು; ಚಕ್ರೇ=ಮಾಡಿದನು; ತತ್=ಕೃಷ್ಣನ; ಈಕ್ಷಣ= ದರ್ಶನದಲ್ಲಿ; ಉತ್ಕೈಃ=ಕುತೂಹಲವುಳ್ಳ; ನಾಗರಿಕೈಃ=ಊರಿನ ಜನರಿಂದ; ವೃತಾ=ಕೂಡಿದ; ಸಾ=ಆ; ಸ್ಥಲೀ=ಜಾಗವು; ತಾಂ=ಆ; ಪುರೀಂ=ಊರನ್ನು; ಅಜಯತ್=ಗೆದ್ದಿತು.

ಕೃಷ್ಣನು ಕುಂಡಿನಪುರಕ್ಕೆ ಬಂದನು. ಆ ಕುಂಡಿನಪುರದಲ್ಲಿ ಸ್ವಯಂವರಕ್ಕೆ ಬಂದಿರುವ ದೈತ್ಯರಾಜರೇ ತುಂಬಿದ್ದರು. ಅಂತಹ ಊರಿನೊಳಗೆ ಪ್ರವೇಶಿಸಲು ಕೃಷ್ಣನಿಗೆ ಮನಸ್ಸಾಗಲಿಲ್ಲ. ಬಹಳ ಜನ ಹೇಳುವುದುಂಟು: ಕೃಷ್ಣನು ಜರಾಸಂಧಾದಿಗಳಿಗೆ ಹೆದರಿ ಊರಿನೊಳಗೆ ಹೋಗಲಿಲ್ಲ; ಹೊರಗೇ ಉಳಿದನು ಎಂದು. ಅದು ತಪ್ಪು ಎಂದು ರಾಜರು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಕೃಷ್ಣನು ಬಂದಿದ್ದಾನೆ ಎಂಬ ವಿಚಾರವು ಊರಲ್ಲೆಲ್ಲಾ ತುಂಬಿತು. ಕೃಷ್ಣನನ್ನು ನೋಡುವ ಆಸೆ ಜನರಿಗೆ ಉಂಟಾಯಿತು. ತಂಡತಂಡವಾಗಿ ಕೃಷ್ಣ ಇದ್ದಲ್ಲಿಗೆ ಬಂದರು. ಕೃಷ್ಣನು ವಸತಿಮಾಡಿದ ಜಾಗದಲ್ಲಿ ಬಹಳ ಸಂಭ್ರಮ. ಯದ್ಯಪಿ ಮದುವೆ ಆಗುವ ಹುಡುಗಿಯ ಮನೆಯಲ್ಲಿ ಸಂಭ್ರಮ ಇರಬೇಕಿತ್ತು. ಆ ಮನೆ ಪೂರಾ ಸಪ್ಪೆಯಾಯಿತು. ಕೃಷ್ಣನು ಕುಂಡಿನಪುರಕ್ಕೆ ಹೊರಗಿನವನು. ಹುಡುಗಿಯು ಅದೇ ಊರಿನವಳು. ಆದ್ದರಿಂದ ಜನರೆಲ್ಲಾ 'ನಮ್ಮೂರಿನ ಹುಡುಗಿ' ಎಂದು ಅಲ್ಲೇ ಇರಬೇಕಿತ್ತು. ಆದರೆ ಅದಕ್ಕೆ ವ್ಯತಿರಿಕ್ತವಾಗಿ ಹೊರಗಿನವನಾದ ಕೃಷ್ಣನ ಬಳಿಯಲ್ಲೇ ವೈಭವ ನಡೆಯಿತು.

<u>**ಸಂದೇಶ**</u> : ಲಕ್ಷ್ಮಿಯ ಭಕ್ತರಿಗಿಂತಲೂ ನಾರಾಯಣನ ಭಕ್ತರೇ ಶ್ರೀಮಂತರು.

**ಶೌರಿಂ ತದೋಪಾಯನಪಾಣಯಸ್ತಂ**
**ಆಲೋಕ್ಯ ಸೌಂದರ್ಯಸಮುದ್ರಸಾಂದ್ರಮ್ ।**
**ವೀರಾನಪಾರ್ಥಾನಪರಾನುಪೇಕ್ಷ್ಯ**
**ಪೌರಾಃ ಸದಾರಾಃ ಕಿಲ ತೇ ಪ್ರಚಕ್ರುಃ** ॥ ೫೮ ॥

ಸದಾರಾಃ=ಪತ್ನಿಯರಿಂದ ಕೂಡಿದ; ಪೌರಾಃ=ಪುರದವರು; ಸೌಂದರ್ಯ=ಚಂದ ವೆಂಬ; ಸಮುದ್ರ=ಸಮುದ್ರದಿಂದ; ಸಾಂದ್ರಂ=ನಿಬಿಡನಾದ; ಶೌರಿಂ=ಶೂರನ ಸಂಬಂಧಿ ಯಾದ; ತಂ=ಕೃಷ್ಣನನ್ನು; ಉಪಾಯನ=ಉಡುಗೊರೆ; ಪಾಣಯಃ=ಕೈಯಲ್ಲಿ ಉಳ್ಳವರಾಗಿ; ಆಲೋಕ್ಯ=ನೋಡಿ; ಅಪರಾನ್=ಬೇರೆ; ವೀರಾನ್=ಪರಾಕ್ರಮಿಗಳನ್ನು; ಅಪಾರ್ಥಾನ್= ವ್ಯರ್ಥರನ್ನಾಗಿ; ಉಪೇಕ್ಷ್ಯ=ಕಡೆಗಣಿಸಿ; ಪ್ರಚಕ್ರುಃ=ಮಾಡಿದರು; ಕಿಲ=ತೇ.

ನಾಗರಿಕರು ಕೃಷ್ಣದರ್ಶನಕ್ಕೆ ಬರುವಾಗ ಸಂಸಾರ ಸಮೇತರಾಗಿ ಬಂದಿದ್ದರು. ಕೃಷ್ಣನಿಗೆ ಅರ್ಪಿಸಲು ಬಹಳ ಕಾಣಿಕೆಗಳನ್ನೂ ತಂದಿದ್ದರು. ಸಮುದ್ರದಲ್ಲಿ ನೀರು ಬಹಳ ಇದೆ. ನಿಬಿಡವಾಗಿದೆ. ಹಾಗೆಯೇ ಕೃಷ್ಣನಲ್ಲಿ ಸುಂದರತ್ವವೂ ಇದೆ. ಶೂರನ ಮಗ ವಸುದೇವ. ಈತನಿಗೆ ಕೃಷ್ಣನು ಮಗನಾಗಿ ಅವತರಿಸಿದವ. ಇಂತಹ ಕೃಷ್ಣನಿಗೆ ಈ ಮಂದಿ ಜಯಘೋಷವನ್ನು ಮಾಡಿದರು. ಜಯಕಾರಕ್ಕೆ ಕೃಷ್ಣನು ತಾನು ಜನರನ್ನು ಕರೆದುಕೊಂಡು ಬಂದಿರಲಿಲ್ಲ. ಅಥವಾ ಇಲ್ಲಿಯ ಜನರಲ್ಲಿ 'ನನಗೆ ಜಯಕಾರ ಹಾಕಿ' ಎಂದು ಹೇಳಲೂ ಇಲ್ಲ. ಜನರೇ ಸಹಜವಾಗಿ ಈ ಕೆಲಸವನ್ನು ಮಾಡಿದರು.

ಯದ್ಯಪಿ ಕುಂಡಿನಪುರದಲ್ಲಿ ಸಾವಿರಾರು ದುಷ್ಟರು ರಾಜರು ಸೇರಿದ್ದರು. ಇವರಿಗೆಲ್ಲಾ ಕೃಷ್ಣನು ವಿರೋಧಿಯು. ಈ ವಿರೋಧಿಗೆ ಹಾಕಿದ ಜಯಕಾರದಿಂದ ಈ ದುಷ್ಟರ ಕೋಪಕ್ಕೆ ಈ ನಾಗರಿಕರು ತುತ್ತಾದರು. ಆದರೂ ಹೆದರಲಿಲ್ಲ. ಈ ರಾಜರು ಸುಂದರರೂ ಅಲ್ಲ. ಶೌರ್ಯ ಉಳ್ಳವರೂ ಅಲ್ಲ. ಇವರಿಗೆ ಯಾಕೆ ಹೆದರಬೇಕು. ಇವರೆಲ್ಲಾ ಇಲ್ಲಿ ಸೇರಿದ್ದು ವ್ಯರ್ಥ ಎಂದು ತೋರಿಸಿಕೊಟ್ಟರು. ಇದರಿಂದಾಗಿ ಕೃಷ್ಣನು ಯಾತಕ್ಕಾಗಿ ಕುಂಡಿನಪುರಕ್ಕೆ ಬಂದಿದ್ದಾನೋ ಆ ಕೆಲಸವನ್ನು ಈ ಮಂದಿಯೇ ಸಾಧಿಸಿದರು.

**ಸಂದೇಶ** : ದೇವರ ಭಕ್ತರು ಎಣಿಸಿದ ಕಾರ್ಯಗಳು ನಿರ್ವಿಘ್ನವಾಗಿ ಜರಗುತ್ತವೆ.

**ನಾಯಂ ಸ್ಮರಃ ಶ್ಯಾಮಲಕೋಮಲಾಂಗಃ**
**ನಾಯಂ ಶಶೀ ವೀತಕಲಂಕಶಂಕಃ ।**
**ನಾಯಂ ರವಿಃ ಲೋಕದೃಗಾರ್ತಿಹಾರೀ**
**ಸೋಽಯಂ ಪುರಾಣಃ ಪುರುಷೋಽದ್ವಿತೀಯಃ** ॥ ೫೯ ॥

ಶ್ಯಾಮಲ=ನೀಲದ; ಕೋಮಲ=ಚಂದದ; ಅಂಗಃ=ದೇಹವುಳ್ಳ; ಅಯಂ=ಇವನು; ಸ್ಮರಃ=ಕಾಮನು; ನ=ಅಲ್ಲ; ವೀತ=ರಹಿತವಾದ; ಕಲಂಕ=ಕಲೆಯ; ಶಂಕಃ=ಸಂಶಯವುಳ್ಳ;

ಅಯಂ=ಇವನು; ಶಶೀ=ಚಂದ್ರನು; ನ=ಅಲ್ಲ; ಲೋಕ=ಜನರ; ದೃಕ್=ಕಣ್ಣಿನ; ಆರ್ತಿ=ದುಃಖವನ್ನು; ಹಾರೀ=ಪರಿಹರಿಸುವ; ಅಯಂ=ಇವನು; ರವಿಃ=ಸೂರ್ಯನು; ನ=ಅಲ್ಲ; ಸಃ=ಅಂತಹ; ಅಯಂ=ಇವನು; ಅದ್ವಿತೀಯಃ=ಸಾಮ್ಯ ಇಲ್ಲದ; ಪುರಾಣ= ಪ್ರಾಚೀನ; ಪುರುಷಃ=ವ್ಯಕ್ತಿಯು.

ನಾಗರಿಕರು ಸುಸಂಸ್ಕೃತರು. ಕೃಷ್ಣನ ಬಗ್ಗೆ ವಿಮರ್ಶೆಗೆ ತೊಡಗಿದ್ದಾರೆ. ತಾವು ಶಾಸ್ತ್ರಗಳನ್ನು ಓದಿದವರು. ಆದರೆ ಕೃಷ್ಣನ ಪರೋಕ್ಷಜ್ಞಾನ ಆಗಿದೆ ಹೊರತು ಅಪರೋಕ್ಷಜ್ಞಾನ ಆಗಿಲ್ಲ. ಈ ತನಕ ಕೃಷ್ಣನನ್ನು ಕಣ್ಣಾರೆ ಕಂಡಿಲ್ಲ. ವಿಮರ್ಶೆಯ ಕ್ರಮ ಈ ರೀತಿ ಇದೆ– ಈ ವ್ಯಕ್ತಿ ಮನ್ಮಥನಿರಬಹುದೋ? ಯಾಕೆಂದರೆ ದೇವತೆಗಳಲ್ಲಿ ಮನ್ಮಥನು ಬಹಳ ಚಂದ. ಈ ವ್ಯಕ್ತಿಯೂ ಬಹಳ ಚಂದ ಇದ್ದಾನೆ. ನೀರು ತುಂಬಿದ ಮೋಡದಂತೆ ಮೈಯ ಬಣ್ಣ. ಕೋಮಲವಾದ ಶರೀರ. ನಾಗರಿಕರೇ ತೀರ್ಮಾನಿಸಿದರು– ಕಾಮನು ಅನಂಗ; ಆತನ ದೇಹವನ್ನು ರುದ್ರನು ಸುಟ್ಟಿದ್ದನು; ಈತನು ದೇಹವುಳ್ಳವನು; ಆದ್ದರಿಂದ ಮನ್ಮಥನು ಅಲ್ಲ.

ಚಂದ್ರನೂ ಚಂದನೇ. ಬಹಳ ಮಂದಿ ರಾತ್ರಿಯ ಬೆಳದಿಂಗಳನ್ನು ಚೆನ್ನಾಗಿ ಆಸ್ವಾದಿಸುತ್ತಾರೆ. ಈತನು ಚಂದ್ರನಿರಲಿಕ್ಕಿಲ್ಲ. ಚಂದ್ರನಲ್ಲಿ ಮೈಯಲ್ಲಿ ಕಲೆಗಳಿವೆ. ಈತನ ಮೈಯಲ್ಲಿ ಯಾವ ಕಲೆಗಳೂ ಇಲ್ಲ. ಸೂರ್ಯನೇ ಕೃಷ್ಣನ ರೂಪದಿಂದ ಬಂದಿದ್ದಾನೆ ಎನ್ನಲೂ ಆಗುವುದಿಲ್ಲ. ಸೂರ್ಯನನ್ನು ಈ ಕಣ್ಣುಗಳಿಂದ ನೋಡಲು ಸಾಧ್ಯವೇ ಇಲ್ಲ. ನಮ್ಮ ಕಣ್ಣುಗಳನ್ನು ಆತನ ಪ್ರಖರವಾದ ಬೆಳಕು ಕುಕ್ಕುತ್ತದೆ. ಈತನನ್ನು ನೋಡಿದಾಗ ನಮ್ಮ ಕಣ್ಣಿಗೆ ತಂಪಾಗುತ್ತದೆ. ಲೋಕದಲ್ಲಿರುವ ಚಂದ ಹಾಗೂ ಪ್ರಕಾಶ ಎರಡೂ ಇರುವ ವ್ಯಕ್ತಿ ಈತ ದೇವರೇ ಆಗಿರಬೇಕು. ಈತನ ಸೌಂದರ್ಯಕ್ಕಾಗಲೀ ತೇಜಸ್ಸಿಗಾಗಲೀ ಸಾಟಿಯು ಲೋಕದಲ್ಲೇ ಇಲ್ಲ. ಆದ್ದರಿಂದ ಅನಾದಿಕಾಲದ ಯಾರ ಸೃಷ್ಟಿಗೂ ಒಳಗಾಗದ ವ್ಯಕ್ತಿ ಇವನು.

<u>**ಸಂದೇಶ**</u> : 'ಉತ್ತಮಃ ಪುರುಷಸ್ತು ಅನ್ಯಃ ಪರಮಾತ್ಮಾ ಇತಿ ಉದಾಹೃತಃ' ಎಂದು ಗೀತೆಯಲ್ಲಿ ಹೇಳಿದಂತೆ ದೇವರು ಯಾವಾಗಲೂ ಸಮಗ್ರ ಬ್ರಹ್ಮಾಂಡಕ್ಕಿಂತ ಭಿನ್ನನಾಗಿಯೇ ಇರುವವನು.

**ಶ್ರೀರೇವ ಸಾ ಭೀಷ್ಮಸುತಾ ಮನೋಜ್ಞಾ**
**ಶ್ರೀವಲ್ಲಭೋಽಯಂ ಸುಭಗಾಗ್ರ್ಯಗಣ್ಯಃ ।**
**ಏತೌ ಸಮೇತೌ ಭವತಾಮಿತೀಮೇ**
**ಧಾತಾರಮಾತ್ಮೇಷ್ಟದಮರ್ಥಯಂತೇ** ॥ ೬೦ ॥

ಮನೋಜ್ಞಾ=ಚಂದದ; ಭೀಷ್ಮ=ಭೀಷ್ಮಕನ; ಸುತಾ=ಮಗಳಾದ; ಸಾ=ರುಗ್ಮಿಣಿಯು;

ಶ್ರೀಃ ಏವ=ರಮೆಯೇ; ಸುಭಗ=ಐಶ್ವರ್ಯವುಳ್ಳವರಲ್ಲಿ; ಅಗ್ರಗಣ್ಯಃ=ಶ್ರೇಷ್ಠನಾದ; ಅಯಂ=ಈ ಕೃಷ್ಣನು; ಶ್ರೀ=ರಮೆಯ; ವಲ್ಲಭಃ=ಗಂಡನು; ಇಮೌ=ಇವರಿಬ್ಬರು; ಸಮೇತೌ=ಸೇರಿದವರು; ಭವತಾಂ=ಆಗಲಿ; ಇತಿ=ಎಂದು; ಇಮೇ=ಇವರು; ಆತ್ಮ=ತಮಗೆ; ಇಷ್ಟ=ಇಷ್ಟವನ್ನು; ದಂ= ಕೊಡುವ; ಧಾತಾರಂ=ಬ್ರಹ್ಮನನ್ನು; ಅರ್ಥಯಂತೇ=ಪ್ರಾರ್ಥಿಸುತ್ತಾರೆ.

ಆ ಊರಿನ ಜನರು ಚೆನ್ನಾಗಿ ಶಾಸ್ತ್ರಾಧ್ಯಯನ ಮಾಡಿದವರು. ಆದ್ದರಿಂದ ಕೃಷ್ಣ, ರುಗ್ಮಿಣಿಯರ ಸ್ವರೂಪವನ್ನು ತಿಳಿದವರು. ನಾರಾಯಣನ ಅನಂತಗುಣಗಳಲ್ಲಿ ರಮಾಪತಿತ್ವವೂ ಒಂದು ಎಂದು ತಿಳಿದಿದ್ದಾರೆ. ಈ ಗುಣ ಬೇರೆ ಯಾರಲ್ಲಿಯೂ ಇಲ್ಲ. ಇರಲು ಸಾಧ್ಯವೂ ಇಲ್ಲ. ಸಾಕ್ಷಾತ್ ಲಕ್ಷ್ಮಿಯೇ ರುಗ್ಮಿಣಿಯಾಗಿ ಅವತರಿಸಿದ್ದಾಳೆ. ಕೃಷ್ಣನು ಐಶ್ವರ್ಯವುಳ್ಳವರಲ್ಲಿ ಶ್ರೇಷ್ಠನು. ಇಂತಹ ಕೃಷ್ಣನು ಸಾಕ್ಷಾತ್ ನಾರಾಯಣನ ಅವತಾರನೇ ಆಗಿದ್ದಾನೆ. ಆಕೆಗೆ ಶ್ರೀ ಎಂದು ಹೆಸರು. ಈತನು ಶ್ರೀವಲ್ಲಭನಾಗಿದ್ದಾನೆ. ಈ ಹೆಸರು ದೇವರಿಗೆ ಕೂಡುವುದು ಶ್ರೀಯೊಡನೆ ಸೇರಿದಾಗ. ಆದ್ದರಿಂದ ಇವರೇ ಇಬ್ಬರು ಜೊತೆ ಸೇರಬೇಕು ವಿನಾ ರುಗ್ಮಿಣಿಯು ಬೇರೊಬ್ಬನ ಜೊತೆ ಅಲ್ಲ. ಕೃಷ್ಣನು ಬೇರೊಬ್ಬಳ ಜೊತೆ ಅಲ್ಲ ಎಂದು ಆಶಿಸಿದರು. ಅದಕ್ಕಾಗಿ ಬ್ರಹ್ಮದೇವರನ್ನು ಪ್ರಾರ್ಥಿಸಿದರು. ಬ್ರಹ್ಮನು ಸಾತ್ವಿಕರ ಸಾತ್ವಿಕ ಪ್ರಾರ್ಥನೆಯನ್ನು ಪೂರೈಸುವವನು.

<u>**ಸಂದೇಶ**</u> : ರಮಾನಾರಾಯಣರನ್ನು ಜೊತೆ ಸೇರಿಸುವ ಕೆಲಸವನ್ನು ಗುರುಗಳೇ ಮಾಡಬೇಕು. ಆದ್ದರಿಂದ ಆಧ್ಯಾತ್ಮಿಕವಾಗಿ ಗುರುಗಳಿಗೆ ಉನ್ನತಸ್ಥಾನ.

**ಗೃಹ್ಣಾತಿ ಯರ್ಹ್ಯೇಣದೃಶೀಕರಂ ನಃ**
**ಪುಣ್ಯೇನ ಸೋಽಯಂ ಪುರುಷಾಗ್ರಗಣ್ಯಃ ।**
**ಸ್ವರ್ಣೇ ತದಾ ನೀಲಮಣಿಂ ಸಮೇತಂ**
**ಮನ್ಯಾಮಹೇ ಲೋಹಮಥೋಽನ್ಯಥಾ ಚೇತ್** ॥ ೬೧ ॥

ಪುರುಷ=ಪುರುಷರಲ್ಲಿ; ಅಗ್ರಗಣ್ಯಃ=ಶ್ರೇಷ್ಠನಾದ; ನಃ=ಅಂತಹ; ಅಯಂ=ಕೃಷ್ಣನು; ನಃ=ನಮ್ಮ; ಪುಣ್ಯೇನ=ಪುಣ್ಯದಿಂದ; ಯರ್ಹಿ=ಒಂದುವೇಳೆ; ಏಣ=ಜಿಂಕೆಯಂತೆ; ದೃಶೀ=ಕಣ್ಣುಳ್ಳ ಈಕೆಯ; ಕರಂ=ಕೈಯನ್ನು; ಗೃಹ್ಣಾತಿ=ಹಿಡಿಯುತ್ತಾನೆ; ತದಾ=ಆಗ; ಸ್ವರ್ಣೇ=ಚಿನ್ನದಲ್ಲಿ; ಸಮೇತಂ=ಕೂಡಿದ; ನೀಲಮಣಿಂ=ನೀಲಮಣಿಯನ್ನು; ಮನ್ಯಾಮಹೇ=ತಿಳಿಯುತ್ತೇವೆ; ಅಥ=ಇದಕ್ಕಿಂತ; ಅನ್ಯಥಾ ಚೇತ್=ವ್ಯತ್ಯಾಸವಾದರೆ; ಲೋಹಂ=ಕಬ್ಬಿಣವನ್ನು; ಮನ್ಯಾಮಹೇ=ತಿಳಿಯುತ್ತೇವೆ.

ಊರಿನ ಜನರು ತಮ್ಮ ವಿಚಾರವನ್ನು ಮುಂದುವರಿಸುತ್ತಾರೆ– ಈ ಹುಡುಗನು ಸಮಸ್ತಚೇತನರಿಗಿಂತ ಉತ್ತಮನು. ಈಕೆಯು ಜಿಂಕೆಯ ಕಣ್ಣಿನಂತೆ ಕಣ್ಣುಗಳು ಉಳ್ಳವಳು. ಇವರಿಬ್ಬರೂ ವಿವಾಹವಾಗುವುದನ್ನು ನಾವು ನೋಡಬೇಕಾದರೆ ನಮ್ಮ ಜನ್ಮಾಂತರದ

ಪುಣ್ಯ ಬಹಳ ಇರಬೇಕು. ನಮ್ಮ ಜನ್ಮಾಂತರದ ಪುಣ್ಯ ತುಂಬಾ ಇರಲಿ. ಇವರಿಬ್ಬರು ಜೊತೆ ಸೇರಲಿ. ನಮ್ಮ ಹುಡುಗಿಯ ಮೈಬಣ್ಣ ಚಿನ್ನದ್ದು. ಈತನು ನೀಲ ಮೋಡದಂತೆ ವರ್ಣವುಳ್ಳವನು. ಇಂದ್ರನೀಲಮಣಿಯನ್ನು ಚಿನ್ನದಲ್ಲಿ ಪೋಣಿಸಿದರೆ ಎಷ್ಟು ಚಂದ ಕಾಣುತ್ತೋ ಹಾಗೆಯೇ ಇವರಿಬ್ಬರು ಜೊತೆ ಸೇರಿದಾಗ ಚಂದ ಕಾಣುತ್ತಾರೆ. ಒಂದುವೇಳೆ ಈಕೆಯನ್ನು ಕೃಷ್ಣ ವರಿಸದೆ ಶಿಶುಪಾಲಾದಿಗಳು ಯಾರಾದರೂ ವರಿಸಿದರೆ ಅದು ನಮ್ಮ ಪಾಪದ ಫಲ. ಇಷ್ಟೇ ಅಲ್ಲ, ಕಬ್ಬಿಣದ ಗುಂಡುಗಳನ್ನು ಚಿನ್ನದಲ್ಲಿ ಪೋಣಿಸಿದಂತೆ ಆಗುತ್ತದೆ. ಯಾಕೆಂದರೆ ದೈತ್ಯರಾದ ಶಿಶುಪಾಲಾದಿಗಳು ಕಪ್ಪು ಬಣ್ಣದವರು.

**ಸಂದೇಶ** : ಯೋಗ್ಯ ವ್ಯಕ್ತಿಯ ಜೊತೆ ವಿವಾಹಕ್ಕಾಗಿ ರಮಾನಾರಾಯಣರ ದಾಂಪತ್ಯವನ್ನು ಧ್ಯಾನಿಸಬೇಕು.

**ಇತ್ಥಂ ಗೃಣಂತಃ ಕಿಲ ವೃಂದಶಸ್ತಂ**
**ನತ್ವಾ ಮುಕುಂದಂ ನಯನೈಃ ಪಪುಸ್ತೇ ।**
**ಕೃಷ್ಣೋಽಪಿ ಸರ್ವಾನ್ಸದಯಾವಲೋಕೈ-**
**ರ್ಮುಗ್ಧಸ್ಮಿತೋಽರಂಜಯದಂಜಸಾ ತಾನ್ ॥ ೬೨ ॥**

ತೇ=ಆ ಜನರು; ಇತ್ಥಂ=ಈ ರೀತಿಯಾಗಿ; ತಂ=ಆ; ಮುಕುಂದಂ=ಕೃಷ್ಣನನ್ನು; ವೃಂದಶಃ=ಗುಂಪಾಗಿ; ನತ್ವಾ=ನಮಸ್ಕರಿಸಿ; ಗೃಣಂತಃ=ಹೊಗಳಿದವರಾಗಿ; ನಯನೈಃ= ಕಣ್ಣುಗಳಿಂದ; ಪಪುಃ=ಕುಡಿದರು; ಕೃಷ್ಣಃ ಅಪಿ=ಕೃಷ್ಣನಾದರೂ; ಮುಗ್ಧಂ=ಮುಗ್ಧವಾದ; ಸ್ಮಿತಃ=ನಗುವುಳ್ಳವನಾಗಿ; ಸದಯ=ದಯೆಯಿಂದ ಕೂಡಿದ; ಅವಲೋಕೈಃ=ನೋಟ ಗಳಿಂದ; ತಾನ್=ಅವರನ್ನು; ಸರ್ವಾನ್=ಎಲ್ಲರನ್ನೂ; ಅಂಜಸಾ=ಚೆನ್ನಾಗಿ; ಅರಂಜಯತ್= ಸಂತೋಷಿಸಿದನು.

ಕೃಷ್ಣನು ಇರುವಲ್ಲಿ ಬಹಳ ಜನ ಸೇರಿದ್ದರು. ಅವರೆಲ್ಲಾ ಒಟ್ಟಾಗಿ ಕೃಷ್ಣನನ್ನು ಹೊಗಳುವುದು ನಮಸ್ಕರಿಸುವುದನ್ನು ಪುನಃ ಪುನಃ ಮಾಡಿದರು. ಕೃಷ್ಣನ ಸೌಂದರ್ಯವನ್ನು ತಮ್ಮ ಕಣ್ಣುಗಳಿಂದ ಚೆನ್ನಾಗಿ ಆಸ್ವಾದಿಸಿದರು. ಇದಕ್ಕೆ ಪ್ರತಿಯಾಗಿ ಕೃಷ್ಣನು ಕಪಟರಹಿತವಾದ ಮಂದಹಾಸವನ್ನು ಬೀರಿದನು. ದಯೆಯಿಂದ ತುಂಬಿದ ಕಣ್ಣುಗಳಿಂದ ಜನರನ್ನು ನೋಡಿದನು. ಇದರಿಂದ ಜನರು ತುಂಬಾ ನೆಮ್ಮದಿ ಪಟ್ಟರು.

**ಸಂದೇಶ** : ದೇವರ ದಯೆಗೆ ತಿಳಿದು ಮಾಡುವ ಸ್ತೋತ್ರ ಒಂದೇ ದಾರಿ.

**ಚಲತ್ಪತಾಕೋಜ್ಜ್ವಲಚಾಮರೌಘಾಂ**
**ಪರಿಸ್ಫುರಚ್ಛತ್ರಸಹಸ್ರಶೋಭಾಮ್ ।**
**ವಿಚಿತ್ರತೂರ್ಯಧ್ವನಿಪೂರಿತಾಶಾ-**
**ಮಥೋವಿತೇನುಃ ಕುಲದೇವಯಾತ್ರಾಮ್ ॥ ೬೩ ॥**

ಅಥೋ=ಅನಂತರ; ಚಲತ್=ಅಲುಗಾಡುವ; ಪತಾಕಾ=ಪತಾಕೆಗಳ; ಉಜ್ಜ್ವಲ=ಬೆಳಗುವ; ಚಾಮರ=ಚಾಮರಗಳ; ಓಘಾಂ=ಸಮೂಹವುಳ್ಳ; ಪರಿಸ್ಫುರತ್=ಶೋಭಿಸುವ; ಛತ್ರ=ಕೊಡೆಗಳ; ಸಹಸ್ರ=ಸಾವಿರದಿಂದ; ಶೋಭಾಂ=ಬೆಳಗುವ; ವಿಚಿತ್ರ=ನಾನಾ ರೀತಿಯ; ತೂರ್ಯ=ವಾದ್ಯವಿಶೇಷಗಳ; ಧ್ವನಿ=ಧನಿಗಳಿಂದ; ಪೂರಿತ=ತುಂಬಿದ; ಆಶಾಂ=ದಿಕ್ಕುಗಳುಳ್ಳ; ಕುಲ=ವಂಶದ; ದೇವ=ದೇವರ; ಯಾತ್ರಾಂ=ಯಾತ್ರೆಯನ್ನು; ವಿತೇನುಃ=ಮಾಡಿದರು.

ಸ್ವಯಂವರದ ದಿನ ಮನೆದೇವರ ದರ್ಶನ ಮಾಡುವ ಕ್ರಮ ಇದೆ. ಅದರಂತೆ ಊರಿನ ಜನ ರುಗ್ಮಿಣಿಯನ್ನು ಮುಂದಿಟ್ಟುಕೊಂಡು ಹೊರಟರು. ಬಹಳ ಸಂಭ್ರಮದ ಮೆರವಣಿಗೆ. ಹೆಚ್ಚಿನವರ ಕೈಯಲ್ಲಿ ಧ್ವಜಗಳೂ, ಚಾಮರಗಳೂ ಇದ್ದವು. ಗಾಳಿಯು ನಿಧಾನವಾಗಿ ಬೀಸುತ್ತಿದೆ. ಆದ್ದರಿಂದ ಆ ಧ್ವಜಗಳು ಪಟಪಟ ಎಂದು ಸದ್ದುಮಾಡುತ್ತಾ ಹಾರಾಡುತ್ತಿವೆ. ಚಾಮರಗಳನ್ನು ಕೈಯಲ್ಲಿ ಹಿಡಿದುಕೊಂಡದ್ದು ಮಾತ್ರ ಅಲ್ಲ, ಅದರಿಂದ ರುಗ್ಮಿಣಿಗೆ ಗಾಳಿ ಹಾಕುತ್ತಿದ್ದರು. ಇನ್ನು ಕೆಲವರ ಕೈಯಲ್ಲಿ ಛತ್ರಗಳಿದ್ದವು. ಇವುಗಳು ಮೆರವಣಿಗೆಗೆ ಮೆರಗನ್ನು ಕೊಟ್ಟವು. ಅನಂತರ ತರತರದ ವಾದ್ಯಗಳು. ವಾದ್ಯಗಳು ಬೇರೆಬೇರೆಯಾಗಿದ್ದರೂ ಒಂದೇ ಮಟ್ಟದ ಸ್ವರವುಳ್ಳವುಗಳಾಗಿದ್ದವು. ವಾದ್ಯಗಳ ಈ ಧ್ವನಿಯು ಬಹಳ ದೂರದವರೆಗೆ ಕೇಳುತ್ತಿತ್ತು.

**ಸಂದೇಶ** : ದೇವರ ದರ್ಶನಕ್ಕಿಂತ ಪೂರ್ವದಲ್ಲಿ ಅನ್ಯದೇವತೆಗಳ ಅನುಗ್ರಹ ಅಗತ್ಯ.

**ಸ್ವಜನಕಗೃಹದೇವಂ ಪೌತ್ರಮಾರಾಧ್ಯ ಭೈಷ್ಮೀ**
**ನಿಜಮಥ ಗೃಹದೇವಂ ಮಾಧವಂ ದ್ರಷ್ಟುಕಾಮಾ ।**
**ಅಪಿ ಪುರಮಭಿಯಾಂತೀ ಸಾ ರಥಂ ನಾರುರೋಹ**
**ಪ್ರಿಯಚರಣಸಕಾಶಂ ತೇವನೇನ ವ್ರಜಂತೀ ॥ ೬೪ ॥**

ಭೈಷ್ಮೀ=ರುಗ್ಮಿಣಿಯು; ಸ್ವ=ತನ್ನ; ಜನಕ=ತಂದೆಯ; ಗೃಹ=ಮನೆಯ; ದೇವಂ=ದೇವನಾದ; ಪೌತ್ರಂ=ಮೊಮ್ಮಗನನ್ನು; ಆರಾಧ್ಯ=ಪೂಜಿಸಿ; ಅಥ=ಅನಂತರ; ನಿಜಂ=ತನ್ನ; ಗೃಹ=ಮನೆಯ; ದೇವಂ=ದೇವನಾದ; ಮಾಧವಂ=ಕೃಷ್ಣನನ್ನು; ದ್ರಷ್ಟು=ನೋಡಲು; ಕಾಮಾ=ಇಚ್ಛೆವುಳ್ಳವಳಾಗಿ; ಪುರಂ=ಅರಮನೆಯನ್ನು; ಅಭಿಯಾಂತೀ ಅಪಿ=ಹೊರಟವಳಾದರೂ; ಸಾ =ಅವಳು; ಪ್ರಿಯ=ಪ್ರಿಯನ; ಚರಣ=ಪಾದಗಳ; ಸಕಾಶಂ=ಸಮೀಪವನ್ನು; ತೇವನೇನ= ನಡೆಯುವಿಕೆಯಿಂದ; ವ್ರಜಂತೀ=ಹೋಗುವವಳಾಗಿ; ರಥಂ=ರಥವನ್ನು; ನ ಆರುರೋಹ= ಏರಲಿಲ್ಲ.

ಭೀಷ್ಮಕರಾಜನ ಕುಲದೇವರು ಪಾರ್ವತೀಪತಿ. ರುಗ್ಮಿಣಿಗೆ ವಿವಾಹವಾಗುವ ತನಕ ಆಕೆಯ ಗೋತ್ರವೂ ಭೀಷ್ಮಕನದ್ದೇ ಆಗಿರುತ್ತದೆ. ವಿವಾಹದನಂತರ ಆಕೆಯ ಗೋತ್ರವು

ಬೇರೆಯಾಗುತ್ತದೆ. ಆಗ ರುದ್ರದೇವರು ಆಕೆಯ ತಂದೆಯ ಕುಲದವರಾಗಿ ಉಳಿಯುತ್ತಾನೆ ಹೊರತು ರುಗ್ಮಿಣಿಗೆ ಅಲ್ಲ. ಈಕೆಯ ಮನೆಯ ದೇವರು ಕೃಷ್ಣ. ತಂದೆಯಿಂದ ಕೂಡಿದ ಈಕೆಯು, ಪಾರ್ವತೀಪತಿಯನ್ನು ಆರಾಧಿಸಿ ಕೃಷ್ಣನನ್ನು ನೋಡುವ ತುರಾತುರಿಯಲ್ಲಿ ಇದ್ದಳು. ರುದ್ರಾಲಯಕ್ಕೆ ರಥದಿಂದ ಸಾಗಿಬಂದಳು. ದೇವರ ದರ್ಶನದನಂತರ ತಿರುಗಿ ಅರಮನೆಯ ಕಡೆಗೆ ಹೊರಡಬೇಕು. ಭೀಷ್ಮಕನು ರುಗ್ಮಿಣಿಗೆ ಮಗಳೇ, ದೇವರದರ್ಶನ ಆಯಿತು ತಾನೇ? ಇನ್ನು ರಥ ಹತ್ತು. ಅರಮನೆಯ ಕಡೆ ಹೋಗೋಣ ಎಂದನು. ಇವಳ ತಲೆಯಲ್ಲಿ ಕೃಷ್ಣನೇ ತುಂಬಿದ್ದರಿಂದ ಭೀಷ್ಮಕನ ಮಾತಿಗೆ ಇವಳ ತಲೆಯಲ್ಲಿ ಜಾಗ ಇರಲಿಲ್ಲ. ಆದ್ದರಿಂದ ದೇವರದರ್ಶನದ ಅನಂತರ ಈಕೆಯು ರಥವನ್ನು ಹತ್ತಲಿಲ್ಲ. ಕೃಷ್ಣನಿದ್ದಲ್ಲಿಗೆ ನಡೆದುಕೊಂಡೇ ಹೊರಟಳು.

**ಸಂದೇಶ** : ಯಾತ್ರೆಮಾಡುವ ಸಂದರ್ಭದಲ್ಲಿ ಗರ್ಭಗುಡಿಯ ಬಾಗಿಲಿನ ತನಕ ಗಾಡಿಯಲ್ಲೇ ಹೋಗುವುದಲ್ಲ. ಗಾಡಿಯನ್ನು ದೂರದಲ್ಲಿ ನಿಲ್ಲಿಸಿ ಸ್ವಲ್ಪ ದೂರವಾದರೂ ನಡೆದುಕೊಂಡು ಹೋಗಬೇಕು.

ಅಲಸವಿಲಸದಕ್ಷಿಸ್ತಂಭಿತಾನ್ಯಾಕ್ಷವೃತ್ತಿಃ
ಜಲಜಕುಲಜಗಂಧಸ್ಪರ್ಧಿಸೌರಭ್ಯಸಾಂದ್ರಾ ।
ವದನಮದನಶಸ್ತ್ರಾಗಣ್ಯಲಾವಣ್ಯಚಿತ್ರಾ
ಗಜಗತಿರಜತಾತಂ ಭೀಷ್ಮಪುತ್ರ್ಯೈಕ್ಷತೈನಮ್ ॥ ೬೫ ॥

ಅಲಸ=ಹಿಂದಿರುಗಿದ; ವಿಲಸತ್=ಪುನಃ ಮುಂದುವರಿದ; ಅಕ್ಷಿ=ಕಣ್ಣಿಂದ; ಸ್ತಂಭಿತ=ಸ್ತಬ್ಧವಾದ; ಅನ್ಯ=ಬೇರೆಯವರ; ಅಕ್ಷ=ಕಣ್ಣುಗಳ; ವೃತ್ತಿಃ=ವ್ಯಾಪಾರವುಳ್ಳ; ಜಲಜ=ತಾವರೆಗಳ; ಕುಲ=ಸಮೂಹಗಳಲ್ಲಿ; ಜ=ಹುಟ್ಟಿದ; ಗಂಧ=ಗಂಧದಿಂದ; ಸ್ಪರ್ಧಿ=ಸ್ಪರ್ಧೆವುಳ್ಳ; ಸೌರಭ್ಯ=ಪರಿಮಳದಿಂದ; ಸಾಂದ್ರಾ=ನಿಬಿಡವಾದ; ವದನ=ಮುಖವೆಂಬ; ಮದನ=ಮನ್ಮಥನ; ಶಸ್ತ್ರಾ=ಆಯುಧವುಳ್ಳ; ಅಗಣ್ಯ=ಬಹಳ; ಲಾವಣ್ಯ=ಸೌಂದರ್ಯದಿಂದ; ಚಿತ್ರಾ=ಆಶ್ಚರ್ಯಳಾದ; ಗಜ=ಆನೆಯಂತೆ; ಗತಿಃ=ನಡಿಗೆಯುಳ್ಳ; ಭೀಷ್ಮ=ಭೀಷ್ಮಕನ; ಪುತ್ರೀ=ಮಗಳು; ಅಜ=ಬ್ರಹ್ಮನ; ತಾತಂ=ತಂದೆಯನ್ನು; ಏನಂ=ಕೃಷ್ಣನನ್ನು; ಐಕ್ಷತ=ನೋಡಿದಳು.

ರುಗ್ಮಿಣಿಯು ಕೃಷ್ಣನನ್ನು ಅರಸುತ್ತಾ ಹೊರಟಿದ್ದಾಳೆ. ದಾರಿಯಲ್ಲಿ ಬಹಳ ಮಂದಿ ಇಕ್ಕೆಲಗಳಲ್ಲಿ ನಿಂತಿದ್ದರು. ರುಗ್ಮಿಣಿಯು ತನ್ನ ಕಣ್ಣಿನಿಂದ ಅವರನ್ನೊಮ್ಮೆ ನೋಡಿದಳು. ನಾಚಿಕೆಯಾಯಿತು. ಕೂಡಲೇ ದೃಷ್ಟಿಯನ್ನು ಬದಲಿಸಿದಳು. ಈಕೆಗೆ ಈ ಜನರನ್ನು ನೋಡುವ ಉದ್ದೇಶ ಇರಲಿಲ್ಲ. ಇವರ ಮಧ್ಯದಲ್ಲಿ ಕೃಷ್ಣ ಎಲ್ಲಿದ್ದಾನೆ ಎಂದು ಹುಡುಕುವ ತವಕ. ಪುನಃ ತನ್ನ ದೃಷ್ಟಿಯನ್ನು ಜನರತ್ತ ಹಾಯಿಸಿದಳು, ಕೃಷ್ಣನನ್ನು ಕಾಣುವ ಲವಲವಿಕೆ

ಯಿಂದ. ಇವಳು ಜನರತ್ತ ನೋಡಿದಾಗ ಜನರು ತಮ್ಮ ಕಣ್ಣುಗಳಿಂದ ಆಕೆಯನ್ನು ಕಂಡರು. ಆಕೆಯ ನೋಟಕ್ಕೆ ಇವರೆಲ್ಲಾ ಪರವಶರಾದರು. ಸ್ತಬ್ಧರಾದರು. ಚಿತ್ರದಲ್ಲಿ ಬರೆದ ವ್ಯಕ್ತಿಗಳಂತೆ ನಿಶ್ಚಲರಾಗಿ ನಿಂತರು. ಈಕೆಯ ಮೈಯು ಬಹಳವಾಗಿ ಪರಿಮಳವನ್ನು ಬೀರುತ್ತಿತ್ತು. ಎಣಿಸಲು ಸಾಧ್ಯವಿಲ್ಲದಷ್ಟು ಕಮಲಗಳನ್ನು ಸೇರಿಸೋಣ. ಆಗ ಅವುಗಳಿಂದ ಹೊರಡುವ ಗಂಧವು ಇವಳ ಮೈಯ ಗಂಧದ ಮುಂದೆ ತಿರಸ್ಕೃತವಾಗುತ್ತಿತ್ತು.

ಇವಳ ಮುಖವು ಬಹಳ ಚಂದ. ಇವಳ ಮುಖವನ್ನು ಕಂಡವರೆಲ್ಲಾ ಬಹಳವಾಗಿ ಕಾಮನಿಂದ ಪೀಡಿತರಾಗುತ್ತಿದ್ದರು. ಯಾವುದರಿಂದ ಯಾರಿಗೆ ಬಹಳ ಪೀಡೆ ಆಗುತ್ತದೋ ಅವರಿಗೆ ಅದು ಶಸ್ತ್ರ. ಕಾಮುಕರಿಗೆ ಇವಳ ಮುಖದಿಂದಾಗಿ ಬಹಳ ಪೀಡೆ ಆಗುತ್ತಿತ್ತು. ಆದ್ದರಿಂದ ಇವಳ ಮುಖವೇ ಒಂದು ಆಯುಧ. ನಾರಿಯರ ಚಂದದ ಮುಖದರ್ಶನದಿಂದ ಪೀಡೆ ಆಗುವಂತೆ ಮಾಡುವವನು ಮನ್ಮಥನು. ಸದ್ಯ ಈ ಮನ್ಮಥನು ಇವಳ ಮುಖವನ್ನೇ ಆಯುಧವನ್ನಾಗಿ ಮಾಡಿ ಕಾಮುಕರನ್ನು ಚೆನ್ನಾಗಿ ಪೀಡಿಸಿದನು. ಇವಳು ಅಷ್ಟು ಚಂದ ಎಂದು ಅಭಿಪ್ರಾಯ. ನಾರೀ ಸಹಜವಾದ ಹಾವಭಾವಗಳಿಂದ ಕೂಡಿದವಳು. ಆದ್ದರಿಂದಲೇ ಇತರ ನಾರಿಯರಿಗಿಂತ ವಿಚಿತ್ರವಾಗಿ ತೋರುತ್ತಿದ್ದಳು. ಬಹಳ ವೇಗವಾಗಿ ನಡೆದರೆ ಆ ಜನಸಂಮರ್ದದಲ್ಲಿರುವ ಕೃಷ್ಣನ ದರ್ಶನ ಅಶಕ್ಯ ಎಂದು ನಿಧಾನವಾಗಿ ಆನೆಯಂತೆ ನಡೆಯುತ್ತಾ ಮುಂದುವರಿದಳು. ಕೃಷ್ಣನನ್ನು ಕಂಡಳು. ಇಡೀ ಬ್ರಹ್ಮಾಂಡದಲ್ಲಿ ಹಿರಿಯವನು ಬ್ರಹ್ಮನು. ಸುಮಾರು ಐವತ್ತು ದಶಕಗಳನ್ನು ಕಂಡವನು. ಅವನಿಗೂ ಈ ಕೃಷ್ಣನು ತಂದೆಯು. ಇಂತಹವನಲ್ಲಿಯೂ ರುಗ್ಮಿಣಿಯನ್ನು ತನ್ನತ್ತ ಸೆಳೆಯುವ ಸೌಂದರ್ಯ ತುಂಬಿತ್ತು.

> ಕೃಷ್ಣೇನ ನೇಯಾ ಜನನೀ ಮಮೇಯ-
> ಮಿತ್ಯುತ್ಸುಕೋಽಸೌ ಸ್ಮರ ಏವ ನೂನಮ್ ।
> ಮೂರ್ಛಾವಶಾನಾತ್ಮಶರೈರಕಾರ್ಷೀತ್
> ತದ್ದೃಷ್ಟಿಜನ್ಮಾ ಸಕಲಾನ್ ನೃಪಾಲಾನ್ ॥ ೬೬ ॥

ಮಮ=ನನ್ನ; ಇಯಂ=ಈ; ಜನನೀ=ತಾಯಿಯು; ಕೃಷ್ಣೇನ=ಕೃಷ್ಣನಿಂದ; ನೇಯಾ= ಒಯ್ಯಲ್ಪಡಬೇಕು; ಇತಿ=ಎಂದು; ಉತ್ಸುಕಃ=ಉತ್ಸಾಹವುಳ್ಳ; ಅಸೌ=ಈ; ತತ್=ಅವಳ; ದೃಷ್ಟಿ=ದರ್ಶನದಿಂದ; ಜನ್ಮಾ=ಹುಟ್ಟಿದ; ಸ್ಮರ ಏವ=ಕಾಮನೇ; ಸಕಲಾನ್=ಎಲ್ಲಾ; ನೃ= ಜನರ; ಪಾಲಾನ್=ರಕ್ಷಕರನ್ನು; ಮೂರ್ಛಾ=ಮೂರ್ಛೆಯ; ವಶಾನ್=ಅಧೀನರನ್ನಾಗಿ; ಆತ್ಮ= ತನ್ನ; ಶರೈಃ=ಬಾಣಗಳಿಂದ; ಅಕಾರ್ಷೀತ್=ಮಾಡಿದನು.

ರುಗ್ಮಿಣಿಯ ಸೌಂದರ್ಯವನ್ನು ಕಂಡ ರಾಜರುಗಳು ಕಾಮಪೀಡಿತರಾಗಿ ಎಚ್ಚರ ತಪ್ಪಿ ಬಿದ್ದರು. ಅಷ್ಟು ಸೌಂದರ್ಯದ ಮಡು ಈ ರುಗ್ಮಿಣಿ ಎಂಬುದು ಈ ಶ್ಲೋಕದ ತಾತ್ಪರ್ಯ. ಇದನ್ನು ರಾಜರು ತನ್ನದೇ ಆದ ಶೈಲಿಯಲ್ಲಿ ವರ್ಣಿಸುತ್ತಾರೆ- ಈ

ರಾಜರುಗಳನ್ನು ಮೂರ್ಛೆಗೊಳಿಸಿದವನು ಮನ್ಮಥನು. ಈತನು ರಾಜರುಗಳ ರುಗ್ಮಿಣಿ ದರ್ಶನದಿಂದ ಹುಟ್ಟಿದವನು. ಒಂದು ರೀತಿಯಲ್ಲಿ ದುಷ್ಟರಾಜನು ರುಗ್ಮಿಣಿಯ ಪುತ್ರನಂತೆ ಆದನು. ಇದು ಮನ್ಮಥನಿಗೆ ಇಷ್ಟವಿಲ್ಲ. ತಾನು ಕೃಷ್ಣರುಗ್ಮಿಣಿಯರ ಪುತ್ರನಾಗಬೇಕೆಂದು ಆತನ ಇಚ್ಛೆ. ಅದಕ್ಕಾಗಿ ತನ್ನ ಬಾಣಗಳಿಂದ ರಾಜರುಗಳನ್ನು ಮೂರ್ಛೆಗೊಳಿಸಿದ. ಆಗ ಇವಳನ್ನು ಕೃಷ್ಣನೇ ಒಯ್ಯುತ್ತಾನೆ. ಕೃಷ್ಣ-ರುಗ್ಮಿಣಿಯರ ಮಗನಾಗುತ್ತಾನೆ. ಆತನ ಇಚ್ಛೆಯು ಪೂರ್ಣವಾಗುತ್ತದೆ.

**ತದನು ಮದನಮಂದೀಭೂತಚಿತ್ತೇಷು ಭೂಪೇ-**
**ಷ್ವವಿದಿತಗತಿರುದ್ಯದ್ರೋಮರಾಜಿಂ ಪ್ರಹರ್ಷಾತ್ ।**
**ವಿಕಸಿತನಯನಾಬ್ಜೋದ್ಭೂತಹರ್ಷಾಂಬುಧಾರಾಂ**
**ನಿಜರಥಮಧಿರೋಪ್ಯ ಸ್ವಾಂ ಪ್ರಪೇದೇ ಸ್ವತಂತ್ರಃ ॥ ೬೭ ॥**

ತದನು=ಅನಂತರ; ಭೂಪೇಷು=ರಾಜರುಗಳು; ಮದನ=ಕಾಮನಿಂದ; ಮಂದೀಭೂತ=ತಣ್ಣಗಾದ; ಚಿತ್ತೇಷು=ಮನ ಉಳ್ಳವರಾಗುತ್ತಿರಲು; ಸ್ವತಂತ್ರಃ= ಸ್ವತಂತ್ರನಾದ ಕೃಷ್ಣನು. ಅವಿದಿತ=ತಿಳಿಯದಿರುವ; ಗತಿಃ=ಗಮನ ಉಳ್ಳವನಾಗಿ; ಪ್ರಹರ್ಷಾತ್=ಆನಂದದಿಂದ; ಉದ್ಯತ್=ನೆಟ್ಟಗಾದ; ರೋಮ=ರೋಮಗಳ; ರಾಜಿಂ= ಸಮೂಹವುಳ್ಳ; ವಿಕಸಿತ=ಅರಳಿದ; ನಯನ=ಕಣ್ಣುಗಳೆಂಬ; ಅಬ್ಜ=ಕಮಲಗಳಿಂದ; ಉದ್ಭೂತ=ಹೊರಟ; ಹರ್ಷ=ನೆಮ್ಮದಿಯ; ಅಂಬು=ನೀರಿನ; ಧಾರಾಂ=ಪ್ರವಾಹವುಳ್ಳ; ಸ್ವಾಂ= ತನ್ನವಳನ್ನು; ನಿಜ=ತನ್ನ; ರಥಂ=ರಥವನ್ನು; ಅಧಿರೋಪ್ಯ=ಏರಿಸಿ; ಪ್ರಪೇದೇ= ಹೊರಟನು.

ಎಲ್ಲಾ ರಾಜರುಗಳು ಮೂರ್ಛೆಗೊಂಡರು. ಅವರ ಮನಸ್ಸು ಸ್ತಬ್ಧವಾಯಿತು. ಏನು ಮಾಡಬೇಕೆಂಬುದೇ ತೋಚಲಿಲ್ಲ. ಎಣ್ಣೆ ಕಮ್ಮಿಯಾದಾಗ ದೀಪವು ಮಂದವಾಗುವಂತೆ ಇವರ ಮನಸ್ಸು ಮಂದವಾಯಿತು. ಕೃಷ್ಣನು ರುಗ್ಮಿಣಿಯ ಸಮೀಪ ಬಂದನು. ಇದು ಯಾವ ರಾಜನಿಗೂ ತಿಳಿಯಲಿಲ್ಲ. ತಿಳಿದರೂ ಕೃಷ್ಣನಿಗೆ ಏನೂ ಬಾಧಕವಿಲ್ಲ. ಇವರು ಎಚ್ಚರದಲ್ಲಿ ಇರುವಂತೆಯೇ ಈಕೆಯನ್ನು ಒಯ್ಯುವ ಸ್ವಾತಂತ್ರ್ಯವುಳ್ಳವನು. ಯಾಕೆಂದರೆ ಈಕೆಯು ಈತನಿಗೇ ಸೇರಿದವಳು. ಕೃಷ್ಣನನ್ನು ನೋಡಿದ ತತ್ಕ್ಷಣ ಈಕೆಯ ರೋಮಗಳು ನೆಟ್ಟಗಾದವು. ಕಣ್ಣುಗಳು ಕಮಲದಂತೆ ಅರಳಿದವು. ಆ ಕಣ್ಣುಗಳಿಂದ ಧಾರಾಕಾರವಾಗಿ ನೀರು ಇಳಿಯಿತು, ಆನಂದದಿಂದ. ಇಂತಹ ಹುಡುಗಿಯನ್ನು ಕೃಷ್ಣನು ತನ್ನ ರಥಕ್ಕೆ ಏರಿಸಿದನು. ಸೀದಾ ತನ್ನ ಊರಿನ ಕಡೆಗೆ ನಡೆದನು.

**ಸಂದೇಶ** : ಸಾತ್ವಿಕ ಕೆಲಸಗಳ ಮೇಲೆ ತಾಮಸರ ದೃಷ್ಟಿ ಬೀಳಬಾರದು.

**ಪುನರ್ವಿವಾಹೇನ ಕಿಮಿಂದಿರಾಯಾಃ**
**ಇತೀವ ಲಕ್ಷ್ಮೀರಮಣಃ ಸ ಕೃಷ್ಣಃ ।**

**ಅಪಾಂಗದೂತೀವಿನಿವೇದಿತಾತ್ಮ–**
**ಮನೋನುರಾಗಾಮತನೋತ್ಸುಯೋಗಾಮ್** ॥ ೬೮ ॥

ಲಕ್ಷ್ಮೀ=ರಮೆಯ; ರಮಣಃ=ಪತಿಯಾದ; ಸಃ=ಆ; ಕೃಷ್ಣಃ=ಕೃಷ್ಣನು; ಇಂದಿರಾಯಾಃ= ರುಗ್ಮಿಣಿಯ; ಪುನಃ=ಮತ್ತೊಮ್ಮೆ; ವಿವಾಹೇನ=ಮದುವೆಯಿಂದ; ಕಿಂ=ಏನು?; ಇತಿ ಇವ=ಎಂಬಂತೆ; ಅಪಾಂಗ=ಕಡೆಗಣ್ಣೆಂಬ; ದೂತೀ=ಸೇವಕಿಯಿಂದ; ವಿನಿವೇದಿತ=ತಿಳಿಸಲ್ಪಟ್ಟ; ಆತ್ಮ=ತನ್ನ; ಮನ=ಮನದ; ಅನುರಾಗಾಂ=ಪ್ರೀತಿವುಳ್ಳ ರುಗ್ಮಿಣಿಯನ್ನು; ಸುಯೋಗಾಂ=ಸಂಬದ್ಧಳನ್ನಾಗಿ; ಆತನೋತ್=ಮಾಡಿದನು.

ಕೃಷ್ಣನು ಈಕೆಯನ್ನು ಈ ರೀತಿ ಯಾಕೆ ಕರೆದುಕೊಂಡು ಹೋದನು? ಶಾಸ್ತ್ರೀಯವಾಗಿ ವಿವಾಹದ ಕ್ರಮದಲ್ಲೇ ಕರೆದುಕೊಂಡು ಹೋಗಬಹುದಿತ್ತಲ್ಲಾ ಎಂಬ ಶಂಕೆಗೆ ರಾಜರು ಈ ರೀತಿ ಉತ್ತರಿಸುತ್ತಾರೆ– ಕೃಷ್ಣನು ಅನಾದಿಕಾಲದಿಂದ ಈಕೆಯ ಪತಿ. ಇವರಿಗೆ ವಿವಾಹವಾಗಿ ಅನಂತಕಾಲವು ಸಂದಿದೆ. ಜೀವನದಲ್ಲಿ ಹೆಣ್ಣಿಗೆ ವಿವಾಹವು ಒಮ್ಮೆ. ಒಮ್ಮೆ ವಿವಾಹವಾದ ಹುಡುಗಿಯು ತಾಯಿಮನೆಗೆ ಹೋದರೆ ಅಲ್ಲಿಂದ ಗಂಡನು ಅವಳನ್ನು ಕರೆತರುವಾಗ ವಿವಾಹದ ರೂಪದಲ್ಲಿ ಕರೆದುತರುವುದಿಲ್ಲ ತಾನೆ? ರುಗ್ಮಿಣಿಯು ಈಗ ತಾಯಿಮನೆಗೆ ಬಂದವಳಂತೆ ಇದ್ದಾಳೆ. ಇವಳನ್ನು ಇಲ್ಲಿಂದ ಕರೆದುಕೊಂಡು ಹೋಗಲು ತನ್ನ ಗಂಡನಿಗೆ ದೂತಿಯನ್ನು ಕಳಿಸಿದ್ದಾಳೆ. ಆ ದೂತಿಯೇ ಕಡೆಗಣ್ಣು. ಲೋಕದಲ್ಲಿಯೂ ಈ ನಿಯಮ ಇದೆ. ಪತ್ನಿಯು ತಾಯಿಮನೆಯಿಂದ ಗಂಡನ ಮನೆಗೆ ಹೋಗುವ ಕಾಲ ಬಂದಾಗ ಆಕೆಯು ಸೇವಕಿಯ ಮೂಲಕ ಗಂಡನನ್ನು ತನ್ನ ತವರುಮನೆಗೆ ಕರೆಸುವಳು. ಪತಿಯು ಬಂದು ಆಕೆಯನ್ನು ಕರೆದುಕೊಂಡು ಹೋಗುವನು. ಈ ರುಗ್ಮಿಣಿಯು ತನ್ನ ಕಡೆಗಣ್ಣಿನಿಂದ ಕೃಷ್ಣನನ್ನು ನೋಡಿದಳು. ಕೃಷ್ಣನು ಆಕೆಯ ಮನದ ಇಂಗಿತವನ್ನು ಅರಿತನು. ಆಕೆಗೆ ತನ್ನಲ್ಲಿ ಅನುರಾಗ ಇದೆ ಎಂದು ತಿಳಿದನು. ಆಕೆಯನ್ನು ತನ್ನೆಡೆಗೆ ಕರೆದುಕೊಂಡನು. ಇಂತಹ ಸಂದರ್ಭದಲ್ಲಿ ಪುನಃ ವಿವಾಹದ ಪ್ರಸಂಗ ಏನು ಎಂದು ಕೃಷ್ಣನು ಆಲೋಚಿಸಿ ನೇರವಾಗಿ ಅವಳಿದ್ದಲ್ಲಿಗೆ ಬಂದನು. ಕರೆದುಕೊಂಡು ಹೋದನು.

**ಸಂದೇಶ** : ನಮ್ಮ ಸಾನುರಾಗದೃಷ್ಟಿ ದೇವರ ಮೇಲೆ ಬಿದ್ದಾಗ ದೇವರು ನಮ್ಮನ್ನು ನಿಜವಾಗಿ ಸ್ವೀಕರಿಸುತ್ತಾನೆ.

**ಕೃಷ್ಣಾಸ್ಯೇಂದುಸಮೀಪಲಗ್ನಮುದಿತಭ್ರಾಜತ್ಕಪೋಲಾ ಪ್ರಭೋಃ**
**ಹಸ್ತಾಂಭೋಜಯುಗೇನ ವೇಷ್ಟಿತಲಸನ್ಮಧ್ಯಾ ಭಿಯೇವಾಂಜಸಾ ।**
**ಭರ್ತ್ರಾಂಸದ್ವಯಸಂಹಿತಾಯತಭುಜಾಮೋದಾಂಬುಧೌ ಮಗ್ನಧೀಃ**
**ಸಾ ಪಾಣಿಗ್ರಹಣಾದಪೀಮಮಧಿಕಂ ಮೇನೇ ವಿವಾಹೋತ್ಸವಮ್** ॥ ೬೯ ॥

ಕೃಷ್ಣ=ಕೃಷ್ಣನ; ಆಸ್ಯ=ಮುಖವೆಂಬ; ಇಂದು=ಚಂದ್ರನ; ಸಮೀಪ=ಬಳಿಯಲ್ಲಿ; ಲಗ್ನ=ತಾಗಿದ; ಮುದಿತ=ಸಂತುಷ್ಟವಾದ; ಭ್ರಾಜತ್=ಶೋಭಿಸುವ; ಕಪೋಲಾ=ಕೆನ್ನೆವುಳ್ಳ;

ಪ್ರಭೋಃ=ಕೃಷ್ಣನ; ಹಸ್ತ=ಕೈಗಳೆಂಬ; ಅಂಭೋಜ=ಕಮಲಗಳ; ಯುಗೇನ=ಎರಡರಿಂದ; ವೇಷ್ಟಿತ=ಸುತ್ತುವರಿದ; ಲಸತ್=ಶೋಭಿಸುವ; ಮಧ್ಯಾ=ಸೊಂಟವುಳ್ಳ; ಭಿಯಾ ಇವ=ಭಯದಿಂದ ಎಂಬಂತೆ; ಅಂಜಸಾ=ಚೆನ್ನಾಗಿ; ಭರ್ತೃ=ಗಂಡನ; ಅಂಸ=ಹೆಗಲುಗಳ; ದ್ವಯ=ಎರಡರಲ್ಲಿ; ಸಂಹಿತ=ಇರುವ; ಆಯತ=ಉದ್ದವಾದ; ಭುಜಾ=ಕೈಗಳುಳ್ಳ; ಮೋದ=ಆನಂದವೆಂಬ; ಅಂಬುಧೌ=ಸಮುದ್ರದಲ್ಲಿ; ಮಗ್ನ=ಮುಳುಗಿದ; ಧೀಃ=ಬುದ್ಧಿವುಳ್ಳ; ಸಾ=ಆ ರುಗ್ಮಿಣಿಯು; ಇಮಂ=ಈ; ವಿವಾಹ=ಮದುವೆ ಎಂಬ; ಉತ್ಸವಂ=ಜಾತ್ರೆಯನ್ನು; ಪಾಣಿ=ಕೈಯ; ಗ್ರಹಣಾತ್ ಅಪಿ=ಹಿಡಿಯುವಿಕೆಗಿಂತಲೂ; ಅಧಿಕಂ=ಹೆಚ್ಚಾದ್ದನ್ನಾಗಿ; ಮೇನೇ=ತಿಳಿದಳು.

ಕೃಷ್ಣನು ತನ್ನ ಎರಡು ಕರಕಮಲಗಳಿಂದ ಆಕೆಯ ಸೊಂಟವನ್ನು ಹಿಡಿದು ಮೇಲಕ್ಕೆ ಎತ್ತಿದನು. ಆಗ ಆಕೆಯು ತನ್ನ ಎರಡು ಕೈಗಳಿಂದ ಕೃಷ್ಣನ ಹೆಗಲನ್ನು ಬಿಗಿಯಾಗಿ ಹಿಡಿದುಕೊಂಡಳು. ಇದರಿಂದ ಇವರಿಬ್ಬರ ಆಲಿಂಗನವು ಪ್ರಕಟವಾಯಿತು. ತಾನೆಲ್ಲಿ ಬೀಳುತ್ತೇನೋ ಎಂಬ ಭಯದಿಂದ ಆಕೆಯು ಕೃಷ್ಣನ ಹೆಗಲನ್ನು ಹಿಡಿದಂತಿತ್ತು ಎಂದು ರಾಜರು ಊಹಿಸುತ್ತಾರೆ. ಈ ರೀತಿ ಇವಳನ್ನು ಎತ್ತುವಾಗ ಇವಳ ಆನಂದಕ್ಕೆ ಪಾರವೇ ಇಲ್ಲ. ಮುಖವು ಬಹಳವಾಗಿ ಅರಳಿತು. ಇವಳ ಮುಖವು ಕೃಷ್ಣನ ಮುಖದ ಬಳಿಗೆ ಬಂದಿತ್ತು. ಇದರಿಂದ ಇವಳ ಕೆನ್ನೆಗಳು ಬಹಳವಾಗಿ ಶೋಭಿಸುತ್ತಿತ್ತು.

ಈ ಸಂದರ್ಭದಲ್ಲಿ ರುಗ್ಮಿಣಿಯ ಮಾನಸಿಕ ಅಭಿಪ್ರಾಯವನ್ನು ರಾಜರು ರಸಿಕತನದಿಂದ ವರ್ಣಿಸುತ್ತಾರೆ– ಮದುವೆಯ ಸಂದರ್ಭದಲ್ಲಿ ಪಾಣಿಗ್ರಹಣದ ಪ್ರಸಂಗ ಇದೆ. ಆಗ ವಧೂವರರು ಕೇವಲ ಕೈಗಳನ್ನು ಮಾತ್ರ ಮುಟ್ಟುತ್ತಾರೆ. ಇದು ಹಾಗಲ್ಲ. ರುಗ್ಮಿಣಿಯ ಇಡೀ ದೇಹದ ಸಂಪರ್ಕ ಕೃಷ್ಣನಿಗೆ ಆಗಿದೆ. ಪಾಣಿಗ್ರಹಣಕ್ಕಿಂತ ಇಂತಹ ಮದುವೆಯೇ ಬಹಳ ಯೋಗ್ಯ ಎಂದು ರುಗ್ಮಿಣಿಯು ಆಲೋಚಿಸುತ್ತಾಳೆ.

**ಸಂದೇಶ** : ಭಕ್ತಿಯ ತಾರತಮ್ಯಕ್ಕನುಗುಣವಾಗಿ ಭಗವಂತನು ಅಂಗಸಂಗ ಸುಖವನ್ನು ಒದಗಿಸುತ್ತಾನೆ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೇಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತೋಽಯಮಭೂಚ್ಚತುರ್ದಶಮಿತಃ ಸರ್ಗೋ ಮುದಾಂ ಸ್ವರ್ಗಿಷು ॥ ೭೦ ॥**

**॥ ಇತಿ ಚತುರ್ದಶಃ ಸರ್ಗಃ ॥**

## ॥ ಅಥ ಪಂಚದಶಃ ಸರ್ಗಃ ॥

**ತರಣಿಮಿವ ತಮಸ್ತಮನ್ವಧಾವನ್ ಮದನವಶಾಃ ಕಿಲ ಮಾನಿನೋ ಮಹೀಶಾಃ ।**
**ವಿಷಮಮೃಗದೃಶೀವಿಯೋಗರೋಗಾತ್ ಸ್ವತನುಮಿವೋಜ್ಝಿತುಮುದ್ಯತಾಃ ಪುರಸ್ತಾತ್ ॥ ೧ ॥**

ಮದನ=ಕಾಮನ; ವಶಾಃ=ಅಧೀನರಾದ; ಮಾನಿನಃ=ಅಹಂಕಾರಿಗಳಾದ; ಮಹಿ=ಭೂಮಿಗೆ; ಈಶಾಃ=ಒಡೆಯರಾದ ರಾಜರುಗಳು; ವಿಷಮ=ಅಸಹ್ಯವಾದ; ಮೃಗ=ಜಿಂಕೆಯಂತೆ; ದೃಶೀ=ಕಣ್ಣುಳ್ಳ ರುಗ್ಮಿಣಿಯ; ವಿಯೋಗ=ವಿರಹವೆಂಬ; ರೋಗಾತ್=ಕಾಯಿಲೆಯಿಂದ; ಸ್ವ=ತಮ್ಮ; ತನುಂ=ಶರೀರವನ್ನು; ಉಜ್ಝಿತುಂ=ಬಿಡಲು; ಉದ್ಯತಾಃ ಇವ=ತಯಾರಾದವರಂತೆ; ತಮಃ=ಕತ್ತಲೆಯು; ತರಣಿಂ ಇವ=ಸೂರ್ಯನನ್ನೆಂಬಂತೆ; ಅನ್ವಧಾವನ್=ಅನುಸರಿಸಿದರು.

ಕೃಷ್ಣನು ರುಗ್ಮಿಣಿಯನ್ನು ಒಯ್ದನು. ಕಾಮುಕರಾದ ರಾಜರುಗಳಿಗೆ ಈಕೆಯ ಅಗಲುವಿಕೆಯನ್ನು ಸಹಿಸಲಾಗಲಿಲ್ಲ. ಈ ಕಾಯಿಲೆಯಿಂದ ಬಹಳ ಬಳಲಿದರು. ರೋಗಿಗೆ ಕಾಯಿಲೆಯನ್ನು ತಡೆದುಕೊಳ್ಳಲು ಸಾಧ್ಯವಾಗದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವುದು ಸ್ವಾಭಾವಿಕ. ಕಾಮುಕರು ವಿರಹವೇದನೆಯಿಂದಾಗಿ ಹುಡುಗಿಯ ಮುಂದೆಯೇ ಸಾಯುತ್ತಾರೆ ಎಂಬುದೂ ಲೋಕರೂಢಿ. ಅದೇ ರೀತಿ ಈ ರಾಜರುಗಳು ಸಾಯಲೋ ಎಂಬಂತೆ ಈಕೆಯ ಹಿಂದೆ ಓಡಿದರು.

ಇವರು ಸಾಯುವುದು ನಿಶ್ಚಿತ. ವಾದಿರಾಜರು ಅದನ್ನು ತಮಾಷೆಯ ರೂಪದಿಂದ ವರ್ಣಿಸಿದ್ದಾರೆ. ಬೆಳಕಿನ ಹಿಂದೆ ಕತ್ತಲು ಓಡಿದರೆ ಹೇಗೆ ಅದಕ್ಕೆ ಉಳಿಗಾಲವಿಲ್ಲವೋ ಹಾಗೆಯೇ ಈ ನೃಪರಿಗೂ ಉಳಿಗಾಲವಿಲ್ಲ ಎಂಬುದು ನಿಶ್ಚಿತ.

<u>**ಸಂದೇಶ**</u> : ದೇವರ ಸೊತ್ತು ಎಂದೂ ನಮಗೆ ದಕ್ಕುವುದಿಲ್ಲ.

**ಯೇ ಭೈಷ್ಮ್ಯಾಃ ಪರಿರಂಭಣಂ ಚಕಮಿರೇ ತೇಷಾಂ ಭುಜಾಂಶ್ಚಿಚ್ಛಿದುರ್ಯೇ**
**ಯೇ ವಾ ತನ್ಮುಖಚಂದ್ರಚುಂಬನರುಚಿಂ ತೇಷಾಂ ಶಿರಾಂಸಿ ದ್ವಿಷಾಮ್ ।**
**ಯೇ ತಲ್ಪೇ ಶಯನಂ ತಯಾ ಸಹ ಖಲಾ ಲೋಕಾಂಬಯಾ ಸಂಗರೇ**
**ಪ್ರೇತೈಃ ಸಾರ್ಧಮಶೀಶಯನ್ ಹರಿಭಟಾಸ್ತಾನ್ ದುರ್ಮದಾನ್ ಸಾಯಕೈಃ ॥ ೨ ॥**

ಯೇ=ಯಾರು; ಭೈಷ್ಮ್ಯಾಃ=ರುಗ್ಮಿಣಿಯ; ಪರಿರಂಭಣಂ=ಆಲಿಂಗನವನ್ನು; ಚಕಮಿರೇ=ಆಶಿಸಿದರೋ; ತೇಷಾಂ=ಅವರ; ಭುಜಾನ್=ಕೈಗಳನ್ನು; ಹರಿ=ಕೃಷ್ಣನ; ಭಟಾಃ=

ಸೇವಕರು; ಚಿಚ್ಛಿದುಃ=ಕಡಿದರು; ಯೇ=ಯಾರು; ತತ್=ಅವಳ; ಮುಖ=ಮುಖವೆಂಬ; ಚಂದ್ರ=ಚಂದ್ರನ; ಚುಂಬನ=ಮುದ್ದಿಡುವ; ರುಚಿಂ=ರುಚಿಯನ್ನು; ತೇಷಾಂ=ಅಂತಹ, ದ್ವಿಷಾಂ=ಶತ್ರುಗಳ; ಶಿರಾಂಸಿ=ತಲೆಗಳನ್ನು; ಯೇ=ಯಾರು; ತಯಾ=ಅವಳಿಂದ; ಸಹ=ಕೂಡಿಕೊಂಡು; ಖಲಾ=ದುಷ್ಟರು; ತಲ್ಪೇ=ಹಾಸಿಗೆಯಲ್ಲಿ; ಶಯನಂ=ಮಲಗುವಿಕೆಯನ್ನು; ಲೋಕ=ಜಗತ್ತಿನ; ಅಂಬಯಾ=ತಾಯಿಯಿಂದ; ಸಂಗರೇ=ಯುದ್ಧದಲ್ಲಿ; ದುರ್ಮದಾನ್=ಅಹಂಕಾರಿಗಳಾದ; ತಾನ್=ಅವರನ್ನು; ಪ್ರೇತ್ಯೈಃ=ಹೆಣಗಳಿಂದ; ಸಾರ್ಧಂ=ಕೂಡಿಕೊಂಡು; ಸಾಯಕೈಃ=ಬಾಣಗಳಿಂದ; ಅಶೀಶಯನ್=ಮಲಗಿಸಿದರು.

ಯುದ್ಧದಲ್ಲಿ ಶತ್ರುಗಳ ಕೈಕಾಲು ಕತ್ತರಿಸುವುದು, ತಲೆ ಉರುಳಿಸುವುದು, ಹೆಣಗಳನ್ನಾಗಿ ಮಾಡಿ ಮಲಗಿಸುವುದು ಸಹಜ. ರಾಜರು ಇದನ್ನು ಬಹಳ ಸೊಗಸಾಗಿ ವರ್ಣಿಸುತ್ತಾರೆ.

ರುಗ್ಮಿಯ ಸಹಾಯಕ್ಕಾಗಿ ಕೆಲವು ದೈತ್ಯರು ಬಂದಿದ್ದರು. ಅವರಿಗೆ ರುಗ್ಮಿಣಿಯನ್ನು ಪಡೆಯುವ ಆಸೆಯೂ ಇತ್ತು. ಹಾಗೆಯೇ ರುಗ್ಮಿಣಿಯನ್ನು ಆಲಿಂಗಿಸಬೇಕೆಂದು ಆಸೆ ಪಡುತ್ತಿದ್ದರು. ಈಕೆಯನ್ನು ಆಲಿಂಗಿಸುವುದಾಗಲೀ, ಮುದ್ದಿಡುವುದಾಗಲೀ, ಈಕೆಯ ಜೊತೆ ಮಂಚದಲ್ಲಿ ಮಲಗುವುದೇ ಆಗಲಿ ಈ ಎಲ್ಲಾ ವ್ಯವಹಾರಗಳಲ್ಲಿ ದೇವರಿಗೆ ಮಾತ್ರ ಅಧಿಕಾರ. ದೇವತೆಗಳಿಗೂ ಇಲ್ಲ. ದೈತ್ಯರಿಗೆ ಇಲ್ಲ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಸದ್ಯ ದೈತ್ಯರು ಇದನ್ನೆಲ್ಲಾ ಆಶಿಸುತ್ತಾರೆ ಅಂದರೆ 'ಅಹಂ ಬ್ರಹ್ಮ ಅಸ್ಮಿ' ನಾನೇ ದೇವರು ಎಂಬ ತಿಳುವಳಿಕೆ ಉಳ್ಳವರು ಎಂದರ್ಥ. ಇದೇ ಒಂದು ಅಪರಾದ; ಸಾಲದ್ದಕ್ಕೆ ರಮೆಯ ಜೊತೆ ವ್ಯವಹಾರವನ್ನೂ ಇಟ್ಟುಕೊಂಡಿದ್ದಾರೆ. ಆಲಿಂಗನ ಕೈಯ ಅಪರಾಧ. ಚುಂಬನ, ಮೌಖಿಕ ತಪ್ಪು. ಶಯನ ದೈಹಿಕ ಅನ್ಯಾಯ. ಯಾವ ಭಾಗ ತಪ್ಪು ಮಾಡುತ್ತೋ ಆ ಭಾಗಕ್ಕೆ ಶಿಕ್ಷೆ ಎನ್ನುವುದು ಶಾಸ್ತ್ರದ ಮಾತು. ಇದಕ್ಕನುಗುಣವಾಗಿ ಶತ್ರುಗಳ ಕೈಗಳು, ದೇಹಗಳು, ತಲೆಗಳು ಉರುಳಿದವು.

**ಸಂದೇಶ** : ಪತ್ನೀಭಾವದಿಂದ ನಮಗಿಂತ ಉತ್ತಮ ಸ್ತ್ರೀಯರ ಸಂಗವನ್ನು ಎಂದೂ ಬಯಸಬಾರದು.

**ಸಾಹಾಯ್ಯಂ ಕ್ವ ಚಕಾರ ಶಂಭುದಯಿತಾ ತದ್ವೈರಿಮಾತುಃ ಕಥಂ**
**ದೇವ್ಯಾಃ ಶ್ರೀಪತಿವಿಪ್ರಯೋಗಮಹರತ್ತದ್ವಿಪ್ರಯೋಗೋಽಪಿ ವಾ ।**
**ಕಿಂತು ಶ್ರೀಪತಿರೇವ ತಾಂ ಸ್ವ ವಿರಹಾಯೋಗ್ಯಾಂ ಸಮವ್ಯಾಪಿನೀಂ**
**ನಿನ್ಯೇಽಶ್ಲೇಷಕಥಾಂ ಖಲೈಃ ಸಹ ಮುಹುಃ ಶಿಕ್ಷನ್ ಸ ರಕ್ಷನ್ ಶ್ರುತಿಮ್ ॥ ೩ ॥**

ಶಂಭು=ರುದ್ರನ; ದಯಿತಾ=ಪತ್ನಿಯು; ತತ್=ರುದ್ರನ; ವೈರಿ=ಶತ್ರುವಿನ ಮಾತುಃ= ತಾಯಿಗೆ; ಸಾಹಾಯ್ಯಂ=ಸಹಾಯವನ್ನು; ಕ್ವ=ಹೇಗೆ; ಚಕಾರ=ಮಾಡಿದಳು; ತತ್= ಕೃಷ್ಣನಿಗೆ, ವಿಪ್ರ=ಬ್ರಾಹ್ಮಣನ; ಯೋಗೋಽಪಿ=ಸಂಬಂಧವಾದರೂ; ದೇವ್ಯಾಃ=ದೇವಿಗೆ;

ಶ್ರೀಪತಿ=ಕೃಷ್ಣನ; ವಿಪ್ರಯೋಗಂ=ವಿಯೋಗವನ್ನು; ಕಥಂ=ಹೇಗೆ; ಆಹರತ್=ಪರಿಹರಿಸಿತು; ಕಿಂತು=ಮತ್ತು; ಶ್ರೀಪತಿಃ ಏವ=ಕೃಷ್ಣನೇ; ಅಶ್ಲೇಷ=ವಿಯೋಗದ; ಕಥಾಂ=ಮಾತನ್ನು; ಖಲೈಃ=ದುಷ್ಟರಿಂದ; ಸಹ=ಕೂಡಿ; ಮುಹುಃ=ಮತ್ತು; ಶಿಕ್ಷನ್=ದಂಡಿಸುತ್ತಾ; ಸಃ=ಅವನು; ಶ್ರುತಿಂ=ವೇದವನ್ನು; ರಕ್ಷನ್=ರಕ್ಷಿಸುತ್ತಾ; ಸ್ವ=ತನ್ನ; ವಿರಹ=ವಿರಹಕ್ಕೆ; ಅಯೋಗ್ಯಾಂ= ಅಯೋಗ್ಯಳಾದ; ಸಮ=ಸಮಾನವಾಗಿ; ವ್ಯಾಪಿನೀಂ=ವ್ಯಾಪ್ತಿವುಳ್ಳ; ತಾಂ=ರುಗ್ಮಿಣಿಯನ್ನು; ನಿನ್ಯೇ=ಒಯ್ದನು.

ಬಹಳ ಜನ ಹೇಳುವುದುಂಟು– ರುಗ್ಮಿಣಿಯು ಮೊದಲು ಪಾರ್ವತೀಗುಡಿಗೆ ಹೋಗಿ ಪ್ರಾರ್ಥಿಸಿದಳು. ಆದ್ದರಿಂದ ಅವಳಿಗೆ ಕೃಷ್ಣನು ಪತಿಯಾಗಿ ದೊರಕಿದ ಎಂದು. ಇನ್ನು ಕೆಲವರು ಹೇಳುತ್ತಾರೆ– ಬ್ರಾಹ್ಮಣನು ರುಗ್ಮಿಣಿಯ ಪತ್ರವನ್ನು ಕೃಷ್ಣನಿಗೆ ಕೊಟ್ಟನು. ಪತ್ರವನ್ನು ಓದಿದ ಕೃಷ್ಣನು ರುಗ್ಮಿಣಿಯನ್ನು ಕರೆತರಲು ಒಪ್ಪಿದನು. ಈ ರೀತಿ ಬ್ರಾಹ್ಮಣನ ಸಹಾಯ ಕಾರಣ ಇವರಿಬ್ಬರು ಜೊತೆ ಸೇರಲು ಎಂದು. ಇವೆರಡೂ ಕಾರಣಗಳನ್ನೂ ರಾಜರು ಸ್ವಾರಸ್ಯವಾಗಿ ಅಲ್ಲಗಳೆಯುತ್ತಾರೆ.

ಪಾರ್ವತಿಯ ಅನುಗ್ರಹವು ಕಾರಣವಾಗಲು ಸಾಧ್ಯವೇ ಇಲ್ಲ. ಪಾರ್ವತಿಯು ರುದ್ರನ ಪತ್ನಿಯು. ರುದ್ರನು ಕಾಮನ ಶತ್ರುವು. ರುಗ್ಮಿಣಿಯು ಕಾಮನ ತಾಯಿಯು. ರುಗ್ಮಿಣಿಗೆ ಅನುಗ್ರಹ ಮಾಡಿದರೆ ಪತಿಯ ವಿರೋಧಿಗಳಿಗೆ ಅನುಕೂಲ ಮಾಡಿದಂತೆ ಆಗುತ್ತದೆ. ರುದ್ರನಿಗೂ ಪಾರ್ವತಿಗೂ ಬಹಳ ಸಾಮರಸ್ಯ ಇದೆ. ಆದ್ದರಿಂದ ಪಾರ್ವತಿಯು ಪತಿಗೆ ವಿರುದ್ಧವಾಗಿ ಎಂದೂ ನಡೆಯುವುದಿಲ್ಲ.

ಎರಡನೆಯದ್ದೂ ಸರಿಯಲ್ಲ –ಇಲ್ಲಿ ರಾಜರು ಶಬ್ದಗಳ ಚಮತ್ಕಾರವನ್ನು ಮೆರೆಯುತ್ತಾರೆ: ಕೃಷ್ಣನಿಗೂ ರುಗ್ಮಿಣಿಗೂ ವಿ–ಪ್ರಯೋಗ, ಪ್ರಯೋಗ ಅಂದರೆ ಸಂಬಂಧ. ವಿಪ್ರಯೋಗ ಅಂದರೆ ವಿರಹ ಇತ್ತು. ಕೃಷ್ಣ ದ್ವಾರಕೆಯಲ್ಲಿ ಇದ್ದ. ಈಕೆ ಕುಂಡಿನಪುರದಲ್ಲಿ ಇದ್ದಳು. ಹೀಗೆ ಇವರಿಬ್ಬರ ವಿಪ್ರಯೋಗವನ್ನು (ವಿರಹವನ್ನು) ವಿಪ್ರ–ಯೋಗವು ಬ್ರಾಹ್ಮಣನ ಸಂಧಾನವು ಹೋಗಲಾಡಿಸಿತು. ರಾಜರು ಇಲ್ಲಿ ಶಬ್ದಗಳ ಅರ್ಥವನ್ನು ವಿಮರ್ಶಿಸದೆ ಶಬ್ದಗಳನ್ನು ಮಾತ್ರ ಇಟ್ಟುಕೊಂಡು ಕೇಳುತ್ತಾರೆ. ವಿಪ್ರಯೋಗದಿಂದ ವಿಪ್ರಯೋಗವು ಹೋಗುವುದು ಹೇಗೆ? ವಿಪ್ರಯೋಗದಿಂದ ವಿಪ್ರಯೋಗವು ಬರುವುದು.

ಹಾಗಾದರೆ ಇವರಿಬ್ಬರು ಜೊತೆಸೇರಿದ್ದು ಯಾರಿಂದಾಗಿ? ಯಾರಿಂದಲೂ ಅಲ್ಲ. ಕೃಷ್ಣನೇ ಸ್ವಯಂ ಕುಂಡಿನಪುರಕ್ಕೆ ಹೋದ. ಅಲ್ಲಿ ಕೆಲವು ದುಷ್ಟರು ಕೃಷ್ಣ–ರುಗ್ಮಿಣಿಯರು ಬೇರೆ ಬೇರೆ ಕಡೆ ಇದ್ದಾರೆ ಎಂದು ಹೇಳುತ್ತಿದ್ದಾರೆ. ಅವರ ಮಾತನ್ನು ಖಂಡಿಸಿದ. ಅಂತಹ ದುಷ್ಟರನ್ನು ನಾಶಮಾಡಿದ "ನನಗೂ ಅವಳಿಗೆ ವಿಯೋಗ ಆಗಲು ಸಾಧ್ಯವೇ ಇಲ್ಲ. ನಾನಿರುವಲ್ಲಿ ಅವಳು; ಅವಳಿರುವಲ್ಲಿ ನಾನು. ನಮ್ಮದು ಸಮವ್ಯಾಪ್ತಿ. ಈ ವಿಷಯದಲ್ಲಿ

ವೇದದ ಮಾತು ಇದೆ" ಎಂಬುದನ್ನು ಸಮರ್ಥಿಸುತ್ತ ಅವಳನ್ನು ಕರೆದುಕೊಂಡು ಹೋದನು.

**ಸಂದೇಶ** : ರಮಾನಾರಾಯಣರಿಗೆ ಎಂದೂ ವಿಯೋಗ ಇಲ್ಲ. ಈ ರೀತಿ ಚಿಂತಿಸುವವರಿಗೆ ನಾಶ ನಿಶ್ಚಿತ.

**ರಕ್ತಾಂಭೋನಿಚಯೇ ಗಜಾದ್ರಿನಿಕರೈರಾಬಧ್ಯ ಸೇತುಂ ಹತ್ಯೈಃ**
**ಸುಗ್ರೀವೋದ್ಧತ ಸೈನ್ಯಮಾತ್ರ ಬಲವಾನ್ ಶ್ರೀಪೂರ್ವರಾಮೋ ಯುಧಿ ।**
**ಪ್ರಾಚೀನಾವನಿಜಾಂ ನಿನಾಯ ಸ ನಿಜಾಮವ್ಯಗ್ರವಕ್ತ್ರಾಂಬುಜಾಂ**
**ಜಿತ್ವಾ ಪ್ರಾಕ್ತನರಾವಣಂ ಹತಬಲಂ ತಲ್ಲಗ್ನಚಿತ್ತಂ ಖಲಮ್ ॥ ೪ ॥**

ಸುಗ್ರೀವ=ಸುಗ್ರೀವನು; ಉದ್ಧತ=ಕೊಬ್ಬಿದ; ಸೈನ್ಯ=ಸೈನ್ಯವು; ಮಾತ್ರ=ಕೇವಲ; ಬಲವಾನ್=ಬಲವುಳ್ಳ; ಶ್ರೀ=ಶ್ರೀಕಾರವು; ಪೂರ್ವ=ಮೊದಲುಳ್ಳ; ರಾಮಃ=ರಾಮನು; ಯುಧಿ= ಯುದ್ಧದಲ್ಲಿ; ರಕ್ತ=ರಕ್ತವೆಂಬ; ಅಂಭಃ=ನೀರಿನ; ನಿಚಯೇ=ಸಮೂಹದಲ್ಲಿ; ಹತ್ಯೈಃ= ಸತ್ತಿರುವ; ಗಜ=ಆನೆಗಳೆಂಬ; ಅದ್ರಿ=ಪರ್ವತಗಳ; ನಿಕರೈಃ=ಸಮೂಹಗಳಿಂದ; ಸೇತುಂ= ಸೇತುವೆಯನ್ನು; ಆಬಧ್ಯ=ಕಟ್ಟಿ; ತತ್=ರುಗ್ಮಿಣಿಯಲ್ಲಿ; ಲಗ್ನ=ನೆಟ್ಟಿರುವ; ಚಿತ್ತಂ= ಮನವುಳ್ಳ; ಖಲಂ=ದುಷ್ಟನಾದ; ಹತ=ಸತ್ತಿರುವ; ಬಲಂ=ಸೈನ್ಯವುಳ್ಳ; ಪ್ರಾಕ್ತನ= ಪೂರ್ವಜನ್ಮದ; ರಾವಣಂ=ರಾವಣನನ್ನು; ಜಿತ್ವಾ=ಸೋಲಿಸಿ; ಅವ್ಯಗ್ರ=ಪ್ರಸನ್ನವಾದ; ವಕ್ತ್ರ= ಮುಖವೆಂಬ; ಅಂಬುಜಾಂ=ಕಮಲವುಳ್ಳ; ನಿಜಾಂ=ತನ್ನವಳಾದ; ಪ್ರಾಚೀನ= ಮೊದಲಿನ; ಅವನಿ=ಭೂಮಿಯಲ್ಲಿ; ಜಾಂ=ಹುಟ್ಟಿದ ಸೀತೆಯನ್ನು; ನಿನಾಯ=ಒಯ್ದನು.

ಕೃಷ್ಣನ ರುಗ್ಮಿಣೀ ಅಪಹಾರವನ್ನು ರಾಜರು ರಾಮಾಯಣ ಸಹಿತವಾಗಿ ವರ್ಣಿಸುತ್ತಾರೆ. ರಾಮಾಯಣ ಕಥಾ ಈ ರೀತಿ ಇದೆ– ಶಾಪಗ್ರಸ್ತನಾದ ಜಯನು ರಾವಣನಾಗಿ ಹುಟ್ಟಿದನು. ರಾಮನ ಮಡದಿ ಸೀತೆಯನ್ನು ಅಪಹರಿಸಿದನು. ರಾಮನು ಲಂಕೆಗೆ ಹೋದನು. ಅದಕ್ಕಾಗಿ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದನು. ಕಪಿಗಳ ಬಲಿಷ್ಠ ಸೈನ್ಯವೂ ಜೊತೆಗೆ ಇತ್ತು. ಸುಗ್ರೀವನು ಸೈನ್ಯದ ನಾಯಕನಾಗಿದ್ದನು. ರಾಮನು ಸುಗ್ರೀವ ಸೈನ್ಯದಿಂದ ಕೂಡಿಕೊಂಡು ರಾವಣನ ಸೈನ್ಯವನ್ನು ನಾಶಮಾಡಿದನು. ರಾವಣನನ್ನು ಕೊಂದನು. ಸೀತೆಯು ಲಂಕೆಯಲ್ಲಿ ನಿಶ್ಚಿಂತೆಯಿಂದ ಇದ್ದಳು. ಇವಳು ಅಯೋನಿಜೆ. ಭೂಮಿಯಿಂದ ಹೊರಬಂದವಳು. ಇಂತಹ ಸೀತೆಯನ್ನು ಪಡೆದನು.

ರಾಮಾಯಣದ ವ್ಯಕ್ತಿಗಳೇ ಕೃಷ್ಣಾಯನದಲ್ಲಿಯೂ ಬಂದರು. ರಾಜರು ಕೃಷ್ಣನನ್ನು ತಿಳಿಸುವಾಗ 'ಶ್ರೀಪೂರ್ವರಾಮಃ' ಎಂದು ಹೇಳುತ್ತಾರೆ. ಬಹಳ ಒಳ್ಳೆಯ ಶಬ್ದ. ರಾಜರ ಚಾತುರ್ಯಕ್ಕೆ ಉತ್ತಮ ಉದಾಹರಣೆ. ಒಬ್ಬರನ್ನು ತಿಳಿಸುವಾಗ ಶ್ರೀಕಾರಸಹಿತವಾಗಿಯೇ ಹೇಳಬೇಕು. ರಾಮನನ್ನು ತಿಳಿಸುವಾಗ 'ಶ್ರೀಪೂರ್ವ' ಎಂದಿದ್ದಾರೆ. ಅಂದರೆ ರಾಮ

ಎಂಬ ಶಬ್ದದ ಮೊದಲು ಶ್ರೀಕಾರ ಹಾಕಬೇಕು ಎಂದು ಹೇಳಿದರು. ಈ ಶಬ್ದದಿಂದ ಕೃಷ್ಣನನ್ನು ತಿಳಿಸುವುದು ಅವರ ಉದ್ದೇಶ. ಶ್ರೀಕಾರದಿಂದ ಕೂಡಿದ ಪೂರ್ವರಾಮ ಅಂದರೆ ಕೃಷ್ಣನು. ಹೇಗೆಂದರೆ ಕೃಷ್ಣಾವತಾರಕ್ಕಿಂತ ಪೂರ್ವದ ಅವತಾರ ರಾಮ. ಇದರಿಂದ ರಾಮಕೃಷ್ಣರಿಗೆ ಐಕ್ಯ ಎಂಬ ತತ್ವವನ್ನು ತಿಳಿಸಿದಂತೆ ಆಯಿತು.

ರಾಮನು ಸುಗ್ರೀವ ನೇತೃತ್ವದ ಸೈನ್ಯದಿಂದ ರಾವಣನನ್ನು ಮರ್ದಿಸಿದನು. ಕೃಷ್ಣನು ತನ್ನ ರಥದಿಂದ ಶಿಶುಪಾಲನನ್ನು ಬಡಿದನು. ಕೃಷ್ಣನ ರಥದಲ್ಲಿ ನಾಲ್ಕು ಕುದುರೆಗಳು. ಅವುಗಳ ಹೆಸರು– ಸುಗ್ರೀವ, ಸೈನ್ಯ, ಮೇಘಪುಷ್ಪ, ಬಲಾಹಕ ಎಂದು. ಇವುಗಳಲ್ಲಿ ಸುಗ್ರೀವ, ಸೈನ್ಯಗಳು ಮುಂದೆ ಇರತಕ್ಕವುಗಳು. ಉಳಿದ ಎರಡು ಪಾರ್ಶ್ವಗಳಲ್ಲಿ. ರಥವನ್ನು ಎಳೆಯಲು ಇವು ಎರಡು ಸಾಕು. ಉಳಿದ ಎರಡು ಅಗತ್ಯ ಇಲ್ಲ. ಈ ರೀತಿ ರಾಮ ಹಾಗೂ ಕೃಷ್ಣನು ಸುಗ್ರೀವ ಹಾಗೂ ಉದ್ಧತ ಸೈನ್ಯದಿಂದ ಬಲಿಷ್ಠರು. ಶ್ರೀರಾಮನು ಉಪ್ಪುನೀರಿನ ಕಡಲಿಗೆ ದೊಡ್ಡ ದೊಡ್ಡ ಬೆಟ್ಟಗಳಿಂದ ಸೇತುವೆಯನ್ನು ಕಟ್ಟಿದನು. ಕೃಷ್ಣನು ದುಷ್ಟರನ್ನು ಬಡಿಯುವಾಗ ರಕ್ತದ ಹೊಳೆಯನ್ನೇ ಹರಿಸಿದನು. ಇದನ್ನು ದಾಟಿಕೊಂಡು ಮುಂದೆ ಹೋಗಲು ಕೃಷ್ಣನ ಸೈನಿಕರಿಗೆ ಕಷ್ಟವಾಯಿತು. ಆಗ ಕೃಷ್ಣನು ಸತ್ತುಬಿದ್ದಿರುವ ಆನೆಗಳ ಹೆಣಗಳಿಂದ ಒಂದು ಸೇತುವೆಯನ್ನೇ ರಚಿಸಿದನು. ರಾಮಕೃಷ್ಣರು ಸೇತುವೆಗೆ ಉಪಯೋಗಿಸಿದ ವಸ್ತುಗಳಲ್ಲಿ ಆಕಾರದಿಂದ ಸಾಮ್ಯ ಇದೆ. ರಾಮನ ಸಮುದ್ರಕ್ಕೂ ಕೃಷ್ಣನ ಹೊಳೆಗೂ ರುಚಿಯಲ್ಲಿ ಹೋಲಿಕೆ ಇದೆ. ರಾವಣನು ರಾಮನ ಮಡದಿಯಾದ ಸೀತೆಯಲ್ಲಿ ರಕ್ತನಾಗಿದ್ದನು. ಶಿಶುಪಾಲನು ರುಗ್ಮಿಣಿಯಲ್ಲಿ ಅನುರಕ್ತನು. ರುಗ್ಮಿಣಿಯು ಪೂರ್ವಜನ್ಮದಲ್ಲಿ ಭೂಮಿಯಿಂದ ಮೇಲೆ ಬಂದಿರುವ ಸೀತೆಯೇ. ಶಿಶುಪಾಲನು ಹಿಂದಿನ ಜನ್ಮದಲ್ಲಿ ರಾವಣನೇ ಆಗಿದ್ದನು. ರುಗ್ಮಿಣಿಯೂ ಕೃಷ್ಣನಿಗೆ ಮಡದಿಯಾಗಲು ಯೋಗ್ಯಳು. ಶ್ರೀರಾಮಕೃಷ್ಣರು ಅಯೋಗ್ಯ ವಿಷಯದಲ್ಲಿ ಆಸಕ್ತರಾದ ರಾವಣಶಿಶುಪಾಲರನ್ನು ಸೋಲಿಸಿ ಜಾನಕೀರುಗ್ಮಿಣಿಯರನ್ನು ತಮ್ಮೊಂದಿಗೆ ಒಯ್ದರು.

<u>**ಸಂದೇಶ**</u> : ರಾಮಕೃಷ್ಣರ ಚರಿತ್ರೆಗಳನ್ನು ಜೊತೆಯಾದಿ ಅಭ್ಯಸಿಸಬೇಕು.

**ಅಹಯೀದಹಯೀ ಕಶ್ಚಿದನಂಸೀದಪರೋಽಚ್ಯುತಂ ।**
**ನಾಕ್ರಮೀದಪರೋ ವಿದ್ಧೋ ವಿಕ್ರಮಾರ್ಕೋದಯೇ ಹರೇಃ ॥ ೫೫ ॥**

ಹರೇಃ=ಕೃಷ್ಣನ; ವಿಕ್ರಮ=ಪರಾಕ್ರಮವೆಂಬ; ಅರ್ಕ=ಸೂರ್ಯನ; ಉದಯೇ= ಉದಯವಾಗುತ್ತಿರಲು; ಕಶ್ಚಿತ್=ಒಬ್ಬನು; ಅಹಯೀ=ಕುದುರೆಯನ್ನು ಬಿಟ್ಟು; ಅಹಯೀತ್=ಓಡಿದನು; ಅಪರಃ=ಇನ್ನೊಬ್ಬನು; ಅಚ್ಯುತಮ್=ಕೃಷ್ಣನನ್ನು; ಅನಂಸೀತ್= ನಮಸ್ಕರಿಸಿದನು; ಅಪರಃ=ಮಗದೊಬ್ಬನು; ವಿದ್ಧಃ=ಹೊಡೆಯಲ್ಪಟ್ಟು; ನ ಅಕ್ರಮೀತ್= ಮುಂದುವರಿಯಲಿಲ್ಲ.

ಕೃಷ್ಣನ ವಿರುದ್ಧ ಪಕ್ಷದಲ್ಲಿ ತ್ರಿವಿಧ ಜೀವರೂ ಇದ್ದರು. ಕೃಷ್ಣನು ಇವರೆಲ್ಲರಿಗೂ ತನ್ನ ಪರಾಕ್ರಮದ ರುಚಿಯನ್ನು ಉಣಿಸಿದನು. ಸೂರ್ಯನು ಉದಿಸಿದಾಗ ಸಾತ್ವಿಕರು ಸಂಧ್ಯಾವಂದನೆಯಲ್ಲಿ ತೊಡಗುತ್ತಾರೆ. ರಾಜಸರು ತಮ್ಮ ವ್ಯವಹಾರಕ್ಕಾಗಿ ಆಚೆ ಈಚೆ ಓಡಾಡುತ್ತಾರೆ. ತಾಮಸರು ಮತ್ತಷ್ಟು ನಿದ್ದೆಯ ಮಂಪರಿಗೆ ಒಳಗಾಗಿ ಅಲ್ಲೇ ಮಲಗುತ್ತಾರೆ. ಇದೇ ರೀತಿ ಕೃಷ್ಣನ ಪರಾಕ್ರಮ ಎಂಬ ಸೂರ್ಯನು ರಣರಂಗದಲ್ಲಿ ಉದಿಸಿದ್ದಾನೆ. ಇದನ್ನು ಕಂಡ ಎದುರುಪಕ್ಷದಲ್ಲಿರುವ ಸಾತ್ವಿಕರಾಜರು ಯುದ್ಧವನ್ನು ಬಿಟ್ಟು ಕೃಷ್ಣನಿಗೆ ಶರಣುಬಂದರು. ರಾಜಸರು ಯುದ್ಧವನ್ನು ತಮ್ಮ ಕುದುರೆ ಮೊದಲಾದ ವಾಹನಗಳನ್ನು ತ್ಯಜಿಸಿ ಓಡಿದರು. ತಾಮಸರು ಕೃಷ್ಣನಿಂದ ಬಹಳ ಹೊಡೆತ ತಿಂದರು. ಒಂದಡಿಯೂ ಮುಂದಿಡದಷ್ಟು ಅಶಕ್ತರಾದರು.

**<u>ಸಂದೇಶ</u>** : ಪ್ರತಿಯೊಬ್ಬ ಜೀವಿಯ ಯೋಗ್ಯತೆಯನ್ನು ದೇವರೇ ಪ್ರಕಟಿಸುವವನು.

**ಹುತ್ವಾ ಶತ್ರುಸಮೂಹಮುನ್ಮುಖಶಿಖಸ್ವೀಯಪ್ರತಾಪಾನಲೇ**
**ಕೃತ್ವಾ ರಕ್ತರಸಾರ್ದ್ರತಾಮಪಿ ಶರಭ್ರಾಜದ್ದೃತಿಶ್ರೇಣಿಭಿಃ ।**
**ಸ್ವಸ್ಥ ಪ್ರೇಷಿತ ಪುಷ್ಪಲಾಜನಿಕರಾಕೀರ್ಣಃ ಕ್ಷಿತೀಶಾರ್ಪಿತೈಃ**
**ವಿತ್ತೈಸ್ತತ್ಸಮಯೋಚಿತೈಃ ಸಹ ನಿಜಾಂ ನಿನ್ಯೇ ನಿಸರ್ಗಪ್ರಿಯಾಮ್ ॥ ೬ ॥**

ಉನ್ಮುಖ=ಮೇಲ್ಮುಖವಾದ; ಶಿಖ=ಜ್ವಾಲೆವುಳ್ಳ; ಸ್ವೀಯ=ತನ್ನ; ಪ್ರತಾಪ=ಶಕ್ತಿ ಎಂಬ; ಅನಲೇ=ಬೆಂಕಿಯಲ್ಲಿ; ಶತ್ರು=ವೈರಿಗಳ; ಸಮೂಹಂ=ಗುಂಪನ್ನು; ಹುತ್ವಾ=ಹೋಮಿಸಿ; ಶರ=ಬಾಣಗಳೆಂಬ; ಭ್ರಾಜತ್=ಶೋಭಿಸುವ; ದೃತಿ=ಪಾತ್ರೆಗಳ; ಶ್ರೇಣಿಭಿಃ=ಸಮೂಹಗಳಿಂದ; ರಕ್ತ=ರಕ್ತವೆಂಬ; ರಸ=ನೀರಿನಿಂದ; ಆರ್ದ್ರತಾಂ ಅಪಿ=ಸಿಂಪಡಿಸುವಿಕೆಯನ್ನು; ಕೃತ್ವಾ=ಮಾಡಿ; ಸ್ವ=ಸ್ವರ್ಗದಲ್ಲಿ; ಸ್ಥ=ಇರುವವರಿಂದ; ಪ್ರೇಷಿತ=ಕಳಿಸಲ್ಪಟ್ಟ; ಪುಷ್ಪ=ಹೂಗಳೆಂಬ; ಲಾಜ=ಅರಳಿನ; ನಿಕರ=ಸಮೂಹಗಳಿಂದ; ಆಕೀರ್ಣಃ=ಸಿಂಪಡಿಸಲ್ಪಟ್ಟವನಾಗಿ; ಕ್ಷಿತಿ=ಭೂಮಿಯ; ಈಶ=ಒಡೆಯರಿಂದ; ಅರ್ಪಿತೈಃ=ಕೊಡಲ್ಪಟ್ಟ; ತತ್=ವಿವಾಹದ; ಸಮಯ=ಕಾಲಕ್ಕೆ; ಉಚಿತೈಃ=ಯೋಗ್ಯಗಳಾದ; ವಿತ್ತೈಃ=ಸಂಪತ್ತುಗಳಿಂದ; ಸಹ=ಕೂಡಿ; ನಿಸರ್ಗ=ಸಹಜವಾಗಿ; ಪ್ರಿಯಾಂ=ಇಷ್ಟಳಾದ; ನಿಜಾಂ=ತನ್ನವಳನ್ನು; ನಿನ್ಯೇ=ಒಯ್ದನು.

ಕೃಷ್ಣನ ಈ ಯುದ್ಧವನ್ನು ರಾಜರು ರುಗ್ಮಿಣೀ ವಿವಾಹಕ್ಕೆ ಹೋಲಿಸುತ್ತಾರೆ. ವಿವಾಹದಲ್ಲಿ ಹೋಮ ಇದೆ. ಓಕುಳಿ, ಅರಳುಗಳ ಚೆಲ್ಲುವಿಕೆ ಇದೆ. ವರದಕ್ಷಿಣೆ ಇದೆ. ಅನಂತರದಲ್ಲಿ ಹುಡುಗಿಯನ್ನು ಕರೆದುಕೊಂಡು ಹೋಗುವುದು. ಇವೆಲ್ಲವೂ ಯುದ್ಧದಲ್ಲಿಯೂ ಇತ್ತು. ಕೃಷ್ಣನ ಪರಾಕ್ರಮವೆಂಬುದೇ ಒಂದು ಅಗ್ನಿ. ಅಗ್ನಿಗೆ ಸಮಿಧೆಗಳನ್ನು ಹಾಕುತ್ತಿರುವಂತೆ ಅದು ಬಹಳವಾಗಿ ಉರಿಯುತ್ತದೆ. ಶತ್ರುಗಳು ಎದುರುಬಂದಂತೆ ಕೃಷ್ಣನ ಶಕ್ತಿಯು ಬಹಳವಾಗಿ ಪ್ರಕಟವಾಗುತ್ತಿತ್ತು. ಆದ್ದರಿಂದ ಈ ಶತ್ರುಗಳೇ ಸಮಿಧೆಗಳು. ಇಂತಹ

ಸಮಿಧೆಗಳನ್ನು ಕೃಷ್ಣನು ತನ್ನ ಪರಾಕ್ರಮವೆಂಬ ಅಗ್ನಿಯಲ್ಲಿ ಹೋಮಿಸಿದನು. ವಧೂವರರ ದೃಷ್ಟಿ ತೆಗೆಯುವ ಉದ್ದೇಶದಿಂದ ಓಕುಳಿಯ ವ್ಯವಸ್ಥೆ ಇರುತ್ತದೆ. ಪ್ರಾಣಿಗಳ ಚರ್ಮದಿಂದಲೋ ಕೋಡಿನಿಂದಲೋ ಮಾಡಿದ ಪಾತ್ರೆಗಳಲ್ಲಿ ಇದನ್ನು ತುಂಬಿಸಿ ಅನಂತರ ಅವರ ಮುಂಭಾಗದಲ್ಲಿ ಚೆಲ್ಲುತ್ತಾರೆ. ಈ ಯುದ್ಧದಲ್ಲಿ ಬಾಣಗಳೇ ಅಂತಹ ಪಾತ್ರೆಗಳು. ಶತ್ರುಗಳ ದೇಹಗಳಿಗೆ ಈ ಬಾಣಗಳು ತಾಗಿದಾಗ ರಕ್ತವು ಚೆಲ್ಲುತ್ತದೆ. ಬಾಣಗಳ ತುದಿಯೂ ಕೆಂಪಾಗುತ್ತದೆ. ಪಾತ್ರೆಗಳಿಂದ ಓಕುಳಿಯನ್ನು ಚೆಲ್ಲುವಾಗ ಅವುಗಳ ಮೇಲ್ಭಾಗವು ಕೆಂಪಾಗುವಂತೆ. ಕೃಷ್ಣನ ಯುದ್ಧದ ಕೌಶಲವನ್ನು ಕಂಡ ದೇವತೆಗಳು ಸ್ವರ್ಗದಿಂದ ಹೂಮಳೆಗೆರೆದರು. ವರನು ಮದುವೆಮಂಟಪಕ್ಕೆ ಬರುವಾಗ ವಧುವಿನ ಕಡೆಯವರು ಗೌರವ ಪ್ರೀತಿ ಆದರ ದ್ಯೋತಕವಾಗಿ ಅರಳನ್ನು ಚೆಲ್ಲುವಂತೆ, ಕೃಷ್ಣನ ಪರಾಕ್ರಮಕ್ಕೆ ಹೆದರಿದ ಶತ್ರುಗಳು ತಮ್ಮ ವಾಹನಾದಿ ಸಮಸ್ತ ಸಂಪತ್ತನ್ನೂ ಅಲ್ಲೇ ತ್ಯಜಿಸಿ ಓಡಿದರು. ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ತರುವ ಹುಡುಗಿಯಾದ್ದರಿಂದ ಈ ಸಂದರ್ಭದಲ್ಲಿ ಈ ವಾಹನಾದಿಗಳೇ ಯೋಗ್ಯವಾದ ವರದಕ್ಷಿಣೆ. ಕ್ಷತ್ರಿಯರು ಸಹಜವಾಗಿ ಯುದ್ಧಪ್ರಿಯರು. ಕೃಷ್ಣನು ಯುದ್ಧದ ಆಸೆಯಿಂದ ಇವಳನ್ನು ವರಿಸಿದ್ದು ಅಲ್ಲ. ಇವಳಲ್ಲಿ ಸಹಜವಾಗಿ ಈತನಿಗೆ ಪ್ರೀತಿ ಇದೆ. ಆದ್ದರಿಂದ ಯುದ್ಧವನ್ನು ಆಶಿಸಿದ.

**ಸಂದೇಶ** : ಎಂತಹ ರೌದ್ರರಸವನ್ನೂ ಶಾಂತರಸವನ್ನಾಗಿ ಪರಿವರ್ತಿಸಲು ಸಾಧ್ಯ ಇದೆ.

**ಕೃಷ್ಣೇ ಸ್ವಾಂ ದಯಿತಾಂ ನಯತ್ಯುರುಬಲೇ ತದ್ಬಂಧುಯೋಗ್ಯಾಂ ದಶಾ-**
**ಮಾಪನ್ನಾ ಇವ ಭೂಭುಜೋಂತಕಪುರೀಮನ್ವಾಗತಾ ವೈ ಗತಾಃ ।**
**ಅನ್ಯೇ ಖಿನ್ನಮುಖಾ ದೃಗಂಬು ಸಸೃಜುಃ ಕೇಚಿಚ್ಚ ಮೂರ್ಛಾಂ ಶ್ರಿತಾಃ**
**ಚೈದ್ಯಾದ್ಯಾ ಮಲಿನಾನನಾಃ ಗತಗಿರಃ ಚಿಂತಾಂ ದುರಂತಾಂ ಯಯುಃ ॥ ೭ ॥**

ಉರು=ಬಹಳ; ಬಲೇ=ಬಲವುಳ್ಳ; ಕೃಷ್ಣೇ=ಕೃಷ್ಣನು; ಸ್ವಾಂ=ತನ್ನ; ದಯಿತಾಂ= ರಮಣಿಯನ್ನು; ನಯತಿ=ಒಯ್ಯುತ್ತಿರಲು; ಭೂಭುಜಃ=ರಾಜರುಗಳು; ತತ್=ಅವಳ ಬಂಧುಗಳಿಗೆ; ಯೋಗ್ಯಾಂ=ಉಚಿತವಾದ; ದಶಾಂ=ಅವಸ್ಥೆಯನ್ನು; ಆಪನ್ನಾ ಇವ=ಹೊಂದಿದವರಂತೆ; ಅನ್ವಾಗತಾಃ=ಅನುಸರಿಸಿದವರಾಗಿ; ಅಂತಕ=ಯಮನ; ಪುರೀಂ= ಊರನ್ನು; ಗತಾ ವೈ=ಹೊಂದಿದರು; ಅನ್ಯೇ=ಕೆಲವರು; ಖಿನ್ನ=ಬೇಸರದ; ಮುಖಾಃ= ಮುಖವುಳ್ಳವರು; ದೃಕ್=ಕಣ್ಣುಗಳಲ್ಲಿ; ಅಂಬು=ನೀರನ್ನು; ಸಸೃಜುಃ=ಸುರಿಸಿ ದರು; ಕೇಚಿತ್ ಚ=ಕೆಲವರು; ಮೂರ್ಛಾಂ=ಮೂರ್ಛೆಯನ್ನು; ಶ್ರಿತಾಃ=ಹೊಂದಿದರು; ಚೈದ್ಯ= ಶಿಶುಪಾಲನೇ; ಆದ್ಯಾಃ=ಮೊದಲಿಗರು; ಮಲಿನ=ಬಾಡಿದ; ಆನನಾಃ=ಮುಖವುಳ್ಳವ ರಾಗಿ; ಗತ=ಹೋದ; ಗಿರಃ=ಮಾತುಳ್ಳವರಾಗಿ; ದುರಂತಾಂ=ಕೊನೆ ಇಲ್ಲದ; ಚಿಂತಾಂ= ಚಿಂತೆಯನ್ನು; ಯಯುಃ=ಹೊಂದಿದರು.

ವರನು ವಧುವನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಆಗ ವಧುವಿನ ಬಂಧುಗಳು ವಿರಹ ದುಃಖವನ್ನು ನಾನಾ ರೀತಿಯಾಗಿ ಅನುಭವಿಸುತ್ತಾರೆ. ಅದೇ ರೀತಿಯಾದ ಅವಸ್ಥೆಯನ್ನು ಈ ರಾಜರುಗಳು ಕೃಷ್ಣನು ರುಗ್ಮಿಣಿಯನ್ನು ಒಯ್ಯುವಾಗ ಅನುಭವಿಸಿದರೋ ಎಂಬಂತೆ ಚಿತ್ರಿಸುತ್ತಾರೆ. ಒಂದು ರೀತಿಯಲ್ಲಿ ಆ ರಾಜರುಗಳಿಗೆ ಶ್ರೀರಾಜರು ಪರಿಹಾರ ಮಾಡುತ್ತಾರೆ-

ರುಗ್ಮಿಣಿಯನ್ನು ಕೃಷ್ಣನು ಒಯ್ಯುವಾಗ ಅದನ್ನು ತಡೆಯಲು ಕೆಲವರು ಈಕೆಯನ್ನು ಅನುಸರಿಸಿದರು. ಹುಡುಗಿಯು ಪತಿ ಮನೆಗೆ ಹೋಗುವಾಗ ಕೆಲವರು ದುಃಖ ತಡೆಯಲಾಗದೆ ಅವಳ ಹಿಂದೆ ಹೋಗುವುದು ಲೋಕದಲ್ಲಿಯೂ ಇದೆ. ಹಾಗೆಯೇ ಈ ರಾಜರುಗಳು ಹೊರಟರೋ ಎಂಬಂತೆ ರಾಜರು ತಮಾಷೆ ಮಾಡಿದರು. ಆದರೆ ಅವರ್ಯಾರನ್ನೂ ಇವಳ ಜೊತೆ ಬಾರದಂತೆ ಮಾಡಿದ. ಬದಲಾಗಿ ಯಮನ ಜೊತೆಗೆ ಹೋಗುವಂತೆ ಮಾಡಿದ. ಹುಡುಗಿಯ ಬಂಧುಗಳು ಹುಡುಗಿಯಲ್ಲಿ ಪ್ರೇಮದಿಂದ ಹೊರಡುವಂತೆ, ಈ ರಾಜರುಗಳು ಪ್ರೇಮದಿಂದ ಹೊರಟವರಲ್ಲ, ಬದಲಾಗಿ ಕಾಮದಿಂದ ಹೊರಟವರು. ಅಯೋಗ್ಯ ಜಾಗದಲ್ಲಿ ಕಾಮವನ್ನು ತೋರಿದ್ದರಿಂದ ಆ ರಾಜರುಗಳಿಗೆ ಯಮಲೋಕವೇ ಗತಿಯಾಯಿತು.

ಹುಡುಗಿಯ ಕೆಲವು ಬಂಧುಗಳು ಮುಖವನ್ನು ಬಾಡಿಸಿಕೊಂಡು ಕಣ್ಣೀರಿಡುತ್ತಾರೆ. ಹಾಗೆಯೇ ಇಲ್ಲಿ ಕೆಲವು ರಾಜರು ಬಾಡಿದ ಮುಖದಿಂದ ಕಣ್ಣೀರಿಡುತ್ತಾ ಒಂದು ಕಡೆ ಕುಳಿತರು. ಇದಕ್ಕೆ ಕಾರಣ ಹುಡುಗಿ ಹೊರಟಳು ಎಂಬುದು ಅಲ್ಲ. ಯುದ್ಧದಲ್ಲಿ ಕೃಷ್ಣನಿಂದ ಪರಾಜಯವಾಯಿತು. ಈ ಅಪಮಾನವನ್ನು ಸಹಿಸಿಕೊಳ್ಳಲು ಆಗಲಿಲ್ಲ. ವಿಪರೀತವಾದ ನೋವೂ ಆಗುತ್ತಿದೆ. ಆದ್ದರಿಂದ ಕಣ್ಣೀರು ಸುರಿಯುತ್ತಿದೆ. ಹುಡುಗಿಯರನ್ನು ತುಂಬಾ ಹಚ್ಚಿಕೊಂಡವರು ಈ ಪ್ರಸಂಗದಲ್ಲಿ ಮೂರ್ಛಿತರೇ ಆಗುತ್ತಾರೆ. ಈ ಯುದ್ಧದಲ್ಲಿ ಕೃಷ್ಣನಿಂದ ಹೊಡೆತ ತಿಂದ ಕೆಲವು ರಾಜರು ಮೂರ್ಛಿತರಾಗಿ ಬಿದ್ದರು. ಹುಡುಗಿಯ ಅಣ್ಣತಮ್ಮಂದಿರಿಗಂತೂ ಮಾತೇ ಹೊರಡುವುದಿಲ್ಲ. ಬಹಳ ಚಿಂತಾಕ್ರಾಂತರಾಗುತ್ತಾರೆ. ಮುಖವು ಪೂರ್ಣ ಕಳೆಗುಂದಿರುತ್ತದೆ. ರುಗ್ಮಿಣಿಯ ಸಹೋದರನಾದ ರುಗ್ಮಿ ಹಾಗೂ ಶಿಶುಪಾಲ ಇವರಿಗೆಲ್ಲಾ ಏನು ಮಾಡಬೇಕೆಂದೇ ತೋಚದಾಯಿತು. ಆ ರೀತಿ ಕೃಷ್ಣನಿಂದ ಹೊಡೆತ ತಿಂದರು.

<u>ಸಂದೇಶ</u> : ಕ್ಷತ್ರಿಯರಿಗೆ ಯುದ್ಧವೂ ವಿವಾಹದಷ್ಟೇ ಮಂಗಲಮಯ.

**ನ ಕೃಷ್ಣೋ ನಾಪಿ ತತ್‌ಸೇನಾ ಜಘಾನ ರಿಪುವಾಹಿನೀಮ್**
**ಜನನೀದ್ರೋಹಕೃಚ್ಛಿದ್ಯಪಕ್ಷಪಾತೇನ ಸಾ ಹತಾ ॥ ೮ ॥**

ಕೃಷ್ಣಃ=ಕೃಷ್ಣನು; ತತ್=ಕೃಷ್ಣನ; ಸೇನಾ ಅಪಿ=ಸೈನ್ಯವಾದರೂ; ರಿಪು=ಶತ್ರುಗಳ;

ವಾಹಿನೀಂ=ಸೈನ್ಯವನ್ನು; ನ ಜಘಾನ=ಕೊಲ್ಲಲಿಲ್ಲ; ಜನನೀ=ತಾಯಿಗೆ; ದ್ರೋಹ=ಅನ್ಯಾಯವನ್ನು; ಕೃತ್=ಮಾಡಿದ; ಚೈದ್ಯ=ಶಿಶುಪಾಲನ; ಪಕ್ಷ=ಕಡೆಯಲ್ಲಿ; ಪಾತೇನ=ಇರುವುದರಿಂದ; ಸಾ=ಸೈನ್ಯವು; ಹತಾ=ಸತ್ತಿತು.

ಕೃಷ್ಣನು ರುಕ್ಮಿಣಿಯನ್ನು ತರಬೇಕಾದರೆ ಶತ್ರುಗಳನ್ನು ಹೊಡೆದು ಉರುಳಿಸಬೇಕೆಂದು ಏನೂ ಇಲ್ಲ. ಅವರು ಹೊಡೆಯುತ್ತಿರುವಂತೆಯೇ ತರುವ ಶಕ್ತಿ ಇದೆ. ಹಾಗಾದರೆ ಕೃಷ್ಣನು ಹಾಗೂ ಆತನ ಸೈನಿಕರು ಶತ್ರುಸೈನ್ಯವನ್ನು ಯಾಕೆ ಕೊಂದರು?

ರಾಜರು ಉತ್ತರವನ್ನು ಹೇಳುತ್ತಾರೆ– ಕೃಷ್ಣನಾಗಲೀ ಆತನ ಸೈನಿಕರಾಗಲೀ ಕೊಂದದ್ದಲ್ಲ. ಶತ್ರುಗಳು ತಾವಾಗಿಯೇ ಸತ್ತರು. ಶಿಶುಪಾಲನು ಲೋಕಜನನಿಯಾದ ರುಗ್ಮಿಣಿಯನ್ನು ಆಶಿಸಿದನು. ಇದು ಆತನ ಅಪರಾಧ. ಇಂತಹ ಅಪರಾಧಿಗೆ ಈ ಸೈನಿಕರು ಸಹಾಯ ಮಾಡಿದರು. ಈ ದೋಷದ ಫಲವಾಗಿ ಸ್ವಯಂಕೃತ ಅಪರಾಧದಿಂದಾಗಿ ಮಡಿದರು ಎಂದು.

**ರುಗ್ಮೀ ಸ ರುಗ್ಮೀವ ಯದಾ ವಿರೋಧಂ ಚಕ್ರೇ ತದಾ ಚಕ್ರಧರಸ್ಯ ರೌಗ್ಮಮ್ ।**
**ಛಿತ್ವಾ ಧನುಸ್ತಸ್ಯ ಮುಹುರ್ಭವಿಷ್ಯದುದ್ಯೋಗಮುತ್ಥಾಪಯತಿ ಸ್ಮ ದೇವಃ ॥ ೯ ॥**

ಸಃ=ಆ; ರುಗ್ಮೀ=ರುಗ್ಮಿಯು; ರುಗ್ಮೀ ಇವ=ಶ್ರಮಂತನಂತೆ; ಯದಾ=ಯಾವಾಗ; ಚಕ್ರ=ಚಕ್ರವನ್ನು; ಧರಸ್ಯ=ಧರಿಸಿರುವ ಕೃಷ್ಣನ; ವಿರೋಧಂ=ವಿರೋಧವನ್ನು; ಚಕ್ರೇ=ಮಾಡಿದನೋ; ತದಾ=ಆಗ; ದೇವಃ=ಕೃಷ್ಣನು; ತಸ್ಯ=ಅವನ; ರೌಗ್ಮಂ=ಬಂಗಾರದ; ಧನುಃ=ಬಿಲ್ಲನ್ನು; ಮುಹುಃ=ಪುನಃಪುನಃ; ಛಿತ್ವಾ=ತುಂಡರಿಸಿ; ಭವಿಷ್ಯತ್=ಮುಂದಿನ; ಉದ್ಯೋಗಂ=ಕೆಲಸವನ್ನು; ಉತ್ಥಾಪಯತಿ ಸ್ಮ=ಉಂಟುಮಾಡಿದನು.

ಸಂಪತ್ತಿನ ಮದವುಳ್ಳವರು ಒಮ್ಮೊಮ್ಮೆ ಮಹಾತ್ಮರ ಜೊತೆ ವಿರೋಧವನ್ನು ಮಾಡುತ್ತಾರೆ. ಆಗ ಮಹಾತ್ಮರು ಅವರನ್ನು ಕೊಲ್ಲುವುದಿಲ್ಲ. ಸಂಪತ್ತನ್ನು ನಾಶಮಾಡುತ್ತಾರೆ. ಮುಂದೆ ಸಂಪತ್ತನ್ನು ಗಳಿಸಲು ಬಹಳ ಶ್ರಮಪಡುವಂತೆ ಮಾಡುತ್ತಾರೆ. ರುಗ್ಮಿ ಅಂದರೆ ಧನಿಕ ಎಂಬ ಅರ್ಥವೂ ಇದೆ. ಈ ರುಗ್ಮಿಯು ಬಹಳ ಅಹಂಕಾರಿಯು. ಮಹಾತ್ಮನಾದ ಕೃಷ್ಣನಲ್ಲಿ ವಿರೋಧವನ್ನು ಮಾಡಿದನು. ಈತನಲ್ಲಿ ಧನುರ್ವಿದ್ಯೆ ಬಹಳ ಇತ್ತು. ಕೃಷ್ಣನು ಆತನ ಎಲ್ಲಾ ಧನುಸ್ಸುಗಳನ್ನೂ ಮುರಿದು ಬಿಸಾಡಿದನು. ಹೊರತು ಈತನನ್ನು ಕೊಲ್ಲಲಿಲ್ಲ. ಯಾಕೆಂದರೆ– ಈತನು ಮುಂದೆ ಬಹಳ ಶ್ರಮಪಟ್ಟು ರುದ್ರದೇವರಿಂದ ಒಂದ ಧನುಸ್ಸನ್ನು ಪಡೆಯಬೇಕು. ಅನಂತರದಲ್ಲಿ ಸಂಹರಿಸಬೇಕು ಎಂಬ ಉದ್ದೇಶದಿಂದ.

<u>ಸಂದೇಶ</u> : ದುಷ್ಟರು ಚಿತ್ರಹಿಂಸೆಯನ್ನು ಅನುಭವಿಸುವ ಮೂಲಕವೇ ಸಾಯಬೇಕು.

**ಅಚೀಕ್ಲಪನ್ಮುಂಡಿತಮೂರ್ಧಜಂ ತಂ ಶಚೀಪತಿಸ್ತುತ್ಯಕೃತಿರ್ಮುರಾರಿಃ ।**
**ಉಪೇಕ್ಷ್ಯ ಯದ್ಗೇಹಮಗಾದ್ಧಿ ಲಕ್ಷ್ಮೀಸ್ತದೇತದಸ್ಯಾನುಗುಣಂ ಖಲಸ್ಯ ॥ ೧೦ ॥**

ಶಚಿ=ಶಚಿಯ; ಪತಿ=ಪತಿಯಿಂದ; ಸ್ತುತ್ಯ=ಹೊಗಳಲ್ಪಡುವ; ಕೃತಿಃ=ಕೆಲಸವುಳ್ಳ; ಮುರ=ಮುರಾಸುರನಿಗೆ; ಅರಿಃ=ಶತ್ರುವಾದ ಕೃಷ್ಣನು; ತಂ=ತಂಗಿಯನ್ನು(ರುಗ್ಮಿಯನ್ನು); ಮುಂಡಿತ=ಬೋಳಿಸಿದ; ಮೂರ್ಧಜಂ=ಕೂದಲುಳ್ಳವನನ್ನಾಗಿ; ಅಚೀಕ್ಲಪತ್=ಮಾಡಿದನು; ಲಕ್ಷ್ಮೀಃ=ರಮೆಯು; ಯತ್=ಯಾರ; ಗೇಹಂ=ಮನೆಯನ್ನು; ಉಪೇಕ್ಷ್ಯ=ಕಡೆಗಣಿಸಿ; ಅಗಾತ್ಹಿ=ಹೋದಳೋ; ಖಲಸ್ಯ=ದುಷ್ಟನಾದ; ಅಸ್ಯ=ಇವನಿಗೆ; ತತ್=ಅದು; ಏತತ್= ಇದು; ಅನುಗುಣಂ=ಯೋಗ್ಯವು.

ರುಗ್ಮಿಯು ಸೆರೆಸಿಕ್ಕಿದ. ಕೃಷ್ಣನು ಆತನನ್ನು ಕೊಲ್ಲಲಿಲ್ಲ. ಆತನ ತಲೆಯನ್ನು ನುಣ್ಣಗೆ ಬೋಳಿಸಿದನು. ಐದು ಕಡೆ ಶಿಖಾ ಇಟ್ಟನು. ಇದರಿಂದ ರುಗ್ಮಿಗೆ ಬಹಳ ಅವಮಾನವಾಯಿತು. ಅಪಮಾನ ಎಂಬುದು ಮರಣಕ್ಕಿಂತಲೂ ಕೀಳು. ಬೋಳಿಸುವ ಮೂಲಕ ಯಾಕೆ ಅಪಮಾನ ಮಾಡಿದ? ಉತ್ತರ– ಸಂಪದಭಿಮಾನಿನಿಯಾದ ರುಗ್ಮಿಣಿಯು ಆತನ ಮನೆಯಿಂದ ಹೊರಟಳು. ಲೋಕದಲ್ಲಿ ಸಾಮಾನ್ಯವಾಗಿ ಶ್ರೀಮಂತರು ಸಂಪತ್ತಿನಿಂದ ಭ್ರಷ್ಟರಾದಾಗ ವಿರಕ್ತರಾಗುತ್ತಾರೆ. ಸನ್ಯಾಸಿಗಳಾಗುತ್ತಾರೆ. ಸಂನ್ಯಾಸದ ಮೊದಲ ಲಕ್ಷಣ ತಲೆ ಬೋಳಿಸುವುದು. ರುಗ್ಮಿಯೂ ಈಗ ಸಂಪತ್ತಿನಿಂದ ವಂಚಿತನಾಗಿದ್ದಾನೆ. ಆದ್ದರಿಂದ ವಿರಕ್ತನಾಗಿ ಸನ್ಯಾಸದ ಕಡೆ ಮುಖಮಾಡಿದ. ಅದಕ್ಕೆ ಕೃಷ್ಣನು ತಲೆ ಬೋಳಿಸಿದನು. ಆದ್ದರಿಂದ ತಲೆ ಬೋಳಿಸುವ ಮೂಲಕ ಅಪಮಾನ ಮಾಡಿದ್ದು ಉಚಿತವೇ ಆಗಿದೆ. ಕೃಷ್ಣ ಇಂತಹ ನಿಕೃಷ್ಟ ಕೆಲಸವನ್ನು ಯಾಕೆ ಮಾಡಿದ? ಎಂದು ಕೇಳಬಾರದು. ಕೃಷ್ಣನ ಪ್ರತಿಯೊಂದು ಕೆಲಸವನ್ನೂ ಇಂದ್ರಾದಿದೇವತೆಗಳೂ ಹೊಗಳುತ್ತಾರೆ ನಿಕೃಷ್ಟರಾದ ಮಾನವರಿಗೆ ಮಾತ್ರ ಕೀಳುಮಟ್ಟದ ವ್ಯವಹಾರದಂತೆ ತೋರುತ್ತದೆ. ಇದನ್ನು ತಿಳಿಸಲು ರಾಜರು ಕೃಷ್ಣನನ್ನು ಇಂದ್ರನಿಂದ ಹೊಗಳಲ್ಪಡುವ ಕೆಲಸವುಳ್ಳವನು ಎಂದು ಹೇಳಿದ್ದು.

**<u>ಸಂದೇಶ</u>** : ವಿರಕ್ತನಾದರೂ ಸನ್ಯಾಸಿಯಾಗಬೇಕಾದರೆ ದೈವಾನುಗ್ರಹ ಅಗತ್ಯ.

**ಸಹಸ್ರಸಂಖ್ಯಾವನಿಪಾಲಭಂಗ**
**ಸಮುತ್ಥಭಾಸ್ವಜ್ಜಯಕಾಮಿನೀಭಿಃ ।**
**ಸಹಾತ್ಮದಾಸೀಭಿರನನ್ಯಕಾಂತಾ**
**ಜಗಾಮ ಸಾ ಚಂಚಲಲೋಚನಾಂತಾ** ॥ ೧೧ ॥

ಅನನ್ಯ ಕಾಂತಾ=ಬೇರೆಯವರ ಪತ್ನಿ ಅಲ್ಲದ; ಚಂಚಲ=ಚಂಚಲವಾದ; ಲೋಚನ= ಕಣ್ಣುಗಳ; ಅಂತಾ=ಕೊನೆವುಳ್ಳ; ಸಾ=ರುಗ್ಮಿಣಿಯು; ಆತ್ಮ=ತನ್ನ; ದಾಸೀಭಿಃ=ದಾಸಿಯರಾದ; ಸಹಸ್ರ=ಸಾವಿರ; ಸಂಖ್ಯಾ=ಸಂಖ್ಯೆಯ; ಅವನಿ=ಭೂಮಿಯ; ಪಾಲ=ರಕ್ಷಕರ; ಭಂಗ=ನಾಶದಿಂದ; ಸಮುತ್ಥ=ಉಂಟಾದ; ಭಾಸ್ವತ್=ಶೋಭಿಸುವ; ಜಯ=ಜಯವೆಂಬ; ಕಾಮಿನೀಭಿಃ=ನಾರಿಯರಿಂದ; ಸಹ=ಕೂಡಿಕೊಂಡು; ಜಗಾಮ=ಹೊರಟಳು.

ರುಗ್ಮಿಣಿಯು ರಾಜಕುಮಾರಿ. ಸಾಮಾನ್ಯವಾಗಿ ಬಡವರ ಮನೆಯ ಹುಡುಗಿಯೇ ಆಗಲಿ, ಲಗ್ನವಾಗಿ ಪತಿಯ ಮನೆಗೆ ಹೋಗುವಾಗ ಜೊತೆಯಲ್ಲಿ ಒಬ್ಬಳಾದರೂ ತನ್ನವಳೆಂದು ಹೇಳಿಕೊಳ್ಳಲು ಇರುತ್ತಾಳೆ. ಸದ್ಯ ರಾಜಕುಮಾರಿಯಾದ ರುಗ್ಮಿಣಿಯು ಪತಿಮನೆಗೆ ಹೋಗುವಾಗ ಬಹಳ ಜನರು ಅವಳವರಾಗಿ ಇರಬೇಕು. ಯಾರಿದ್ದರು ಎಂಬ ಪ್ರಶ್ನೆಗೆ ಶ್ರೀರಾಜರು ಉತ್ತರಿಸುತ್ತಾರೆ– ರುಗ್ಮಿಗೆ ಸಹಾಯಕರಾಗಿ ಸಾವಿರಾರು ನೃಪರು ಕೃಷ್ಣನ ಜೊತೆ ಹೋರಾಡಲು ಬಂದಿದ್ದರು. ಇವರೆಲ್ಲರನ್ನೂ ಕೃಷ್ಣನು ಸೋಲಿಸಿ ಇವರಿಂದ ಜಯ ಎಂಬ ಕನ್ಯೆಯರನ್ನು ಪಡೆದಿದ್ದನು. ಇವರೆಲ್ಲ ರುಗ್ಮಿಯ ಕಡೆಯವರು. ರುಗ್ಮಿಣಿಯು ರುಗ್ಮಿಯ ಸಹೋದರಿ. ಆದ್ದರಿಂದ ರುಗ್ಮಿಣಿಯ ಸೇವಕಿಯರೇ ಆಗಿದ್ದರು. ಇಂತಹವರಿಂದ ಕೂಡಿಕೊಂಡು ಹೊರಟಳು.

ಈ ನೃಪರನ್ನು ಬೇರೆ ಯಾರಾದರೂ ಸೋಲಿಸಿದ್ದರೆ ಅವರ ಜೊತೆ ಈಕೆ ಹೊರಡಬೇಕಿತ್ತು. ಆದರೆ ಈಕೆ ದೇವರನ್ನು ಹೊರತು ಬೇರೆ ಯಾರ ಕಾಂತೆಯೂ ಅಲ್ಲ. ಆದ್ದರಿಂದ ಕೃಷ್ಣನೇ ಸೋಲಿಸಿದ. ಚಿಕ್ಕ ಹುಡುಗಿ. ವಿವಾಹದ ಸಂದರ್ಭವೂ ಹೌದು. ಆದ್ದರಿಂದ ತುಂಬಾ ನಾಚಿದ್ದಾಳೆ. ಇದು ಸ್ತ್ರೀಯರ ಸಂಪತ್ತು ಎಂದು ತಿಳಿಸಲು ಶ್ರೀರಾಜರು ಚಂಚಲವಾದ ಕಣ್ಣುಳ್ಳವಳು ಎಂದು ತಿಳಿಸಿದ್ದಾರೆ.

**ಸಂದೇಶ** : ಪತ್ನಿಯರೆಂಬ ಭಾವನೆಯಿಂದ ನಾವು ದೇವರ ಜೊತೆ ಹೊರಡುವಾಗ ಶಾಸ್ತ್ರದ ಮಾತುಗಳೆಂಬ ಗೆಳತಿಯರು ನಮ್ಮ ಜೊತೆಗೆ ಇರಬೇಕು.

**ತದ್ಯೋಧಾ ಜಯಕಾಮಿನೀಜನಯುತಾ ಗರ್ಜಂತಿ ಧೈರ್ಯೋರ್ಜಿತಾಃ**
**ಯುದ್ಧಾಪ್ತಾಃ ವಡವಾ ನಿರೀಕ್ಷ್ಯ ತುರಗಾಃ ಹ್ರೇಷಾಂ ಮುಹುಸ್ತನ್ವತೇ ।**
**ಹಸ್ತೀಂದ್ರಾಃ ಕರಿಣೀಃ ಸಮೇತ್ಯ ಪರಿತಃ ಕುರ್ವಂತ್ಯಹೋ ಬೃಂಹಿತಂ**
**ಭಕ್ತಾಭೀಷ್ಟಕರೋ ಹರಿರ್ನನು ಪುರಾ ಸ್ವೀಯಾನ್ ಸಜಾಯಾನ್ ವ್ಯಧಾತ್॥ ೧೨ ॥**

ಧೈರ್ಯ=ಧೈರ್ಯದಿಂದ; ಊರ್ಜಿತಾಃ=ಬೆಳೆದ; ತತ್=ಕೃಷ್ಣನ; ಯೋಧಾಃ=ಸೈನಿಕರು; ಜಯ=ಜಯವೆಂಬ; ಕಾಮಿನೀ=ನಾರೀ; ಜನ=ಜನರಿಂದ; ಯುತಾಃ=ಕೂಡಿಕೊಂಡು; ಗರ್ಜಂತಿ=ಜೈಕಾರವನ್ನು ಹೇಳುತ್ತಿದ್ದರು; ತುರಗಾಃ=ಕುದುರೆಗಳು; ಯುದ್ಧ=ಯುದ್ಧದಲ್ಲಿ; ಆಪ್ತಾಃ=ಬಂದಿರುವ; ವಡವಾಃ=ಹೆಣ್ಣುಕುದುರೆಗಳನ್ನು; ನಿರೀಕ್ಷ್ಯ=ನೋಡಿ; ಮುಹುಃ=ಪುನಃ ಪುನಃ; ಹ್ರೇಷಾಂ=ಶಬ್ದವನ್ನು; ತನ್ವತೇ=ಮಾಡುತ್ತವೆ; ಹಸ್ತಿ=ಆನೆಗಳಿಗೆ; ಇಂದ್ರಾಃ=ಶ್ರೇಷ್ಠಗಳು; ಕರಿಣೀಃ=ಹೆಣ್ಣು ಆನೆಗಳನ್ನು; ಪರಿತಃ=ಸುತ್ತಲೂ; ಸಮೇತ್ಯ=ಹೊಂದಿ; ಬೃಂಹಿತಂ= ಧ್ವನಿಯನ್ನು; ಕುರ್ವಂತಿ=ಮಾಡುತ್ತವೆ; ಭಕ್ತ=ಭಕ್ತರ; ಅಭೀಷ್ಟ=ಇಷ್ಟವನ್ನು; ಕರಃ=ಮಾಡುವ; ಹರಿಃ=ಕೃಷ್ಣನು; ಪುರಾ=ಮೊದಲು; ಸ್ವೀಯಾನ್=ತನ್ನವರನ್ನು; ಸಜಾಯಾನ್=ಸಪತ್ನೀ ಕರನ್ನಾಗಿ; ವ್ಯಧಾತ್ ನನು=ಮಾಡಿದನಷ್ಟೇ.

೮೪ ಲಕ್ಷ ಯೋನಿಗಳಲ್ಲಿಯೂ ಭಗವದ್ಭಕ್ತರು ಇದ್ದಾರೆ. ಅವುಗಳಲ್ಲಿ ಸೇರಿದ ಕೆಲವು ನರರು, ಆನೆಗಳು, ಕುದುರೆಗಳು ಕೃಷ್ಣನ ಸೈನ್ಯದಲ್ಲಿ ಇವೆ. ಇವುಗಳು ಕೃಷ್ಣನ ಭಕ್ತರಾದ್ದರಿಂದ ಸೈನ್ಯದಲ್ಲಿ ಸೇರಿ ಕೃಷ್ಣನ ಸೇವೆಮಾಡುವ ಭಾಗ್ಯ ಬಂದಿದೆ. ಕೃಷ್ಣನು ಭಕ್ತರಲ್ಲಿ ಪ್ರೀತಿ ಉಳ್ಳವನು. ತಾನು ಏನನ್ನು ಪಡೆಯುವುದಾದರೂ ಮೊದಲು ತನ್ನ ಭಕ್ತರಿಗೆ ಒದಗಿಸುತ್ತಾನೆ. ಈಗ ಕೃಷ್ಣನಿಗೆ ರುಗ್ಮಿಣಿಯಿಂದ ವಿವಾಹವಾಗಲಿದೆ. ಅದಕ್ಕಿಂತ ಮೊದಲು ಸೈನಿಕರಿಗೆ ಕುದುರೆಗಳಿಗೆ ಆನೆಗಳಿಗೆ ಮಾಡಿಸುತ್ತಾನೆ.

ಕೃಷ್ಣನ ಸೈನಿಕರು ಬಹಳ ಧೈರ್ಯಶಾಲಿಗಳು. ಆದ್ದರಿಂದ ಶತ್ರುಗಳಿಂದ ಜಯ ನಿಶ್ಚಿತ. ಈ ಜಯವೆಂಬ ನಾರಿಯರ ಜೊತೆ ತನ್ನ ಸೈನಿಕರನ್ನು ಕೃಷ್ಣನು ಕೂಡಿಸಿದನು. ಸೈನ್ಯಗಳಲ್ಲಿ ಗಂಡುಹೆಣ್ಣು ಆನೆಕುದುರೆಗಳು ಇರುವುದು ಸಹಜ. ಯುದ್ಧದಲ್ಲಿ ಇವುಗಳು ಸಹಜವಾಗಿ ಎದುರಾಗುತ್ತವೆ. ಆಗ ಉತ್ಸಾಹದಿಂದ ಘರ್ಜಿಸುತ್ತವೆ. ಸೈನಿಕರು ಜಯ ಲಭಿಸಿತು ಎಂದು ಉತ್ಸಾಹದಿಂದ ಬೊಬ್ಬಿಡುತ್ತಾರೆ. ಹೀಗೆ ಕೃಷ್ಣನು ಭಕ್ತರ ಅಭೀಷ್ಟಗಳನ್ನು ಮೊದಲು ಪೂರೈಸುತ್ತಾನೆ.

<u>**ಸಂದೇಶ**</u> : 'ಭಕ್ತಜನ ಮುಂದೆ ನೀನವರ ಹಿಂದೆ' ಎಂಬುದು ದಾಸವಾಣಿ.

**ಅಲಂಕೃತಾಂ ನಿಜಪುರೀಂ ಜಲಜಾಯತಲೋಚನಃ ।**
**ಹಯಹಸ್ತಿರಥೋಪೇತಃ ಪ್ರಿಯಾಯಾ ಸಹಿತೋಽವಿಶತ್ ॥ ೧೩ ॥**

ಜಲಜಃ=ತಾವರೆಯಂತೆ; ಆಯತ=ವಿಶಾಲವಾದ; ಲೋಚನಃ=ಕಣ್ಣುಳ್ಳ; ಹಯ=ಕುದುರೆಗಳು; ಹಸ್ತಿ=ಆನೆಗಳು; ರಥ=ರಥಗಳಿಂದ; ಉಪೇತಃ=ಕೂಡಿದ; ಪ್ರಿಯಯಾ=ಪ್ರಿಯಳಿಂದ; ಸಹಿತಃ=ಕೂಡಿದ ಕೃಷ್ಣನು; ಅಲಂಕೃತಾಂ=ಅಲಂಕರಿಸಲ್ಪಟ್ಟ; ನಿಜ=ತನ್ನ; ಪುರೀಂ=ಊರನ್ನು; ಅವಿಶತ್=ಪ್ರವೇಶಿಸಿದನು.

ಕೃಷ್ಣನು ಸದಾ ಹಸನ್ಮುಖಿ. ವಿಶಾಲವಾದ ಕಣ್ಣುಳ್ಳವನು. ನೋಟದಲ್ಲಿ ಆರ್ದ್ರತೆಯೂ ಇದೆ. ಈತನ ಸೈನ್ಯದಲ್ಲಿ ಯಾವುದೇ ಸಾವು ನೋವು ಉಂಟಾಗಲಿಲ್ಲ. ಇಂತಹ ಸೈನ್ಯದಿಂದ ಕೂಡಿಕೊಂಡು ತನ್ನ ದ್ವಾರಕೆಯನ್ನು ಪ್ರವೇಶಿಸಿದನು. ಜೊತೆಯಲ್ಲಿ ರುಗ್ಮಣಿಯೂ ಇದ್ದಳು. ನೂತನ ವಧು ಬರುತ್ತಿದ್ದಾಳೆಂದು ನಾಗರಿಕರು ಇಡೀ ದ್ವಾರಕೆಯನ್ನೇ ಅಲಂಕರಿಸಿದ್ದಾರೆ.

<u>**ಸಂದೇಶ**</u> : ರಮಾನಾರಾಯಣರು ದೇಹವೆಂಬ ಮನೆಯನ್ನು ಪ್ರವೇಶಿಸಬೇಕಾದರೆ ಸು-ವರ್ಣ(ಒಳ್ಳೆಯ ಅಕ್ಷರ)ಗಳಿಂದ ಅಲಂಕರಿಸಬೇಕು.

**ಕರಂ ಜಿಘೃಕ್ಷುರ್ವೈದರ್ಭ್ಯಾಃ ಶರಣ್ಯೋಽಥ ಯಥಾ ವಿಧಿ ।**
**ಪ್ರಿಯಯಾ ಬಂಧುಭಿಃ ಸಾರ್ಧಂ ಪ್ರಯಯೌ ಮೂಲಮಾಧವಮ್ ॥ ೧೪ ॥**

ಅಥ=ಅನಂತರ; ಶರಣ್ಯಃ=ಆಶ್ರಯನಾದ ಕೃಷ್ಣನು; ವೈದರ್ಭ್ಯಾಃ=ರುಗ್ಮಿಣಿಯ;

ಕರಂ=ಕೈಯನ್ನು; ಯಥಾವಿಧಿ=ಶಾಸ್ತ್ರೀಯವಾಗಿ; ಜಿಘೃಕ್ಷುಃ=ಹಿಡಿಯುವ ಇಚ್ಛೆ ಉಳ್ಳವನಾಗಿ; ಪ್ರಿಯಯಾ=ಪ್ರಿಯಳಿಂದ; ಬಂಧುಭಿಃ=ಬಂಧುಗಳಿಂದ; ಸಾರ್ಧಂ=ಕೂಡಿಕೊಂಡು; ಮೂಲಮಾಧವಮ್=ಮೂಲಮಾಧವ ಎಂಬ ಕ್ಷೇತ್ರವನ್ನು; ಪ್ರಯಯೌ=ಹೊರಟನು.

ಕೃಷ್ಣನು ಭಕ್ತಜನರಿಗೆ ಆಶ್ರಯನು. ರುಗ್ಮಿಣಿದ್ದು ಸ್ವಯಂವರ. ಅಂದರೆ ಗಾಂಧರ್ವ-ವಿವಾಹ. ಈ ವಿವಾಹದಲ್ಲಿ ಕನ್ಯಾದಾನದ ಆವಶ್ಯಕತೆ ಇಲ್ಲ. ಆದರೂ ಕೃಷ್ಣನೂ ಆ ವಿಧಿಯನ್ನು ಆಚರಿಸುತ್ತಾನೆ. ಕೃಷ್ಣನೇ ಈ ಕ್ರಮಗಳನ್ನು ಮಾಡದಿದ್ದರೆ ಕೃಷ್ಣಭಕ್ತರು ಯಾರೂ ಅನುಸರಿಸಲಿಕ್ಕಿಲ್ಲ. ಇದರಿಂದ ಜನರ ಜೀವನ ಕ್ಲೇಶದಾಯಕವಾಗುತ್ತದೆ. ಕೃಷ್ಣನಿಗಾದರೂ ಏನೂ ಆಗುವುದಿಲ್ಲ. ಆದ್ದರಿಂದ ತನ್ನ ಜನರಲ್ಲಿ ಅನುಕಂಪದಿಂದ ಇವಳನ್ನು ಹಾಗೂ ಬಂಧುಗಳನ್ನು ಕರೆದುಕೊಂಡು ಮೂಲಮಾಧವ ಎಂಬ ಕ್ಷೇತ್ರಕ್ಕೆ ಹೋದನು. ಲಗ್ನವಾಗದೆ ಹುಡುಗಿಯನ್ನು ಮನೆ ಒಳಗೆ ಕರೆದುಕೊಳ್ಳುವಂತಿಲ್ಲ. ಹಾಗಾಗಿ ಊರ ಹೊರಗಿರುವ ಕ್ಷೇತ್ರಕ್ಕೆ ಹೋದನು.

**ಸಂದೇಶ** : ಅಪರೋಕ್ಷಿಗಳೂ ಶಾಸ್ತ್ರವಿಧಿಯನ್ನು ಮೀರಬಾರದು.

**ಗಚ್ಛಂತಮಾಸ್ಥಾಪಯತೀವ ಕೃಷ್ಣಂ**
**ದ್ವಾರಾವತೀ ತತ್ಕೃತರಮ್ಯಶೋಭಾ ।**
**ಕಾಂತ್ಯೋಲ್ಲಸನ್ತ್ಯೋಭಯ ಭಾಗಹೇಮ್ನಾಂ**
**ದ್ವಾರ್ಯಂಚಲೇನಾಭಿಮುಖೇ ಮುರಾರೇಃ** ॥ ೧೫ ॥

ತತ್=ಕೃಷ್ಣನಿಂದ; ಕೃತ=ಮಾಡಲ್ಪಟ್ಟ; ರಮ್ಯ=ಚಂದದ; ಶೋಭಾ=ಕಾಂತಿವುಳ್ಳ; ದ್ವಾರಾವತೀ=ದ್ವಾರಾವತಿಯು; ಮುರಾರೇಃ=ಕೃಷ್ಣನ; ಅಭಿಮುಖೇ=ಮುಂಭಾಗದಲ್ಲಿ; ದ್ವಾರ=ಬಾಗಿಲಿನಲ್ಲಿ; ಉಭಯ=ಎರಡು; ಭಾಗ=ಪ್ರದೇಶಗಳ; ಹೇಮ್ನಾಂ=ಬಂಗಾರಗಳ; ಉಲ್ಲಸಂತ್ಯಾ=ಶೋಭಿಸುವ; ಕಾಂತ್ಯಾ=ಕಾಂತಿಯಿಂದ; ಅಂಚಲೇನ=ತುದಿಯಿಂದ; ಗಚ್ಛಂತಂ=ಹೊರಟಿರುವ; ಕೃಷ್ಣಂ=ಕೃಷ್ಣನನ್ನು; ಆಸ್ಥಾಪಯತಿ ಇವ=ತಡೆಯುವಂತೆ ಇದೆ.

ಕೃಷ್ಣನ ವಾಸದಿಂದ ದ್ವಾರಾವತಿಯಲ್ಲಿ ಸಹಜವಾಗಿ ಮಹತ್ವ ಇದೆ. ಸಮಗ್ರ ದ್ವಾರಾವತಿಯೇ ಬಂಗಾರಮಯ. ಬಾಗಿಲುಗಳಲ್ಲಿ ವಿಶೇಷವಾಗಿ ಬಂಗಾರದ ಹೊದಿಕೆ. ಶ್ರೀಮಂತರ ಮನೆಗಳಲ್ಲಿ ಬಾಗಿಲು ಕಿಟಕಿಗಳಿಗೆ ವಸ್ತ್ರದ ಹೊದಿಕೆಗಳನ್ನು ಇಳಿಬಿಡುತ್ತಾರೆ. ದ್ವಾರಾವತಿಯಲ್ಲಿ ಬಂಗಾರಗಳಿಂದ ಹೊರಟಿರುವ ಕಾಂತಿಗಳೇ ಇಳಿಬಿಟ್ಟ ಬಟ್ಟೆಗಳಂತೆ ತೋರುತ್ತವೆ. ಕೃಷ್ಣನು ಇಂತಹ ಬಾಗಿಲಿನಿಂದ ಹೊರಗೆ ಹೊರಟಿದ್ದಾನೆ. ಆಗ ದ್ವಾರಾವತಿಯು ಬಾಗಿಲಲ್ಲಿ ಹರಡಿರುವ ಕಾಂತಿಯೆಂಬ ವಸ್ತ್ರದಿಂದ ಕೃಷ್ಣನನ್ನು ತಡೆಯುವಂತೆ ತೋರುತ್ತದೆ. ಪತಿಯು ಮನೆಯಿಂದ ಹೊರಟಾಗ ಆತನ ವಿರಹವನ್ನು ಸಹಿಸಲಾರದ ಕಾಂತೆಯು ಆತನನ್ನು ತನ್ನ ಬಟ್ಟೆಯ ತುದಿಯಿಂದ ಕಟ್ಟುವಂತೆ.

**ಸಂದೇಶ** : ದೇವರನ್ನು ಸದಾ ನಮ್ಮ ಹೃದಯದಲ್ಲಿ ನೆಲೆಸಿರುವಂತೆ ಮಾಡಬೇಕು.

**ಕೃಷ್ಣೇ ಬಲಾದ್ವ್ರಜತಿ ಸಾ ದ್ರವದಿಂದುಕಾಂತ್ಯೈಃ**
**ತನ್ಮಂದಹಾಸನವಚಂದ್ರಿಕಯಾಶ್ರುಧಾರಾಮ್ ।**
**ತತ್ಸೈನ್ಯಸಂಭ್ರಮಸಮುತ್ಥರಜೋಭಿರಾಸ್ಯ–**
**ಮಾಲಿನ್ಯಮುದ್ಗತವಚೋ ರಭಸಾ ಬಿಭಾರ ॥ ೧೬ ॥**

ಕೃಷ್ಣೇ=ಕೃಷ್ಣನು; ಬಲಾತ್=ಬಲಾತ್ಕಾರದಿಂದ; ವ್ರಜತಿ ಸತಿ=ಹೋಗುತ್ತಿರಲು; ಸಾ= ದ್ವಾರಕೆಯು; ತತ್=ಕೃಷ್ಣನ; ಮಂದಹಾಸ=ನಗುವೆಂಬ; ನವ=ಹೊಸದಾದ; ಚಂದ್ರಿಕಯಾ= ಬೆಳದಿಂಗಳಿನಿಂದ; ದ್ರವತ್=ಕರಗುವ; ಇಂದುಕಾಂತ್ಯೈಃ=ಚಂದ್ರಕಾಂತಗಳಿಂದ; ಅಶ್ರು= ಕಣ್ಣೀರಿನ; ಧಾರಾಂ=ಸಮೂಹವನ್ನು; ಉದ್ಗತ=ಹೊರಟ; ವಚಾ=ಮಾತಿನ; ರಭಸಾ= ವೇಗವುಳ್ಳವಳಾಗಿ; ತತ್=ಕೃಷ್ಣನ; ಸೈನ್ಯ=ಸೈನ್ಯದ; ಸಂಭ್ರಮ=ಸಂಭ್ರಮದಿಂದ; ಸಮುತ್ಥ= ಉಂಟಾದ; ರಜೋಭಿಃ=ಧೂಳುಗಳಿಂದ; ಆಸ್ಯ=ಮುಖದ; ಮಾಲಿನ್ಯಂ=ಮಾಲಿನ್ಯ ವನ್ನು; ಬಿಭಾರ=ಧರಿಸಿತು.

ದ್ವಾರಕೆಯು ಕಾಂತಿಯೆಂಬ ಬಟ್ಟೆಯಿಂದ ಕೃಷ್ಣನನ್ನು ತಡೆದರೂ ಆತನು ಹೊರಟೇ ಬಿಟ್ಟನು. ದ್ವಾರಾವತಿಯು ಸೋತಳು. ಆಗ ಕೃಷ್ಣನು ಮಂದಹಾಸ ಬೀರಿದನು. ಈ ಹಾಸವು ಬೆಳದಿಂಗಳಿನಂತೆ ಇತ್ತು. ಬೆಳದಿಂಗಳಿಗೆ ಚಂದ್ರಕಾಂತ ಎಂಬ ಶಿಲೆಯು ಕರಗಿ ನೀರಾಗುತ್ತದೆ. ದ್ವಾರಾವತಿಯ ಗೋಡೆಗಳು ಇಂತಹ ಶಿಲೆಗಳಿಂದಲೂ ನಿರ್ಮಿತವಾಗಿವೆ. ಆದ್ದರಿಂದ ಇವುಗಳೂ ನೀರಾದವು. ಇದೇ ದ್ವಾರಾವತಿಯ ಕಣ್ಣೀರು. ಕೃಷ್ಣನು ಹೊರಟಾಗ ಆತನ ಚತುರಂಗಸೈನ್ಯವೂ ರಭಸವಾಗಿ ಹೊರಟಿತು. ಆಗ ಧೂಳು ಏಳುವುದು ಸಹಜ. ಈ ಧೂಳು ದ್ವಾರಕೆಯ ಗೋಪುರವನ್ನು ಆವರಿಸಿತು. ಗೋಪುರವು ದ್ವಾರಕೆಯ ಮುಖ ದಂತೆ– ಮಾನವನ ದೇಹದಲ್ಲಿ ಮುಖವು ಎತ್ತರದಲ್ಲಿ ಇರುತ್ತದೆ. ಆದ್ದರಿಂದ ಗೋಪುರಕ್ಕೆ ಮುಖದ ಹೋಲಿಕೆ. ಧೂಳು ಮುಸುಕಿದ್ದರಿಂದ ಗೋಪುರವು ಕಳೆಗುಂದಿದೆ. ಎಲ್ಲಾ ಜನರೂ ಕೃಷ್ಣನ ಜೊತೆಗೆ ಹೊರಟದ್ದರಿಂದ ದ್ವಾರಾವತಿಯಲ್ಲಿ ಮಾತೂ ಇಲ್ಲ.

ಪತಿಯು ಮನೆಯಿಂದ ಹೊರಟಾಗ ಪ್ರಿಯಳಾದ ಪತ್ನಿಯು ತಡೆಯುತ್ತಾಳೆ. ಆದರೂ ಪತಿಯು ನಗುತ್ತಲೇ ಹೊರಡುತ್ತಾನೆ. ಇದರಿಂದ ನೊಂದ ಆಕೆಯ ಕಣ್ಣುಗಳು ತೇವಗೊಳ್ಳುತ್ತವೆ. ಮುಖವು ಮಲಿನವಾಗುತ್ತದೆ. ಬಾಯಿಂದ ಮಾತೇ ಹೊರಡುವುದಿಲ್ಲ. ಅದೇ ರೀತಿಯಾದ ಅವಸ್ಥೆಯು ದ್ವಾರಕೆಗೂ ಆಯಿತು ಎಂದು ಶ್ರೀರಾಜರು ಚಿತ್ರಿಸುತ್ತಾರೆ.

**ಸಂದೇಶ** : ಪ್ರತಿಯೊಂದು ವಸ್ತುವಿಗೂ ಒಂದು ಅಭಿಮಾನಿದೇವತೆ ಇರುತ್ತದೆ. ಅದು ತನ್ನ ಅಭಿಮನ್ಯಮಾನ ವಸ್ತುವಿನಲ್ಲಿ ದೇವರ ಸನ್ನಿಧಾನವನ್ನು ಆಶಿಸುತ್ತದೆ.

ಭರ್ತುಸ್ತತಃ ಪ್ರತಿಕೃತಿಂ ಸ್ಫುರದಾತ್ಮವಪ್ರ-
ಲಗ್ನೋಚ್ಚರತ್ನನಿಕರೇಷು ನಿಧಾಯ ದೀನಾ ।
ತಸ್ಥಾವಿವಾಥ ಫಲಿತಾಚ್ಯುತಭೂಷಣೇಷು
ವಿಶ್ಲೇಷಶಂಕಿಹೃದಯಾಽನುಯಯಾವಿವೇಶಮ್ ॥ ೧೭ ॥

ತತಃ=ಅನಂತರ; ದೀನಾ=ದುಃಖಿತಳಾದ ದ್ವಾರಕೆಯು; ಸ್ಫುರತ್=ಶೋಭಿಸುವ; ಆತ್ಮ=ತನ್ನ; ವಪ್ರ=ಗೋಡೆಯಲ್ಲಿ; ಲಗ್ನ=ಇರುವ; ಉಚ್ಚ=ದೊಡ್ಡದಾದ; ರತ್ನ=ರತ್ನಗಳ; ನಿಕರೇಷು=ಸಮೂಹಗಳಲ್ಲಿ; ಭರ್ತುಃ=ಪತಿಯ; ಪ್ರತಿಕೃತಿಂ=ಚಿತ್ರವನ್ನು; ನಿಧಾಯ=ಇಟ್ಟು; ತಸ್ಥೌಇವ=ನಿಂತಳಂತೆ; ಅಥ=ಅನಂತರ; ಅಚ್ಯುತ=ಕೃಷ್ಣನ; ಭೂಷಣೇಷು=ಆಭರಣ ಗಳಲ್ಲಿ; ಫಲಿತಾ=ಪ್ರತಿಬಿಂಬಿತಳಾಗಿ; ವಿಶ್ಲೇಷ=ಅಗಲುವಿಕೆಯ; ಶಂಕಿ=ಸಂಶಯದ; ಹೃದಯಾ=ಮನ ಉಳ್ಳವಳಾಗಿ; ಈಶಂ=ಕೃಷ್ಣನನ್ನು; ಅನುಯಯೌ ಇವ=ಅನುಸರಿಸಿದ ಳಂತೆ.

ಕೃಷ್ಣನು ಹೊರಟೇ ಹೋದನು. ಪುನಃ ತಡೆದರೆ ಆತನು ಬೇಸರಗೊಳ್ಳುತ್ತಾನೆ ಎಂಬ ಭಯದಿಂದ ತಡೆಯಲಿಲ್ಲ. ಕೃಷ್ಣನ ವಿರಹದಿಂದ ಈಕೆ ಬಹಳ ದುಃಖಿಯಾದಳು. ಲೋಕದಲ್ಲಿ ಪತಿಯ ವಿರಹವನ್ನು ತಾಳಲಾರದ ನಾರಿಯರು ಆತನ ಚಿತ್ರವನ್ನು ತಮ್ಮಲ್ಲಿ ಇಟ್ಟುಕೊಂಡು ತೃಪ್ತಿ ಪಡುತ್ತಾರೆ. ಈ ದ್ವಾರಕೆಯೂ ಹಾಗೇ ಮಾಡಿದಳು– ಈ ದ್ವಾರಕೆಯ ಗೋಡೆಗಳಲ್ಲಿ ನವರತ್ನಗಳಿವೆ. ಇವುಗಳು ದೊಡ್ಡ ದೊಡ್ಡ ಕಲ್ಲುಗಳು. ಕೃಷ್ಣನು ಹೊರಗೆ ಹೊರಟಾಗ ಆತನ ಪ್ರತಿಬಿಂಬ ಈ ಕಲ್ಲುಗಳಲ್ಲಿ ಮೂಡಿತು. ಇದು ಕೃಷ್ಣನ ಚಿತ್ರ. ಇದನ್ನು ದ್ವಾರಕೆಯು ತನ್ನಲ್ಲಿ ಇಟ್ಟುಕೊಂಡು ತೃಪ್ತಿ ಪಡುವಂತೆ ತೋರುತ್ತಿತ್ತು.

ಪತಿಯಲ್ಲಿ ಅಗಾಧವಾದ ಪ್ರೀತಿ ಇದ್ದರೆ ಅಂತಹ ನಾರಿಗೆ ಪತಿಯ ಚಿತ್ರವು ಸಾಕೆನಿಸುವು ದಿಲ್ಲ. ಆಗ ಅವಳು ಪತಿಯನ್ನೇ ಅನುಸರಿಸುತ್ತಾಳೆ. ಇದೂ ಲೋಕದ ರೂಢಿ. ದ್ವಾರಕೆಗೆ ಕೃಷ್ಣನಲ್ಲಿ ಬಹಳ ಅನುರಾಗ ಇದೆ. ಆದ್ದರಿಂದ ಕೃಷ್ಣನ ಚಿತ್ರದಿಂದ ತೃಪ್ತಿ ಆಗಲಿಲ್ಲ. ಕೊನೆಗೆ ತಾನೇ ಕೃಷ್ಣನನ್ನು ಅನುಸರಿಸಿದಳು. ಹೇಗೆಂದರೆ– ಕೃಷ್ಣನ ಮೈಯಲ್ಲಿಯೂ ನವರತ್ನಖಚಿತ ಹಾರಗಳಿದ್ದವು. ಈ ಹರಳುಗಳಲ್ಲಿ ದ್ವಾರಕೆಯ ಪ್ರತಿಬಿಂಬ ಮೂಡಿತ್ತು. ಇದು ದ್ವಾರಕೆಯು ಕೃಷ್ಣನ ಹಿಂದೆ ಹೋದಂತೆ ಇತ್ತು.

**ಸಂದೇಶ** : ನಾವು ದೇವರ ಸಂಪರ್ಕದಲ್ಲಿದ್ದರೆ ದೇವರು ನಮ್ಮ ಸಂಪರ್ಕದಲ್ಲಿ ಇರುತ್ತಾನೆ.

ಚಲತ್ಪತಾಕಾನಿಲನಿರ್ಮಲೀಕೃತೇ ರಥೌಘಚಕ್ರಾವಲಿಭಿಃ ಸಮೀಕೃತೇ ।
ಸುರಾಲಿಮುಕ್ತಾಮಲಪುಷ್ಪಲಾಂಛಿತೇ ಗಜೇಂದ್ರದಾನಾಂಬುಕದಂಬಸಿಂಚಿತೇ ॥ ೧೮ ॥

ಚಲತ್=ಅಲುಗಾಡುವ; ಪತಾಕ=ಧ್ವಜಗಳ; ಅನಿಲ=ಗಾಳಿಯಿಂದ; ನಿರ್ಮಲೀ-

ಕೃತೇ=ಶುಚಿಮಾಡಲ್ಪಟ್ಟ; ರಥ=ರಥಗಳ; ಓಘ=ಗುಂಪುಗಳ; ಚಕ್ರ=ಚಕ್ರಗಳ; ಆವಲಿಭಿಃ= ಸಮೂಹಗಳಿಂದ; ಸಮೀಕೃತೇ=ಸಮಮಾಡಲ್ಪಟ್ಟ; ಸುರ=ದೇವತೆಗಳ; ಅಲಿ= ಸಮೂಹದಿಂದ; ಮುಕ್ತ=ಸಿಂಪಡಿಸಲ್ಪಟ್ಟ; ಅಮಲ=ನಿರ್ಮಲವಾದ; ಪುಷ್ಪ=ಹೂಗಳಿಂದ; ಲಾಂಛಿತೇ=ಚಿಹ್ನಿತವಾದ; ಗಜೇಂದ್ರ=ಶ್ರೇಷ್ಠ ಆನೆಗಳ; ದಾನಾಂಬು=ಮದಜಲದ; ಕದಂಬ=ಸಮೂಹದಿಂದ; ಸಿಂಚಿತೇ=ಸಿಂಪಡಿಸಲ್ಪಟ್ಟ; ರಾಜಮಾರ್ಗೇ=ರಾಜಮಾರ್ಗದಲ್ಲಿ; ಮಂದಂ=ಮೆಲ್ಲಗೆ; ಯಯೌ=ಹೋಯಿತು.

ಈ ಶ್ಲೋಕವನ್ನು ಆರಂಭಿಸಿ ೫ನೆಯ ಶ್ಲೋಕದವರೆಗೆ ಕೃಷ್ಣನು ಹೊರಟ ಮಾರ್ಗದ ವರ್ಣನೆ. ಆದ್ದರಿಂದ ಕರ್ತೃಪದ ಕ್ರಿಯಾಪದಗಳು ೫ನೆಯ ಶ್ಲೋಕದಲ್ಲಿ ಇವೆ. ಕೃಷ್ಣನ ಸೈನ್ಯವೇ ಆತನ ದಾರಿಯನ್ನು ವೈಭವೀಕರಿಸಿತು.

ರಥಗಳ ಧ್ವಜಗಳು ಗಾಳಿಗೆ ಅಲುಗಾಡುತ್ತಿದ್ದವು. ಇದರಿಂದ ಗಾಳಿಗೆ ಇನ್ನಷ್ಟು ವೇಗ ಬರುತ್ತಿತ್ತು. ಇಂತಹ ಗಾಳಿಯು ಕೃಷ್ಣನು ಹೋಗುವ ಮಾರ್ಗದ ಕಸಕಡ್ಡಿಗಳನ್ನು ದೂರ ಎಸೆಯುತ್ತಿತ್ತು. ಇದರಿಂದ ಮಾರ್ಗವು ಸ್ವಚ್ಛವಾಗುತ್ತಿತ್ತು. ಕೃಷ್ಣನು ಹೋಗುವ ದಾರಿಯು ಏರುಪೇರಾಗಿತ್ತು. ಕೃಷ್ಣನ ಜೊತೆಗೆ ಆತನ ರಥಗಳೂ ಮುಂದಿನಿಂದ ಸಾಗುತ್ತಿದ್ದವು. ಈ ರಥಗಳ ಚಕ್ರಗಳಿಗೆ ದಾರಿಯಲ್ಲಿರುವ ದೊಡ್ಡ ದೊಡ್ಡ ಮಣ್ಣಿನ ಹೆಂಟೆಗಳು ಪುಡಿಯಾಗಿ ನೆಲವು ಸಮತಟ್ಟಾಗುತ್ತಿತ್ತು. ಈ ಸಂದರ್ಭದಲ್ಲಿ ದೇವತೆಗಳು ಕೃಷ್ಣನ ಮೇಲೆ ಹೂಮಳೆಗೈಯುತ್ತಿದ್ದರು. ಆ ಹೂಗಳು ದಾರಿಯುದ್ದಕ್ಕೂ ಚೆಲ್ಲಿದ್ದವು. ಇದರಿಂದ ಇದು ಕೃಷ್ಣನ ಮಾರ್ಗ ಎಂದು ತಿಳಿಯುತ್ತಿತ್ತು. ಹಾಗೆಯೇ ಜೊತೆಯಲ್ಲಿ ಬಹಳ ಜಾತಿ ಆನೆಗಳಿದ್ದವು. ಇವುಗಳ ಕುಂಭಸ್ಥಳದಿಂದ ಮದಜಲವು ಬಹಳವಾಗಿ ಸುರಿಯುತ್ತಿತ್ತು. ಮಾರ್ಗದಲ್ಲಿ ಬೀಳುತ್ತಿತ್ತು. ಇದು ಕೃಷ್ಣನ ದಾರಿಯನ್ನು ನೀರಿನಿಂದ ಸಿಂಪಡಿಸಿದಂತೆ ಇತ್ತು.

ಲೋಕದಲ್ಲಿ ರಾಜರುಗಳು ಹೋಗುವ ದಾರಿಯೂ ಈ ರೀತಿ ಇರುತ್ತದೆ. ಮೊದಲು ಎತ್ತರ ತಗ್ಗು ಇದ್ದದ್ದನ್ನು ಸರಿಮಾಡುತ್ತಾರೆ. ಅನಂತರ ಕಸಗುಡಿಸುತ್ತಾರೆ. ನೀರಿನಿಂದ ಸಿಂಪಡಿಸಿ ಹೂಗಳಿಂದ ಅಲಂಕರಿಸುತ್ತಾರೆ. ಲೋಕದಲ್ಲಿ ಉದ್ದೇಶಪೂರ್ವಕವಾಗಿ ಮಾಡುತ್ತಾರೆ. ಕೃಷ್ಣನಲ್ಲಿ ಸಹಜವಾಗಿ ಆಯಿತು. ಇಷ್ಟೇ ವ್ಯತ್ಯಾಸ.

<u>**ಸಂದೇಶ**</u> : ದೇವರು ಬಂದು ಹೋಗುವ ದಾರಿ ಸದಾ ಸ್ವಚ್ಛವಾಗಿರಬೇಕು.

**ವರಾಶ್ವವಾರೋಚ್ಚಯ ಸೂಚಿತೈರ್ಹಯೈಃ**
**ಇತಸ್ತತೋ ಮಂಡಲಧಾವನೋದ್ಯತೈಃ ।**
**ಪರಿಸ್ಫುರದ್ಭೂಷಣಚಾಮರೋಜ್ವಲೈಃ**
**ವಿರಾಜಿತೇ ಹ್ರೇಷಿತಭೂಷಿತಾನನೈಃ** ॥ ೧೯ ॥

ವರ=ಶ್ರೇಷ್ಠರಾದ; ಅಶ್ವವಾರ=ಕುದುರೆವಾಹಕರ; ಉಚ್ಚಯ=ಸಮೂಹಗಳಿಂದ; ಸೂಚಿತೈಃ=ತಿಳಿಸಲ್ಪಟ್ಟ; ಇತಃ ತತಃ=ಇತ್ತ ಅತ್ತ; ಮಂಡಲ=ಸುತ್ತಾಗಿ; ಧಾವನ=ಓಡುವುದ ರಲ್ಲಿ; ಉದ್ಯತೈಃ=ತಯಾರಾದ; ಪರಿಸ್ಫುರತ್=ಶೋಭಿಸುವ; ಭೂಷಣ=ಆಭರಣಗಳು; ಚಾಮರ=ಚಾಮರಗಳಿಂದ; ಉಜ್ಜ್ವಲೈಃ=ಶೋಭಿಸುವ; ಹ್ರೇಷಿತ=ಧ್ವನಿಯಿಂದ; ಭೂಷಿತ= ಅಲಂಕೃತವಾದ; ಆನನೈಃ=ಮುಖವುಳ್ಳ; ಹಯೈಃ=ಕುದುರೆಗಳಿಂದ; ವಿರಾಜಿತೇ= ಶೋಭಿಸುವ.

ಕೃಷ್ಣನು ಹೋಗುವ ದಾರಿಯಲ್ಲಿ ಅಶ್ವಾರೂಢರು ಬಹಳ ಮಂದಿ ಇದ್ದರು. ಅವರು ಕಡಿವಾಣದ ಮೂಲಕ ಅವುಗಳನ್ನು ನಿಯಂತ್ರಿಸುತ್ತಿದ್ದರು. ಕೃಷ್ಣನ ಎಂಟು ಬದಿಯಲ್ಲಿಯೂ  ಇದ್ದರು. ಅವುಗಳನ್ನು ಆಚೆ ಈಚೆ ಕುಣಿಸುತ್ತಿದ್ದರು. ಮಂಡಲಾಕಾರವಾಗಿ ಅಂದರೆ ಸುತ್ತುಬರುವ ರೀತಿಯಲ್ಲಿ ಕುಣಿಯುತ್ತಿದ್ದವು. ಅವುಗಳ ಮೈತುಂಬಾ ಯೋಗ್ಯವಾದ ಆಭರಣಗಳನ್ನು ಹಾಕಿದ್ದರು. ತಲೆಗಳಿಗೆ ಪುಟ್ಟ ಪುಟ್ಟ ಚಾಮರಗಳನ್ನು ಕಟ್ಟಿದ್ದರು. ಕುದುರೆ ಗಳು ಅತ್ತಿತ್ತ ಕುಣಿವಾಗ ಈ ಚಾಮರಗಳು ಮೇಲಕ್ಕೆ ಹಾರಿ ಪುನಃ ಸ್ವಸ್ಥಾನದಲ್ಲಿ ಇರುತ್ತಿದ್ದವು. ಆ ರೀತಿ ಅವುಗಳು ಕುಣಿವಾಗ ಸಂತೋಷದಿಂದ ಕೆನೆಯುತ್ತಿದ್ದವು. ಇಂತಹ ಕುದುರೆಗಳಿಂದ ಆ ಮಾರ್ಗವು ಶೋಭಿಸುತ್ತಿತ್ತು.

ಮೆರವಣಿಗೆಯು ಹೊರಡುವಾಗ ಭಜನಾತಂಡಗಳು, ನರ್ತಕರ ಗುಂಪುಗಳು ಜಯಘೋಷ, ವೇದಘೋಷಗಳ ಗುಂಪುಗಳು ಹಾಗೆಯೇ ಚಾಮರ ಹಾಕುವವರ ತಂಡಗಳೂ ಇರುವುದು ಸಹಜ. ಈ ಎಲ್ಲಾ ಕೆಲಸಗಳನ್ನು ಕುದುರೆಗಳೇ ಮಾಡುತ್ತಿದ್ದವು. ಈ ಎಲ್ಲಾ ತಂಡಗಳಿಗೆ ನಿಯಾಮಕರು, ವ್ಯವಸ್ಥಾಪಕರು ಇರುವಂತೆ ಇಲ್ಲಿ ಅಶ್ವಾರೋಹಿಗಳು ಇದ್ದರು.

**ಪಾರ್ಶ್ವದ್ವಯಸ್ಥೇಭಕದಂಬರಂಗಿಕುಂಭೈಃ ಸಮೇತೇ ಕಲಶೋಪಮಾನೈಃ ।**
**ಅನ್ಯೋನ್ಯಸಕ್ತೋನ್ಮುಖಕುಂಚಿತಾಗ್ರಹಸ್ತೈಶ್ಚ ನೀಲೋತ್ಪಲತೋರಣಾಭೈಃ ॥ ೨೦ ॥**

ಕಲಶ=ಕಲಶಕ್ಕೆ; ಉಪಮಾನೈಃ=ಸಮಾನಗಳಾದ; ಪಾರ್ಶ್ವ=ಬದಿಗಳ; ದ್ವಯ= ಎರಡರಲ್ಲಿ; ಸ್ಥ=ಇರುವ; ಇಭ=ಆನೆಗಳ; ಕದಂಬ=ಗುಂಪುಗಳ; ರಂಗಿ=ಶೋಭಿಸುವ; ಕುಂಭೈಃ=ಕುಂಭಸ್ಥಳಗಳಿಂದ; ನೀಲೋತ್ಪಲ=ಕೋಳೆ ಹೂಗಳ; ತೋರಣಕ್ಕೆ; ಆಭೈಃ= ಸಮಾನಗಳಾದ; ಅನ್ಯೋನ್ಯ=ಪರಸ್ಪರವಾಗಿ; ಸಕ್ತ=ಸಂಬದ್ಧವಾದ; ಉನ್ಮುಖ= ಮೇಲ್ಮುಖವಾದ; ಕುಂಚಿತ=ಸ್ವಲ್ಪ ಬಗ್ಗಿದ; ಅಗ್ರ=ತುದಿಯುಳ್ಳ; ಹಸ್ತೈಃ ಚ=ಸೊಂಡಿಲು ಗಳಿಂದಲೂ; ಸಮೇತೇ=ಕೂಡಿದ.

ದೊಡ್ಡವರು ಮೆರವಣಿಗೆಯಲ್ಲಿ ಹೋಗುವಾಗ ಇಕ್ಕೆಲಗಳಲ್ಲಿಯೂ ಕಲಶಗಳನ್ನು ಹಿಡಿಯುತ್ತಾರೆ. ಮಾವಿನ ಎಲೆಗಳಿಂದ ತೋರಣಗಳನ್ನು ದಾರಿಯುದ್ದಕ್ಕೂ ಕಟ್ಟುತ್ತಾರೆ.

ಕೃಷ್ಣನು ಹೊರಟ ದಾರಿಯಲ್ಲಿಯೂ ಇದೇ ದೃಶ್ಯ ಇತ್ತು. ಎರಡು ಬದಿಯಲ್ಲಿಯೂ ಬಹಳ ಆನೆಗಳಿದ್ದವು. ಈ ಆನೆಗಳ ಕುಂಭಸ್ಥಳಗಳು ಕಲಶಗಳಂತೆ ತೋರುತ್ತಿದ್ದವು. ಕಲಶಗಳಿಗೂ ಕುಂಭಗಳೆಂದು ಹೆಸರಿದೆ. ಆನೆಗಳ ಗಂಡಸ್ಥಳಗಳನ್ನು ಕುಂಭಸ್ಥಳಗಳೆಂದು ಕರೆಯುತ್ತಾರೆ. ಈ ರೀತಿ ಶಬ್ದದಿಂದ ಸಾಮ್ಯ ಇದೆ. ಈ ಮೆರವಣಿಗೆಯು ನಿಧಾನವಾಗಿ, ಅಲ್ಲಲ್ಲಿ ನಿಲ್ಲುತ್ತಾ ಸಾಗುತ್ತಿತ್ತು. ನಿಂತಾಗ ಆ ಸಾಲಿನ ಒಂದಾನೆ ಈ ಸಾಲಿನ ಒಂದಾನೆ ಸ್ವಲ್ಪ ತಿರುಗಿ ತಮ್ಮ ತಮ್ಮ ಸೊಂಡಿಲುಗಳನ್ನು ಮೇಲಕ್ಕೆತ್ತಿ ತುದಿಗಳನ್ನು ಪರಸ್ಪರ ತಾಗಿಸಿಕೊಳ್ಳುತ್ತಿದ್ದವು. ಆನೆಗಳು ಸೊಂಡಿಲನ್ನು ಮೇಲಕ್ಕೆತ್ತಿದಾಗ ತುದಿಯು ಸ್ವಲ್ಪ ಬಾಗುವುದು ಸಹಜ. ಕೋಳೆಹೂಗಳು ನೀಲಬಣ್ಣದವುಗಳು. ಅವುಗಳನ್ನು ಹಗ್ಗದಲ್ಲಿ ಕೆಳಮುಖವಾಗಿ ಕಟ್ಟಿ ದಾರಿಯಲ್ಲಿ ಮೇಲ್ಬದಿಯಲ್ಲಿ ಅಡ್ಡವಾಗಿ ಕಟ್ಟುತ್ತಾರೆ. ಆನೆಗಳ ಬಣ್ಣವೂ ಕಪ್ಪು. ಇಲ್ಲಿ ಬಣ್ಣ ಹಾಗೂ ತೋರಣಗಳ ಆಕಾರದಿಂದ ಸಾಮ್ಯ.

**ವಿಚಿತ್ರರತ್ನೋಜ್ವಲಭೂಷಣೌಘೈಃ**
**ಪದಾಂಬುಜೈಃ ಪ್ರಾಹುಣಿಕಾಂಗನಾನಾಮ್ ।**
**ರಂಗಪ್ರಭಾಂ ಮುಷ್ಣತಿ ರಾಜಮಾರ್ಗೇ**
**ಮಂದಂ ಯಯೌ ಮನ್ಮಥಕೋಟಿರೂಪಃ** ॥ ೨೧ ॥

ಪ್ರಾಹುಣಿಕ=ವಿಹಾರಿಗಳಾದ; ಅಂಗನಾನಾಂ=ನಾರಿಯರ; ವಿಚಿತ್ರ=ನಾನಾ ರೀತಿಯ; ರತ್ನ=ರತ್ನಗಳಿಂದ; ಉಜ್ವಲ=ಬೆಳಗುವ; ಭೂಷಣ=ಆಭರಣಗಳ; ಓಘೈಃ=ಸಮೂಹವುಳ್ಳ; ಪಾದ=ಚರಣಗಳೆಂಬ; ಅಂಬುಜೈಃ=ಕಮಲಗಳಿಂದ; ರಂಗ=ಜಾಗದ; ಪ್ರಭಾಂ=ಕಾಂತಿಯನ್ನು; ಮುಷ್ಣತಿ=ಅಪಹರಿಸುವ; ರಾಜಮಾರ್ಗೇ=ರಾಜಮಾರ್ಗದಲ್ಲಿ; ಮನ್ಮಥ=ಮನ್ಮಥರ; ಕೋಟಿ=ಕೋಟಿಯಷ್ಟು; ರೂಪಃ=ಚಂದವುಳ್ಳ ಕೃಷ್ಣನು; ಮಂದಂ=ಮೆಲ್ಲನೆ; ಯಯೌ= ಹೊರಟನು.

ಬಹಳಷ್ಟು ನಾರಿಯರೂ ಕೃಷ್ಣನ ಜೊತೆ ಹೊರಟಿದ್ದರು. ಅವರು ನವರತ್ನಗಳಿಂದ ಕೂಡಿದ ಬಹಳ ಆಭರಣಗಳನ್ನು ಧರಿಸಿದ್ದರು. ಪಾದಗಳ ತನಕವೂ ಆಭರಣಗಳು ಇದ್ದವು. ಇವುಗಳು ಬಹಳ ಪ್ರಕಾಶವನ್ನು ಹೊರಗೆಡಹುತ್ತಿದ್ದವು. ಇವರು ವೈಯಾರದಿಂದ ಕೃಷ್ಣನ ಜೊತೆ ಹೆಜ್ಜೆಹಾಕುತ್ತಿದ್ದರು. ನೆಲವೂ ನಾನಾವರ್ಣಗಳಿಂದ ಶೋಭಿಸುತ್ತಿತ್ತು. ಈ ಹೆಣ್ಮಕ್ಕಳ ಆಭರಣಗಳ ಬೆಳಕಿನ ಮುಂದೆ ನೆಲದ ಶೋಭೆಯು ಪೂರಾ ಮಸುಕಾಗಿ ಹೋಯಿತು. ಇಂತಹ ದಾರಿಯಲ್ಲಿ ಕೃಷ್ಣನು ಸಾಗಿದನು. ನೆಲದ ಶೋಭೆಯೋ ಆಭರಣಗಳ ಕಾಂತಿಯೋ ಇವು ಯಾವುವೂ ಕೃಷ್ಣನ ಸೌಂದರ್ಯದ ಮುಂದೆ ತಲೆ ಎತ್ತಲಿಲ್ಲ. ಅಷ್ಟೂ ಸೌಂದರ್ಯ ಕೃಷ್ಣನಲ್ಲಿ ಇತ್ತು. ನಮ್ಮ ಬುದ್ಧಿಗೆ ಎಟಕಲು ಶ್ರೀರಾಜರು ಕೋಟಿ ಮನ್ಮಥರಷ್ಟೂ ಚಂದ ಎಂದಿದ್ದಾರೆ. ಯದ್ಯಪಿ ಕೃಷ್ಣನ ಸೌಂದರ್ಯ ಅನಂತ. ಅದಕ್ಕೆ ಸಾಟಿಯೇ ಇಲ್ಲ.

**ಮಧ್ಯಸ್ಥಾಪಿತಮಾಧವಾ ಸ್ಮಿತಲಸತ್ಫೇನಾ ಚಲಚ್ಚಾಮರ**
**ವ್ರಾತೋರ್ಮಿರ್ವಿತತಾತಪತ್ರಕಮಠಾ ಹಸ್ತ್ಯಶ್ವಪತ್ತ್ಯಾವೃತಾ ।**
**ವೀಣಾವೇಣುನಿನಾದಗರ್ಜಿತಯುತಾ ವಾರ್ಧೇಃ ಸಮಾ ಸಾ ಚಮೂ–**
**ರಾಚ್ಛನ್ನಾऽನಿಮಿಷಾಂತರಾಗತಮಹೀಪಾಲೌಘಸೇನಾಸರಿತ್ ॥ ೨೨ ॥**

ಮಧ್ಯ=ಮಧ್ಯದಲ್ಲಿ; ಸ್ಥಾಪಿತ=ಇರುವ; ಮಾಧವಾ=ಕೃಷ್ಣನುಳ್ಳ; ಸ್ಮಿತ=ನಗುವೆಂಬ; ಲಸತ್=ಶೋಭಿಸುವ; ಫೇನಾ=ನೊರೆವುಳ್ಳ; ಚಲತ್=ಅಲುಗಾಡುವ; ಚಾಮರ=ಚಾಮರಗಳ; ವ್ರಾತ=ಸಮೂಹಗಳೆಂಬ; ಊರ್ಮಿಃ=ತೆರೆಗಳುಳ್ಳ; ವಿತತ=ವಿಶಾಲವಾದ; ಆತಪತ್ರ=ಕೊಡೆಗಳೆಂಬ; ಕಮಠಾ=ಆಮೆಗಳುಳ್ಳ; ಹಸ್ತಿ=ಆನೆಗಳು; ಅಶ್ವ=ಕುದುರೆಗಳು; ಪತ್ತಿ=ಕಾಲಾಳುಗಳಿಂದ; ಆವೃತಾ=ಕೂಡಿದ; ವೀಣಾ=ವೀಣೆಯು; ವೇಣು=ಕೊಳಲುಗಳ; ನಿನಾದ=ಧ್ವನಿ ಎಂಬ; ಗರ್ಜಿತ=ಭೋರ್ಗರೆತದಿಂದ; ಯುತಾ=ಕೂಡಿದ; ಆಛನ್ನಾ=ಮರೆಮಾಡಿದ; ಅನಿಮಿಷಾ=ದೇವತೆಗಳುಳ್ಳ; ಅಂತರ=ಮಧ್ಯದಲ್ಲಿ; ಆಗತ=ಬಂದಿರುವ; ಮಹೀಪಾಲ=ರಾಜರುಗಳ; ಓಘ=ಸಮೂಹವುಳ್ಳ; ಸೇನಾ=ಸೈನ್ಯವೆಂಬ; ಸರಿತ್=ನದಿಗಳುಳ್ಳ; ವಾರ್ಧೇಃ=ಸಮುದ್ರಕ್ಕೆ; ಸಮಾ=ಸಮಾನವಾದ; ಸಾ=ಆ; ಚಮೂಃ=ಸೈನ್ಯವು; ಮಂದಂ=ಮೆಲ್ಲನೆ; ಯಯೌ=ಹೊರಟಿತು.

ಕೃಷ್ಣನ ಜೊತೆಗೆ ಆತನ ಸೈನ್ಯವೂ ಹೊರಟಿದೆ. ಈ ಸೈನ್ಯವು ಸಮುದ್ರದಂತೆ ಇದೆ. ಭಗವಂತನು ಸಮುದ್ರದ ಮಧ್ಯದಲ್ಲಿ ಶೇಷನ ಮೇಲೆ ಮಲಗಿರುತ್ತಾನೆ. ಈ ಸೈನ್ಯವು ಕೃಷ್ಣನ ಸುತ್ತಲೂ ಸೇರಿದೆ. ಆದ್ದರಿಂದ ಸೈನ್ಯದ ಮಧ್ಯದಲ್ಲಿಯೂ ಕೃಷ್ಣನಿದ್ದಾನೆ. ನೊರೆಗಳಿಂದ ಕೂಡಿದ ತೆರೆಗಳು ಸಮುದ್ರದಲ್ಲಿ ಏಳುತ್ತಾ ಇರುತ್ತವೆ. ನೊರೆಗಳು ಬಿಳಿ. ಆದ್ದರಿಂದ ತೆರೆಗಳೂ ಬಿಳಿ. ಕವಿಗಳು ನಗುವನ್ನು ಬಿಳಿ ಎಂದು ವರ್ಣಿಸುತ್ತಾರೆ. ಚಾಮರದ ಬಣ್ಣ ಸಹಜವಾಗಿ ಬಿಳಿಯೇ ಆಗಿದೆ. ಚಾಮರವು ಚಂದಕ್ಕಾಗಿ ಅಲ್ಲ ಬೀಸುವುದಕ್ಕಾಗಿ. ಬೀಸುತ್ತಾ ಇರುವುದರಿಂದ ಸದಾ ಅಲುಗಾಡುತ್ತಿರುತ್ತವೆ. ಈ ಸೈನ್ಯವು ಮಂದಹಾಸದಿಂದ ಕೂಡಿಕೊಂಡು ತನ್ನ ಕೈಗಳಿಂದ ಕೃಷ್ಣನಿಗೆ ಚಾಮರವನ್ನು ಹಾಕುತ್ತಿವೆ. ಸಮುದ್ರವು ನೊರೆಗಳೆಂಬ ನಗುವಿನಿಂದಲೂ ತೆರೆಗಳೆಂಬ ಚಾಮರಗಳಿಂದಲೂ ಕೂಡಿದೆ. ಈ ಸೈನ್ಯದ ಕೆಲವರು ವಿಶಾಲವಾದ ಕೊಡೆಗಳನ್ನು ಹಿಡಿದುಕೊಂಡು ನಿಧಾನವಾಗಿ ಸಾಗುತ್ತಿದ್ದಾರೆ. ಸಮುದ್ರದಲ್ಲಿ ಬಹಳ ದೊಡ್ಡ ದೊಡ್ಡ ಆಮೆಗಳಿವೆ. ಅವುಗಳ ಬೆನ್ನು ಕೊಡೆಗಳಂತೆ ವಿಶಾಲವಾಗಿವೆ. ಈ ರೀತಿ ಕೊಡೆಗಳೆಂಬ ಆಮೆಗಳಿಂದ ಕೂಡಿದೆ. ಸೈನ್ಯ ಅಂದರೆ ಆನೆ, ಕುದುರೆ, ಕಾಲಾಳುಗಳು ಇರಲೇಬೇಕು. ಸಮುದ್ರದಲ್ಲಿಯೂ ಈ ಪ್ರಾಣಿಗಳು ಇವೆ. ನೆಲದಲ್ಲಿ ಎಷ್ಟು ರೀತಿಯ ಪ್ರಾಣಿಗಳಿವೆಯೋ ಅಷ್ಟೇ ರೀತಿಯ ಪ್ರಾಣಿಗಳು ಜಲದಲ್ಲಿಯೂ ಇವೆ. ಸಮುದ್ರವು ಸದಾ ಭೋರ್ಗರೆಯುತ್ತಿರುತ್ತದೆ. ಈ ಸೈನ್ಯದಲ್ಲಿ ಕೆಲವರು ವೀಣೆಗಳನ್ನೋ ಕೊಳಲುಗಳನ್ನೋ ಅಥವಾ ಇನ್ನಿತರ ವಾದ್ಯಗಳನ್ನೋ ನುಡಿಸಿಕೊಂಡು ಹೋಗುತ್ತಿದ್ದರು.

ಈ ರೀತಿ ಧ್ವನಿಯಿಂದಲೂ ಸಾಮ್ಯ ಇದೆ. ಸೈನ್ಯದಲ್ಲಿರುವ ಯಾದವರೆಲ್ಲಾ ದೇವತೆಗಳೇ. ತಾವು ಮೂಲರೂಪದಿಂದಲೇ ಬಂದಿಲ್ಲ. ತಮ್ಮ ದೇವತ್ವವನ್ನು ಮರೆಮಾಚಿ ಮಾನವರೂಪದಿಂದ ಬಂದವರು. ದೇವತೆಗಳು ಕಣ್ಣುಮುಚ್ಚುವುದಿಲ್ಲ ಮಾನವರಂತೆ. ಆದ್ದರಿಂದ ಅವರಿಗೆ ಅನಿಮಿಷರೆಂದು ಹೆಸರು. ಈ ರೀತಿಯಾಗಿ ಸೈನ್ಯವು ಮರೆಮಾಚಿಕೊಂಡ ಅನಿಮಿಷರಿಂದ ಕೂಡಿದೆ. ಸಮುದ್ರವು ಮೀನುಗಳಿಂದ ಕೂಡಿದೆ. ಮೀನುಗಳಿಗೂ ಅನಿಮಿಷಗಳೆಂದು ಹೆಸರಿದೆ. ಅವುಗಳೂ ಕಣ್ಣರೆಪ್ಪೆಗಳನ್ನು ಮುಚ್ಚುವುದಿಲ್ಲ. ಅವುಗಳು ನೀರಿನ ಒಳಗೆ ಇರುತ್ತವೆ. ಸಮುದ್ರವು ಅವುಗಳನ್ನು ತನ್ನಲ್ಲಿ ಅಡಗಿಸಿಕೊಂಡಿವೆ. ಈ ರೀತಿಯಾಗಿ ಸಮುದ್ರವೂ ಸೈನ್ಯದಂತೆ ಮರೆಮಾಚಿಕೊಂಡ ಅನಿಮಿಷರಿಂದ ಕೂಡಿದೆ. ಕೃಷ್ಣನು ಸೈನ್ಯದಿಂದ ಕೂಡಿಕೊಂಡು ಹೋಗುತ್ತಿರುವಾಗ ಬೇರೆಬೇರೆ ರಾಜರುಗಳ ದಿಂಡುಗಳೇ ಈ ಸೈನ್ಯವನ್ನು ಸೇರುತ್ತಿತ್ತು. ಸಮುದ್ರಕ್ಕೆ ದೊಡ್ಡ ದೊಡ್ಡ ನದಿಗಳು ಬಂದು ಸೇರುವಂತೆ. ಈ ರೀತಿ ಅಪಾರವಾದ ಸೈನ್ಯ ಸಮುದ್ರದಂತೆ ಅಪಾರವಾದ ಸೈನ್ಯವು ಕೃಷ್ಣನ ಜೊತೆಗೆ ಸಾಗಿತು.

**ಸಂದೇಶ** : ದೇವರ ಜೊತೆಗೆ ನಾವಿದ್ದರೆ ನಮಗೆ ಉತ್ತಮರ ಹೋಲಿಕೆಯು ಬರುತ್ತದೆ.

**ಲಕ್ಷ್ಮೀಶವಾಹರಥಹಸ್ತಿಭಟೌಘವೇಗಾತ್**
**ಜಾತಂ ವ್ರಜತ್ತ್ರಿದಿವಮಾತ್ತರಯಂ ರಜಸ್ತತ್ ।**
**ಕೃಷ್ಣಾನುಷಂಗಿಚಿದಚೇತನಸಂಗಭಾಜೋ**
**ವಕ್ತಿ ತ್ರಿವಿಷ್ಟಪಗತಿಂ ಗತಮೇಧಸೋಽಪಿ** ॥ ೨೩ ॥

ಲಕ್ಷ್ಮೀ=ರಮೆಯ; ಈಶ=ಒಡೆಯನ; ವಾಹ=ಕುದುರೆಗಳು; ರಥ=ರಥಗಳು; ಹಸ್ತಿ=ಆನೆಗಳು; ಭಟ=ಸೈನಿಕರು; ಓಘ=ಸಮೂಹಗಳ; ವೇಗಾತ್=ವೇಗದಿಂದ; ಜಾತಂ= ಉಂಟಾದ; ತ್ರಿದಿವಂ=ಸ್ವರ್ಗವನ್ನು; ವ್ರಜತ್=ಹೋಗತಕ್ಕ; ಆತ್ತ=ಹೊಂದಿದ; ರಯಂ=ವೇಗ ವುಳ್ಳ; ತತ್=ಆ; ರಜಃ=ಧೂಳು; ಕೃಷ್ಣ=ಕೃಷ್ಣನ; ಅನುಷಂಗಿ=ಸಂಬಂಧವುಳ್ಳ; ಚಿತ್= ಚೇತನವು; ಅಚಿತ್=ಜಡದ; ಸಂಗ=ಸಂಪರ್ಕವನ್ನು; ಭಾಜಃ=ಹೊಂದಿದ; ಗತ= ಹೋದ; ಮೇಧಸಃ ಅಪಿ=ಬುದ್ಧಿವುಳ್ಳವನಿಗೂ; ತ್ರಿವಿಷ್ಟಪ=ಸ್ವರ್ಗದ; ಗತಿಂ=ಗಮನವನ್ನು; ವಕ್ತಿ= ಹೇಳುತ್ತದೆ.

ಸೈನ್ಯವು ನಾಲ್ಕು ಭಾಗಗಳಿಂದ ಕೂಡಿದೆ. ಅದರಲ್ಲಿ ಆನೆ, ಕುದುರೆ, ಕಾಲಾಳುಗಳು ಚೇತನಗಳು. ರಥಗಳು ಜಡಗಳು. ಇವೆಲ್ಲಕ್ಕೂ ಕೃಷ್ಣನ ಸಂಪರ್ಕ ಇದೆ. ಇವುಗಳ ಅತ್ತಿತ್ತ ಓಡಾಟದಿಂದ ಬಹಳ ಧೂಳು ಎದ್ದಿದೆ. ಈ ಧೂಳು ಬಹಳ ವೇಗದಿಂದ ಮೇಲ್ಮುಖವಾಗಿ ಹೋಗುತ್ತಿದೆ. ಹೋಗುವಾಗ ಒಂದು ಸಂದೇಶವನ್ನು ವೈದಿಕ ಸಮಾಜಕ್ಕೆ ತಿಳಿಸುತ್ತದೆ – ಕೃಷ್ಣನ ವಿಶೇಷವಾದ ಸನ್ನಿಧಾನಕ್ಕೆ ಪಾತ್ರವಾದ ವಸ್ತುಗಳು ಒಂದು ಸಜ್ಜನರು, ಎರಡು

ಶಾಲಿಗ್ರಾಮಗಳು. ಸಜ್ಜನರು ಸೈನ್ಯದ ಮೂರು ಭಾಗಗಳಂತೆ ಚೇತನರು. ಶಾಲಿಗ್ರಾಮಗಳು ಸೈನ್ಯದ ನಾಲ್ಕನೆಯ ಭಾಗವಾದ ರಥದಂತೆ ಜಡಗಳು. ಈ ಎರಡು ವಸ್ತುಗಳಲ್ಲಿ ವಿಶೇಷವಾಗಿ ದೇವರ ಆರಾಧನೆ ಮಾಡಬೇಕು. ಸಜ್ಜನರ ಒಡನಾಟದಲ್ಲಿ ಇರಬೇಕು. ಪ್ರತಿನಿತ್ಯ ಶಾಲಿಗ್ರಾಮ ಸ್ಪರ್ಶಮಾಡಿ ದೇವರ ಪೂಜೆ ಮಾಡಬೇಕು. ತಿಳುವಳಿಕೆ ಏನೂ ಬೇಕಾಗಿಲ್ಲ. ಹಾಗಿದ್ದರೂ ಆತನು ಸಮಾಜದಲ್ಲಿ ಉನ್ನತಿಗೆ ಏರುತ್ತಾನೆ. ಮರಣಾನಂತರ ಸ್ವರ್ಗಪ್ರಾಪ್ತಿ ನಿಶ್ಚಿತ. ಧೂಳು ಅದು ಜಡ. ಅದಕ್ಕೆ ದೇವರ ತಿಳುವಳಿಕೆ ಏನೂ ಇಲ್ಲ. ಆದರೂ ಎತ್ತರಕ್ಕೆ ಏರುತ್ತಿದೆ. ಕಾರಣ –ಸೈನ್ಯದ ರಭಸಕ್ಕೆ ಎದ್ದದ್ದು. ಸೈನ್ಯವು ಕೃಷ್ಣನ ಸಂಪರ್ಕಕ್ಕೆ ಒಳಗಾದದ್ದು. ಆದ್ದರಿಂದ ಸಮಾಜದಲ್ಲಿ ಉನ್ನತಿಗೆ ಬರಬೇಕಾದರೆ ದೇವರ ವಿಶೇಷ ಸನ್ನಿಧಾನವುಳ್ಳ ಸಜ್ಜನ ಹಾಗೂ ಶಾಲಿಗ್ರಾವಗಳ ಒಡನಾಟದಲ್ಲಿ ಇರಬೇಕು ಎಂದು.

**ವಿಚಿತ್ರರತ್ನದ್ಯುತಿರಂಗ ಕಾಂತ್ಯಾ ಸುಮೌಕ್ತಿಕೌಘಾಕ್ಷತಲಾಜರಾಜ್ಯಾ ।**
**ಮಂದಾನಿಲಾಖ್ಯವ್ಯಜನೈಃ ಸ್ವತೀರೇ ಸಿಂಧುಃ ಸ್ವಜಾಮಾತರಮರ್ಚತೀವ॥ ೨೪ ॥**

ಸಿಂಧುಃ=ಸಮುದ್ರವು; ಸ್ವ=ತನ್ನ; ತೀರೇ=ದಡದಲ್ಲಿ; ವಿಚಿತ್ರ=ವಿಚಿತ್ರವಾದ; ರತ್ನ=ರತ್ನಗಳ; ದ್ಯುತಿ=ಕಾಂತಿ ಎಂಬ ರಂಗಮಂಟಪದ; ಕಾಂತ್ಯಾ=ಪ್ರಭೆಯಿಂದ; ಸು=ಒಳ್ಳೆಯ; ಮೌಕ್ತಿಕ=ಮುತ್ತುಗಳ; ಓಘ=ಸಮೂಹವೆಂಬ; ಅಕ್ಷತ=ಅಕ್ಷತೆಗಳ; ಲಾಜ=ಅರಳುಗಳ; ರಾಜ್ಯಾ=ಪ್ರಕಾಶದಿಂದ; ಮಂದ=ನಿಧಾನವಾದ; ಅನಿಲ=ಗಾಳಿ ಎಂದು; ಆಖ್ಯ=ಹೆಸರುಳ್ಳ; ವ್ಯಜನೈಃ=ವ್ಯಜನಗಳಿಂದ; ಸ್ವ=ತನ್ನ; ಜಾಮಾತರಂ=ಅಳಿಯನನ್ನು; ಅರ್ಚತಿ ಇವ=ಪೂಜಿಸುವವನಂತೆ.

ಅಳಿಯನನ್ನು ಮಾವನು ಮಂಟಪದಲ್ಲಿ ಪೂಜಿಸುತ್ತಾನೆ. ಅರಳುಗಳನ್ನು ಅಕ್ಷತೆಗಳನ್ನು ತಲೆಯ ಮೇಲೆ ವರ್ಷಿಸುತ್ತಾನೆ. ಬೀಸಣಿಗೆಯಿಂದ ಬೀಸುತ್ತಾನೆ. ಸಮುದ್ರನ ಮಗಳು ರಮೆ. ಅವಳ ಅವತಾರ ರುಗ್ಮಿಣಿ. ಆದ್ದರಿಂದ ಕೃಷ್ಣನು ಸಮುದ್ರನ ಅಳಿಯ. ಈ ಅಳಿಯನನ್ನು ಮಾವ ಸಮುದ್ರನು ಪೂಜಿಸುವಂತಿದೆ. ಸಮುದ್ರವು ರತ್ನಾಕರ. ಈ ನವರತ್ನಗಳ ಮಿಶ್ರವಾದ ಕಾಂತಿಯು ನೆಲದ ಮೇಲೆ ಬಿದ್ದಿದೆ. ಅದೊಂದು ಪ್ರಕಾಶಮಯವಾದ ಮಂಟಪದಂತೆ ಇದೆ. ಈ ಮಂಟಪದಲ್ಲಿ ದೇವರನ್ನು ಇರಿಸಿದ್ದಾನೆ. ಸಮುದ್ರದಲ್ಲಿ ಮುತ್ತುಗಳೂ ಹೇರಳವಾಗಿವೆ. ಶ್ರೀಮಂತರು ಅಕ್ಷತೆಯ ಸ್ಥಾನದಲ್ಲಿ ಅಕ್ಕಿಯನ್ನು ಬಳಸದೆ ಮುತ್ತುಗಳನ್ನೇ ಬಳಸುವರು. ಅರಳುಗಳ ಬಣ್ಣವೂ ಬಿಳಿಯೇ. ಈ ಮುತ್ತುಗಳ ಕಾಂತಿಯಿಂದ ಅಕ್ಷತೆ ಹಾಗೂ ಅರಳುಗಳನ್ನು ಕೃಷ್ಣನಲ್ಲಿ ಸಿಂಪಡಿಸಿದಂತೆ ಆಯಿತು. ಸಮುದ್ರದ ಮೇಲಿಂದ ತಂಪಾದ ಗಾಳಿಯು ನಿಧಾನವಾಗಿ ಬೀಸುತ್ತಿತ್ತು. ಇದು ಬೀಸಣಿಗೆಯಿಂದ ಬೀಸಿದಂತಿತ್ತು.

**<u>ಸಂದೇಶ</u>** : ಮಾವಂದಿರು ಅಳಿಯನಲ್ಲಿ ದೇವರನ್ನು ಕಂಡು ಆದರಿಸಬೇಕು.

ತುಂಗೈಸ್ತರಂಗೈರ್ಧೃತಶಂಖಚಕ್ರೈಃ
ಕೀರ್ಣಂ ಪಯಃ ಫೇನಸಿತಂ ವಿತನ್ವನ್ ।
ಹಸ್ತೈರ್ಮುರಾರೇರ್ವ್ರಜತೋಽಧಿಮಾರ್ಗಂ
ವಸ್ತ್ರಾಣಿ ವಿಸ್ತಾರಯತೀವ ವಾರ್ಧಿಃ ॥ ೨೫ ॥

ವಾರ್ಧಿಃ=ಸಮುದ್ರವು; ತುಂಗೈಃ=ಎತ್ತರಗಳಾದ; ಧೃತ=ಧರಿಸಲ್ಪಟ್ಟ; ಶಂಖ=ಶಂಖಗಳು; ಚಕ್ರೈಃ=ಚಕ್ರಗಳುಳ್ಳ; ತರಂಗೈಃ=ತೆರೆಗಳಿಂದ; ಫೇನ=ನೊರೆಗಳಿಂದ; ಸಿತಂ=ಬಿಳಿಯಾದ; ಪಯಃ=ನೀರನ್ನು; ಕೀರ್ಣಂ=ಚೆಲ್ಲಿದ್ದನ್ನಾಗಿ; ವಿತನ್ವನ್=ಮಾಡುತ್ತಾ; ವ್ರಜತಃ=ಹೋಗತಕ್ಕ; ಮುರಾರೇಃ=ಕೃಷ್ಣನ; ಅಧಿಮಾರ್ಗಂ=ದಾರಿಯಲ್ಲಿ; ಹಸ್ತೈಃ=ಕೈಗಳಿಂದ; ವಸ್ತ್ರಾಣಿ=ವಸ್ತ್ರಗಳನ್ನು; ವಿಸ್ತಾರಯತಿ ಇವ=ಚಿಡಿಸುವಂತಿದೆ.

ದ್ವಾರಕೆಯಲ್ಲಿ ಗೋಮತೀ ಸಮುದ್ರ ಸಂಗಮ ಸ್ಥಳದಲ್ಲಿ ಚಕ್ರತೀರ್ಥವು ಇದೆ. ಇಲ್ಲಿ ಹೇರಳವಾಗಿ ಚಕ್ರಾಂಕಿತಗಳು ಸಿಗುತ್ತವೆ. ಶಂಖಗಳಂತೂ ಹುಟ್ಟುವುದೇ ಸಮುದ್ರದಲ್ಲಿ. ಇದು ವಾಸ್ತವಸಂಗತಿ. ಎತ್ತರವಾದ ತೆರೆಗಳು ಏಳುತ್ತಿರುತ್ತವೆ. ಆಗ ಜೊತೆಗೆ ಈ ಶಂಖಚಕ್ರಗಳೂ ಬರುತ್ತವೆ. ಈ ತೆರೆಗಳು ಬಿಳಿಯಾದ ನೊರೆಗಳಿಂದ ಕೂಡಿದ ನೀರನ್ನು ದಡದಲ್ಲಿ ಉದ್ದಕ್ಕೂ ಚೆಲ್ಲುತ್ತವೆ. ಇದು ಬಿಳಿಯಾದ ಬಟ್ಟೆಯನ್ನು ದಾರಿ ಉದ್ದಕ್ಕೂ ಬಿಡಿಸಿದಂತೆ ಭಾಸವಾಗುತ್ತಿತ್ತು. ಕೃಷ್ಣನೂ ಅದೇ ದಾರಿಯಲ್ಲಿ ಸಾಗುತ್ತಿದ್ದನು. ಸಮುದ್ರ ರಾಜನು ಕೃಷ್ಣನ ದಾರಿಯಲ್ಲಿ ಬಿಳಿಬಟ್ಟೆಯನ್ನು ಹಾಸಿ ಅದರಲ್ಲಿ ಕೃಷ್ಣನು ನಡೆಯುವಂತೆ ಮಾಡಿ ಸ್ವಾಗತಿಸುತ್ತಾನೋ ಎಂಬಂತಿತ್ತು. ದೊಡ್ಡವರು ನಮ್ಮ ಊರಿಗೆ ಬಂದಾಗ ಅವರನ್ನು ಈ ರೀತಿ ಸ್ವಾಗತಿಸುವುದು ಸಂಪ್ರದಾಯ. ವಿಷ್ಣುವನ್ನು ಸ್ವಾಗತಿಸಲು ವೈಷ್ಣವರಿಗೆ ಮಾತ್ರ ಅಧಿಕಾರ. ವೈಷ್ಣವತ್ವ ಬರುವುದು ವಿಷ್ಣುವಿನ ಚಿಹ್ನೆಯಾದ ಶಂಖಚಕ್ರಗಳ ಧಾರಣೆಯಿಂದ. ಸಮುದ್ರರಾಜನಿಗೆ ತೆರೆಗಳೇ ಹಸ್ತಗಳು. ತೆರೆಗಳ ಜೊತೆ ಶಂಖಚಕ್ರಗಳು ಇವೆ. ಆದ್ದರಿಂದ ಸಮುದ್ರರಾಜನು ವೈಷ್ಣವದೀಕ್ಷೆ ಉಳ್ಳವನಾದನು.

<u>ಸಂದೇಶ</u> : ನಾವು ಮಾಡಿದ ಕರ್ಮವು ದೇವರಿಗೆ ತಲುಪಬೇಕಾದರೆ ಮೊದಲು ನಾವು ವೈಷ್ಣವರಾಗಬೇಕು.

ನೀಲಾಶ್ಮದ್ಯುತಿಪತ್ರಶೋಭಿಭಿರಧೋವ್ಯಾಲಂಬಿಪುಷ್ಪಸ್ಫುರನ್–
ಮುಕ್ತಾದಾಮಭಿರುಲ್ಲಸತ್ಕಿಸಲಯ ಶ್ರೇಣೀವಿತಾನೋಜ್ವಲೈಃ ।
ಸಿಂಧುಪ್ರೇಷಿತರತ್ನಸಂಹಿತತಲೈಃ ವೃಕ್ಷೈಃ ಸುವರ್ಣೋನ್ನತ–
ಸ್ತಂಭಾಂಗೈರ್ಮಣಿಮಂಡಪಾನುಕೃತಿಭಿರ್ಯುಕ್ತಂ ಸಮಾನಾಯತೈಃ ॥ ೨೬ ॥

ಕೃಷ್ಣ=ಕೃಷ್ಣನು; ನೀಲ=ನೀಲವಾದ; ಅಶ್ಮ=ಕಲ್ಲಿನಂತೆ; ದ್ಯುತಿ=ಪ್ರಕಾಶವುಳ್ಳ; ಪತ್ರ=ಎಲೆಗಳಿಂದ; ಶೋಭಿಭಿಃ=ಶೋಭಿಸುವ; ಅಧಃ=ಕೆಳಗೆ; ವ್ಯಾಲಂಬಿ=ನೇತಾಡುವ;

ಪುಷ್ಪ=ಹೂಗಳೆಂಬ; ಸ್ಫುರತ್=ಶೋಭಿಸುವ; ಮುಕ್ತಾ=ಮುತ್ತಿನ; ದಾಮಭಿಃ=ಜಾಲರಿಗಳುಳ್ಳ; ಉಲ್ಲಸತ್=ಶೋಭಿಸುವ; ಕಿಸಲಯ=ಚಿಗುರುಗಳ; ಶ್ರೇಣೀ=ಸಮೂಹವೆಂಬ; ವಿತಾನ=ಮೇಲ್ಕಟ್ಟುಗಳಿಂದ; ಉಜ್ವಲೈಃ=ಶೋಭಿಸುವ; ಸಿಂಧು=ಸಮುದ್ರದಿಂದ; ಪ್ರೇಷಿತ=ಕಳಿಸಲ್ಪಟ್ಟ; ರತ್ನ=ರತ್ನಗಳಿಂದ; ಸಂಹಿತ=ಸಂಬದ್ಧವಾದ; ತಲೈಃ=ಭೂಮಿವುಳ್ಳ; ಸುವರ್ಣ=ಚಿನ್ನದ; ಉನ್ನತ=ಎತ್ತರವಾದ; ಸ್ತಂಭ=ಕಂಬಗಳಂತಿರುವ; ಅಂಗೈಃ= ಕಾಂಡಗಳುಳ್ಳ; ಮಣಿ=ಮಣಿಮಯವಾದ; ಮಂಟಪ=ಮಂಟಪವನ್ನು; ಅನುಕೃತಿಭಿಃ= ಅನುಕರಿಸುವ; ಸಮಾನ=ಸರಿಯಾದ; ಆಯತೈಃ=ವಿಶಾಲವಾದ; ವೃಕ್ಷೈಃ=ಮರಗಳಿಂದ; ಯುಕ್ತಂ=ಕೂಡಿದ; ವನಂ=ಕಾಡನ್ನು; ಅವಿಶತ್=ಪ್ರವೇಶಿಸಿದನು.

ರುಗ್ಮಿಣಿಯನ್ನು ತಂದಿರುವ ಕೃಷ್ಣನು ಅವಳನ್ನು ತನ್ನ ಅರಮನೆಯೊಳಗೆ ಸೇರಿಸಿಕೊಳ್ಳಲಿಲ್ಲ. ಬದಲಾಗಿ ದ್ವಾರಕೆಯಲ್ಲಿರುವ ಮೂಲಮಾಧವ ಎಂಬ ಕಾಡಲ್ಲಿ ಇಟ್ಟಿದ್ದನು. ಅವಳನ್ನು ಕ್ರಮಪ್ರಕಾರವಾಗಿ ವರಿಸುವ ಉದ್ದೇಶದಿಂದ ಕೃಷ್ಣನು ತನ್ನ ಮನೆಯಿಂದ ಮೆರವಣಿಗೆಯಲ್ಲಿ ಅಲ್ಲಿಗೆ ಹೋದನು. ಶ್ರೀರಾಜರು ಮೂಲಮಾಧವ ಎಂಬ ಕಾಡನ್ನು ವರ್ಣಿಸುತ್ತಾರೆ– ಈ ಕಾಡು ಸಮುದ್ರದ ಬದಿಯಲ್ಲೇ ಇದೆ. ಸಮುದ್ರದ ತೆರೆಗಳ ಜೊತೆಗೆ ಬಂದಿರುವ ನಾನಾವಿಧ ರತ್ನಗಳು ಈ ನೆಲವನ್ನು ಆವರಿಸಿವೆ. ಆದ್ದರಿಂದ ನೆಲವು ರತ್ನಖಚಿತವಾದಂತೆ ಇತ್ತು. ಮರಗಳಲ್ಲಿ ಎಲೆಗಳು ಹಚ್ಚಹಸುರಿನಿಂದ ಶೋಭಿಸುತ್ತಿದ್ದವು. ಇಂದ್ರನೀಲಮಣಿಗಳಿಂದ ನಿರ್ಮಿತವಾದ ಎಲೆಗಳಂತಿತ್ತು. ಅಷ್ಟಪ್ರಕಾಶವೂ ಇತ್ತು. ವರ್ಷದ ಹನ್ನೆರಡು ತಿಂಗಳೂ ಚಿಗುರುಗಳಿಂದ ದಟ್ಟವಾಗಿರುತ್ತಿತ್ತು. ಇದು ಮೇಲ್ಬದಿಯಲ್ಲಿ ಹಾಸಿದ ಕಂದುಬಣ್ಣದ ಬಟ್ಟೆ(ಮೇಲ್ಕಟ್ಟು)ಯಂತೆ ತೋರುತ್ತಿತ್ತು. ಮೇಲ್ಕಟ್ಟು ಹಾಸಿ ಅದರಲ್ಲಿ ಮುತ್ತುಗಳ ಜಾಲರಿಗಳನ್ನು ನೇತಾಡಿಸುವುದು ಸಹಜ. ಈ ಮರಗಳಲ್ಲಿ ಹೂಗಳ ಗೊಂಚಲುಗಳು ಚೆನ್ನಾಗಿ ಅರಳಿದ್ದವು. ಕೆಳಮುಖವಾಗಿ ನೇತಾಡುತ್ತಿದ್ದವು. ಇಂತಹ ಹೂಗೊಂಚಲುಗಳೇ ಮುತ್ತಿನ ಜಾಲರಿಗಳ ಸ್ಥಾನದಲ್ಲಿವೆ. ಬಹಳ ದೊಡ್ಡ ದೊಡ್ಡ ಮರಗಳು. ಅವುಗಳ ಕಾಂಡಗಳು ಸ್ವಲ್ಪ ಹಳದಿಬಣ್ಣದಿಂದ ಕೂಡಿದವುಗಳು. ಆದ್ದರಿಂದ ಬಂಗಾರದ ಕಂಬಗಳಂತೆ ತೋರುತ್ತಿದ್ದವು. ಈ ಮರಗಳೆಲ್ಲಾ ಎತ್ತರಕ್ಕೆ ಸರಿಯಾಗಿ ಅಗಲಗಳೂ ಆಗಿದ್ದವು. ಸಮಗ್ರವಾಗಿ ಈ ಕಾಡನ್ನು ನೋಡಿದಾಗ ಮದುವೆಯ ಮಂಟಪದಂತೆ ತೋರುತ್ತಿತ್ತು. ಮದುವೆಯ ಮಂಟಪಕ್ಕೂ ಕಂಬಗಳಿರುತ್ತವೆ. ತೋರಣವನ್ನು ಎಲೆಗಳಿಂದ ಬಿಗಿಯುತ್ತಾರೆ. ಬಟ್ಟೆಯ ಮೇಲ್ಕಟ್ಟು, ಅದರಲ್ಲಿ ಜಾಲರಿಗಳು, ನೆಲಕ್ಕೂ ಅಲಂಕಾರ. ಶ್ರೀಮಂತರ ಮನೆಯ ಮದುವೆಯಾದರೆ ನವರತ್ನಗಳಿಂದ. ಬಡವರ ಮದುವೆಯಾದರೆ ಮಾವಿನ ಎಲೆ ಮೊದಲಾದ್ದರಿಂದ ಮಂಟಪದ ನಿರ್ಮಾಣ. ಇಷ್ಟೇ ವ್ಯತ್ಯಾಸ.

**ವಿಷ್ವಗ್ಲಂಬಿಫಲೋಚ್ಚಯಂ ಕಲಪಿಕೈರಾಗಬ್ಧಗೀತಂ ವನಂ**
**ಗರ್ಜದ್ವಾರಿಧಿಮರ್ದಲಂ ಶುಕವಚಸ್ತೋತ್ರಂ ಸ್ವತನ್ವೀಕ್ಷಯಾ ।**

**ನೃತ್ಯತ್ಕೇಕಿನಟೀ ಮನೋಜ್ಞಮಲಿಗೀರ್ವೀಣಾನಿನಾದಂ ಪತತ್**
**ಪುಷ್ಪೌಘಾಕ್ಷತಲಾಜವೃಂದಮವಿಶನ್ಮಾಂಗಲ್ಯವೇಶ್ಮೋಪಮಮ್ ॥ ೨೭ ॥**

ವಿಷ್ವಕ್=ಸುತ್ತಲೂ; ಲಂಬಿ=ನೇತಾಡುವ; ಫಲ=ಹಣ್ಣುಗಳ; ಉಚ್ಚಯಂ=ಗುಂಪುಳ್ಳ; ಕಲ=ಚಂದದ; ಪಿಕೈಃ=ಕೋಗಿಲೆಗಳಿಂದ; ಆರಬ್ಧ=ಆರಂಭವಾದ; ಗೀತಂ=ಸಂಗೀತವುಳ್ಳ; ಗರ್ಜತ್=ಭೋರ್ಗರೆಯುವ; ವಾರಿಧಿ=ಸಮುದ್ರವೆಂಬ, ಮರ್ದಲಂ=ಮದ್ದಳವುಳ್ಳ; ಶುಕ=ಗಿಳಿಗಳ; ವಚ=ಮಾತೆಂಬ; ಸ್ತೋತ್ರಂ=ಸ್ತುತಿವುಳ್ಳ; ಸ್ವ=ತನ್ನ; ತನು=ಶರೀರದ; ಈಕ್ಷಯಾ=ದರ್ಶನದಿಂದ; ನೃತ್ಯತ್=ನರ್ತಿಸುವ; ಕೇಕಿ=ನವಿಲುಗಳೆಂಬ; ನಟೀ=ನಟಿಯರಿಂದ; ಮನೋಜ್ಞಃ=ಚಂದವಾದ; ಅಲಿ=ಭ್ರಮರಗಳ; ಗೀಃ=ಝೇಂಕಾರವೆಂಬ; ವೀಣಾ=ವೀಣೆಯ; ನಿನಾದಂ=ಧ್ವನಿವುಳ್ಳ; ಪತತ್=ಬೀಳುತ್ತಿರುವ; ಪುಷ್ಪ=ಹೂಗಳ; ಓಘ=ಸಮೂಹಗಳೆಂಬ; ಅಕ್ಷತ=ಅಕ್ಷತೆಯು; ರಾಜ=ಅರಳುಗಳ; ವೃಂದಂ=ಸಮೂಹವುಳ್ಳ; ಮಾಂಗಲ್ಯ=ಮಂಗಲಮಯವಾದ; ವೇಶ್ಮ=ಮನೆಗೆ; ಉಪಮಂ=ಸಮಾನವಾದ; ವನಂ=ಕಾಡನ್ನು; ಅವಿಶತ್=ಪ್ರವೇಶಿಸಿದನು.

ಈ ಮೂಲಮಾಧವ ಎಂಬ ಕಾಡು ಒಳ್ಳೆಯ ಮದುವೆಯ ಮನೆಯಂತ್ತಿತ್ತು. ಮದುವೆಯ ಮನೆಯಲ್ಲಿ ಈ ವೈಭವಗಳು ಕಾಣಸಿಗುವುದು ಸಹಜ. ಅಲ್ಲಲ್ಲಿ ನಾನಾ ರೀತಿಯ ಹಣ್ಣುಗಳನ್ನು ಪಾತ್ರಗಳಲ್ಲಿ ಜೋಡಿಸಿ ಇಡುತ್ತಾರೆ. ಈ ಕಾಡಲ್ಲಿರುವ ಮರಗಳು ಒಳ್ಳೊಳ್ಳೆಯ ಹಣ್ಣುಗಳನ್ನು ಗೊಂಚಲುಗೊಂಚಲಾಗಿ ತಮ್ಮಲ್ಲಿ ತುಂಬಿಕೊಂಡಿದ್ದಾವೆ. ಒಂದು ಬದಿಯಲ್ಲಿ ವಾದ್ಯಗಳು. ಅದರ ಜೊತೆಗೆ ಮೃದಂಗಗಳು. ಮತ್ತೊಂದು ಬದಿಯಲ್ಲಿ ಪಾರಾಯಣಗಳು. ಇನ್ನೊಂದು ಬದಿಯಲ್ಲಿ ನರ್ತನ. ಅದರ ಜೊತೆಗೆ ವೀಣಾವಾದನವೂ ಕೂಡಾ. ಕಾಡಲ್ಲಿ ಕೋಗಿಲೆಗಳು ಇಂಪಾಗಿ ಹಾಡುತ್ತಿದ್ದವು. ಅದು ವಾದ್ಯದಂತೆ ಕೇಳಿಸುತ್ತಿತ್ತು. ಮೃದಂಗದ ಧ್ವನಿ ಗಂಭೀರ. ಆದ್ದರಿಂದ ಸಮುದ್ರದ ಭೋರ್ಗರೆತ ಮೃದಂಗಕ್ಕೆ ಹೋಲುತ್ತಿತ್ತು. ಗಿಳಿಗಳ ಮಾತು ವೇದಮಂತ್ರಗಳ ಪಾರಾಯಣದಂತೆ ಇತ್ತು. ನವಿಲುಗಳು ಭರತನಾಟ್ಯ ಕಾರ್ಯಕ್ರಮವನ್ನು ನಡೆಸಿಕೊಟ್ಟವು. ಅವುಗಳು ಮೋಡವನ್ನು ಕಂಡರೆ ಮಾತ್ರ ಕುಣಿಯುವ ಸ್ವಭಾವದವುಗಳು. ಈಗ ಹೇಗೆ ಕುಣಿದವು ಅಂದರೆ ಕೃಷ್ಣನ ದರ್ಶನ ಇವುಗಳಿಗೆ ಆಯಿತು. ಕೃಷ್ಣನು ನೀಲ ಮೋಡದಂತೆ ಬಣ್ಣವುಳ್ಳವನು. ವೀಣೆ ನುಡಿಸುವ ಸ್ಥಳದಲ್ಲಿ ದುಂಬಿಗಳ ಝೇಂಕಾರಶಬ್ದವು ಇತ್ತು. ಮದುವೆಮನೆಗೆ ಅತಿಥಿ ಅಭ್ಯಾಗತರು ಬರುತ್ತಿರುತ್ತಾರೆ. ಅವರನ್ನು ಯಜಮಾನನು ಅಕ್ಷತೆ ಅರಳುಗಳನ್ನು ಅವರ ತಲೆಯ ಮೇಲೆ ಚೆಲ್ಲುವ ಮೂಲಕ ಸ್ವಾಗತಿಸುತ್ತಾನೆ. ಈ ಕಾಡಿನ ಯಜಮಾನರು ಮರಗಳು. ಕೃಷ್ಣಾದಿಗಳು ಅತಿಥಿಗಳು. ಗಾಳಿಗೆ ಆ ಮರಗಳ ಪುಷ್ಪಗಳು ಉದುರುತ್ತಿದ್ದವು. ಪುಷ್ಪಗಳು ಬಿಳಿಬಣ್ಣದವುಗಳು ಹೆಚ್ಚು. ಮುತ್ತಿನ ಅಕ್ಷತೆ ಹಾಗೂ ಅರಳುಗಳು ಬಿಳಿ. ಈ ಪುಷ್ಪಗಳೆಂಬ ಅಕ್ಷತೆ, ಅರಳುಗಳಿಂದ ಮರಗಳು ಕೃಷ್ಣನನ್ನು ಸ್ವಾಗತಿಸುತ್ತಿದ್ದವು. ಈ ರೀತಿ ಸಂಪೂರ್ಣವಾಗಿ ಮದುವೆಮನೆಯನ್ನು ಹೋಲುವ ಕಾಡನ್ನು ಕೃಷ್ಣನು ನಿಧಾನವಾಗಿ ಪ್ರವೇಶಿಸಿದನು.

<u>**ಸಂದೇಶ**</u> : ಕೃಷ್ಣನು ತ್ಯಜಿಸಿದ ನಾಡು ಕಾಡು. ಪ್ರವೇಶಿಸಿದ ಕಾಡು ಸುಸಂಸ್ಕೃತ ನಾಡಾಗುವುದು.

**ಯದಿಂದಿರಾಯಾಸ್ತದಭೂದ್ಧಿ ಮೂಲಂ**
**ಪ್ರಿಯಾಂಗಸಂಶ್ಲೇಷಮಹೋತ್ಸವಶ್ರಿಯಃ ।**
**ತತಸ್ತದಾರ್ಯಾಃ ಪ್ರವದಂತಿ ನೂನಂ**
**ಸ್ಥಲಂ ಸ್ಥಲಜ್ಞಾಃ ಭುವಿ ಮೂಲಮಾಧವಮ್ ॥ ೨೮ ॥**

ಯತ್=ಯಾವ ಕಾರಣದಿಂದ; ತತ್=ಆ ಜಾಗವು; ಇಂದಿರಾಯಾಃ=ರಮೆಗೆ; ಪ್ರಿಯ=ಪ್ರಿಯನ; ಅಂಗ=ದೇಹದ; ಸಂಶ್ಲೇಷ=ಸಂಬಂಧವೆಂಬ; ಮಹೋತ್ಸವ=ಉತ್ಸವದ; ಶ್ರಿಯಃ=ಸಂಪತ್ತಿಗೆ; ಮೂಲಂ=ಕಾರಣವು; ಅಭೂತ್ ಹಿ=ಆಯಿತಷ್ಟೇ; ತತಃ=ಆದ್ದರಿಂದ; ಸ್ಥಲ=ಜಾಗವನ್ನು; ಜ್ಞಾಃ=ತಿಳಿದಿರುವ; ಆರ್ಯಾಃ=ಶ್ರೇಷ್ಠರು; ತತ್=ಆ; ಸ್ಥಲಂ=ಜಾಗವನ್ನು; ಭುವಿ=ಭೂಮಿಯಲ್ಲಿ; ಮೂಲಮಾಧವಂ=ಮೂಲಮಾಧವ ಎಂಬುದಾಗಿ; ಪ್ರವದಂತಿ= ಹೇಳುತ್ತಾನೆ; ನೂನಂ=ನಿಶ್ಚಯ.

ಕೃಷ್ಣನು ರುಗ್ಮಿಣಿಯನ್ನು ಮೂಲಮಾಧವ ಎಂಬ ಸ್ಥಲದಲ್ಲಿ ಇಟ್ಟಿದ್ದನು. ಅವಳನ್ನು ವಿವಾಹವಾಗಲು ಕೃಷ್ಣನು ಅಲ್ಲಿಗೆ ಹೋದನು. ಆ ಜಾಗಕ್ಕೆ ಮೂಲಮಾಧವ ಎಂಬ ಹೆಸರು ಬರಲು ಶ್ರೀರಾಜರು ಕಾರಣವನ್ನು ತಿಳಿಸುತ್ತಾರೆ– ಮಾಧವ ಎಂಬ ಶಬ್ದದಲ್ಲಿ 'ಮಾ' ಹಾಗೂ 'ಧವ' ಎಂಬ ಎರಡು ಅವಾಂತರಪದಗಳಿವೆ. ಮಾ ಅಂದರೆ ಲಕ್ಷ್ಮೀ. ಧವ ಅಂದರೆ ಪತಿ. ರುಗ್ಮಿಣಿಯು ಲಕ್ಷ್ಮೀರೂಪಳು. ಅವಳಿಗೆ ಕೃಷ್ಣನು ಪತಿಯಾಗಲು ಈ ಜಾಗವು ಮೂಲವಾಯಿತು. ಶಾಸ್ತ್ರೀಯವಾಗಿ ಪಾಣಿಗ್ರಹಣದ ಮೂಲಕ ಪತಿಪತ್ನಿಯರಾಗುವುದು. ಪಾಣಿಗ್ರಹಣ ದೇಹದ ಒಂದು ಅಂಗದ ಸಂಬಂಧ. ಕೃಷ್ಣನ ಕೈಯ ಸಂಪರ್ಕವಾಗುತ್ತದೆ ಎಂದು ರುಗ್ಮಿಣಿಗೆ ಬಹಳ ಆನಂದ. ಇದೇ ಆಕೆಗೆ ಉತ್ಸವ. ಇದೇ ಆಕೆಗೆ ನಿಜವಾದ ಸಂಪತ್ತು. ಧವ ಶಬ್ದಕ್ಕೆ ಶುದ್ಧಿ; ನೆಮ್ಮದಿ ಎಂಬ ಅರ್ಥವೂ ಇದೆ. ಇವಳ ಮನಸ್ಸಿಗೆ ನೆಮ್ಮದಿ ಸಿಕ್ಕಿದ ಜಾಗ. ಇದನ್ನೆಲ್ಲಾ ಪಂಡಿತರು ವಿಚಾರಮಾಡಿದರು. ಈ ಜಾಗಕ್ಕೆ ಮೂಲಮಾಧವ ಎಂಬ ಹೆಸರು ಮೊದಲೇ ಇತ್ತು. ಕೃಷ್ಣರುಗ್ಮಿಣಿಯರ ಸಮಾಗಮದಿಂದ ಈ ಹೆಸರು ಸಾರ್ಥಕವಾಯಿತು.

<u>**ಸಂದೇಶ**</u> : ವಿವಾಹದ ಸ್ಥಳವನ್ನು ಮೂಲಮಾಧವ ಎಂದು ಚಿಂತಿಸಿದರೆ ದಂಪತಿಗಳಿಗೆ ಜೀವನದಲ್ಲಿ ನೆಮ್ಮದಿ.

**ಆಸನ್‌ನೃಪಾಃ ಕೇಚನ ಭೀಷ್ಮಪುತ್ರ್ಯಾಃ**
**ಪಕ್ಷೇ ಸದಾರಾಃ ಅಪರೇ ಮುರಾರೇಃ ।**

ವಾರ್ಧಿಃ ತದಾ ಗರ್ಜತಿ ವಾರಿಜಾಕ್ಷ್ಯಾಃ
ಪಕ್ಷೇಽಹಮೇವೇತಿ ವದನ್ನಿವೋಚ್ಚೈಃ ॥ ೨೯ ॥

ಕೇಚನ=ಕೆಲವು; ನೃಪಾಃ=ರಾಜರುಗಳು; ಸದಾರಾಃ=ಸಪತ್ನೀಕರಾಗಿ; ಭೀಷ್ಮ=ಭೀಷ್ಮಕನ; ಪುತ್ರ್ಯಾಃ=ಮಗಳ; ಪಕ್ಷೇ=ಪಕ್ಷದಲ್ಲಿ; ಆಸನ್=ಇದ್ದರು; ಅಪರೇ=ಬೇರೆಯವರು; ಮುರಾರೇಃ=ಕೃಷ್ಣನ ಪಕ್ಷದಲ್ಲಿ; ತದಾ=ಆಗ; ವಾರ್ಧಿಃ=ಸಮುದ್ರವು; ವಾರಿಜ=ಕಮಲದಂತೆ; ಅಕ್ಷ್ಯಾಃ=ಕಣ್ಣುಳ್ಳ ರುಗ್ಮಿಣಿಯ; ಪಕ್ಷೇ=ಪಕ್ಷದಲ್ಲಿ; ಅಹಂ ಏವ=ನಾನೇ; ಇತಿ=ಎಂದು; ವದನ್‌ಇವ=ಹೇಳುವಂತೆ; ಉಚ್ಚೈಃ=ಗಟ್ಟಿಯಾಗಿ; ಗರ್ಜತಿ=ಘೋರ್ಗರೆಯುತ್ತಿದೆ.

ಕೃಷ್ಣನು ರುಗ್ಮಿಣಿಯನ್ನು ಮಾತ್ರ ತಂದದ್ದು. ಅವಳ ಬಂಧುಗಳು ಯಾರೂ ಬರಲಿಲ್ಲ. ವಿವಾಹಾತ್ ಪೂರ್ವದಲ್ಲಿ ಪರಸ್ಪರ ಮಾತುಕತೆ ನಡೆಯಬೇಕು. ಅಲ್ಲಿ ಒಪ್ಪಿಗೆಯಾದರೆ ಮಾತ್ರ ಅನಂತರ ಮದುವೆ. ಮಾತುಕತೆಗೆ ಹುಡುಗಿಯ ಕಡೆಯವರು ಯಾರೂ ಇಲ್ಲ. ಆಗ ದ್ವಾರಕೆಯಲ್ಲಿರುವ ಕೆಲವರು ಸಪತ್ನೀಕರಾಗಿ ಹುಡುಗಿಯ ಕಡೆಯಲ್ಲಿ ನಿಲ್ಲುವುದಾಗಿ ಒಪ್ಪಿಕೊಂಡರು. ಕೃಷ್ಣನ ಪಕ್ಷದಲ್ಲಿಯಂತೂ ಬಹಳ ಜನ ಇದ್ದಾರೆ ತಾನೆ. ಹೀಗೆ ತೀರ್ಮಾನವಾದಾಗ ಸಮುದ್ರವು ಬಹಳವಾಗಿ ಗರ್ಜಿಸಿದಂತೆ ಭಾಸವಾಯಿತು. ಸಮುದ್ರದ ಘರ್ಜನೆ ಸಹಜ. ಅದನ್ನು ಶ್ರೀರಾಜರು ಈ ರೀತಿ ಉಪ್ರೇಕ್ಷಿಸುತ್ತಾರೆ– ಹುಡುಗಿಯ ಕಡೆ ಯಾರೂ ಇಲ್ಲ ಎಂದು ಭಾವಿಸಬೇಡಿ. ಹುಡುಗಿಯ ತಂದೆಯಾದ ನಾನೇ ಇದ್ದೇನೆ. ಬೇರೆ ಯಾರೂ ಬೇಡ ಎಂದು ಹೇಳುವಂತಿದೆ ಎಂದು. ಲಕ್ಷ್ಮಿಯು ಸಮುದ್ರದಿಂದ ಉದಿಸಿದವಳು. ಆದ್ದರಿಂದ ವರುಣನು ಆಕೆಯ ತಂದೆಯ ಸ್ಥಾನದಲ್ಲಿ ಇದ್ದಾನೆ.

**ಸಂದೇಶ** : ದಾನ ತೆಗೆದುಕೊಳ್ಳುವುದಕ್ಕಿಂತಲೂ ಕೊಡುವುದರಲ್ಲಿ ಹೆಚ್ಚು ಉತ್ಸಾಹವನ್ನು ತೋರಿಸಬೇಕು.

ರತ್ನೌಘಪೂರ್ಣರವಿವರ್ಣಸುವರ್ಣಪಾತ್ರೇ
ಸತ್‌ಕರ್ಣಪತ್ರಮುಖಶೋಭನವಸ್ತುರಾಶಿಮ್ ।
ವಿಸ್ತೀರ್ಯ ಶಂಖಪಟಹಧ್ವನಿಪೂರಿತಾಶಾ
ಜಗ್ಮುರ್ವಧೂಗೃಹಮಥೋತ್ಸವನಿರ್ಣಯಾಯ ॥ ೩೦ ॥

ರತ್ನ=ರತ್ನಗಳ; ಓಘ=ಸಮೂಹದಿಂದ; ಪೂರ್ಣ=ತುಂಬಿದ; ರವಿ=ಸೂರ್ಯನ; ವರ್ಣ=ಬಣ್ಣವುಳ್ಳ; ಸುವರ್ಣ=ಬಂಗಾರದ; ಪಾತ್ರೇ=ಪಾತ್ರದಲ್ಲಿ; ಸತ್=ಒಳ್ಳೆಯ; ಕರ್ಣಪತ್ರ=ಕರ್ಣಪತ್ರವೇ; ಮುಖ=ಮೊದಲಾದ; ಶೋಭನ=ಒಳ್ಳೆಯ; ವಸ್ತು=ವಸ್ತುಗಳ; ರಾಶಿಂ=ಸಮೂಹವನ್ನು; ವಿಸ್ತೀರ್ಯ=ತುಂಬಿಸಿ; ಶಂಖ=ಶಂಖವು; ಪಟಹ=ಮದ್ದಳೆಯ; ಧ್ವನಿ=ಧ್ವನಿಯಿಂದ; ಪೂರಿತ=ತುಂಬಿದ; ಆಶಾಃ=ದಿಕ್ಕುಳ್ಳವರಾಗಿ; ಉತ್ಸವ=ಮದುವೆಯ

ದಿನದ; ನಿರ್ಣಯಾಯ=ನಿಶ್ಚಯಕ್ಕೋಸ್ಕರ; ವಧೂ=ಹುಡುಗಿಯ; ಗೃಹಂ=ಮನೆಯನ್ನು; ಅಥ=ಅನಂತರ; ಜಗ್ಮುಃ=ಹೊರಟರು.

ನಿಶ್ಚಿತಾರ್ಥದ ಸಲುವಾಗಿ ಹುಡುಗನ ಕಡೆಯವರು ಹುಡುಗಿಯ ಮನೆಗೆ ಹೊರಟಿದ್ದಾರೆ. ಹೋಗುವಾಗ ನಿಶ್ಚಿತಾರ್ಥಕ್ಕೆ ಬೇಕಾದ ಕಿವಿಯ ಆಭರಣ, ಅರಸಿನಕುಂಕುಮ ಇವುಗಳನ್ನು ಪಾತ್ರಗಳಲ್ಲಿ ತುಂಬಿಕೊಂಡಿದ್ದಾರೆ. ಪಾತ್ರೆಗಳು ಬಂಗಾರದ್ದು. ಉದಿಸುವ ಸೂರ್ಯನಂತೆ ಪ್ರಕಾಶದಿಂದ ಕೂಡಿದ್ದು. ಕೆಲವುಗಳಲ್ಲಿ ನವರತ್ನಗಳನ್ನು ತುಂಬಿದ್ದಾರೆ. ಶಂಖ, ಮೃದಂಗಾದಿ ನಾನಾ ವಾದ್ಯಗಳಿಂದ ಕೂಡಿಕೊಂಡು ಹೊರಟಿದ್ದಾರೆ.

**ವಿವಿಚ್ಯ ಸರ್ವಾಂಗವಿಚಾರಕಾಲೇ ತಯೋಃ ಸಮಂತಾತ್ ಘಟನಾ ಕಿಲಾಸೀತ್ ।**
**ಸುಪೀನದೇವೀಸ್ತನಮಧ್ಯದೇಶೇ ಸುದುರ್ಲಭಾ ಸಾ ಪರಮಚ್ಯುತಸ್ಯ ॥ ೩೧ ॥**

ಸರ್ವ=ಎಲ್ಲಾ; ಅಂಗ=ಅಂಗಗಳ; ವಿಚಾರ=ವಿಚಾರಣೆಯ; ಕಾಲೇ=ಸಮಯದಲ್ಲಿ; ವಿವಿಚ್ಯ=ಪ್ರತ್ಯೇಕವಾಗಿ; ತಯೋಃ=ಅವರಿಗೆ; ಸಮಂತಾತ್=ಎಲ್ಲಾ ಕಡೆಯೂ; ಘಟನಾ= ಹೊಂದಾಣಿಕೆಯು; ಆಸೀತ್ ಕಿಲ=ಆಯಿತಷ್ಟೇ; ಪರಂ=ಆದರೆ, ಸುಪೀನ=ಪುಷ್ಟವಾದ; ದೇವೀ=ದೇವಿಯ; ಸ್ತನ=ಸ್ತನಗಳ; ಮಧ್ಯದೇಶೇ=ಮಧ್ಯಭಾಗದಲ್ಲಿ; ಸಾ=ಅದು; ಸುದುರ್ಲಭಾ=ಅಸಾಧ್ಯವಾದದ್ದು.

ಜಾತಕ ಪರಿಶೀಲನೆ ಆರಂಭವಾಯಿತು. ರಾಶಿ, ನಕ್ಷತ್ರ, ವಾರ, ತಿಥಿ, ಗೋತ್ರ ಈ ರೀತಿ ಎಲ್ಲಾ ಅಂಗಗಳಲ್ಲಿಯೂ ಘಟಿಸಿತು. ಅಂದರೆ ಒಂದಕ್ಕೊಂದು ಹೊಂದಿಕೆಯಾಯಿತು. ಶ್ರೀರಾಜರು ಈ ಶ್ಲೋಕದಲ್ಲಿ ಅಂಗ ಶಬ್ದವನ್ನು ಬಳಸುವ ಮೂಲಕ ಸ್ವಾರಸ್ಯವನ್ನು ಮೆರೆದಿದ್ದಾರೆ. ಅಂಗ ಎಂಬ ಶಬ್ದವು ವಿವಾಹಪ್ರಯುಕ್ತ ಜಾತಕದ ಅಂಗಗಳಲ್ಲಿಯೂ ದೇಹದ ಅವಯವಗಳಲ್ಲಿಯೂ ಬಳಕೆ ಇದೆ. ಜಾತಕದಲ್ಲಿ ಎಲ್ಲಾ ಅಂಗಗಳೂ ಕೂಡಿದವು. ಇವರಿಬ್ಬರ ದೇಹಗಳಲ್ಲಿ ಹಸ್ತಾದಿ ಎಲ್ಲಾ ಅಂಗಗಳೂ ಒಂದಕ್ಕೊಂದು ಸರಿ ಹೊಂದಿದವು. ಆದರೆ ಅವಳ ದೇಹದ ಕಠಿಣವಾದ ಎರಡು ಸ್ತನಗಳ ಮಧ್ಯದಲ್ಲಿ ಮಾತ್ರ ಹೊಂದಿಕೊಳ್ಳುವ ಯಾವ ಅಂಗವೂ ಕೃಷ್ಣನಲ್ಲಿ ಇರಲಿಲ್ಲ. ಅಷ್ಟು ಗಟ್ಟಿಯಾದ ಸ್ತನ. ಇದು ಸ್ತ್ರೀಯರ ಲಕ್ಷಣ ಎಂದು ತಿಳಿಸಿದಂತೆ ಆಯಿತು.

**ಕನ್ಯಾಮಿಮಾಂ ಕನಕದಾಮಕದಂಬಗೌರೀಂ**
**ಧನ್ಯಾಂ ದಿಶಂತು ಹರಯೇ ಹರಿನೀಲಭಾಸೇ ।**
**ಯುಕ್ತಸ್ತಯಾಽಯಮುದವಾಹ ಇವಾತ್ತವಿದ್ಯು-**
**ದ್ವಿಷಕ್ಕರಿಷ್ಯತಿ ಸಮಸ್ತಪುಮರ್ಥವರ್ಷಮ್ ॥ ೩೨ ॥**

ಕನಕ=ಬಂಗಾರದ; ದಾಮ=ಮಾಲೆಯಂತೆ; ಕದಂಬ=ಈಚಲುಮರದಂತೆ; ಗೌರೀಂ=ಶುಭ್ರಳಾದ; ಧನ್ಯಾಂ=ಧನ್ಯಳಾದ; ಇಮಾಂ=ಈ; ಕನ್ಯಾಂ=ಹುಡುಗಿಯನ್ನು;

ಹರಿನೀಲ=ಇಂದ್ರನೀಲದಂತೆ; ಭಾಸೇ=ಕಾಂತಿವುಳ್ಳ; ಹರಯೇ=ಕೃಷ್ಣನಿಗೆ; ದಿಶಂತು= ಕೊಡಲಿ; ತಯಾ=ಅವಳಿಂದ; ಯುಕ್ತಃ=ಕೂಡಿದ; ಅಯಂ=ಇವನು; ಉದ=ನೀರನ್ನು; ವಾಹಇವ=ಧರಿಸಿರುವ ಮೋಡದಂತೆ; ಆತ್ತ=ಸ್ವೀಕರಿಸಿದ; ವಿದ್ಯುತ್=ಮೋಡದಂತೆ; ವಿಷ್ವಕ್=ಸುತ್ತಲೂ; ಸಮಸ್ತ=ಎಲ್ಲರಿಗೂ; ಪುಮರ್ಥ=ಪುರುಷಾರ್ಥವೆಂಬ; ವರ್ಷಂ= ಮಳೆಯನ್ನು; ಕರಿಷ್ಯತಿ=ಮಾಡುತ್ತಾನೆ.

ಮಾತುಕತೆ ಆರಂಭವಾಯಿತು. ಈ ಹುಡುಗಿಯನ್ನು ಕೃಷ್ಣನಿಗೆ ಕೊಟ್ಟರೆ ಎಲ್ಲಾ ಕಡೆಯೂ ಶ್ರೇಯಸ್ಸಿನ ಮಳೆಯನ್ನೇ ಈ ಹುಡುಗನು ಕೊಡುತ್ತಾನೆ. ಮಳೆ ಕೊಡುವುದು ಮೋಡದ ಕೆಲಸ. ಮೋಡವು ಬಿಳಿಯಾಗಿದ್ದರೆ ಪ್ರಯೋಜನವಿಲ್ಲ. ಇಂದ್ರನೀಲ ಮಣಿಯಂತೆ ಕಪ್ಪಾಗಿರಬೇಕು. ಕೇವಲ ಕಪ್ಪಾಗಿದ್ದರೂ ಸಾಲದು. ಬಂಗಾರ ಬಣ್ಣದ ಮಿಂಚು ಜೊತೆಗಿರಬೇಕು. ಕೃಷ್ಣನನ್ನು ನೀಲಮೇಘದಂತೆ ಶ್ಯಾಮ ಬಣ್ಣವುಳ್ಳವನೆಂದು ಎಲ್ಲರೂ ಹೇಳುತ್ತಾರೆ. ರುಗ್ಮಿಣಿಯ ಮೈಬಣ್ಣ ಬಂಗಾರದ್ದು. ಪೂರಾ ಬಂಗಾರದಂತೆಯೂ ಅಲ್ಲ. ಬಂಗಾರ ಹಾಗೂ ಈಚಲು ಮರದ ಹೂಗಳನ್ನು ಒಟ್ಟು ಸೇರಿದರೆ ಉಂಟಾಗುವ ಬಣ್ಣದಂತೆ. ಮಿಂಚಿನ ಬಣ್ಣವೂ ಸುಮಾರಾಗಿ ಇದೇ ರೀತಿ. ಇಂತಹ ರುಗ್ಮಿಣಿಯನ್ನು ಕೃಷ್ಣನ ಜೊತೆ ಸೇರಿಸಿದರೆ ಸರ್ವತ್ರ ಸಮೃದ್ಧಿಯು ಸಹಜ.

**ಸಂದೇಶ** : ರಮೆಯ ಜೊತೆ ನಾರಾಯಣನನ್ನೇ ಈತನ ಜೊತೆ ಆಕೆಯನ್ನೇ ಚಿಂತಿಸಿದರೆ ಸಂಪತ್ತು. ಇಲ್ಲದಿದ್ದರೆ ಆಪತ್ತು.

**ವೈದರ್ಭವಂಶೋದಧಿಜಾತರತ್ನಂ**
**ಇಯಂ ಸತೀ ಸೋಽಪ್ಯುಡುನಾಯಕಸ್ಯ ।**
**ಕುಲೋದ್ಭವಾಲಂಕೃತಿರೇತಯೋಸ್ತ–**
**ತ್ಪರಂಪರಾ ಯೋಗ್ಯಮವೈತ ಯೋಗಮ್** ॥ ೩೩ ॥

ಸತೀ=ಯೋಗ್ಯಳಾದ; ಇಯಂ=ಇವಳು; ವೈದರ್ಭ=ವಿದರ್ಭನ; ವಂಶ=ವಂಶವೆಂಬ; ಉದಧಿ=ಸಮುದ್ರದಲ್ಲಿ; ಜಾತ=ಹುಟ್ಟಿದ; ರತ್ನಂ=ರತ್ನವು; ಸಃ ಅಪಿ=ಅವನಾದರೂ; ಉಡು=ನಕ್ಷತ್ರಗಳಿಗೆ; ನಾಯಕಸ್ಯ=ಒಡೆಯನ; ಕುಲ=ವಂಶದಲ್ಲಿ; ಉದ್ಭವ=ಹುಟ್ಟಿದವರಿಗೆ; ಅಲಂಕೃತಿಃ=ಅಲಂಕಾರವು; ಏತಯೋಃ=ಇವರಿಗೆ; ಪರಂಪರಾ=ಪರಂಪರೆಗೆ; ಯೋಗ್ಯಂ=ಉಚಿತವಾದ; ಯೋಗಂ=ಸಂಬಂಧವನ್ನು; ಅವೈತ=ತಿಳಿಯಿರಿ.

'ಕುಲಂ ಅಗ್ರೇ ಪರೀಕ್ಷೇತ' ಮೊದಲು ವಧೂವರರ ಕುಲವನ್ನು ವಿಚಾರಿಸಬೇಕು ಎಂಬ ಮಾತಿನಂತೆ ಈಗ ಇವರ ವಂಶವನ್ನು ವಿಚಾರಿಸುತ್ತಾರೆ. ಕುಂಡಿನಪುರದ ರಾಜ ಭೀಷ್ಮಕ. ಈತನ ವಂಶವು ಸಮುದ್ರದಂತೆ ಬಹಳ ದೊಡ್ಡದು. ಇಂತಹ ಸಮುದ್ರದಲ್ಲಿ ಈಕೆಯು ರತ್ನದಂತೆ ಉದಿಸಿದವಳು. ಹುಡುಗನು ಚಂದ್ರವಂಶದಲ್ಲಿ ಹುಟ್ಟಿದವನು.

ಕೇವಲ ಇಷ್ಟೇ ಅಲ್ಲ; ಚಂದ್ರವಂಶದಲ್ಲಿ ಹುಟ್ಟಿದ ಇತರರಿಗೆ ಅಲಂಕಾರದಂತೆ ಇರುವವನು. ರುಗ್ಮಿಣಿಯು ರಮೆಯ ಅವತಾರ. ರಮೆಯು ಸಮುದ್ರನ ಮಗಳು. ಸಮುದ್ರಕ್ಕೂ ಚಂದ್ರನಿಗೂ ಸಹಜವಾಗಿ ಮಿತ್ರತ್ವ ಇದೆ. ಆದ್ದರಿಂದ ಈ ವಧೂವರರ ಮೂಲಪುರುಷರಿಗೆ ಅನ್ಯೋನ್ಯತೆ ಇರುವುದರಿಂದ ಇವರಿಬ್ಬರಿಗೆ ಲಗ್ನವಾಗುವುದು ಯೋಗ್ಯ. ಸಮುದ್ರದಲ್ಲಿ ಉದಿಸಿದವಳು ಲಕ್ಷ್ಮಿಯಾದ ರುಗ್ಮಿಣಿ. ದೇವತೆಗಳೆಲ್ಲಾ ಯಾದವರಾಗಿ ಬಂದಿದ್ದಾರೆ. ಅಂತಹ ಯಾದವರಿಗೇ ಅಲಂಕಾರ ಈ ಕೃಷ್ಣನು. ಅಂದರೆ ಸರ್ವೋತ್ತಮನು. ಶಾಸ್ತ್ರೀಯವಾಗಿ ನಾರಾಯಣನೇ ಸರ್ವೋತ್ತಮನು. ಆದ್ದರಿಂದ ಈ ವಧೂವರರ ಅನ್ಯೋನ್ಯ ಯೋಗವಾದರೆ ಲಕ್ಷ್ಮೀನಾರಾಯಣರು ಜೊತೆ ಸೇರಿದಂತೆ. ಇದೂ ಬಹಳ ಪ್ರಶಸ್ತವೇ ಆಗಿದೆ. ವಿದರ್ಭವಂಶದಲ್ಲಿ ಆಕೆ ರತ್ನದಂತೆ. ಅಂದರೆ ಬಹಳ ಚಂದ. ಯಾದವರಲ್ಲಿ ಈತನು ಅಲಂಕಾರದಂತೆ ಅಂದರೆ ಯಾದವರಲ್ಲಿ ಈತನೇ ಚಂದ. ಚಂದದವರಿಗೇ ಪರಸ್ಪರ ವಿವಾಹಯೋಗ. ಆದ್ದರಿಂದಲೂ ಇವರಿಬ್ಬರು ಜೊತೆ ಸೇರುವುದು ಬಹಳ ಯೋಗ್ಯ ಎಂದು ತಿಳಿಯಿರಿ ಎಂದು ಮಾತುಕತೆಗೆ ಮುಂದಾದವರು ಇತರ ಜನರಿಗೆ ತಿಳಿಸುತ್ತಾರೆ.

**ಸಂದೇಶ** : ರಮಾನಾರಾಯಣರ ಗುಣಗಳನ್ನು ಮೆಲುಕುಹಾಕಿ ಅವರಿಬ್ಬರನ್ನು ಜೊತೆಯಾಗಿ ಚಿಂತಿಸಬೇಕು. ಹಾಗೆಯೇ ಚಿಂತಿಸಬಾರದು.

**ಪದ್ಮಾಲಯಾ ಸಾ ಕಿಲ ಪಾವನಾಂಗೀ**
**ನಾರಾಯಣೋಽಯಂ ನವನೀರ ದಾಭಃ ।**
**ತೇನಾನಯೋಃ ಸುಸ್ಥಿರಮೇವ ಯೋಗಂ**
**ಮನ್ಯಾಮಹೇನ್ಯೋನ್ಯ ವಿಭೂತಿಹೇತುಮ್** ॥ ೩೪ ॥

ಪಾವನ=ಪವಿತ್ರವಾದ; ಅಂಗೀ=ಅವಯವವುಳ್ಳ; ಸಾ=ಹುಡುಗಿಯು; ಪದ್ಮ= ಕಮಲವೇ; ಆಲಯಾ=ಆಶ್ರಯವಾಗಿ ಉಳ್ಳವಳು; ನವ=ಹೊಸದಾದ; ನೀರದ=ಮೋಡ ದಂತೆ; ಆಭಃ=ಕಾಂತಿಯುಳ್ಳ; ಅಯಂ=ಈ ಹುಡುಗನು; ನಾರಾ=ನೀರು; ಅಯನಃ=ಆಶ್ರಯ ವಾಗಿವುಳ್ಳವನು; ತೇನ=ಆದ್ದರಿಂದ; ಅನಯೋಃ=ಇವರಿಬ್ಬರ; ಸುಸ್ಥಿರಂ=ದೃಢವಾದ; ಯೋಗಂ=ಸಂಬಂಧವನ್ನು; ಅನ್ಯೋನ್ಯ=ಪರಸ್ಪರವಾಗಿ; ವಿಭೂತಿ=ಕಾಂತಿಗೆ; ಹೇತುಂ= ಕಾರಣವನ್ನಾಗಿ; ಮನ್ಯಾಮಹೇ=ತಿಳಿಯುತ್ತೇವೆ.

ಇನ್ನೊಂದು ರೀತಿಯಿಂದ ಇವರ ಅನ್ಯೋನ್ಯತೆಯನ್ನು ಶ್ರೀರಾಜರು ವರ್ಣಿಸುತ್ತಾರೆ –ಶ್ರೀಸೂಕ್ತವು ಹೇಳುವಂತೆ ಈಕೆಯು ಪದ್ಮಾಲಯೆ ಅಂದರೆ ಕಮಲವನ್ನು ಮನೆಯನ್ನಾಗಿ ಮಾಡಿಕೊಂಡವಳು. ಕಮಲವು ಸದಾ ನೀರಿನಲ್ಲೇ ಇರುವುದು. ಆದ್ದರಿಂದಲೇ ಈಕೆಯ ದೇಹವು ಬಹಳ ಪವಿತ್ರವಾದದ್ದು. ಈತನ ಹೆಸರು ನಾರಾಯಣ ಎಂದು. ನಾರಾ ಅಂದರೆ ನೀರು. ಅಯನ ಅಂದರೆ ಆಶ್ರಯ. ಸದಾ ನೀರಿನಲ್ಲಿ ಶೇಷನ ಮೇಲೆ

ಹರಿನೀಲ=ಇಂದ್ರನೀಲದಂತೆ; ಭಾಸೇ=ಕಾಂತಿವುಳ್ಳ; ಹರಯೇ=ಕೃಷ್ಣನಿಗೆ; ದಿಶಂತು= ಕೊಡಲಿ; ತಯಾ=ಅವಳಿಂದ; ಯುಕ್ತಃ=ಕೂಡಿದ; ಅಯಂ=ಇವನು; ಉದ=ನೀರನ್ನು; ವಾಹಇವ=ಧರಿಸಿರುವ ಮೋಡದಂತೆ; ಆತ್ತ=ಸ್ವೀಕರಿಸಿದ; ವಿದ್ಯುತ್=ಮೋಡದಂತೆ; ವಿಷ್ವಕ್=ಸುತ್ತಲೂ; ಸಮಸ್ತ=ಎಲ್ಲರಿಗೂ; ಪುಮರ್ಥ=ಪುರುಷಾರ್ಥವೆಂಬ; ವರ್ಷಂ= ಮಳೆಯನ್ನು; ಕರಿಷ್ಯತಿ=ಮಾಡುತ್ತಾನೆ.

ಮಾತುಕತೆ ಆರಂಭವಾಯಿತು. ಈ ಹುಡುಗಿಯನ್ನು ಕೃಷ್ಣನಿಗೆ ಕೊಟ್ಟರೆ ಎಲ್ಲಾ ಕಡೆಯೂ ಶ್ರೇಯಸ್ಸಿನ ಮಳೆಯನ್ನೇ ಈ ಹುಡುಗನು ಕೊಡುತ್ತಾನೆ. ಮಳೆ ಕೊಡುವುದು ಮೋಡದ ಕೆಲಸ. ಮೋಡವು ಬಿಳಿಯಾಗಿದ್ದರೆ ಪ್ರಯೋಜನವಿಲ್ಲ. ಇಂದ್ರನೀಲ ಮಣಿಯಂತೆ ಕಪ್ಪಾಗಿರಬೇಕು. ಕೇವಲ ಕಪ್ಪಾಗಿದ್ದರೂ ಸಾಲದು. ಬಂಗಾರ ಬಣ್ಣದ ಮಿಂಚು ಜೊತೆಗಿರಬೇಕು. ಕೃಷ್ಣನನ್ನು ನೀಲಮೇಘದಂತೆ ಶ್ಯಾಮ ಬಣ್ಣವುಳ್ಳವನೆಂದು ಎಲ್ಲರೂ ಹೇಳುತ್ತಾರೆ. ರುಗ್ಮಿಣಿಯ ಮೈಬಣ್ಣ ಬಂಗಾರದ್ದು. ಪೂರಾ ಬಂಗಾರದಂತೆಯೂ ಅಲ್ಲ. ಬಂಗಾರ ಹಾಗೂ ಈಚಲು ಮರದ ಹೂಗಳನ್ನು ಒಟ್ಟು ಸೇರಿದರೆ ಉಂಟಾಗುವ ಬಣ್ಣದಂತೆ. ಮಿಂಚಿನ ಬಣ್ಣವೂ ಸುಮಾರಾಗಿ ಇದೇ ರೀತಿ. ಇಂತಹ ರುಗ್ಮಿಣಿಯನ್ನು ಕೃಷ್ಣನ ಜೊತೆ ಸೇರಿಸಿದರೆ ಸರ್ವತ್ರ ಸಮೃದ್ಧಿಯು ಸಹಜ.

**ಸಂದೇಶ** : ರಮೆಯ ಜೊತೆ ನಾರಾಯಣನನ್ನೇ ಈತನ ಜೊತೆ ಆಕೆಯನ್ನೇ ಚಿಂತಿಸಿದರೆ ಸಂಪತ್ತು. ಇಲ್ಲದಿದ್ದರೆ ಆಪತ್ತು.

**ವೈದರ್ಭವಂಶೋದಧಿಜಾತರತ್ನಂ**
**ಇಯಂ ಸತೀ ಸೋಽಪ್ಯುಡುನಾಯಕಸ್ಯ ।**
**ಕುಲೋದ್ಭವಾಲಂಕೃತಿರೇತಯೋಸ್ತ-**
**ತ್ಪರಂಪರಾ ಯೋಗ್ಯಮವೈತ ಯೋಗಮ್** ॥ ೩೩ ॥

ಸತೀ=ಯೋಗ್ಯಳಾದ; ಇಯಂ=ಇವಳು; ವೈದರ್ಭ=ವಿದರ್ಭನ; ವಂಶ=ವಂಶವೆಂಬ; ಉದಧಿ=ಸಮುದ್ರದಲ್ಲಿ; ಜಾತ=ಹುಟ್ಟಿದ; ರತ್ನಂ=ರತ್ನವು; ಸಃ ಅಪಿ=ಅವನಾದರೂ; ಉಡು=ನಕ್ಷತ್ರಗಳಿಗೆ; ನಾಯಕಸ್ಯ=ಒಡೆಯನ; ಕುಲ=ವಂಶದಲ್ಲಿ; ಉದ್ಭವ=ಹುಟ್ಟಿದವರಿಗೆ; ಅಲಂಕೃತಿಃ=ಅಲಂಕಾರವು; ಏತಯೋಃ=ಇವರಿಗೆ; ಪರಂಪರಾ=ಪರಂಪರೆಗೆ; ಯೋಗ್ಯಂ=ಉಚಿತವಾದ; ಯೋಗಂ=ಸಂಬಂಧವನ್ನು; ಅವೈತ=ತಿಳಿಯಿರಿ.

'ಕುಲಂ ಅಗ್ರೇ ಪರೀಕ್ಷೇತ' ಮೊದಲು ವಧೂವರರ ಕುಲವನ್ನು ವಿಚಾರಿಸಬೇಕು ಎಂಬ ಮಾತಿನಂತೆ ಈಗ ಇವರ ವಂಶವನ್ನು ವಿಚಾರಿಸುತ್ತಾರೆ. ಕುಂಡಿನಪುರದ ರಾಜ ಭೀಷ್ಮಕ. ಈತನ ವಂಶವು ಸಮುದ್ರದಂತೆ ಬಹಳ ದೊಡ್ಡದು. ಇಂತಹ ಸಮುದ್ರದಲ್ಲಿ ಈಕೆಯು ರತ್ನದಂತೆ ಉದಿಸಿದವಳು. ಹುಡುಗನು ಚಂದ್ರವಂಶದಲ್ಲಿ ಹುಟ್ಟಿದವನು.

ಕೇವಲ ಇಷ್ಟೇ ಅಲ್ಲ; ಚಂದ್ರವಂಶದಲ್ಲಿ ಹುಟ್ಟಿದ ಇತರರಿಗೆ ಅಲಂಕಾರದಂತೆ ಇರುವವನು. ರುಗ್ಮಿಣಿಯು ರಮೆಯ ಅವತಾರ. ರಮೆಯು ಸಮುದ್ರನ ಮಗಳು. ಸಮುದ್ರಕ್ಕೂ ಚಂದ್ರನಿಗೂ ಸಹಜವಾಗಿ ಮಿತ್ರತ್ವ ಇದೆ. ಆದ್ದರಿಂದ ಈ ವಧೂವರರ ಮೂಲಪುರುಷರಿಗೆ ಅನ್ಯೋನ್ಯತೆ ಇರುವುದರಿಂದ ಇವರಿಬ್ಬರಿಗೆ ಲಗ್ನವಾಗುವುದು ಯೋಗ್ಯ. ಸಮುದ್ರದಲ್ಲಿ ಉದಿಸಿದವಳು ಲಕ್ಷ್ಮಿಯಾದ ರುಗ್ಮಿಣಿ. ದೇವತೆಗಳೆಲ್ಲಾ ಯಾದವರಾಗಿ ಬಂದಿದ್ದಾರೆ. ಅಂತಹ ಯಾದವರಿಗೇ ಅಲಂಕಾರ ಈ ಕೃಷ್ಣನು. ಅಂದರೆ ಸರ್ವೋತ್ತಮನು. ಶಾಸ್ತ್ರೀಯವಾಗಿ ನಾರಾಯಣನೇ ಸರ್ವೋತ್ತಮನು. ಆದ್ದರಿಂದ ಈ ವಧೂವರರ ಅನ್ಯೋನ್ಯ ಯೋಗವಾದರೆ ಲಕ್ಷ್ಮೀನಾರಾಯಣರು ಜೊತೆ ಸೇರಿದಂತೆ. ಇದೂ ಬಹಳ ಪ್ರಶಸ್ತವೇ ಆಗಿದೆ. ವಿದರ್ಭವಂಶದಲ್ಲಿ ಆಕೆ ರತ್ನದಂತೆ. ಅಂದರೆ ಬಹಳ ಚಂದ. ಯಾದವರಲ್ಲಿ ಈತನು ಅಲಂಕಾರದಂತೆ ಅಂದರೆ ಯಾದವರಲ್ಲಿ ಈತನೇ ಚಂದ. ಚಂದದವರಿಗೇ ಪರಸ್ಪರ ವಿವಾಹಯೋಗ. ಆದ್ದರಿಂದಲೂ ಇವರಿಬ್ಬರು ಜೊತೆ ಸೇರುವುದು ಬಹಳ ಯೋಗ್ಯ ಎಂದು ತಿಳಿಯಿರಿ ಎಂದು ಮಾತುಕತೆಗೆ ಮುಂದಾದವರು ಇತರ ಜನರಿಗೆ ತಿಳಿಸುತ್ತಾರೆ.

**ಸಂದೇಶ** : ರಮಾನಾರಾಯಣರ ಗುಣಗಳನ್ನು ಮೆಲುಕುಹಾಕಿ ಅವರಿಬ್ಬರನ್ನು ಜೊತೆಯಾಗಿ ಚಿಂತಿಸಬೇಕು. ಹಾಗೆಯೇ ಚಿಂತಿಸಬಾರದು.

**ಪದ್ಮಾಲಯಾ ಸಾ ಕಿಲ ಪಾವನಾಂಗೀ**
**ನಾರಾಯಣೋಽಯಂ ನವನೀರ ದಾಭಃ ।**
**ತೇನಾನಯೋಃ ಸುಸ್ಥಿರಮೇವ ಯೋಗಂ**
**ಮನ್ಯಾಮಹೇನ್ಯೋನ್ಯ ವಿಭೂತಿಹೇತುಮ್** ॥ ೩೪ ॥

ಪಾವನ=ಪವಿತ್ರವಾದ; ಅಂಗೀ=ಅವಯವವುಳ್ಳ; ಸಾ=ಹುಡುಗಿಯು; ಪದ್ಮ=ಕಮಲವೇ; ಆಲಯಾ=ಆಶ್ರಯವಾಗಿ ಉಳ್ಳವಳು; ನವ=ಹೊಸದಾದ; ನೀರದ=ಮೋಡದಂತೆ; ಆಭಃ=ಕಾಂತಿಯುಳ್ಳ; ಅಯಂ=ಈ ಹುಡುಗನು; ನಾರಾ=ನೀರು; ಅಯನಃ=ಆಶ್ರಯವಾಗಿವುಳ್ಳವನು; ತೇನ=ಆದ್ದರಿಂದ; ಅನಯೋಃ=ಇವರಿಬ್ಬರ; ಸುಸ್ಥಿರಂ=ದೃಢವಾದ; ಯೋಗಂ=ಸಂಬಂಧವನ್ನು; ಅನ್ಯೋನ್ಯ=ಪರಸ್ಪರವಾಗಿ; ವಿಭೂತಿ=ಕಾಂತಿಗೆ; ಹೇತುಂ=ಕಾರಣವನ್ನಾಗಿ; ಮನ್ಯಾಮಹೇ=ತಿಳಿಯುತ್ತೇವೆ.

ಇನ್ನೊಂದು ರೀತಿಯಿಂದ ಇವರ ಅನ್ಯೋನ್ಯತೆಯನ್ನು ಶ್ರೀರಾಜರು ವರ್ಣಿಸುತ್ತಾರೆ –ಶ್ರೀಸೂಕ್ತವು ಹೇಳುವಂತೆ ಈಕೆಯು ಪದ್ಮಾಲಯೆ ಅಂದರೆ ಕಮಲವನ್ನು ಮನೆಯನ್ನಾಗಿ ಮಾಡಿಕೊಂಡವಳು. ಕಮಲವು ಸದಾ ನೀರಿನಲ್ಲೇ ಇರುವುದು. ಆದ್ದರಿಂದಲೇ ಈಕೆಯ ದೇಹವು ಬಹಳ ಪವಿತ್ರವಾದದ್ದು. ಈತನ ಹೆಸರು ನಾರಾಯಣ ಎಂದು. ನಾರಾ ಅಂದರೆ ನೀರು. ಅಯನ ಅಂದರೆ ಆಶ್ರಯ. ಸದಾ ನೀರಿನಲ್ಲಿ ಶೇಷನ ಮೇಲೆ

ಇರುವವನು ಎಂದರ್ಥ. ಈ ರೀತಿಯಾಗಿ ಇಬ್ಬರೂ ನೀರಿನಲ್ಲೇ ಇರುವವರಾದ್ದರಿಂದ ಒಂದೇ ಊರಿನವರಿಗೆ ಮದುವೆ ಯೋಗ್ಯ ಕಮಲ–ನೀರುಗಳ ಸಂಬಂಧ ಸಹಜವಾದದ್ದು. ಶಾಶ್ವತವೂ ಕೂಡಾ. ಕಮಲ ಬದುಕುವುದೇ ನೀರಿನಿಂದ. ಆದರೆ ನೀರಿನ ಅಸ್ತಿತ್ವಕ್ಕೆ ಕಮಲದ ಅಗತ್ಯ ಇಲ್ಲ. ಶೋಭೆಯ ವಿಷಯದಲ್ಲಿ ಒಂದಕ್ಕೊಂದು ಪೂರಕವಾದರೂ ಅಸ್ತಿತ್ವವಿಷಯದಲ್ಲಿ ಜಲವೇ ಶ್ರೇಷ್ಠವು.

ಕೃಷ್ಣನನ್ನು ಮೋಡದಂತೆ ಬಣ್ಣವುಳ್ಳವನು ಎಂದಿದ್ದಾರೆ. ಇದರಿಂದಾಗಿ ಮೋಡಕ್ಕೆ ಸ್ಪರ್ಧಿ ಎಂದು ಹೇಳಿದಂತಾಯಿತು. ಅಂದರೆ ಮೋಡದ ಶಕ್ತಿಯನ್ನು ಕುಗ್ಗಿಸುವವನು ಎಂದರ್ಥ. ಆಕಾಶದಲ್ಲಿ ಮೋಡಗಳಿದ್ದರೆ ಕಮಲಗಳು ಚೆನ್ನಾಗಿ ಅರಳುವುದಿಲ್ಲ. ಕಮಲಗಳ ಉಲ್ಲಾಸಕ್ಕೆ ಮೋಡಗಳು ಕಂಟಕಗಳು. ಈ ಕಂಟಕಗಳನ್ನು ಕೃಷ್ಣನು ದೂರಮಾಡುತ್ತಾನೆ. ರುಗ್ಮಿಣಿಯ ವೈರಿಯನ್ನು ದುರ್ಬಲಗೊಳಿಸುತ್ತಾನೆ. ಆದ್ದರಿಂದ ಇವಳನ್ನು ಕೃಷ್ಣನಿಗೇ ಕೊಡಬೇಕು ಎಂದು ಜನರು ವಿಚಾರಮಾಡಿದರು.

**ಸಂದೇಶ** : ಅವರಿಬ್ಬರ ಗುಣಗಳನ್ನು ಚಿಂತಿಸುವಾಗ ತಾರತಮ್ಯ ಜ್ಞಾನವೂ ಬೇಕು. ನಾರಾಯಣನು ಪೋಷಕನು. ಆಕೆಯು ಪೋಷ್ಯಳು ಎಂದು.

**ಆರ್ಯಾಃ ಸ್ವಭಾರ್ಯಾಂ ಯದಿ ಭಾರಕಾರ್ಯೇ ನೈವೋಪದಿಶ್ಯಾನ್ನ ಪುನಃ ಕದಾಪಿ।**
**ಏನಾಂ ತ್ಯಜೇಜ್ಜಾತ್ವಪಿ ನಾತ್ರ ಕುಪ್ಯೇದ್ಗೃಹ್ಣಾತು ತರ್ಹ್ಯಬ್ಜಮುಖೀ ಕರಂ ನಃ॥ ೩೫ ॥**

ಆರ್ಯಾಃ=ಪೂಜ್ಯನು; ಸ್ವ=ತನ್ನ; ಭಾರ್ಯಾಂ=ಪತ್ನಿಯನ್ನು; ಯದಿ=ಒಂದುವೇಳೆ; ಭಾರ=ಕಷ್ಟದ; ಕಾರ್ಯೇ=ಕೆಲಸದಲ್ಲಿ; ನ ಏವ ಉಪದಿಶ್ಯಾತ್=ಆಜ್ಞಾಪಿಸಬಾರದು; ಪುನಃ= ಹಾಗೆಯೇ; ಕದಾ ಅಪಿ=ಎಂದೂ ಕೂಡಾ; ಏನಾಂ=ಇವಳನ್ನು; ನ ತ್ಯಜೇತ್= ಬಿಡಬಾರದು; ಜಾತು ಅಪಿ=ಎಂದೂ ಕೂಡಾ; ಅತ್ರ=ಇವಳಲ್ಲಿ; ನ ಕುಪ್ಯೇತ್=ಸಿಟ್ಟಾಗ ಬಾರದು; ತರ್ಹಿ= ಹಾಗಿದ್ದರೆ; ನಃ=ನಮ್ಮ; ಅಬ್ಜ=ಕಮಲದಂತೆ; ಮುಖೀ=ಮುಖವುಳ್ಳವಳ; ಕರಂ=ಕೈಯನ್ನು; ಗೃಹ್ಣಾತು=ಹಿಡಿಯಲಿ.

ಲೋಕದಲ್ಲಿ ಸಾಮಾನ್ಯವಾಗಿ ನಡೆಯುವ ಮಾತುಕತೆಯಂತೆ ಇಲ್ಲಿಯೂ ಶ್ರೀರಾಜರು ಚಿತ್ರಿಸುತ್ತಾರೆ– ನಮ್ಮ ಹುಡುಗಿ ಹೆಚ್ಚು ಮನೆಗೆಲಸವನ್ನು ಮಾಡಿ ಪಳಗಿದವಳಲ್ಲ. ಆದ್ದರಿಂದ ಆ ವಿಷಯದಲ್ಲಿ ಆಕೆಯನ್ನು ಹೆಚ್ಚು ಬಲಾತ್ಕರಿಸಬಾರದು. ಹುಡುಗನು ಸಂಚಾರಕ್ಕೆ ಹೋಗುವುದಾದರೆ ಈಕೆಯನ್ನು ಜೊತೆಗೆ ಕರೆದುಕೊಂಡೇ ಹೋಗಬೇಕು. ಎಂದು ಕೂಡಾ ಇವಳಲ್ಲಿ ಸಿಟ್ಟಾಗುವ ಪ್ರಸಂಗ ಕೂಡದು. ಹಾಗಿದ್ದರೆ ಮಾತ್ರ ಈಕೆಯನ್ನು ಮದುವೆಯಾಗ ಬಹುದು. ಈ ರೀತಿಯಾಗಿ ಹುಡುಗಿಯ ಕಡೆಯವರು ಮಾತನ್ನು ಆರಂಭಿಸುತ್ತಾರೆ.

**ಸಂದೇಶ** : ಪತಿಯು ಪತ್ನಿಗಿಂತ ಹಿರಿಯನು ಆಗಿದ್ದಿರಬಹುದು. ಆದರೆ ಪತ್ನಿಯನ್ನು

ತಾನು ಮನಬಂದಂತೆ ಉಪಯೋಗಿಸಿಕೊಳ್ಳುವುದಲ್ಲ. ಆಕೆಗೂ ಗೌರವವನ್ನು ಕೊಡಬೇಕು.

ಸಂದೇಶಮಾತ್ರಮಭಿವೀಕ್ಷ್ಯ ಹರೇ ಗೃಹಂ ನಃ
ಸಂಪ್ರೇಷಯಿಷ್ಯಸಿ ಕರಿಷ್ಯಸಿ ನಾನ್ಯ ಪತ್ನೀಮ್ ।
ಬಂಧೂನ್ ಸ್ಮರಿಷ್ಯಸಿ ವಿಭೋ ಯದಿ ವಿಶ್ವದೋ ನ
ಸ್ತ್ವಾಂ ತರ್ಹಿ ವಲ್ಗುವದನಾ ವರಯೇದ್ವರಿಷ್ಠಮ್ ॥ ೩೬ ॥

ವಿಭೋ=ಒಡೆಯನೇ; ಹರೇ=ಕೃಷ್ಣನೇ; ನಃ=ನಮ್ಮ; ಸಂದೇಶಮಾತ್ರಂ=ಕೇವಲ ಸಂದೇಶವನ್ನು; ಅಭಿವೀಕ್ಷ್ಯ=ನೋಡಿ; ಗೃಹಂ=ಮನೆಯನ್ನು; ಸಂಪ್ರೇಷಯಿಷ್ಯಸಿ= ಕಳಿಸುವುದಾದರೆ; ಯದಿ=ಒಂದುವೇಳೆ; ಅನ್ಯ=ಇನ್ನೊಂದು; ಪತ್ನೀಂ=ಪತ್ನಿಯನ್ನು; ನ ಕರಿಷ್ಯಸಿ=ಮಾಡದಿದ್ದರೆ; ಬಂಧೂನ್=ಬಂಧುಗಳನ್ನು; ಸ್ಮರಿಷ್ಯಸಿ=ಸ್ಮರಿಸುವುದಾದರೆ; ನಃ=ನಮ್ಮ; ವಿಶ್ವ=ಎಲ್ಲವನ್ನೂ; ದಃ=ಕೊಡುವವನು; ತರ್ಹಿ=ಆಗ; ವಲ್ಗು=ಚಂದದ; ವದನಾ= ಮುಖವುಳ್ಳ ಈಕೆಯು; ವರಿಷ್ಠಂ=ಶ್ರೇಷ್ಠನಾದ; ತ್ವಾಂ=ನಿನ್ನನ್ನು; ವರಯೇತ್=ವರಿಸುತ್ತಾಳೆ.

ಇನ್ನೂ ಮುಂದುವರಿಸುತ್ತಾರೆ– ನಮಗೆ ಆಗಾಗ ಹುಡುಗಿಯನ್ನು ನೋಡ ಬೇಕೆನಿಸುತ್ತದೆ. ಹೇ ಕೃಷ್ಣನೇ, ಆ ಸಂದರ್ಭದಲ್ಲಿ 'ಆಗುವುದಿಲ್ಲ' ಎಂದು ಹೇಳಬೇಡ. ಯಾಕೆಂದರೆ ನೀನು ಭಕ್ತರ ಎಲ್ಲಾ ಅಭೀಷ್ಟಗಳನ್ನೂ ಪೂರ್ಣಮಾಡುವವನು. ಹಾಗಂತ ನಾವೇ ಬಂದು ಹುಡುಗಿಯನ್ನು ನೋಡಿಕೊಂಡು ಹೋಗುವಂತೆ ಹೇಳಬೇಡ. ಯಾಕೆಂದರೆ ನಾವಿನ್ನೂ ಸಂಸಾರಿಗಳು. ಅವಕಾಶ ಕಮ್ಮಿ. ನಮಗೆ ಎಣಿಸಿದಾಗ ಒಂದು ಪತ್ರವನ್ನು ಬರೆಯುತ್ತೇವೆ. ಆ ಪತ್ರಕ್ಕೆ ಬೆಲೆಕೊಟ್ಟು ಅವಳನ್ನು ಕಳಿಸಿಕೊಡಬೇಕು. ಇವಳನ್ನು ಕಳಿಸಿಕೊಟ್ಟನಂತರ ನೀನು ಇನ್ನೊಂದು ಹುಡುಗಿಯ ಜೊತೆ ಸಂಸಾರ ಮಾಡಬಾರದು. ನಿನ್ನನ್ನು ಮದುವೆ ಆಗುವುದು ನಮ್ಮ ಹುಡುಗಿ ಆಗಿದ್ದಿರಬಹುದು. ಹುಡುಗಿಗೂ ನಿನಗೂ ಮಾತ್ರ ಸಂಬಂಧ. ಹುಡುಗಿಯ ಬಂಧುಗಳಿಗೂ ನಿನಗೂ ಸಂಬಂಧವಿಲ್ಲ ಎಂದು ಭಾವಿಸಬಾರದು. ನಮ್ಮನ್ನೂ ಆಗಾಗ ಸ್ಮರಿಸುತ್ತಿರಬೇಕು. ಈ ಎಲ್ಲಾ ಷರತ್ತುಗಳಿಗೆ ಒಪ್ಪುವುದಾದರೆ ನಮ್ಮ ಚಂದದ ಮುಖವುಳ್ಳ ಹುಡುಗಿಯು ನಿನ್ನನ್ನು ವರಿಸುತ್ತಾಳೆ ಎಂದು.

**<u>ಸಂದೇಶ</u>** : ದೇವರಿಗೆ ಸಂದೇಶವನ್ನು ಕಳಸುವುದು ಅಂದರೆ ವೇದದಿಂದ ದೇವರನ್ನು ಹೊಗಳುವುದು ಎಂದರ್ಥ. ಯಾರು ವೇದಾಧ್ಯಯನ ಮಾಡುತ್ತಾರೋ ಅವರಿಗೆ ಸಕಲಪುರುಷಾರ್ಥಗಳೂ ಸಿಗುತ್ತವೆ. ಅಂದರೆ ಸರ್ವಸಂಪತ್ತುಗಳೂ ಲಭಿಸುತ್ತವೆ. ಸಂಪತ್ತಿನ ಅಭಿಮಾನಿನಿ ಲಕ್ಷ್ಮಿಯು. ಈ ವಿಷಯದಲ್ಲಿ 'ಓಂ ಪುರುಷಾರ್ಥಃ ಅತಃ ಶಬ್ದಾತ್ ಇತಿ ಬಾದರಾಯಣಃ ಓಂ' ಎಂಬ ಸೂತ್ರವು ಪ್ರಮಾಣವಾಗಿದೆ. 'ಸರ್ವೇಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ' ಎಂಬ ಆಚಾರ್ಯಮಧ್ವರ ಮಾತೂ

ಈ ಸೂತ್ರಕ್ಕೆ ವ್ಯಾಖ್ಯಾನವಾಗಿದೆ. ಎಲ್ಲಾ ರೀತಿಯ ಸಂಪತ್ತುಗಳೂ ಜ್ಞಾನದಿಂದಲೇ ಲಭಿಸುತ್ತವೆ ಎಂದು. ಆದ್ದರಿಂದ ಸಂಪತ್ತಿಗೋಸ್ಕರ ಅನ್ಯದೇವತಾರಾಧನೆ ಮಾಡುವುದು ತೆರವಲ್ಲ.

__ಸಂದೇಶ__ : ಪತ್ನಿಯರಿಗೆ ಪಾತಿವ್ರತ್ಯದಂತೆ ಪತಿಗಳಿಗೆ ಪಾತ್ನಿವ್ರತ್ಯವೂ ಅಷ್ಟೇ ಮುಖ್ಯ ಎಂಬ ಸಂದೇಶವೂ ಇಲ್ಲಿ ಅಡಕವಾಗಿದೆ. ಇನ್ನೂ ಒಂದು ತಾತ್ವಿಕಾರ್ಥ ಇಲ್ಲಿ ಸೇರಿದೆ– ಎಲ್ಲಾ ಶಾಸ್ತ್ರಗಳೂ ದೇವರನ್ನೇ ಹೇಳುತ್ತವೆ. ಇವುಗಳಲ್ಲಿ ವೇದಗಳು ವಿಶೇಷವಾಗಿ ದೇವರನ್ನು ಹೇಳುತ್ತವೆ. ಆದ್ದರಿಂದಲೇ ದೇವರನ್ನು ವೇದವೇದ್ಯ ವೇದದಿಂದ ತಿಳಿಯಲ್ಪಡುವವ ಎಂದೇ ಎಲ್ಲರೂ ಹೇಳುತ್ತಾರೆ ಹೊರತು ಪುರಾಣವೇದ್ಯ ಎಂದಲ್ಲ. ಈ ವೇದಗಳು, ಪುರಾಣಗಳು ಇವೆಲ್ಲಾ ದೇವರಿಗೆ ಪತ್ನಿಯರಂತೆ ಇವೆ. ಹುಡುಗಿಯ ಕಡೆಯವರು ಹೇಳುತ್ತಾರೆ– ಇನ್ನೊಬ್ಬಳ ಜೊತೆಗೆ ಗುರುತಿಸಿಕೊಳ್ಳಬೇಡ– 'ನ ಅನ್ಯಪತ್ನೀಂ ಕರಿಷ್ಯಸಿ' ಎಂದು. ಅಂದರೆ ಪುರಾಣವೇದ್ಯ, ಇತಿಹಾಸವೇದ್ಯ ಇತ್ಯಾದಿ ರೂಪದಿಂದ.

__ಸಂದೇಶ__ : ಬಂಧೂನ್ ಸ್ಮರಿಷ್ಯಸಿ– ಬಂಧುಗಳನ್ನು ಸ್ಮರಿಸಬೇಕು ಎಂದೂ ಹೇಳಿದ್ದಾರೆ– ವೇದಗಳಿಂದ ದೇವರನ್ನು ತಿಳಿಯುವಾಗ ಪುರಾಣಾದಿಗಳನ್ನು ಮರೆಯಬಾರದು. ಪುರಾಣಾದಿಗಳು ವೇದಗಳಿಗೆ ಬಂಧುಗಳಂತೆ. ಪುರಾಣಾದಿಗಳನ್ನು ಸೇರಿಸಿಕೊಂಡೇ ವೇದಗಳಿಗೆ ದೇವರ ಪರವಾಗಿ ಅರ್ಥ ಮಾಡಬೇಕು ಎಂದು ಅಭಿಪ್ರಾಯ.

**ಬ್ರಹ್ಮಾಂಡಾಖ್ಯಗೃಹಂ ಚತುರ್ದಶಲಸತ್ಪ್ರಾಸಾದ ಶೋಭಂ ಹರೇಃ**
**ಸಾಧ್ವೀಯಂ ಸತತಂ ವಿಚಾರಯತು ತನ್ಮಧ್ಯೇ ಗೃಹಸ್ಯೋಚಿತಮ್ ।**
**ಸ್ವರ್ಣಾದ್ರಿಕ್ಷಿತಿಧಾನ್ಯರತ್ನಲವಣಕ್ಷೀರೇಕ್ಷುಸರ್ಪಿರ್ದಧಿ–**
**ಸ್ವಾದೂದಾದಿಸುತಾಂಶ್ಚ ಪದ್ಮಜಮುಖಾಂಸ್ತೇಷಾಂ ಧುರಂ ಮಂದಿರಮ್॥ ೩೭ ॥**

ಇಯಂ=ಈ; ಸಾಧ್ವೀ=ನಾರಿಯು; ಹರೇಃ=ದೇವರ; ಚತುರ್ದಶ=ಹದಿನಾಲ್ಕು; ಲಸತ್=ಶೋಭಿಸುವ; ಪ್ರಾಸಾದ=ಉಪ್ಪರಿಗೆಗಳಿಂದ; ಶೋಭಂ=ಶೋಭಿಸುವ; ಬ್ರಹ್ಮಾಂಡ= ಬ್ರಹ್ಮಾಂಡ ಎಂದು; ಆಖ್ಯ=ಹೆಸರುಳ್ಳ; ಗೃಹಂ=ಮನೆಯನ್ನು; ಸತತಂ=ಯಾವಾಗಲೂ; ವಿಚಾರಯತು=ವಿಚಾರಿಸಲಿ; ತತ್=ಈ ಮನೆಯ; ಮಧ್ಯೇ=ಮಧ್ಯದಲ್ಲಿ; ಗೃಹಸ್ಯ= ಮನೆಗೆ; ಉಚಿತಂ=ಯೋಗ್ಯವಾದ; ಸ್ವರ್ಣ=ಬಂಗಾರದ; ಅದ್ರಿ=ಬೆಟ್ಟವು; ಕ್ಷಿತಿ=ಭೂಮಿಯು; ಧಾನ್ಯ=ಧಾನ್ಯಗಳು; ರತ್ನ=ರತ್ನಗಳು; ಲವಣ=ಉಪ್ಪಿನ; ಕ್ಷೀರ=ಹಾಲಿನ; ಇಕ್ಷು=ಕಬ್ಬಿನ; ಸರ್ಪಿಃ=ತುಪ್ಪದ; ದಧಿ=ಮೊಸರಿನ; ಸ್ವಾದು=ಸಿಹಿಯಾದ; ಉದ=ನೀರಿನ ಸಮುದ್ರವೇ; ಆದಿ=ಮೊದಲಾದ್ದನ್ನು; ಪದ್ಮ=ಕಮಲದಲ್ಲಿ; ಜ=ಹುಟ್ಟಿದವನೇ; ಮುಖಾನ್=ಮೊದಲಾದ; ಸುತಾನ್=ಮಕ್ಕಳನ್ನು; ತೇಷಾಂ=ಅವರ; ಧುರಂ=ಕೆಲಸವನ್ನು; ಮಂದಿರಂ ಚ= ಮನೆಯನ್ನು; ವಿಚಾರಯತು=ವಿಚಾರಿಸಲಿ.

ವರನ ಕಡೆಯಿಂದ ಉತ್ತರ– ನಮ್ಮ ವರನು ಸಾಧುವು. ನಿಮ್ಮ ವಧುವು ಸಾಧ್ವಿಯು.

ಸಾಧ್ವಿ ಎಂಬ ಹೆಸರು ಬರುವುದೇ ಅವಳಿಗೆ ವಿಹಿತವಾದ ಕೆಲವು ಕೆಲಸಗಳನ್ನು ಮಾಡುವುದರಿಂದ. ಅದೇನೆಂದರೆ ಮನೆಗೆ ಸೀಮಿತವಾದ ಕೆಲವು ಕೆಲಸಗಳು. ನಮ್ಮ ಹುಡುಗನಿಗೆ ಒಂದು ದೊಡ್ಡ ಮನೆ ಇದೆ. ಅದಕ್ಕೆ ಬ್ರಹ್ಮಾಂಡ ಎಂದು ಹೆಸರು. ಅದರಲ್ಲಿ ಆರು ಮಹಡಿಗಳು, ಏಳು ನೆಲ ಮಹಡಿಗಳೂ ಇವೆ. ಮನೆ ಎಂದಮೇಲೆ ಅದರಲ್ಲಿ ಎಲ್ಲಾ ಸೌಕರ್ಯಗಳೂ ಇರಬೇಕು. ಧಾನ್ಯ, ಧನ, ದ್ರವ, ಜನ ಇತ್ಯಾದಿ ಎಲ್ಲಾ ಸಂಪತ್ತೂ ಇರಬೇಕು. ಬೆಟ್ಟದಷ್ಟೂ ರಾಶಿ ಚಿನ್ನ ಒಂದು ಕಡೆ ಇದೆ. ಧಾನ್ಯಗಳ ರಾಶಿ ಇನ್ನೊಂದೆಡೆ. ದ್ರವಸಂಪತ್ತು ಮತ್ತೊಂದೆಡೆ. ಏಳು ರೀತಿಯ ದ್ರವಸಂಪತ್ತು ಸಮುದ್ರದಷ್ಟೂ ಇದೆ. ಒಂದು ಉಪ್ಪುನೀರಿನ ಸಮುದ್ರ, ಮಧ್ಯದ ಸಮುದ್ರ –ಹೀಗೆ ಹಾಲಿನ, ಮೊಸರಿನ, ಕಬ್ಬಿನರಸದ, ತುಪ್ಪದ, ಸಿಹಿನೀರಿನ ಸಮುದ್ರಗಳಿವೆ. ಕೆಳಗಿನ ಏಳು ನೆಲಮಾಳಿಗೆಗಳಿಗೆ ಅತಲ, ಸುತಲ ಎಂದು ಪ್ರತ್ಯೇಕ ಹೆಸರಿದೆ. ಮೇಲಿನ ಆರು ಮಹಡಿಗಳಿಗೆ ಭುವಃ, ಸ್ವಃ, ಮಹಃ ಎಂಬಿತ್ಯಾದಿ ಹೆಸರಿವೆ. ಈ ಎಲ್ಲಾ ಮಹಡಿಗಳಲ್ಲೂ ನಮ್ಮ ಹುಡುಗನ ಮಕ್ಕಳಿದ್ದಾರೆ. ಇವೆಲ್ಲದರ ಮೇಲ್ವಿಚಾರಣೆಯನ್ನು ಗೃಹಿಣಿಯಾದವಳು ಮಾಡಬೇಕು. ನಿಮ್ಮ ಹುಡುಗಿ ಇವಿಷ್ಟನ್ನು ಮಾಡಿದರೆ ಸಾಕು.

ದೇವರು ದೊಡ್ಡ ಶರೀರದವನು ಎಂಬುದನ್ನು ವೇದಗಳು 'ಬೃಹಚ್ಛರೀರಃ' ಎಂಬ ಶಬ್ದದಿಂದ ಹೇಳಿದೆ. ಆದ್ದರಿಂದ ಮನೆಯೂ ದೊಡ್ಡದಿರಲೇ ಬೇಕು. ಎಲ್ಲಾ ಸಂಪತ್ತಿಗೂ ಅಭಿಮಾನಿನಿ ಈ ಲಕ್ಷ್ಮೀರೂಪಳಾದ ರುಗ್ಮಿಣಿಯು. ಆದ್ದರಿಂದ ಆಕೆಗೆ ಈ ಗೃಹರೂಪ ಸಂಪತ್ತನ್ನು ವಿಚಾರಿಸುವ ಅಧಿಕಾರ ಇದೆ. ಕೃಷ್ಣನು ಎಲ್ಲವನ್ನೂ ಸೃಷ್ಟಿಸುವವನು. ಆದ್ದರಿಂದ ಬ್ರಹ್ಮಾದಿಗಳು ಮಕ್ಕಳು ಈಗಲೇ ಮನೆಯಲ್ಲಿ ತುಂಬಿದ್ದಾರೆ. ಈಕೆಯು ಲೋಕಜನನಿಯು. ಆದ್ದರಿಂದ ಬ್ರಹ್ಮಾದಿಗಳು ಈಕೆಯ ಮಕ್ಕಳೂ ಹೌದು. ಮಕ್ಕಳ ಆರೈಕೆಯನ್ನು ತಾಯಿಯೇ ನೋಡಬೇಕು ತಾನೆ.

**ಸಂದೇಶ** : ಲಗ್ನವಾಗಿ ಹುಡುಗಿಯು ಪತಿಯ ಮನೆಯನ್ನು ಪ್ರವೇಶಿಸುವಾಗ ಮನೆಗೆಲಸವನ್ನು ತಾನೇ ಮಾಡಲು ಸಿದ್ಧಳರಬೇಕು. ಇದು ಪತಿಯ ಮಾಧ್ಯಮದಿಂದ ಮಾಡುವ ದೇವರ ಪೂಜೆ.

**ಕಾರ್ಯಂ ಗೃಹಿಣ್ಯಾ ಗೃಹಕೃತ್ಯಮೇತನ್ನೋ ಭಾರಕಾರ್ಯನ್ಯಜನೈರಸಾಧ್ಯಮ್ ।**
**ತನ್ವೀ ತದೇತತ್ಸಕಲಂ ಸ್ವಲೋಲಲೀಲಾಕಟಾಕ್ಷೇಣ ಕರಿಷ್ಯತೀಯಮ್ ॥ ೩೮ ॥**

ಏತತ್=ಈ; ಗೃಹ=ಮನೆಯ; ಕೃತ್ಯಂ=ಕೆಲಸವು; ಗೃಹಿಣ್ಯಾ=ಗೃಹಿಣಿಯಿಂದ; ಕಾರ್ಯಂ=ಮಾಡಲ್ಪಡಬೇಕು; ಭಾರ=ಹೊರೆಯನ್ನು; ಕಾರಿ=ಮಾಡತಕ್ಕದ್ದು; ನೋ=ಅಲ್ಲ; ಅನ್ಯ=ಬೇರೆ; ಜನೈಃ=ಜನರಿಂದ; ಅಸಾಧ್ಯಂ=ಮಾಡಲು ಸಾಧ್ಯವಿಲ್ಲ; ಇಯಂ=ಈ; ತನ್ವೀ=ಹುಡುಗಿಯು; ತತ್=ಆ; ಏತತ್=ಈ; ಸಕಲಂ=ಎಲ್ಲವನ್ನೂ; ಸ್ವ=ತನ್ನ; ಲೋಲ=

ಚಂಚಲವಾದ; ಲೀಲಾ=ಅನಾಯಾಸದ; ಕಟಾಕ್ಷೇಣ=ಕಡೆಗಣ್ಣಿನಿಂದ; ಕರಿಷ್ಯತಿ= ಮಾಡುತ್ತಾಳೆ.

ಹುಡುಗಿಯ ಕಡೆಯವರ ಉತ್ತರ– ಇದೆಲ್ಲಾ ಮನೆಗೆಲಸ. ಇದನ್ನು ಪತ್ನಿಯಾದವಳು ಮಾಡದೆ ಮತ್ತೆ ಯಾರು ಮಾಡುವುದು? 'ಆಳು ಮಾಡಿದ್ದು ಹಾಳು' ಎಂಬ ಮಾತಿನಂತೆ ಅವರು ಮಾಡಿದರೆ ಸರಿ ಆಗುವುದೇ ಇಲ್ಲ. ಇಂತಹ ಜಾಗದಲ್ಲಿ ಇಂತಹ ವಸ್ತುಗಳೇ ಇರಬೇಕು ಎಂದು ಅವಳಿಗೆ ಮಾತ್ರ ತಿಳಿದಿರುವುದು. ಆ ಅಭಿಪ್ರಾಯದಿಂದಲೇ 'ಗೃಹಿಣೀ ಗೃಹಮುಚ್ಯತೇ' ಎಂದು ಹಿರಿಯರು ಹೇಳಿದ್ದು. ನಮ್ಮ ಹುಡುಗಿಗೆ ಮನೆಗೆಲಸ ಎಲ್ಲಾ ಗೊತ್ತಿದೆ. ಹುಬ್ಬುಕುಣಿಸಿದಷ್ಟೂ ಸರಳವಾಗಿ ಆಕೆ ಈ ಎಲ್ಲಾ ಕೆಲಸಗಳನ್ನು ಮಾಡಬಲ್ಲಳು.

ಇದನ್ನೇ ಆಚಾರ್ಯಮಧ್ವರು 'ವಿಶ್ವಸ್ಥಿತಿಪ್ರಲಯ..... ಯಸ್ಯಾಃ ಅಪಾಂಗಲವಮಾತ್ರತ ಊರ್ಜಿತಾ ಸಾ......' ಎಂದು ದ್ವಾದಶಸ್ತೋತ್ರದಲ್ಲಿ ಹೇಳಿದ್ದಾರೆ. ಪುರಂದರದಾಸರು 'ಏನು ಧನ್ಯಳೋ ಲಕುಮಿ.....' ಎಂಬ ಹಾಡಲ್ಲಿಯೂ ಹೇಳಿದ್ದಾರೆ. ಆದ್ದರಿಂದ ಪತಿಯು ಪತ್ನಿಗೆ ಮನೆಗೆಲಸದ ಬಗ್ಗೆ ಆದೇಶಿಸಿದರೆ ಅದು ಅವಳಿಗೆ ಭಾರದ ಕೆಲಸವೇ ಅಲ್ಲ.

**ಸಂದೇಶ** : ಆಧುನಿಕ ಹುಡುಗಿಯರಿಗೆ ಇಲ್ಲಿ ದೊಡ್ಡ ಸಂದೇಶ ಅಡಗಿದೆ. ಮನದ ಶಾಂತಿಗೆ ಕಾರಣವಾದ ಮನೆಯ ಚಂದಮಾಡುವಿಕೆಯನ್ನು ಬಿಟ್ಟು ಹೊರಗಿನ ಯಾವ ಉದ್ಯೋಗ ಮಾಡಿದರೂ ಪ್ರಯೋಜನವಿಲ್ಲ.

> **ನೈನಾಂ ಸಂಸದಿ ಸಂತ್ಯಜೇತ್ ನ ರಹಸಿ ಸ್ವೈರಾವತಾರೇಷು ವಾ**
> **ಸ್ನಾನಾಭ್ಯಂಜನಭೋಜನಾದಿವಿವಿಧಕ್ರೀಡಾಸು ವಾಽಸ್ಯೈ ದಿಶೇತ್ ॥**
> **ಸ್ವಾಂಗಾಶ್ಲೇಷಸುಖಂ ವಿಭೂಷಣಗತಂ ಬಿಂಬೋಷ್ಠಜಂ ಚಾಮೃತಂ**
> **ವಂಶಾದ್ಯಾಶ್ರಿತಮೇತಯಾ ವಿರಹಿತಂ ದೇಶಂ ಪರಂ ಸಂತ್ಯಜೇತ್ ॥ ೩೯ ॥**

ಏನಾಂ=ಇವಳನ್ನು; ಸಂಸದಿ=ಸಭೆಯಲ್ಲಿ; ನ ಸಂತ್ಯಜೇತ್=ತ್ಯಜಿಸುವುದಿಲ್ಲ; ರಹಸಿ=ಏಕಾಂತದಲ್ಲಿ; ಸ್ವೈರ=ಯಥೇಚ್ಛವಾದ; ಅವತಾರೇಷು ವಾ=ಅವತಾರಗಳಲ್ಲಿ; ಸ್ನಾನ=ಸ್ನಾನವು; ಅಭ್ಯಂಜನ=ಅಭ್ಯಂಗವು; ಭೋಜನ=ಊಟವು; ಆದಿ=ಮೊದಲಾದ; ವಿವಿಧ=ನಾನಾರೀತಿಯ; ಕ್ರೀಡಾಸು=ಆಟಗಳಲ್ಲಿ; ನ=ಇಲ್ಲ; ವಿಭೂಷಣ=ಆಭರಣಗಳಲ್ಲಿ; ಗತಂ=ಇರುವ; ಸ್ವ=ತನ್ನ; ಅಂಗ=ದೇಹದ; ಆಶ್ಲೇಷ=ಆಲಿಂಗನದ; ಸುಖಂ=ಸುಖವನ್ನು; ವಂಶ=ಕೊಳಲು; ಆದಿ=ಮೊದಲಾದ್ದರಲ್ಲಿ; ಆಶ್ರಿತಂ=ಇರುವ; ಬಿಂಬ=ತೊಂಡೆಯಂತಿರುವ; ಓಷ್ಠ=ತುಟಿಯಲ್ಲಿ; ಜ=ಹುಟ್ಟಿದ; ಅಮೃತಂ=ಅಮೃತವನ್ನು; ಅಸ್ಯೈ=ಇವಳಿಗೆ; ದಿಶೇತ್= ಕೊಡುತ್ತಾನೆ; ಏತಯಾ=ಇವಳಿಂದ; ವಿರಹಿತಂ=ರಹಿತವಾದ; ದೇಶಂ=ಜಾಗವನ್ನು; ಪರಂ=ಆದರೆ; ಸಂತ್ಯಜೇತ್=ಬಿಡುತ್ತಾನೆ.

ಈಕೆಯನ್ನು ಎಂದೂ ಬಿಟ್ಟಿರಬಾರದು ಎಂಬ ಮಾತಿಗೆ ಹುಡುಗನ ಕಡೆಯವರ ಪ್ರತಿಕ್ರಿಯೆ ಈ ರೀತಿ ಇದೆ–

ಯಾವ ಸಭೆ-ಸಮಾರಂಭಗಳು ನಡೆದರೂ ಅಲ್ಲಿ ಇವರಿಬ್ಬರೂ ಜೊತೆಯಾಗಿಯೇ ಇರುತ್ತಾರೆ. ಒಂದು ಸಭೆ ಆಗಬೇಕಾದರೆ ಅಲ್ಲಿ ವೃದ್ಧರು ಇರಬೇಕು. ವೃದ್ಧರು ಅಂದರೆ ಧರ್ಮವನ್ನು ಹೇಳುವವರು. ಹೇಳಬೇಕಾದರೆ ತಿಳಿದಿರಬೇಕು. ವಿಷ್ಣುಸಹಸ್ರನಾಮವು 'ಧರ್ಮವಿದುತ್ತಮಃ' ಎಂಬ ಶಬ್ದದಿಂದ ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನು ಎಂದು ದೇವರನ್ನು ಹೊಗಳುತ್ತದೆ. ಆದ್ದರಿಂದ ವಿವಾಹಾದಿ ಸಭೆಗಳಲ್ಲಿ ನಾರಾಯಣನು ಇರಲೇಬೇಕು. ದೇವರು ಮಾತ್ರ ಅಲ್ಲಿ ಇರುವುದು ಅಲ್ಲ; ಜೊತೆಯಲ್ಲಿ ಈಕೆಯೂ ಇರುವಳು.

ಈ ರೀತಿ ಸಾರ್ವಜನಿಕವಾಗಿಯೇ ಈಕೆಯ ಜೊತೆಗೆ ಇರುತ್ತಾನೆ ಎಂದರೆ ಏಕಾಂತದಲ್ಲಿ ಏನು ಹೇಳತಕ್ಕದ್ದು? ಏಕಾಂತ ಅಂದರೆ ಪ್ರಳಯಕಾಲ. ಈ ಸಮಯದಲ್ಲಿ ಎಲ್ಲಾ ಜೀವರೂ ದೇವರ ಉದರದಲ್ಲಿ ಇರುವರು. ಮಲಗಿರುವರು. ರಮೆಯು ಕತ್ತಲಿನ ರೂಪದಿಂದ ನೀರಿನ ರೂಪದಿಂದ, ಆಲದೆಲೆಯ ರೂಪದಿಂದ ಇರುವಳು. ದೇವರು ಪ್ರಳಯದ ಕತ್ತಲೆಯಲ್ಲಿ ನೀರಿನ ಮೇಲಿರುವ ಎಲೆಯಲ್ಲಿ ಪವಡಿಸುವನು. ಸ್ನಾನ ಅಂದರೆ ದೈನಂದಿನ ಅಭಿಷೇಕ. ಅಭ್ಯಂಜನ ಅಂದರೆ ದೀಪಾವಳಿಯ ತೈಲಾಭಿಷೇಕ. ಭೋಜನ-ನೈವೇದ್ಯ ಹಾಗೆಯೇ ಶಯನ. ಇಂತಹ ಎಲ್ಲಾ ಕೆಲಸಗಳಲ್ಲಿಯೂ ಜೊತೆಯಾಗಿಯೇ ಇರುತ್ತಾರೆ. ಮನೆಯಲ್ಲಿ ನಿತ್ಯ ದೇವರಪೂಜೆ ಮಾಡಬೇಕು. ಅಭಿಷೇಕದ ಸಂದರ್ಭದಲ್ಲಿ ರಮಾನಾರಾಯಣರ ಪ್ರತಿಮೆಗಳನ್ನು ಜೊತೆಯಲ್ಲಿ ಒಂದೇ ತಟ್ಟೆಯಲ್ಲಿ ಇಡಬೇಕು. ನೈವೇದ್ಯ ಮಾಡುವಾಗಲೂ ಅವರಿಬ್ಬರಿಗೆ ಜೊತೆಗೆಯೇ. ಕೆಲವರು ಈ ಪ್ರತಿಮೆಗಳನ್ನು ಬೇರೆಬೇರೆ ತಟ್ಟೆಯಲ್ಲಿಟ್ಟು ಅಭಿಷೇಕ ನೈವೇದ್ಯಾದಿಗಳನ್ನು ಮಾಡುತ್ತಾರೆ. ಇದು ತಪ್ಪು ಎಂದು ಶ್ರೀ ವಾದಿರಾಜರು ತಿಳಿಸುತ್ತಾರೆ. ಮುಖ್ಯಪ್ರಾಣಾದಿಗಳ ಪ್ರತಿಮೆಗಳನ್ನು ದೇವರ ಪ್ರತಿಮೆಗಳ ಜೊತೆಗೆ ಇಡಬಾರದು.

ದೇವರು ಭಕ್ತರ ಪ್ರಾರ್ಥನೆಗೆ ಅನುಗುಣವಾಗಿ ಅವತಾರ ತಾಳುತ್ತಾನೆ. ರಾಮಕೃಷ್ಣಾದಿ ರೂಪದಿಂದ ಕಾಣಿಸಿಕೊಳ್ಳುತ್ತಾನೆ. ಆಗ ರಮೆಯೂ ಸೀತಾದಿ ರೂಪದಿಂದ ಅವತರಿಸುತ್ತಾಳೆ.

ದೇವರು ವಾಸುದೇವಾದಿ ಪಂಚರೂಪದಿಂದ, ಮತ್ಸ್ಯಾದಿ ಹತ್ತು ರೂಪಗಳಿಂದ ಕೇಶವಾದಿ ಇಪ್ಪತ್ತನಾಲ್ಕು ರೂಪಗಳಿಂದ, ಅಜಾದಿ ಐವತ್ತೊಂದು ರೂಪಗಳಿಂದ, ಶಿಂಶುಮಾರಾದಿ ನೂರೊಂದು ರೂಪಗಳಿಂದ, ವಿಶ್ವಾದಿ ಸಾವಿರ ರೂಪಗಳಿಂದ ಅವತರಿಸುತ್ತಾನೆ. ಈ ಎಲ್ಲಾ ಅವತಾರಗಳ ಪ್ರಸಂಗದಲ್ಲಿ ರಮೆಯೂ ಅವತರಿಸುತ್ತಾಳೆ. ಇವಳ ಈ ರೂಪಗಳು ಸೀತಾದಿ ರೂಪಗಳಂತೆ ಪ್ರಸಿದ್ಧಗಳಾಗಿಲ್ಲ.

ನಮ್ಮ ಹುಡುಗನು ಸದಾಕಾಲ ಈಕೆಯನ್ನು ಆಲಿಂಗಿಸಿಕೊಂಡೇ ಇರುವನು. ತನ್ಮೂಲಕ ಆಕೆಗೆ ನೆಮ್ಮದಿಯನ್ನು ಕೊಡುತ್ತಾನೆ. ಹಾಗಾದರೆ ಮನೆಗೆಲಸ ಯಾರು

ಮಾಡುವುದು ಎಂಬ ಪ್ರಶ್ನೆ ಬರಬಹುದು. ಉತ್ತರ– ರುಗ್ಮಿಣಿರೂಪವನ್ನೇ ಆಲಿಂಗಿಸಿಕೊಂಡು ಇರುತ್ತಾನೆ ಎಂದು ಅರ್ಥ ಅಲ್ಲ. ದೇವರ ಮೈಯಲ್ಲಿ ವಿವಿಧ ಆಭರಣಗಳು ಇವೆ. ಇವುಗಳಿಗೆ ರಮೆಯು ಅಭಿಮಾನಿನಿಯು. ಅಂದರೆ ರುಗ್ಮಿಣಿಯೇ ಆಭರಣಗಳ ರೂಪದಿಂದ ದೇವರ ಮೈಯಲ್ಲಿ ಇರುವುದು. ದೇವರು ಎಂದೂ ಆಭರಣಗಳನ್ನು ತೆಗೆದಿಡುವ ಪ್ರಸಂಗ ಇಲ್ಲ. ಆದ್ದರಿಂದ ಯಾವಾಗಲೂ ತನ್ನ ದೇಹಾಲಿಂಗನದ ಆನಂದವನ್ನು ರುಗ್ಮಿಣಿಗೆ ಕೊಡುತ್ತಾನೆ.

ತನ್ನ ಎಂಜಲೆಂಬ ಅಮೃತವನ್ನು ಈಕೆಗೆ ಉಣಿಸುತ್ತಾನೆ. ಇದರಿಂದಾಗಿ ಆಕೆಗೆ ಸದಾ ಅಮೃತತ್ವವು ಬರುವುದು. ಇದನ್ನೂ ಯಾವಾಗಲೂ ಕೊಡುತ್ತಾನೆ. ರುಗ್ಮಿಣೀರೂಪಕ್ಕೂ ಕೊಡುತ್ತಾನೆ. ಬೇರೆ ಸಮಯದಲ್ಲಿ ಕೃಷ್ಣನು ಕೊಳಲನ್ನೊ ಅಥವಾ ಬಾಯಿಂದ ನುಡಿಸುವ ಇತರ ವಾದ್ಯಗಳನ್ನೊ ನುಡಿಸುತ್ತಾನೆ. ಆಗ ಬಾಯಿಯ ಎಂಜಲು ಆ ವಾದ್ಯವನ್ನು ಸೇರುವುದು ಸಹಜ. 'ಶ್ರೀದೇವೀ ವೇಣುಮಾಶ್ರಿತ್ಯ' ಎಂದು ಭಾಗವತದ ಮಾತು. ಕೃಷ್ಣನ ಕೈಯಲ್ಲಿರುವ ಕೊಳಲು ಮೊದಲಾದ ವಾದ್ಯಗಳಲ್ಲಿ ರಮೆಯ ವಿಶೇಷ ಸನ್ನಿಧಾನ ಇದೆ ಎಂದು ಇದರ ಅರ್ಥ. ಕೊಳಲಿಗೆ ಕೃಷ್ಣನ ಎಂಜಲು ತಾಗಿತು ಅಂದರೆ ರುಗ್ಮಿಣಿಗೇ ಸಿಕ್ಕಿತು ಎಂದರ್ಥ. ಈ ರೀತಿ ಇವಳನ್ನು ಎಂದೂ ಬಿಡುವುದಿಲ್ಲ. ಇವಳಿಲ್ಲದ ಜಾಗವನ್ನು ಕಾಲವನ್ನು ಬಿಡುತ್ತಾನೆ. ಅಂದರೆ ಯಾವಾಗಲೂ ಇವಳ ಜೊತೆಗೇ ಇರುತ್ತಾನೆ ಎಂದರ್ಥ.

**<u>ಸಂದೇಶ</u>** : ಎಲ್ಲಾ ಸಂದರ್ಭದಲ್ಲಿಯೂ ರಮಾನಾರಾಯಣರನ್ನು ಒಟ್ಟಿಗೇ ಚಿಂತಿಸಬೇಕು.

**ಕ್ರುದ್ಧೋಽಪಿ ಸರ್ವಭುವನಾಯ ನ ಭೀಷ್ಮಪುತ್ರ್ಯಾಂ**
**ಕ್ರೋಧಂ ಕರಿಷ್ಯತಿ ಪರಂ ಪರಿರಭ್ಯ ದೋರ್ಭ್ಯಾಂ**
**ಏನಾಂ ತದಾಪಿ ರಮಯೇತ್ ಕಿಲ ಕೋಮಲಾಂಗೀಂ**
**ಕೋಪೋಽಸ್ಯ ತತ್ರ ಯ ಇಮಾಂ ಕಲಯೇದ್ವಿಯುಕ್ತಾಮ್** ॥ ೪೦ ॥

ಸರ್ವ=ಎಲ್ಲಾ; ಭುವನಾಯ=ಲೋಕಕ್ಕೋಸ್ಕರ; ಕ್ರುದ್ಧಃ ಅಪಿ=ಸಿಟ್ಟುಗೊಂಡರೂ; ಭೀಷ್ಮ=ಭೀಷ್ಮಕನ; ಪುತ್ರ್ಯಾಂ=ಮಗಳಲ್ಲಿ; ಕ್ರೋಧಂ=ಕೋಪವನ್ನು; ನ ಕರಿಷ್ಯತಿ= ಮಾಡುವುದಿಲ್ಲ; ಪರಂ=ಮತ್ತು; ದೋರ್ಭ್ಯಾಂ=ಕೈಗಳಿಂದ; ಏನಾಂ=ಇವಳನ್ನು; ಪರಿರಭ್ಯ= ಆಲಿಂಗಿಸಿ; ತದಾ ಅಪಿ=ಆಗಲೂ; ಕೋಮಲ=ಮೃದುವಾದ; ಅಂಗೀಂ=ಶರೀರವುಳ್ಳ ಇವಳನ್ನು; ರಮಯೇತ್ ಕಿಲ=ಸಂತೋಷಗೊಳಿಸುತ್ತಾನಷ್ಟೇ; ಯಃ=ಯಾರು; ಇಮಾಂ=ಇವಳನ್ನು; ವಿಯುಕ್ತಾಂ=ವಿಯುಕ್ತಳನ್ನಾಗಿ; ಕಲಯೇತ್=ಮಾಡುತ್ತಾರೋ; ತತ್ರ=ಅಲ್ಲಿ; ಅಸ್ಯ=ಇವನಿಗೆ; ಕೋಪಃ=ಕೋಪವು.

ಈಕೆಯಲ್ಲಿ ಸಿಟ್ಟಾಗಬಾರದು ಎಂಬ ಮಾತಿಗೆ ಉತ್ತರ– ಯಾವ ಸಂದರ್ಭದಲ್ಲಿಯೂ

ಈಕೆಯಲ್ಲಿ ಸಿಟ್ಟಾಗುವುದಿಲ್ಲ. ಸಾಮಾನ್ಯವಾಗಿ ಒಬ್ಬರ ಮೇಲಿನ ಸಿಟ್ಟನ್ನು ಇನ್ನೊಬ್ಬರಲ್ಲಿ ತೋರಿಸುತ್ತೇವೆ. ಉದಾ.: ಮೇಲಧಿಕಾರಿಗಳ ಮೇಲಿನ ಸಿಟ್ಟನ್ನು ಮನೆಯಲ್ಲಿ ತೋರಿಸಿದಂತೆ. ಈ ಹುಡುಗನು ಇಡೀ ಜಗತ್ತಿನ ಮೇಲೆ ಸಿಟ್ಟಾಗುತ್ತಾನೆ. ಪ್ರಳಯಕಾಲ ಬಂತೆಂದರೆ ಬ್ರಹ್ಮನಿಂದ ಕೂಡಿದ ಇಡೀ ಜಗತ್ತನ್ನು ತನ್ನ ಕೋಪದ ಜ್ವಾಲೆಯಿಂದ ಸುಡುತ್ತಾನೆ. ಆದರೆ ಈಕೆಯ ಮೇಲೆ ಸಿಟ್ಟಾಗುವುದಿಲ್ಲ. ಬ್ರಹ್ಮಾದಿ ಸಮಸ್ತ ಜೀವದೇಹವು ನಾಶವಾಗುತ್ತದೆ. ಆದ್ದರಿಂದಲೇ ಅವರಿಗೆ ಕ್ಷರರು ಎಂದು ಹೆಸರು. ಎಂತಹ ಪ್ರಳಯ ಬಂದರೂ ಈಕೆಯ ದೇಹಕ್ಕೆ ನಾಶ ಇಲ್ಲ. ಯಾಕೆಂದರೆ ಈಕೆ ಅಕ್ಷರಳು. 'ಅಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ' ಎಲ್ಲವನ್ನೂ ತನ್ನ ಹೊಟ್ಟೆಯಲ್ಲಿ ಹಾಕಿಕೊಂಡು ರಮೆಯ ತೋಳುಗಳ ಮಧ್ಯದಲ್ಲಿ ಇರುತ್ತಾನೆ ಎಂದು ಶಾಸ್ತ್ರಗಳು ಹೇಳಿದಂತೆ ಪ್ರಳಯಕಾಲದಲ್ಲಿಯೂ ಈಕೆಯನ್ನು ಸಂತೋಷಗೊಳಿಸುತ್ತಾ ಇರುತ್ತಾನೆ. ಈತನಿಗೆ ಕೋಪವೇ ಬರುವುದಿಲ್ಲ ಎಂದು ಭಾವಿಸಬಾರದು. ಈಕೆಯನ್ನು ಈ ಹುಡುಗನಿಂದ ಬೇರ್ಪಡಿಸಲು ಪ್ರಯತ್ನಿಸುವವರ ಮೇಲೆಯೇ ಈತನು ಸಿಟ್ಟಾಗುತ್ತಾನೆ. ಸುರಾಣಕಾದಿ ದೈತ್ಯರು ಬೇರ್ಪಡಿಸಿದರು. ಅವರನ್ನು ಸಿಟ್ಟಿನಿಂದ ನರಕಕ್ಕೆ ಅಟ್ಟಿದ. ರಾವಣನು ಈಕೆಯನ್ನು ಒಯ್ದ. ರಾವಣ ಸತ್ತ ರಾಮನಿಂದ. ಶಿಶುಪಾಲನು ತನಗೆ ಬೇಕೆಂದು ಆಸೆಪಟ್ಟ, ಕೃಷ್ಣನಿಂದ ಪರಾಜಿತನಾದ. ಈ ರೀತಿ ಹುಡುಗಿಯಲ್ಲಿ ಸಿಟ್ಟುಮಾಡದೆ ಹುಡುಗಿಯ ಬಗ್ಗೆ ಅಸಡ್ಡೆ ತೋರುವವರಲ್ಲಿ ಸಿಟ್ಟಾಗುತ್ತಾನೆ.

**<u>ಸಂದೇಶ</u>** : ರಮಾನಾರಾಯಣರನ್ನು ಜೊತೆಗೆ ಚಿಂತಿಸಿದರೆ ಪುಣ್ಯ ಮಾತ್ರ ಅಲ್ಲ; ಪ್ರತ್ಯೇಕವಾಗಿ ಚಿಂತಿಸಿದರೆ ಪಾಪವೂ ಇದೆ.

**ಕೇಶಂ ಪ್ರಗೃಹ್ಯ ಕರಜೈಃ ಕುಚಕುಂಭಪಾರ್ಶ್ವೇ**
**ಕುರ್ವನ್ ವ್ರಣಾನಿ ಮೃದುಲೋಷ್ಠಪುಟಂ ಸ ದಂಶನ್ ।**
**ದಂತಕ್ಷತಂ ವಿರಚಯೇದ್ದಯಿತಃ ಸ್ವಪುಂಸಾಂ**
**ಕ್ರೋಧಂ ತದಾ ನ ಕಲಯಧ್ವಮಸೌ ವಿಲಾಸಃ ॥ ೪೧ ॥**

ಸ್ವ=ತನ್ನ; ಪುಂಸಾಂ=ಭಕ್ತರಿಗೆ; ದಯಿತಃ=ಪ್ರಿಯನಾದ ಕೃಷ್ಣನು; ಕೇಶಂ=ಕೂದಲನ್ನು; ಪ್ರಗೃಹ್ಯ=ಹಿಡಿದು; ಕರ=ಕೈಗಳಲ್ಲಿ; ಜೈಃ=ಹುಟ್ಟಿದ ಉಗುರುಗಳಿಂದ; ಕುಚ=ಸ್ತನಗಳೆಂಬ; ಕುಂಭ=ಕಲಶಗಳ; ಪಾರ್ಶ್ವೇ=ಬದಿಗಳಲ್ಲಿ; ವ್ರಣಾನಿ=ಗಾಯಗಳನ್ನು; ಕುರ್ವನ್=ಮಾಡುತ್ತಾ; ಮೃದುಲ=ಮೆತ್ತಗಾದ; ಓಷ್ಠಪುಟಂ=ತುಟಿಗಳನ್ನು; ದಂಶನ್=ಕಚ್ಚುತ್ತಾ; ದಂತ=ಹಲ್ಲುಗಳ; ಕ್ಷತಂ=ಗಾಯವನ್ನು; ವಿರಚಯೇತ್=ಮಾಡಿಯಾನು; ತದಾ=ಆಗ; ಕ್ರೋಧಂ=ಕೋಪ ವನ್ನಾಗಿ; ನ ಕಲಯಧ್ವಂ=ತಿಳಿಯಬೇಡಿರಿ; ಅಸೌ=ಇದು; ವಿಲಾಸಃ=ಕ್ರೀಡೆಯು.

ಹುಡುಗನ ಸಂಬಂಧಿಗಳು ಇನ್ನೂ ಮುಂದುವರಿಸುತ್ತಾರೆ– ಕೆಲವೊಂದು

ಸಂದರ್ಭದಲ್ಲಿ ಈಕೆಯ ತಲೆಕೂದಲು ಬಿಚ್ಚಿಕೊಂಡಿರಬಹುದು. ಎದೆಯಲ್ಲಿ ಉಗುರುಗಳಿಂದ ಆದ ಗಾಯ, ತುಟಿಯಲ್ಲಿ ಹಲ್ಲಿನ ಕಡಿತದಿಂದ ಆದ ಗಾಯ ಇವೆಲ್ಲಾ ಕಾಣಿಸಬಹುದು. ತಲೆಕೂದಲನ್ನು ಹಿಡಿದು ಎಳೆದಾಡುವುದು ಪರಚುವುದು, ಕಡಿಯುವುದು ಇವೆಲ್ಲಾ ಕೋಪದ ಫಲಗಳಾಗಿ ಲೋಕದಲ್ಲಿ ಕಾಣುತ್ತವೆ. ಇಲ್ಲಿ ಮಾತ್ರ ಅದನ್ನು ಕೋಪವೆಂಬುದಾಗಿ ಭಾವಿಸಬಾರದು. ಹುಡುಗಿಯಲ್ಲಿ ಅಂದರೆ ಪತ್ನಿಯಲ್ಲಿ ಕಾಮವನ್ನು ಉತ್ತೇಜಿಸಲು ಈ ಕ್ರಮಗಳು ವಿಹಿತವಾಗಿವೆ.

<u>**ಸಂದೇಶ**</u> : ಸತಿಪತಿಗಳಲ್ಲಿ ಅನ್ಯೋನ್ಯತೆ ಇರಬೇಕು. ಎಂತಹ ಪ್ರಸಂಗದಲ್ಲಿಯೂ ವಿರಸ ಉಂಟಾಗಬಾರದು.

**ಪ್ರಾಯಃ ಸ ನಪ್ರೇಷಯತಿ ಸ್ವಭಕ್ತಗೇಹೇಷ್ವಿಮಾಂ ತೇಽಪಿ ನ ತಾಂ ಲಷಂತಿ ।**
**ಅಥ ಪ್ರದತ್ತಾಮಪಿ ತಾಮಿದಾನೀಂ ಧೀರಾಃ ಪರಾವೃತ್ಯ ನ ಕಿಂ ದಿಶಧ್ವಮ್ ॥ ೪೨ ॥**

ಸಃ=ಕೃಷ್ಣನು; ಸ್ವ=ತನ್ನ; ಭಕ್ತ=ಭಕ್ತರ; ಗೇಹೇಷು=ಮನೆಗಳಲ್ಲಿ; ಇಮಾಂ=ಇವಳನ್ನು; ಪ್ರಾಯಃ=ಹೆಚ್ಚಾಗಿ; ನ ಪ್ರೇಷಯತಿ=ಕಳಿಸುವುದಿಲ್ಲ; ತೇ ಅಪಿ=ಅವರಾದರೂ; ತಾಂ= ಅವಳನ್ನು; ನ ಲಷಂತಿ=ಅಪೇಕ್ಷಿಸುವುದಿಲ್ಲ; ಅಥ=ಅನಂತರ; ಪ್ರದತ್ತಾಂ ಅಪಿ=ಕೊಟ್ಟರೂ; ಇದಾನೀಂ=ಈಗ; ಧೀರಾಃ=ಭಕ್ತರು; ತಾಂ=ಅವಳನ್ನು; ಪರಾವೃತ್ಯ= ತಿರುಗಿ; ನ ದಿಶಧ್ವಂ ಕಿಂ=ಕೊಡುವುದಿಲ್ಲವೇನು?

ಹುಡುಗಿಯನ್ನು ಆಗಾಗ ನಮ್ಮಲ್ಲಿಗೆ ಕಳಿಸಿಕೊಡಬೇಕು ಎಂಬ ಮಾತಿಗೆ ಹುಡುಗನ ಕಡೆಯವರ ಉತ್ತರ– ಈ ಮಾತು ಸ್ವಲ್ಪ ಕಷ್ಟಸಾಧ್ಯ. ನಮ್ಮ ಹುಡುಗ ಕೃಷ್ಣನು ರುಗ್ಮಿಣಿಯನ್ನು ಕಳಿಸಿಕೊಡಲಿಕ್ಕಿಲ್ಲ. ನೀವೆಲ್ಲರೂ ಕೃಷ್ಣನ ಭಕ್ತರಿದ್ದೀರಿ. ಈಕೆ ಸಂಪತ್ತಿನ ಅಭಿಮಾನಿನಿ ರಮೆ. ದೇವರು ಭಕ್ತರ ಮನೆಗೆ ಸಂಪದ್ರೂಪಳಾದ ಲಕ್ಷ್ಮಿಯನ್ನು ಕಳಿಸಿಕೊಡುವುದಿಲ್ಲ. ಯಾಕೆಂದರೆ ಶಾಸ್ತ್ರದಲ್ಲಿ ಒಂದು ಮಾತಿದೆ– ಯಸ್ಯ ಅನುಗ್ರಹಂ ಇಚ್ಛಾಮಿ ತಸ್ಯ ವಿತ್ತಂ ಹರಾಮಿ ಅಹಮ್' ಯಾವ ಭಕ್ತರನ್ನು ಉದ್ಧರಿಸಲು ಆಶಿಸುತ್ತೇನೋ ಆತನನ್ನು ಮೊದಲು ದರಿದ್ರನನ್ನಾಗಿ ಮಾಡುತ್ತೇನೆ ಎಂದು. ಇದು ಕೃಷ್ಣನ ಮಾತು. ನೀವೆಲ್ಲಾ ಈತನ ಭಕ್ತರಿದ್ದೀರಿ. ಆದ್ದರಿಂದ ನಿಮ್ಮಲ್ಲಿಗೆ ಈಕೆಯನ್ನು ಕಳಿಸಿ ನಿಮ್ಮನ್ನು ಶ್ರೀಮಂತರನ್ನಾಗಿ ಮಾಡೊಲ್ಲ. ನಿಮಗೂ ಆಕೆಯ ಅಪೇಕ್ಷೆ ಇಲ್ಲ. ನಿಮಗೆ ಕೃಷ್ಣನೇ ಬೇಕಾಗಿರುವವ.

ಲಗ್ನದನಂತರ ನೀವೂ ದ್ವಾರಕೆಯಲ್ಲೇ ಇರುತ್ತೀರಿ. ದ್ವಾರಕೆಯ ವೈಭವದ ದೃಷ್ಟಿಯಿಂದ ನಿಮ್ಮ ಮನೆಯಲ್ಲಿ ಹೊಲದಲ್ಲಿ ಹಟ್ಟಿಯಲ್ಲಿ ನಾನಾರೀತಿಯಲ್ಲಿ ಈ ಹುಡುಗಿಯು ಇರುತ್ತಾಳೆ. ಅಂದರೆ ಕೃಷ್ಣನು ಹುಡುಗಿಯನ್ನು ನಿಮ್ಮಲ್ಲಿಗೆ ಕಳಿಸಿಕೊಡುತ್ತಾನೆ. ಹೀಗೆ ಕಳಿಸಿಕೊಟ್ಟ ಹುಡುಗಿಯನ್ನು ನೀವು ತಿರುಗಿ ಹುಡುಗನಿಗೇನೇ ಅರ್ಪಿಸುತ್ತೀರಿ ತಾನೆ? ಜನ್ಮಾಂತರದ ಕರ್ಮದಿಂದ ಕೆಲವು ಭಗವದ್ಭಕ್ತರೂ ಶ್ರೀಮಂತರಿರುತ್ತಾರೆ. ಅವರು ಈ

ಸಂಪತ್ತನ್ನು ಭಗವದರ್ಪಣ ಬುದ್ಧಿಯಿಂದಲೇ ಉಪಯೋಗಿಸುತ್ತಾರೆ. ಈ ವಿಷಯದಲ್ಲಿ ಒಂದು ಪ್ರಮಾಣ ಇದೆ– 'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್' ಪತ್ನಿಯನ್ನು, ಸುತರನ್ನು, ಇಷ್ಟರನ್ನು, ಹೆಚ್ಚೇನು ಪ್ರಾಣಗಳನ್ನೂ ಕೂಡಾ ದೇವರಿಗಾಗಿ ಮೀಸಲಿಡುವ ಭಕ್ತರಿದ್ದಾರೆ.

<u>ಸಂದೇಶ</u> : ಸತಿಪತಿಗಳ ಅನ್ಯೋನ್ಯತೆಯಂತೆ ಜೀಗರಲ್ಲಿಯೂ ಪರಸ್ಪರ ಅನ್ಯೋನ್ಯತೆ ಬೇಕು.

**ನೈವಾನ್ಯಾಂ ವರಯೇತ್ಕನ್ಯಾಂ ಪೂರ್ಣೋಽಯಂ ಪುರುಷಾಗ್ರಣೀಃ ।**
**ವೃತೋಽಪ್ಯನ್ಯಾಂಗನಾದೇಹೇ ರಮಯೇತ್ ಪ್ರೇಯಸೀಮಿಮಾಮ್ ॥ ೪೩ ॥**

ಪೂರ್ಣಃ=ಪೂರ್ಣನಾದ; ಅಯಂ=ಈ; ಪುರುಷ=ಪುರುಷರಲ್ಲಿ; ಅಗ್ರಣೀಃ=ಶ್ರೇಷ್ಠನು; ಅನ್ಯಾಂ=ಬೇರೆ; ಕನ್ಯಾಂ=ಹುಡುಗಿಯನ್ನು; ನ ಏವ ವರಯೇತ್=ವರಿಸುವುದೇ ಇಲ್ಲ; ವೃತಃ ಅಪಿ=ವರಿಸಿದರೂ; ಅನ್ಯ=ಇನ್ನೊಂದು; ಅಂಗನಾ=ನಾರಿಯ; ದೇಹೇ=ದೇಹದಲ್ಲಿ; ಇಮಾಂ=ಈ; ಪ್ರೇಯಸೀಂ=ಪತ್ನಿಯನ್ನು; ರಮಯೇತ್=ಆನಂದಗೊಳಿಸುತ್ತಾನೆ.

ಬೇರೊಬ್ಬಳ ಜೊತೆ ಸೇರಬಾರದು ಎಂಬ ಮಾತಿಗೆ ಇವರ ಉತ್ತರ– ನಮ್ಮ ಹುಡುಗನು ಪರಿಪೂರ್ಣನು. ಯಾವ ನ್ಯೂನತೆಯೂ ಇವನಲ್ಲಿ ಇಲ್ಲ. ಸ್ತ್ರೀಲಂಪಟತನ ಈತನಲ್ಲಿ ಇಲ್ಲ. ಹುಡುಗಿಯಿಂದ ತುಂಬಿಸಿಕೊಳ್ಳುವ ಅಂಶ ಈತನಲ್ಲಿ ಯಾವುದೂ ಇಲ್ಲ. ಈತನಿಗೆ ಈ ಹುಡುಗಿಯೇ ಬೇಕಿಲ್ಲ. ಹೀಗಿರುವಾಗ ಇನ್ನೊಬ್ಬಳನ್ನು ವರಿಸುವ ಪ್ರಸಂಗವೇ ಇಲ್ಲ. ಅನ್ಯ ಹುಡುಗಿಯ ಒತ್ತಾಯಕ್ಕೆ ಮಣಿದು ಆಕೆಯನ್ನು ವರಿಸಿದರೂ ಅಲ್ಲಿಯೂ ರುಗ್ಮಿಣಿಯ ಜೊತೆಗೇ ರಮಿಸುತ್ತಾನೆ. ಅಭಿಪ್ರಾಯ ಈ ರೀತಿ ಇದೆ– ಕೃಷ್ಣಾವತಾರದಲ್ಲಿ ಲಕ್ಷ್ಮಿಯ ಅವತಾರಗಳಾದ ರುಗ್ಮಿಣಿಸತ್ಯಭಾಮೆಯರಲ್ಲದೆ ಬೇರೆ ಆರು ಜನ ಮಡದಿಯರಿದ್ದರು. ಅಲ್ಲದೆ ಹದಿನಾರುಸಾವಿರದ ನೂರು ಜನ ಬೇರೆ ಪತ್ನಿಯರಿದ್ದರು. ಸಾಲದ್ದಕ್ಕೆ ಗೋಕುಲದಲ್ಲಿ ಹತ್ತುವರ್ಷದ ಕೆಳಗಿನ ವಯಸ್ಸಿನಲ್ಲಿ ಬಹಳ ಗೋಪಿಯರನ್ನು ರಮಿಸಿದ್ದನು. ಇದೆಲ್ಲಾ ಹೇಗೆ ಎಂಬ ಪ್ರಶ್ನೆ ಬರಬಹುದು. ಇದಕ್ಕೆ ಉತ್ತರ– ಅಷ್ಟೂ ನಾರಿಯರಲ್ಲಿ ರಮೆಯ ಸನ್ನಿಧಾನ ಇರುವಾಗ ಮಾತ್ರ ಕೃಷ್ಣನು ಅವರ ಜೊತೆ ರಮಿಸಿದ್ದನು. ಬೇರೆ ಸಂದರ್ಭದಲ್ಲಿ ಅಲ್ಲ. ದೇವರ ಅಂಗಸಂಗವನ್ನು ಪಡೆಯುವ ಭಾಗ್ಯ ರಮೆಗಲ್ಲದೆ ಬೇರೆ ಯಾರಿಗೂ ಇಲ್ಲ. ಈ ಮಾತನ್ನು ವೇದವ್ಯಾಸರು ಸತ್ಯವತಿಯಲ್ಲಿ ಹೇಳಿದ್ದುಂಟು.

<u>ಸಂದೇಶ</u> : ನಾರಿಯರಿಗೆ ಪಾತಿವ್ರತ್ಯದಂತೆ ನರರಿಗೆ ಏಕಪತ್ನೀವ್ರತವೂ ಅಷ್ಟೇ ಮುಖ್ಯ.

**ಸದಾಪರೋಕ್ಷೀಕೃತಸರ್ವವಿಶ್ವಃ**
**ಕಥಂ ಸ್ಮರೇದ್ವಃ ಸ್ಮರಣೀಯಶೀಲಃ ।**

**ತಥಾಪಿ ಯುಷ್ಮಾಸು ಕೃಪಾಂ ಸ ಕುರ್ಯಾತ್**
**ಸ್ಮೃತೇಃ ಫಲಂ ಸ್ವಾಂಘ್ರಿಯುಗಾಶ್ರಯೇಷು** ॥ ೪೪ ॥

ಸದಾ=ಯಾವಾಗಲೂ; ಅಪರೋಕ್ಷೀಕೃತ=ಕಾಣುವ; ವಿಶ್ವಃ=ಜಗತ್ತುಳ್ಳ; ಸ್ಮರಣೀಯ=ಸ್ಮರಣೆಗೆ ಯೋಗ್ಯವಾದ; ಶೀಲಃ=ಸ್ವಭಾವವುಳ್ಳ; ಸಃ=ಕೃಷ್ಣನು; ವಃ=ನಿಮ್ಮನ್ನು; ಕಥಂ=ಹೇಗೆ?; ಸ್ಮರೇತ್=ಸ್ಮರಿಸುತ್ತಾನೆ?; ತಥಾ ಅಪಿ=ಹಾಗಿದ್ದರೂ; ಸ್ವ=ತನ್ನ; ಅಂಘ್ರಿ= ಚರಣಗಳ; ಯುಗ=ಎರಡನ್ನು; ಆಶ್ರಯೇಷು=ಆಶ್ರಯಿಸಿರುವ; ಯುಷ್ಮಾಸು=ನಿಮ್ಮಲ್ಲಿ; ಸ್ಮೃತೇಃ=ಸ್ಮರಣೆಯ; ಫಲಂ=ಫಲವಾದ; ಕೃಪಾಂ=ದಯೆಯನ್ನು; ಕುರ್ಯಾತ್= ಮಾಡುತ್ತಾನೆ.

ಹುಡುಗಿಯ ಬಂಧುಗಳನ್ನು ಸ್ಮರಿಸುತ್ತಿರಬೇಕು ಎಂಬ ಮಾತಿಗೆ ಪ್ರತಿಕ್ರಿಯೆ– ಈ ಒಂದು ಮಾತು ಸಾಧ್ಯವೇ ಇಲ್ಲ. ಸಾಕ್ಷಾತ್ ಅಪರೋಕ್ಷಾತ್ ಎಂಬ ಶಾಸ್ತ್ರದ ಮಾತಿನಂತೆ ನಮ್ಮ ಹುಡುಗನು ಎಲ್ಲವನ್ನೂ ಕಣ್ಣಾರೆ ನೋಡುವವನು. ಇವನಿಗೆ ಎಲ್ಲವೂ ವರ್ತಮಾನವೇ. ಸ್ಮರಣೆ ಬರಬೇಕಾದರೆ ಕಾರಣವಾದ ಸಂಸ್ಕಾರ ಬೇಕು. ಸಂಸ್ಕಾರ ಹುಟ್ಟುವುದು ವಸ್ತುವಿನ ದರ್ಶನದನಂತರ. ವಸ್ತುವು ಈತನಿಗೆ ಸದಾ ಕಾಣಿಸುತ್ತಲೇ ಇರುವಾಗ ಸಂಸ್ಕಾರ ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದಲೇ ಸ್ಮರಣೆಯು ಬರಲೂ ಅಸಾಧ್ಯ. ಇವನು ನಿಮ್ಮನ್ನು ಸ್ಮರಿಸುವುದಿಲ್ಲ. ಸದಾ ನೋಡುತ್ತಲೇ ಇರುತ್ತಾನೆ. ಸ್ಮರಿಸಬೇಕೆಂದು ಹೇಳುವ ನಿಮ್ಮ ಉದ್ದೇಶ ಏನು? ಹೆಂಡತಿಯ ಬಂಧುಗಳು ಎಂದು ನಮ್ಮ ಹುಡುಗನು ನಿಮಗೆ ಏನಾದರೂ ಕೊಡುತ್ತಾ ಇರಬೇಕೆಂದು ತಾನೆ? ನಮ್ಮ ಹುಡುಗನು ನಿಮ್ಮನ್ನು ಸ್ಮರಿಸದಿದ್ದರೂ ನಿಮ್ಮ ಅಭೀಷ್ಟವನ್ನು ಪೂರೈಸುತ್ತಾನೆ. ಹೇಗೆಂದರೆ ನಿಮಗೆ ಎಲ್ಲಾ ವಸ್ತುಗಳೂ ಯಾವಾಗಲೂ ಪ್ರತ್ಯಕ್ಷ ಅಲ್ಲ ತಾನೆ? ದೇವರಾದ ನಮ್ಮ ಹುಡುಗ ಈಗ ನಿಮಗೆ ಪ್ರತ್ಯಕ್ಷನಾಗಿದ್ದಾನೆ. ಹುಡುಗನು ಅನಂತರ ನಿಮಗೆ ಕಾಣಿಸದೆ ಹೋಗುತ್ತಾನೆ. ಆಗ ನೀವು ಇವನನ್ನು ಕಾಣಬೇಕೆಂದು ಹಂಬಲಿಸುವಾಗ ಎಣಿಸದೆ ಬೇರೆ ಗತಿ ಇಲ್ಲ. ಆರಂಭದಲ್ಲಿ ದೇವರದ್ದು ಸ್ಮರಣಾತ್ಮಕ ಜ್ಞಾನವೇ ಹೊರತು ಪ್ರತ್ಯಕ್ಷಾತ್ಮಕ ಅಲ್ಲ. ಆದ್ದರಿಂದಲೇ ಈತನು ಸ್ಮರಣೀಯ ಶೀಲನು ಅಂದರೆ ಸ್ಮರಣೆಗೆ ವಿಷಯನಾಗಲು ಯೋಗ್ಯವಾದ ಸ್ವಭಾವವುಳ್ಳವನು. ಈ ರೀತಿಯಾಗಿ ನಮ್ಮ ಹುಡುಗನ ಬದಲಾಗಿ ನೀವು ಸ್ಮರಿಸಿದರೂ ತಾನು ಸ್ಮರಿಸಿದರೆ ಏನು ಫಲವನ್ನು ನಿಮಗೆ ಕೊಡಬೇಕೋ ಅದನ್ನು ಕೊಟ್ಟೇ ಕೊಡುತ್ತಾನೆ.

<u>**ಸಂದೇಶ**</u> : ಹರಿನಾಮಸ್ಮರಣೆಗೂ ಬಹಳ ಫಲವಿದೆ.

**ನ ಪಾರಿಬರ್ಹಂ ಬಹುದಾತುಮೀಶಾಃ**
**ರಥಾಶ್ವಹಸ್ತ್ಯಾದಿ ಬಲಾನಿ ಚಾಸ್ಮೈ ।**
**ಇಮಾಂ ಪರಂ ಪದ್ಮಮುಖೀಂ ದಿಶಾಮ–**
**ಸ್ತಿಥಿಜ್ಞಮಾಹೂಯ ತಿಥಿರ್ವಿಚಾರ್ಯತಾಮ್** ॥ ೪೫ ॥

ರಥ=ರಥವು; ಅಶ್ವ=ಕುದುರೆಗಳು; ಹಸ್ತಿ=ಆನೆಗಳು; ಆದಿ=ಮೊದಲಾದ; ಬಲಾನಿ= ಸೈನ್ಯಗಳನ್ನು; ಪಾರಿಬರ್ಹಂ=ಉಡುಗೊರೆಯನ್ನಾಗಿ; ಬಹು=ಬಹಳ; ದಾತುಂ=ಕೊಡಲು; ನ ಈಶಾಃ=ಸಮರ್ಥರಲ್ಲ; ಪರಂ=ಮತ್ತು; ಇಮಾಂ=ಈ; ಪದ್ಮ=ಕಮಲದಂತೆ; ಮುಖೀಂ= ಮುಖವುಳ್ಳವಳನ್ನು; ದಿಶಾಮಃ=ಕೊಡುತ್ತೇವೆ; ತಿಥಿ=ಮುಹೂರ್ತವನ್ನು; ಜ್ಞಂ=ತಿಳಿದವನನ್ನು; ಆಹೂಯ=ಕರೆದು; ತಿಥಿ=ಮುಹೂರ್ತವು; ವಿಚಾರ್ಯತಾಂ= ವಿಚಾರಿಸಲ್ಪಡಲಿ.

ನಿಮ್ಮ ವರನು ಬಹಳ ಶ್ರೀಮಂತನು. ವರನ ಹಂತಕ್ಕೆ ತಲುಪಲು ನಾವು ಸಮರ್ಥರಲ್ಲ. ವರನ ಯೋಗ್ಯತೆಯು ಅನಂತ. ಆ ಯೋಗ್ಯತೆಗೆ ಸರಿಯಾಗಿ ಕೊಡಲು ನಮ್ಮಲ್ಲಿ ಯಾವ ವಸ್ತುಗಳೂ ಇಲ್ಲ. ಇರುವುದು ಒಂದೇ ವಸ್ತು. ಅದೇ ನಮ್ಮ ಹುಡುಗಿ. 'ಶುಭಸ್ಯ ಶೀಘ್ರಂ' ಒಳ್ಳೆಯ ಕೆಲಸವನ್ನು ಬೇಗನೆ ಮಾಡಬೇಕು –ಎಂದು ಶಾಸ್ತ್ರವು ಹೇಳುತ್ತದೆ. ವಿವಾಹವು ಒಳ್ಳೆಯ ಕೆಲಸ. ಕೂಡಲೇ ಜ್ಯೋತಿಷ್ಕರನ್ನು ಕರೆಸಿರಿ. ವಿವಾಹೋಪಯುಕ್ತ ಒಳ್ಳೆಯ ಮುಹೂರ್ತವನ್ನು ಅವರು ಈಗಲೇ ನಿಗದಿಪಡಿಸಲಿ ಎಂದು ವಧುವಿನ ಪಕ್ಷದವರು ಹೇಳಿದರು.

<u>ಸಂದೇಶ</u> : ದೇವರಿಗೆ ಸಾಟಿಯಾಗುವ ವಸ್ತುವು ಮೂರು ಲೋಕದಲ್ಲಿಯೂ ಇಲ್ಲ. ಆದರೂ ನಾವು ದೇವರಿಗೆ ಕೊಡುವುದನ್ನು ತಪ್ಪಿಸಬಾರದು. ಆದ್ದರಿಂದಲೇ ನಾವು ಸಂಕಲ್ಪದಲ್ಲಿ 'ಯಥಾಶಕ್ತಿ ಕರಿಷ್ಯೇ' ಶಕ್ತಿಗನುಸಾರವಾಗಿ ಮಾಡುತ್ತೇನೆ –ಎಂದು ಹೇಳುವುದು. ದಾನ ತೆಗೆದುಕೊಳ್ಳುವವರ ಯೋಗ್ಯತೆಗೆ ಸರಿಯಾಗಿ ಕೊಡಲು ನಮಗೆ ಸಾಧ್ಯವಿಲ್ಲದಿದ್ದರೂ ಕೊಡುವವರ ಯೋಗ್ಯತೆಗೆ ಸರಿಯಾಗಿ ಕೊಡುವುದಕ್ಕೆ ಅಡ್ಡಿಯಿಲ್ಲ..

**ನ ಪಾರಿಬರ್ಹಂ ಸ ವೃಣೋತಿ ಪೂರ್ಣಸುಖಃ ಪರಂ ಕಾಂಕ್ಷತಿ ತತ್ಕಟಾಕ್ಷಮ್ ।**
**ವಿರಿಂಚವೈರಿಂಚಮುಖಾಮರಾಣಾಮಗಣ್ಯಭಾಗ್ಯಂ ಹಿ ಯತೋ ಬಭೂವ ॥ ೪೬ ॥**

ಪೂರ್ಣ=ತುಂಬಿದ; ಸುಖಃ=ಸುಖವುಳ್ಳ; ಸಃ=ಕೃಷ್ಣನು; ಪಾರಿಬರ್ಹಂ=ಉಡುಗೊರೆ ಯನ್ನು; ನ ವೃಣೋತಿ=ಸ್ವೀಕರಿಸುವುದಿಲ್ಲ; ಪರಂ=ಆದರೆ; ವಿರಿಂಚ=ಬ್ರಹ್ಮನು; ವೈರಿಂಚ= ರುದ್ರನು; ಮುಖ=ಮೊದಲಾದ; ಅಮರಾಣಾಂ=ದೇವತೆಗಳಿಗೆ; ಅಗಣ್ಯ=ಲೆಕ್ಕ ಇಲ್ಲದ; ಭಾಗ್ಯಂ=ಸಂಪತ್ತು; ಯತಃ=ಯಾವುದರಿಂದ; ಬಭೂವ=ಆಯಿತೋ; ತತ್=ಅಂತಹ; ಕಟಾಕ್ಷಂ=ಕಡೆಗಣ್ಣನ್ನು; ಕಾಂಕ್ಷತಿ=ಆಶಿಸುತ್ತಾನೆ.

ನವದಂಪತಿಗಳು ಹೊಸ ಜೀವನವನ್ನು ಆರಂಭಿಸುತ್ತಾರೆ. ಆಗ ಅನೇಕ ವಸ್ತುಗಳ ಆವಶ್ಯಕತೆ ಇರುತ್ತದೆ. ಇದನ್ನು ಪೂರೈಸಲು ಉಡುಗೊರೆಯ ಕ್ರಮವು ಅಭಿಮಾನಿಗಳಿಂದ ಆರಂಭವಾಯಿತು. ಸದ್ಯ ನಮ್ಮ ಹುಡುಗನು ಎಲ್ಲಾ ವಿಷಯದಲ್ಲಿಯೂ ಪರಿಪೂರ್ಣನು. ಬಂದ ಉಡುಗೊರೆಗಳಿಂದಲೇ ತನ್ನ ಜೀವನ ನಿರ್ವಹಣೆ ಎಂದೇನಿಲ್ಲ. ಆದ್ದರಿಂದ ನಿಮ್ಮ ಉಡುಗೊರೆಯ ಆವಶ್ಯಕತೆ ಇಲ್ಲ. ಆತನು ನಿರೀಕ್ಷಿಸುವುದೂ ಇಲ್ಲ. ಈತ

ನಿರೀಕ್ಷಿಸುವುದು ಒಂದನ್ನೇ- ಅದೇ ನಿಮ್ಮ ಹುಡುಗಿಯ ಕಡೆಗಣ್ಣಿನ ನೋಟ. ಆಕೆ ಪ್ರೀತಿಪೂರ್ವಕವಾಗಿ ಈತನನ್ನು ನೋಡುತ್ತಿದ್ದರೆ ಸಾಕು; ಅವಳ ನೋಟಕ್ಕೆ ಬಹಳ ಶಕ್ತಿ ಇದೆ. ಆಕೆ ಬ್ರಹ್ಮಾದಿ ಸಮಸ್ತದೇವತೆಗಳನ್ನು ಸದಾ ವಾತ್ಸಲ್ಯದಿಂದ ನೋಡುತ್ತಿರುತ್ತಾಳೆ. ಅದರ ಫಲವೇ ಅವರಿಗೆ ಇಷ್ಟೆಲ್ಲಾ ಸಂಪತ್ತು ಬಂದದ್ದು. ಅದೇ ರೀತಿ ಆಕೆ ನಮ್ಮ ಹುಡುಗನನ್ನು ನೋಡುತ್ತಿದ್ದರೆ ನಮ್ಮ ಹುಡುಗನಿಗೆ ಸಂಪತ್ತು ಬರುತ್ತದೆ ಎಂದಲ್ಲ; ತದ್ವಿರುದ್ಧವಾಗಿ ಆಕೆಗೆ ಕ್ಷೇಮವಾಗುತ್ತದೆ. 'ಶ್ರೀಃ ಯತ್ಕಟಾಕ್ಷ – ಬಲವತೀ ಅಜಿತಂ ನಮಾಮಿ' । ರಮೆಯು ಯಾರ ಅನುಗ್ರಹದಿಂದ ಬಲಿಷ್ಠಳೋ ಅಂತಹ ದೇವರನ್ನು ನಮಿಸುವೆನು ಎಂದು ಹಿರಿಯರ ಮಾತು. ಇಂತಹ ಆಕೆಯ ಕಟಾಕ್ಷವನ್ನು ನಮ್ಮ ಹುಡುಗನು ನಿರೀಕ್ಷಿಸುತ್ತಾನೆ.

**ಸಂದೇಶ** : ನವದಂಪತಿಗಳು ವಿವಾಹಕಾಲದಲ್ಲಿ ಉಡುಗೊರೆಯನ್ನು ನಿರೀಕ್ಷಿಸಬಾರದು. ಬದಲಾಗಿ ರಮಾ–ನಾರಾಯಣರ ಅನುಗ್ರಹವನ್ನು ಅಭಿಮಾನಿಗಳ ಮೂಲಕ ಆಶಿಸಬೇಕು.

**ಯದ್ವಕ್ತ್ರೇ ವಿಧುಮಾಮನಂತಿ ಸುಬುಧಂ ಮುದ್ಧಸ್ಮಿತೇ ಹಸ್ತಯೋಃ**
**ಉದ್ಯದ್ವ್ಯೋಮಮಣಿಂ ಗುರುಂ ಕಟಿತಟೇ ಮಧ್ಯಂ ಚ ಕಾವ್ಯಾಸ್ಪದಮ್ ।**
**ಯತ್ಪಾದಸ್ಪೃಶಿ ಮಂಗಲಂ ಪದತಲೇ ಕೇತುಂ ಗತೌ ಮಂದಗಂ**
**ಯದ್ರೋಚಿಶ್ಚಕಿತಂ ತಮಸ್ತದನಯೋರ್ನಿತ್ಯಂ ಮುಹೂರ್ತೋದಯಃ॥ ೪೭ ॥**

ಯತ್=ಯಾರ; ವಕ್ತ್ರೇ=ಮುಖದಲ್ಲಿ; ವಿಧುಂ=ಚಂದ್ರನನ್ನು; ಮಂದಸ್ಮಿತೇ=ನಗುವಿನಲ್ಲಿ; ಸುಬುಧಂ=ಒಳ್ಳೆಯ ಬುಧನನ್ನು; ಹಸ್ತಯೋಃ=ಕೈಗಳಲ್ಲಿ; ಉದ್ಯತ್=ಉದಿಸುವ; ವ್ಯೋಮ=ಆಕಾಶದ; ಮಣಿಂ=ಮಣಿಯನ್ನು; ಕಟಿತಟೇ=ಪೃಷ್ಠದಲ್ಲಿ; ಗುರುಂ=ಗುರುವನ್ನು; ಮಧ್ಯಂ=ಸೊಂಟವನ್ನು; ಕಾವ್ಯ=ಕವಿಗಳಿಗೆ; ಆಸ್ಪದಂ=ವಿಷಯವನ್ನಾಗಿ; ಯತ್=ಯಾರ; ಪಾದ=ಪಾದಗಳ; ಸ್ಪೃಶಿ=ಸ್ಪರ್ಶದ ವಿಷಯದಲ್ಲಿ; ಮಂಗಲಂ=ಮಂಗಲವನ್ನು; ಪದ=ಕಾಲಿನ; ತಲೇ=ಅಡಿಭಾಗದಲ್ಲಿ; ಕೇತುಂ=ಕೇತುವನ್ನು; ಗತೌ=ಗಮನದಲ್ಲಿ; ಮಂದ=ಮೆಲ್ಲನೆ; ಗಂ=ಹೋಗುವ ಶನಿಯನ್ನು; ಯತ್=ಯಾರ; ರೋಚಿಃ=ಕಾಂತಿಯಿಂದ; ಚಕಿತಂ=ಭೀತನಾದ; ತಮಃ=ರಾಹುವನ್ನು; ಆಮನಂತಿ=ತಿಳಿಯುತ್ತಾರೋ; ತತ್=ಆದ್ದರಿಂದ; ಅನಯೋಃ=ಇವರಿಗೆ; ನಿತ್ಯಂ=ಯಾವಾಗಲೂ; ಮುಹೂರ್ತ=ಮುಹೂ ರ್ತದ; ಉದಯವು=ಉದಯವು.

ಈ ಹೊತ್ತಿಗೆ ಜ್ಯೋತಿಷ್ಕರು ಮುಹೂರ್ತವನ್ನು ಸಿದ್ಧಮಾಡಿದರು. ಅವರು ತಮ್ಮ ವಿಚಾರವನ್ನು ಮಂಡಿಸುತ್ತಾರೆ. ನವಗ್ರಹರಲ್ಲಿ ಶುಭಗ್ರಹರಾದ ರವಿ, ಚಂದ್ರ, ಬುಧ, ಗುರು, ಶುಕ್ರ ಇವರು ಉಚ್ಚದಲ್ಲಿ (ಎತ್ತರದಲ್ಲಿ) ಇರಬೇಕು. ಅಶುಭಗ್ರಹರಾದ ಮಂಗಳ,

ಶನಿ, ರಾಹು, ಕೇತು ಇವರು ನೀಚದಲ್ಲಿ (ಕೆಳಗೆ) ಇರಬೇಕು. ಹೀಗಿದ್ದರೆ ಒಳ್ಳೆಯ ಮುಹೂರ್ತ ಎಂದರ್ಥ. ಸದ್ಯ ಈಗ ಹಾಗೆಯೇ ಇದೆ.

ಈ ವಿಷಯದಲ್ಲಿ ಶ್ರೀ ವಾದಿರಾಜರು ತಮ್ಮ ಚಮತ್ಕಾರವನ್ನು ತೋರಿಸುತ್ತಾರೆ. ರುಗ್ಮಿಣೀಕೃಷ್ಣರ ದೇಹದಲ್ಲಿ ನಿತಂಬಪ್ರದೇಶವನ್ನು ಸೇರಿಸಿ ಮೇಲಿನ ಭಾಗವನ್ನು ಉಚ್ಚಗಳೆಂದೂ ನಿತಂಬಕ್ಕಿಂತ ಕೆಳಗಿನ ಭಾಗಗಳನ್ನು ನೀಚಗಳೆಂದೂ ಕಲ್ಪಿಸಿದರು. ಉಚ್ಚ ನೀಚ ಶಬ್ದಗಳಿಗೆ ಮೇಲೆ ಕೆಳಗೆ ಎಂಬ ಅರ್ಥವೂ ಇದೆ. ಇವರಿಬ್ಬರ ಮುಖವು ಚಂದ್ರನಂತಿದೆ. ಇವರ ವದನದಲ್ಲಿ ಸದಾ ಮಂದಹಾಸವು ಇರುತ್ತದೆ. ಅಟ್ಟಹಾಸವಲ್ಲ. ಮಂದಹಾಸ. ಬುಧನಲ್ಲಿ ಪ್ರಕಾಶವು ಮಂದವಾಗಿ ಸ್ವಲ್ಪವಾಗಿ ಇರುವುದು. ಜ್ಞಾನಿಗಳು ಸದಾ ಮಂದಸ್ಮಿತರಾಗಿರುತ್ತಾರೆ. ಇವರು ಯಾರನ್ನು ನೋಡಿ ಮಂದಹಾಸ ಬೀರುತ್ತಾರೋ ಅವರು ಬುಧರಾಗುತ್ತಾರೆ. ಅಂದರೆ ಜ್ಞಾನಿಗಳಾಗುತ್ತಾರೆ. ಆದ್ದರಿಂದ ಇವರ ಮಂದಹಾಸಕ್ಕೆ ಬುಧನ ಸಾಮ್ಯ ಇದೆ. ಹಸ್ತತಲವು ಉದಿಸುವ ಸೂರ್ಯನಂತೆ ಕೆಂಪಾಗಿರಬೇಕು. ಇವರ ಕೈಗಳು ಆ ರೀತಿ ಇವೆ. ಆದ್ದರಿಂದ ಸೂರ್ಯನು ಹಸ್ತತಲದಲ್ಲಿ ಇದ್ದಾನೆ. ನಿತಂಬಪ್ರದೇಶವು ದಪ್ಪವಾಗಿರಬೇಕು. ಇದು ಶಾರೀರಿಕ ಲಕ್ಷಣಗಳಲ್ಲಿ ಸೇರಿದೆ. ದಪ್ಪ ಅಂದರೂ ಗುರು ಅಂದರೂ ಒಂದೇ. ತಥಾ ಚ ಗುರುವು ಎಂಬ ಶುಭಗ್ರಹನು ಉಚ್ಚನಾಗಿದ್ದಾನೆ. ಇನ್ನು ಉಳಿದವ ಶುಭಗ್ರಹನು ಶುಕ್ರನು. ದೇಹದಲ್ಲಿ ಎತ್ತರದ ಭಾಗ ಸೊಂಟ. ಇವರಿಬ್ಬರ ಸೊಂಟವನ್ನು ಎಲ್ಲಾ ಕವಿಗಳೂ ನಾನಾ ರೀತಿಯಲ್ಲಿ ಕೊಂಡಾಡುತ್ತಾರೆ. ಇಲ್ಲಿ ಶ್ರೀರಾಜರು ಕಾವ್ಯ ಎಂಬ ಶಬ್ದವನ್ನು ಬಳಸಿದ್ದಾರೆ. ಶುಕ್ರನಿಗೂ ಕಾವ್ಯ ಎಂದು ಹೆಸರಿದೆ. ಕವಿಗಳಿಗೆ ಸಂಬಂಧಿಸಿದ್ದು ಎಂಬರ್ಥದಲ್ಲಿಯೂ ಕಾವ್ಯ ಎಂಬ ಶಬ್ದದ ಬಳಕೆ ಇದೆ. ಈ ರೀತಿ ಸೊಂಟಕ್ಕೂ ಕಾವ್ಯಕ್ಕೂ ಸಂಬಂಧ ಇರುವುದರಿಂದ ಶುಕ್ರನೂ ಉಚ್ಚದಲ್ಲಿ ಬಂದಂತಾಯಿತು.

ಇವರಿಬ್ಬರ ಪಾದಸ್ಪರ್ಶವನ್ನು ಯಾರು ಮಾಡುತ್ತಾರೋ ಅವರಿಗೆ ಜೀವನದಲ್ಲಿ ಮಂಗಳವಾಗುತ್ತದೆ. ಇವರ ಪಾದವೇ ಮಂಗಳ. ಮಂಗಳನು ಅಶುಭಗ್ರಹನು. ಅವನು ನೀಚದಲ್ಲಿ ಅಂದರೆ ಕೆಳಗೆ ಇದ್ದಾನೆ. ಪಾದದ ಅಡಿಭಾಗದಲ್ಲಿ ಧ್ವಜ ವಜ್ರ, ಕಮಲದ ರೇಖೆಗಳು ಇರುವುದು ಲಕ್ಷಣ. ಇವರ ಪಾದದ ಅಡಿಯಲ್ಲಿ ಅವೆಲ್ಲಾ ಇವೆ. ಧ್ವಜಕ್ಕೆ ಇನ್ನೊಂದು ಹೆಸರು ಕೇತು. ಕೇತು ಅಂದರೆ ಗ್ರಹನೂ ಹೌದು. ಪಾದದ ಅಡಿಯಲ್ಲಿ ಇರುವುದರಿಂದ ಈತನೂ ನೀಚಸ್ಥಾನದಲ್ಲಿ ಬಂದನು. ರಾಹುವು ತಮೋಗ್ರಹ. ತಮಸ್ಸು ಅಂದರೆ ಕತ್ತಲೆ. ಇವರ ದೇಹದ ಪ್ರಕಾಶಕ್ಕೆ ಹೆದರಿದ ತಮಸ್ಸು ಕೆಳಗೆ ತಳ್ಳಲ್ಪಟ್ಟನು.

ಇವರಿಬ್ಬರೂ ನಿಧಾನವಾದ ನಡಿಗೆವುಳ್ಳವರು. ಆನೆಯ ನಡಿಗೆಯಂತೆ ಗಾಂಭೀರ್ಯದಿಂದ ಕೂಡಿದೆ. ಜಾತಕದಲ್ಲಿ ಶನಿಯ ಚಾರವು ಬಹಳ ನಿಧಾನ. ಒಂದೊಂದು ಮನೆಯಲ್ಲಿ ಎರಡೂವರೆ ವರ್ಷ ಇರುತ್ತಾನೆ. ಗತಿ ಅಂದರೆ ಸಂಚಾರ, ಇರುವುದು

ಪಾದದಲ್ಲಿ. ಈ ರೀತಿ ಶನಿಯ ಹೋಲಿಕೆ ಕಾಲಿನಲ್ಲಿರುವ ಗಮನಕ್ಕೆ ಇದೆ. ಇದರಿಂದಾಗಿ ಶನಿಯೂ ನೀಚನಾದನು.

ಬೇರೆಯವರ ಜಾತಕದಲ್ಲಿ ಗ್ರಹರ ಸಂಚಾರವನ್ನು ಅನುಸರಿಸಿಕೊಂಡು ಶುಭಗ್ರಹರು ನೀಚದಲ್ಲಿಯೂ ಅಶುಭಗ್ರಹರು ಉಚ್ಚದಲ್ಲಿಯೂ ಬರುವುದುಂಟು. ಆದ್ದರಿಂದ ಶುಭಗ್ರಹರು ಉಚ್ಚದಲ್ಲಿಯೂ ಅಶುಭಗ್ರಹರು ನೀಚದಲ್ಲಿಯೂ ಬರುವತನಕ ವಿವಾಹಕ್ಕೆ ಕಾಯಬೇಕು. ಆದರೆ ಇವರಿಬ್ಬರಿಗೆ ಹಾಗಿಲ್ಲ. ಇವರ ದೇಹದಲ್ಲಿ ಮುಖದಲ್ಲಿ ಚಂದ್ರನ ಸಾದೃಶ್ಯ. ನಿತಂಬದಲ್ಲಿ ಬೃಹತ್ವ. ಗತಿಯಲ್ಲಿ ಮಂದತ್ವ ಇತ್ಯಾದಿಗಳು ಶಾಶ್ವತ. ಮಾನವರಿಗೆ ದೇಹದಲ್ಲಿಯೂ ಚಂದ್ರಮುಖತ್ವಾದಿಗಳು ವಾರ್ಧಕ್ಯದಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ರುಗ್ಮಿಣೀಕೃಷ್ಣರಿಗಾಗುವಾಗ ಜೀವನದಲ್ಲಿ ಯಾವಾಗಲೂ ಮುಹೂರ್ತವೇ ಇರುವುದು. ಇದು ಶ್ರೀ ವಾದಿರಾಜರ ಕೌಶಲ್ಯದ ಪರಾಕಾಷ್ಠೆ.

**ಸಂದೇಶ** : ಮಾನಸಿಕವೇ ಮೊದಲಾದ ವಿಷಯಗಳಲ್ಲಿ ಹೊಂದಿಕೆ ಇದ್ದು ಜಾತಕದಲ್ಲಿ ಹೊಂದಿಕೆ ಆಗದಿದ್ದಾಗ ರುಗ್ಮಿಣೀಕೃಷ್ಣರ ಈ ಚಿತ್ರಣವನ್ನು ಮನಸ್ಸಿಗೆ ದೃಢವಾಗಿ ತೆಗೆದುಕೊಂಡರೆ ದಾಂಪತ್ಯಜೀವನ ಸರಿಹೊಂದುವುದು.

**ಯದೀಯವೀಕ್ಷಾವಿಷಯಸ್ಯ ನಿತ್ಯಂ ವಿಧೋರ್ಬಲಂ ತಾರಬಲಂ ಚ ಸುಷ್ಠು ।**
**ಯದೀಯತಾರಂ ಜಪತಸ್ತದಸ್ಯ ಸದಾ ಮುಹೂರ್ತೋದಯಮೇವ ಮನ್ಯೇ॥ ೪೮ ॥**

ಯದೀಯ=ಯಾರ ಸಂಬಂಧಿಯಾದ; ವೀಕ್ಷಾ=ನೋಟಕ್ಕೆ; ವಿಷಯಸ್ಯ=ವಿಷಯ ನಾದವನಿಗೆ; ನಿತ್ಯಂ=ಯಾವಾಗಲೂ; ವಿಧೋಃ=ಚಂದ್ರನ; ಬಲಂ=ಬಲವು; ಯದೀಯ=ಯಾರ ಸಂಬಂಧಿಯಾದ; ತಾರಂ=ಪ್ರಣವವನ್ನು; ಜಪತಃ=ಜಪಿಸುವವನಿಗೆ; ತಾರ=ನಕ್ಷತ್ರದ; ಬಲಂಚ=ಬಲವೂ; ಸುಷ್ಠು=ಚೆನ್ನಾಗಿದೆ; ತತ್=ಆದ್ದರಿಂದ; ಅಸ್ಯ= ಇವನಿಗೆ; ಸದಾ=ಯಾವಾಗಲೂ; ಮುಹೂರ್ತ=ಮುಹೂರ್ತದ; ಉದಯಂ ಏವ= ಉದಯವನ್ನೇ; ಮನ್ಯೇ=ತಿಳಿಯುತ್ತೇವೆ.

ಇತರ ಎಲ್ಲಾ ಬಲಗಳಿದ್ದೂ ತಾರಾಬಲ ಹಾಗೂ ಚಂದ್ರಬಲ ಇಲ್ಲದಿದ್ದರೆ ಪ್ರಯೋಜನವಿಲ್ಲ. ಈ ಎರಡು ಬಲಗಳೂ ಇವೆ ಎಂದು ಶ್ರೀರಾಜರು ತಿಳಿಸುತ್ತಾರೆ. ಕೃಷ್ಣನು ಯಾರನ್ನು ಮನಸ್ಸಿಟ್ಟು ನೋಡುತ್ತಾನೋ ಆತನಿಗೆ ಜೀವನದಲ್ಲಿ ಚಂದ್ರಬಲ ಚೆನ್ನಾಗಿ ಕೂಡಿಬರುತ್ತೆ. ಕೃಷ್ಣನ ಕಣ್ಣಿನಲ್ಲಿ ಸೂರ್ಯಚಂದ್ರರು ಇರುವುದೇ ಇದಕ್ಕೆ ಕಾರಣ. ಚಂದ್ರನು ಮನಃಕಾರಕ. ಕೃಷ್ಣನ ದೃಷ್ಟಿ ಬಿದ್ದಾಗ ಮನಸ್ಸಿನ ಚಾಂಚಲ್ಯ ಹೋಗುತ್ತದೆ. ಮನಸ್ಸು ಗಟ್ಟಿಯಾಗುತ್ತದೆ. ಇದೇ ರೀತಿ ತಾರಾಬಲವೂ ಇದೆ. ತಾರ ಎಂಬ ಶಬ್ದವು ಪ್ರಣವ ಹಾಗೂ ನಕ್ಷತ್ರ ಎಂಬ ಎರಡು ಅರ್ಥದಲ್ಲಿ ತೆರೆದುಕೊಳ್ಳುತ್ತದೆ. ಕೃಷ್ಣನನ್ನು ತಿಳಿಸಿಕೊಡುವ ಮಂತ್ರಗಳಲ್ಲಿ ಪ್ರಣವವು ಉತ್ತಮವಾದದ್ದು. ಈ ಪ್ರಣವವನ್ನು ಜಪಿಸುವವರಿಗೆ

ಆ ಮಂತ್ರದ ಬಲ ಬರುತ್ತದೆ. ಪ್ರಣವ ಪ್ರತಿಪಾದ್ಯನಿಗೆ ಬಲ ಇದೆ ಎಂದು ಏನು ಹೇಳತಕ್ಕದ್ದು. ಈ ಪ್ರಣವರೂಪ ತಾರದ ಬಲ ಇರುವಾಗ ಉಳಿದ ನಕ್ಷತ್ರಾದಿಗಳ ಬಲ ಸಹಜವಾಗಿ ಬರುತ್ತದೆ. ಸದಾ ಪ್ರಣವವನ್ನು ಜಪಿಸುವ ಹಾಗೆಯೇ ದೇವರ ಕೃಪಾದೃಷ್ಟಿಗೆ ವಿಷಯರಾದ ದೇವತೆಗಳಿಗೆ ತಾರಾಬಲ ಚಂದ್ರಬಲ ಸದಾ ಇದೆ. ಹೀಗಿರುವಾಗ ಕೃಷ್ಣನಿಗೆ ಇದೆ ಎಂದು ಏನು ಹೇಳುವುದು. ಆದ್ದರಿಂದ ಮುಹೂರ್ತವನ್ನು ನೋಡುವ ಪ್ರಸಂಗವೇ ಬರುವುದಿಲ್ಲ. ಯಾವಾಗಲೂ ಮುಹೂರ್ತ ಇದೆ.

<u>ಸಂದೇಶ</u> : **ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ । ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥** ದೇವರ ಪಾದಸ್ಮರಣೆ ಇರುವವರಿಗೆ ಈ ಎಲ್ಲಾ ಬಲವೂ ತಾನಾಗಿಯೇ ಒದಗಿಬರುತ್ತದೆ. ಈ ಎಲ್ಲಾ ಬಲದ ಫಲವು ಹರಿಸ್ಮರಣೆಯಲ್ಲಿ ಸೇರಿದೆ.

**ದ್ವಿತ್ರೈರ್ದಿನೈರಂತರಿತಾಽಪಿ ಸಾಽಭೂ–**
**ಜ್ಜ್ಯೋತಿಷ್ಪಥಜ್ಞೋಕ್ತತಿಥಿಃ ಕ್ಷಣಾಭಾ ।**
**ಉದ್ಯನ್ಮಹರ್ಧಿಂ ಮಿಷತಾಂ ಜನಾನಾಂ**
**ಭೈಷ್ಮ್ಯಾಸ್ತು ಕಲ್ಪಾಯುತಸಂಮಿತಾಽಽಸೀತ್ ॥ ೪೯ ॥**

ಜ್ಯೋತಿಃ=ಜ್ಯೋತಿಷ್ಕರ; ಪಥ=ದಾರಿಯನ್ನು; ಜ್ಞ=ತಿಳಿದವರಿಂದ; ಉಕ್ತ=ಹೇಳಲ್ಪಟ್ಟ; ತಿಥಿ=ದಿನವು; ದ್ವಿ–ತ್ರೈಃ=ಎರಡು ಮೂರು; ದಿನೈಃ=ದಿನಗಳಿಂದ; ಅಂತರಿತಾ ಅಪಿ=ವ್ಯವಹಿತ ವಾಗಿದ್ದರೂ; ಉದ್ಯತ್=ಹೆಚ್ಚಾಗುವ; ಮಹ=ವಿವಾಹದ; ಋದ್ಧಿಂ=ಅಭಿವೃದ್ಧಿಯನ್ನು; ಮಿಷತಾಂ=ನೋಡುವ; ಜನಾನಾಂ=ಜನರಿಗೆ; ಕ್ಷಣ=ಕ್ಷಣಕ್ಕೆ; ಆಭಾ=ಸಮಾನವು; ಅಭೂತ್=ಆಯಿತು; ಭೈಷ್ಮ್ಯಾಃ ತು=ರುಗ್ಮಿಣಿಗಾದರೂ; ಕಲ್ಪ=ಕಲ್ಪಗಳ; ಅಯುತಾ= ಹತ್ತುಸಾವಿರಕ್ಕೆ; ಸಂಮಿತಾ=ಸಮಾನವು; ಆಸೀತ್=ಆಯಿತು.

ರಮಾನಾರಾಯಣರಿಗಾಗುವಾಗ ವಿವಾಹದ ಮುಹೂರ್ತವು ಯಾವಾಗಲೂ ಸಿದ್ಧ. ಆದರೂ ಜ್ಯೋತಿಷ್ಕರು ಅವಸರ ಮಾಡಲಿಲ್ಲ. ೨–೩ ದಿವಸಗಳ ಅಂತರದಲ್ಲಿಯೇ ದಿನವನ್ನು ನಿಗದಿಪಡಿಸಿದರು. ಈ ಎರಡು ಮೂರು ದಿನಗಳು ಅಲ್ಲಿಯ ಜನರಿಗೆ ಒಂದು ಕ್ಷಣದಂತೆ ಕಳೆದುಹೋಯಿತು. ಸಂಭ್ರಮದ ಸಂದರ್ಭದಲ್ಲಿ ದಿನಗಳು ಬೇಗ ಉರುಳುತ್ತವೆ. ದ್ವಾರಕೆಯ ಜನರಿಗೆ ಅಷ್ಟು ಸಂಭ್ರಮ. ಮದುವೆಗಾಗಿ ಸಿದ್ಧತೆಗಳು ನಡೆಯುತ್ತಿವೆ. ನಾನಾ ರೀತಿಯಾದ ವಸ್ತುಗಳು ಬೇರೆ ಬೇರೆ ಕಡೆಗಳಿಂದ ಬಂದು ಇಲ್ಲಿ ರಾಶಿಯಾಗಿ ಬಿದ್ದಿವೆ. ದೇವಲೋಕದಿಂದಲೂ ಕೆಲವು ಬಂದಿರಬಹುದು. ಇದನ್ನೆಲ್ಲಾ ನೋಡಲು ಜನರು ಬಹಳ ಉತ್ಸಾಹದಿಂದ ಅತ್ತಿತ್ತ ಓಡಾಡುತ್ತಿದ್ದರು. ಎಷ್ಟು ನೋಡಿದರೂ ಸಾಲದು. ಸಮಯವೂ ಸಾಲದು. ಆದ್ದರಿಂದ ಸಮಯ ಹೋದದ್ದೇ ಗೊತ್ತಾಗಿಲ್ಲ.

ಜನರಿಗೆ ಎರಡುಮೂರು ದಿವಸಗಳು ಒಂದು ಕ್ಷಣದಂತೆ; ಆದರೆ ಈಕೆಗೆ ಒಂದೊಂದು ಕ್ಷಣವೂ ಕಲ್ಪಗಳ ಹತ್ತುಹತ್ತು ಸಾವಿರ ಕಳೆದಂತೆ ಆಗುತ್ತಿತ್ತು. ಒಂದು ಕಲ್ಪ ಅಂದರೆ ಕೆಲವು ಲಕ್ಷ ವರ್ಷಗಳು. ಯಾಕೆಂದರೆ ಆಕೆಗೆ ಬಹಳ ಬೇಸರ. ಕೃಷ್ಣನ ಕೈಹಿಡಿಯಲು ಇನ್ನೂ ಎರಡುಮೂರು ದಿವಸಗಳು ತಡ ಇದೆಯಲ್ಲಾ ಎಂದು. ಬೇಸರದ ಸಂದರ್ಭದಲ್ಲಿ ಸಮಯವು ಹೋಗುವುದೇ ಇಲ್ಲ.

**ಸಂದೇಶ** : ರಮೆಯನ್ನು ಎಂದೂ ನಾರಾಯಣನಿಗಿಂತ ದೂರ ಇಡಬಾರದು. ಇಟ್ಟರೆ ಆಕೆಗೆ ಬೇಸರವಾಗುತ್ತದೆ. ಬೇಸರವಾದರೆ ದೇವರ ಅನುಗ್ರಹವಾಗುವುದಿಲ್ಲ.

**ತಾಂಬೂಲಪತ್ರಂ ಕಿಲ ಪೂಗಯುಕ್ತ-**
**ಮಾಸೀತ್ ವಿವಾಹೋತ್ಸವನಿರ್ಣಯಾಯ ।**
**ಚೇತಸ್ಸುನಿಶ್ಚಾಯಯತಿ ಸ್ಮ ಯೂನಾಂ**
**ಮಾಂಗಲ್ಯದೀಕ್ಷೋತ್ಸವಮೇತದೇವ** ॥ ೫೦ ॥

ವಿವಾಹ=ಮದುವೆ ಎಂಬ; ಉತ್ಸವ=ಉತ್ಸವದ; ನಿರ್ಣಯಾಯ=ನಿಶ್ಚಯಕ್ಕೋಸ್ಕರ; ಪೂಗ=ಅಡಿಕೆಯಿಂದ; ಯುಕ್ತಂ=ಕೂಡಿದ; ತಾಂಬೂಲಪತ್ರಂ=ವೀಳ್ಯದ ಎಲೆಯು; ಆಸೀತ್=ಆಯಿತು; ಯೂನಾಂ=ತರುಣರ; ಚೇಸ್ಸು=ಮನಸ್ಸುಗಳಲ್ಲಿ; ಮಾಂಗಲ್ಯ= ವಿವಾಹದ; ದೀಕ್ಷಾ=ನಿಯಮದ; ಉತ್ಸವಂ=ಉತ್ಸವವನ್ನು; ನಿಶ್ಚಾಯಯತಿ ಸ್ಮ=ನಿಶ್ಚಯ ಮಾಡುತ್ತದೆ.

ವಿವಾಹಕ್ಕೆ ದಿನವನ್ನು ನಿಗದಿಪಡಿಸಬೇಕು. ಇದಕ್ಕೆ ನಿಶ್ಚಯತಾಂಬೂಲ ಎಂದು ಹೆಸರು. ವಿವಾಹದಲ್ಲಿ ತಾಂಬೂಲಕ್ಕೆ ಪ್ರಥಮಸ್ಥಾನ. ವಿವಾಹದ ಉದ್ದೇಶ ವಂಶದ ಅಭಿವೃದ್ಧಿ. ಇದಕ್ಕೆ ಪೂರ್ವಭಾವಿಯಾಗಿ ದಂಪತಿಗಳಲ್ಲಿ ಕಾಮದ ಉತ್ಪತ್ತಿ. ತಾಂಬೂಲಕ್ಕೆ ಆ ಶಕ್ತಿ ಇದೆ. ಇಂತಹ ತಾಂಬೂಲವನ್ನು ಜಗಿದರೆ ವಿವಾಹದ ದಿನವು ಆದಷ್ಟು ಸಮೀಪದಲ್ಲೇ ಇರಲಿ ಎಂದು ಯುವಜನಾಂಗವು ಆಶಿಸುವುದು ಸಹಜ.

**ಸಂದೇಶ** : ತಾಂಬೂಲದಲ್ಲಿ ಹಾಗೂ ಪತ್ನಿಯಲ್ಲಿ ರಮೆಯ ಸನ್ನಿಧಾನ ಬಹಳ. ಆದ್ದರಿಂದ ದಾಂಪತ್ಯಜೀವನ ಸುಗಮವಾಗಲು ಪತ್ನಿಯ ಸಹಕಾರ ಅತೀ ಅಗತ್ಯ.

**ತತಃ ಕ್ರಮೇಣೋಭಯವರ್ಗನಾರ್ಯಃ**
**ಗೃಹೇಗೃಹೇ ತೈಲಯುತಾಂ ಹರಿದ್ರಾಮ್ ।**
**ದದುರ್ವಿವಾಹೋತ್ಸವಮೂಲಭೂತಾಂ**
**ಪರಸ್ಪರಂ ಸ್ನೇಹಮಿವಾರ್ಪಯಂತ್ಯಃ** ॥ ೫೧ ॥

ತತಃ=ಅನಂತರ; ಕ್ರಮೇಣ=ಕ್ರಮದಿಂದ; ಉಭಯ=ಎರಡು; ವರ್ಗ=ಕಡೆಯ;

ನಾರ್ಯಃ=ನಾರಿಯರು; ಪರಸ್ಪರಂ=ಅನ್ಯೋನ್ಯವಾಗಿ; ಸ್ನೇಹಂ=ಪ್ರೀತಿಯನ್ನು; ಅರ್ಪಯಂತ್ಯ ಇವ=ಕೊಡುವವರಂತೆ; ವಿವಾಹ=ಮದುವೆಯೆಂಬ; ಉತ್ಸವ=ಉತ್ಸವಕ್ಕೆ; ಮೂಲಭೂತಾಂ=ಕಾರಣವಾದ; ತೈಲ=ಎಣ್ಣೆಯಿಂದ; ಯುತಾಂ=ಕೂಡಿದ; ಹರಿದ್ರಾಂ= ಅರಸಿನವನ್ನು; ಗೃಹೇಗೃಹೇ=ಪ್ರತಿ ಮನೆಯಲ್ಲಿಯೂ; ದದುಃ=ಕೊಟ್ಟರು.

ವಿವಾಹದ ನಿಮಿತ್ತ ಮನೆಮನೆಗಳಿಗೆ ಹೋಗಿ ಎಣ್ಣೆ ಹಾಗೂ ಅರಶಿನವನ್ನು ಕೊಡುವ ಇನ್ನೊಂದು ಸಂಪ್ರದಾಯವೂ ಇದೆ. ಇದನ್ನು ಎರಡೂ ಕಡೆಯವರು ಮಾಡಬೇಕು. ತೈಲದಲ್ಲಿ ಪಸೆ ಇದೆ. ಪಸೆಯು ಬೇರೆಬೇರೆ ಇದ್ದದ್ದನ್ನು ಒಟ್ಟುಸೇರಿಸುವ ಶಕ್ತಿ ಉಳ್ಳದ್ದು. ವಧೂವರರ ದಾಂಪತ್ಯಜೀವನದಲ್ಲಿ ಸಾಂಗತ್ಯ ಇರಲಿ ಎಂದು ಎಲ್ಲರೂ ಪ್ರಾರ್ಥಿಸಬೇಕು. ಅದಕ್ಕೋಸ್ಕರ ತೈಲದಾನ. ಅರಸಿನ ಹಳದಿಬಣ್ಣ. ಹಳದಿಬಣ್ಣವು ಆಕರ್ಷಣೀಯ. ಉದಾಹರಣೆಗೆ ಚಿನ್ನ. ದಂಪತಿಗಳ ಜೀವನವು ಜನರಿಗೆ ಆಕರ್ಷಣೀಯ ವಾಗಲಿ. ಜುಗುಪ್ಸಾದಾಯಕವಾಗದಿರಲಿ ಎಂಬುದು ಅರಸಿನದಾನದ ಅಭಿಪ್ರಾಯ.

<u>**ಸಂದೇಶ**</u> : ಎಷ್ಟೇ ಶ್ರೀಮಂತಿಕೆಯ ಮದುವೆ ಆದರೂ ಸಂಪ್ರದಾಯಕ್ಕೆ ಧಕ್ಕೆ ಬರಬಾರದು.

**ಕನ್ಯಾವರೌ ಚಕ್ರತುರರ್ಥಕಾಮಾವನ್ಯೇದ್ಯುರರ್ಚಾಂ ಪಿತೃದೇವತಾನಾಮ್ ।**
**ಮನ್ಯೇ ಕಿಲಾನ್ಯೋನ್ಯಮಮೂ ತದಗ್ರೇ ಚೀರ್ಣೋತ್ಸವೌ ಸಂಪ್ರತಿ ಜಾತಲಜ್ಜೌ**
**॥ ೫೨ ॥**

ಅರ್ಥ=ಶ್ರೇಯಸ್ಸಿನ; ಕಾಮೌ=ಆಸೆವುಳ್ಳ; ಕನ್ಯಾವರೌ=ವಧೂವರರು; ಅನ್ಯೇದ್ಯುಃ= ಮರುದಿನ; ಪಿತೃ=ಪಿತೃಗಳೆಂಬ; ದೇವತಾನಾಂ=ದೇವತೆಗಳ; ಅರ್ಚಾಂ=ಪೂಜೆಯನ್ನು; ಚಕ್ರತುಃ=ಮಾಡಿದರು; ತತ್=ದೇವತೆಗಳ; ಅಗ್ರೇ=ಮುಂಭಾಗದಲ್ಲಿ; ಚೀರ್ಣ=ಮಾಡಲ್ಪಟ್ಟ; ಉತ್ಸವೌ=ಉತ್ಸವವುಳ್ಳ; ಅಮೂ=ಇವರು; ಸಂಪ್ರತಿ=ಈಗ; ಅನ್ಯೋನ್ಯಂ=ಪರಸ್ಪರವಾಗಿ; ಜಾತ=ಉಂಟಾದ; ಲಜ್ಜೌ=ನಾಚಿಕೆ ಉಳ್ಳವರು.

ವಿವಾಹಕ್ಕೆ ಸಂಬಂಧಿಸಿ ನಾಂದೀಶ್ರಾದ್ಧ ಎಂಬ ಇನ್ನೊಂದು ಕಾರ್ಯಕ್ರಮವಿದೆ. ಇಲ್ಲಿ ಪಿತೃದೇವತೆಗಳ ಆರಾಧನೆ ನಡೆಯುತ್ತದೆ. ಇದನ್ನು ಎರಡೂ ಕಡೆಯವರು ಮಾಡಬೇಕು. ದಾಂಪತ್ಯದ ಉದ್ದೇಶ ವಂಶದ ಅಭಿವೃದ್ಧಿ. ಅದಕ್ಕೆ ಪಿತೃದೇವತೆಗಳ ಅನುಗ್ರಹ ಅಗತ್ಯ. ಯದ್ಯಪಿ ಈ ವಧೂವರರು ಪಿತೃದೇವತೆಗಳಿಗೂ ಮಾತಾಪಿತರು. ಇವರು ಮಾಡಬೇಕಾಗಿಲ್ಲ. ಆದರೂ ಲೋಕದ ಶಿಕ್ಷಣಕ್ಕೋಸ್ಕರ ಮಾಡಿದರು. ವಾದಿರಾಜರು ಇವರು ಮಾಡಿದ ಪೂಜೆಯನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸುತ್ತಾರೆ– ಸಮುದ್ರಮಥನದ ಸಮಯದಲ್ಲಿ ಒಮ್ಮೆ ಇವರ ವಿವಾಹವು ಜರಗಿತ್ತು. ಆಗಲೂ ಈ ಪಿತೃದೇವತೆಗಳ ಪೂಜೆ ನಡೆದಿತ್ತು. ಈಗ ಪುನಃ ವಿವಾಹ. ಪುನಃ ನಾಂದೀಶ್ರಾದ್ಧ. ಹೀಗೆ

ಎಷ್ಟು ಸಲ ವಿವಾಹ ಎಂದು ಈ ಪಿತೃದೇವತೆಗಳು ಪರಿಹಾಸ ಮಾಡಬಾರದು. ಮಾಡಿದರೆ ಇವರಿಗೆ ನಾಚಿಕೆ ಆಗುತ್ತದೆ. ಅದಕ್ಕಾಗಿ ಅವರ ಬಾಯಿ ಮುಚ್ಚಿಸುವ ಸಲುವಾಗಿ ಅವರಿಗೆ ಒಂದು ರೀತಿ ಆಮಿಷ ತೋರಿಸಿದಂತೆ ಎಂದು.

**ಅಥ ಸ್ನಾತಕಸಾಧರ್ಮ್ಯಂ ಸಂಪ್ರಾಪ್ಯ ಯದುನಂದನಃ ।**
**ಸ್ನಾತುಂ ಜಿಗಮಿಷುಸ್ತೀರ್ಥಂ ಪ್ರೀತ್ಯೇತ್ಥಂ ಪ್ರತ್ಯಷಿಧ್ಯತ ॥ ೫೩ ॥**

ಅಥ=ಅನಂತರ; ಸ್ನಾತಕ=ಸ್ನಾತಕನ; ಸಾಧರ್ಮ್ಯಂ=ಸಾಮ್ಯವನ್ನು; ಯದು= ಯದುವಿನ; ನಂದನ=ಮಗನು; ಸಂಪ್ರಾಪ್ಯ=ಹೊಂದಿ; ತೀರ್ಥಂ=ತೀರ್ಥವನ್ನು; ಸ್ನಾತುಂ= ಸ್ನಾನಮಾಡಲು; ಜಗಮಿಷುಃ=ಹೋಗುವ ಇಚ್ಛೆವುಳ್ಳವನಾಗಿ; ಪ್ರೀತ್ಯಾ=ಪ್ರೀತಿ ಯಿಂದ; ಇತ್ಥಂ=ಈ ರೀತಿಯಾಗಿ; ಪ್ರತ್ಯಷಿಧ್ಯತ=ತಡೆಯಲ್ಪಟ್ಟನು.

ಸ್ನಾತಕ ಅಂದರೆ ಅಧ್ಯಯನ ಮುಗಿಸಿದವನು. ಆದರೆ ಗಾರ್ಹಸ್ಥ್ಯವನ್ನು ಸ್ವೀಕರಿಸಿದವನು. ಕೃಷ್ಣನು ಈಗ ಇಂತಹ ಸ್ನಾತಕನಂತೆ ಇದ್ದಾನೆ. ಗೃಹಸ್ಥಧರ್ಮವನ್ನು ಸ್ವೀಕರಿಸುವ ಮೊದಲು ತೀರ್ಥಯಾತ್ರೆ ಮಾಡಬೇಕೆಂದು ನಿಯಮ. ಇದಕ್ಕೆ ಕೆಲವು ದಿನಗಳೇ ತಗಲುತ್ತವೆ. ಇಷ್ಟು ದಿವಸ ಈ ವರನನ್ನು ಬಿಟ್ಟಿರಲು ಸಾಧ್ಯವಿಲ್ಲ. ಯಾಕೆಂದರೆ ಕೃಷ್ಣನಲ್ಲಿ ಅಷ್ಟು ಪ್ರೀತಿ ಇವರಿಗೆಲ್ಲ. ಆದ್ದರಿಂದ ಮಾವನ ಕಡೆಯವರು ಕೃಷ್ಣನನ್ನು ತಡೆಯುತ್ತಾರೆ.

**ಪರಿಹೃತ ಭವಪಾಶ ಶ್ರೀಶ ಮಾ ಯಾಹಿ ಶೌರೇ**
**ತ್ರಿಭುವನಪರಿಗೀತಂ ತೀರ್ಥಜಾತಂ ತ್ವಯೀಶೇ ।**
**ವ್ರಜತಿ ಸಕಲಮಾಸೀತ್ ಪೃಷ್ಠತಃ ಸ್ಪಷ್ಟಯುಷ್ಮತ್–**
**ಚರಣವರಣಭೂಮ್ಯಾಂ ಕ್ವಾಸ್ತಿ ತೀರ್ಥಂ ತ್ವದಗ್ರೇ ॥ ೫೪ ॥**

ಪರಿಹೃತ=ರಹಿತವಾದ; ಭವ=ಸಂಸಾರದ; ಪಾಶ=ಬಂಧವುಳ್ಳ; ಶ್ರೀ=ರಮೆಯ; ಈಶ=ಒಡೆಯನೆ; ಶೌರೇ=ಕೃಷ್ಣನೇ; ತ್ರಿ=ಮೂರು; ಭುವನ=ಲೋಕಗಳಿಂದ; ಪರಿಗೀತಂ= ಹೊಗಳಲ್ಪಟ್ಟ; ತೀರ್ಥ=ತೀರ್ಥಗಳ; ಜಾತಂ=ಸಮೂಹವನ್ನು; ಮಾ ಯಾಹಿ=ಹೋಗಬೇಡ; ಈಶ=ಸ್ವಾಮಿಯಾದ; ತ್ವಯಿ=ನೀನು; ವ್ರಜತಿ=ಹೋಗುತ್ತಿರಲು; ಪೃಷ್ಠತಃ=ಹಿಂದಿನಿಂದ; ಸ್ಪಷ್ಟ=ಸ್ಪಷ್ಟವಾದ; ಯುಷ್ಮತ್=ನಿಮ್ಮ; ಚರಣ=ಪಾದದ; ವರಣ=ಸಂಬಂಧದ; ಭೂಮ್ಯಾಂ= ಜಾಗದಲ್ಲಿ; ಸಕಲಂ=ಎಲ್ಲವೂ; ಆಸೀತ್=ಇತ್ತು; ತ್ವತ್=ನಿನ್ನ; ಅಗ್ರೇ=ಎದುರಿನಲ್ಲಿ; ತೀರ್ಥಂ=ತೀರ್ಥವು; ಕ್ವ=ಎಲ್ಲಿ; ಅಸ್ತಿ=ಇದೆ.

ಕೃಷ್ಣನನ್ನು ತೀರ್ಥಯಾತ್ರೆಗೆ ಕಳಿಸಲು ಇಚ್ಛೇ ಇಲ್ಲ. ಅದಕ್ಕೋಸ್ಕರ ಆತನನ್ನು ಎರಡು ವಿಶೇಷಣಗಳಿಂದ ಸಂಬೋಧಿಸುತ್ತಾರೆ– ಪರಿಹೃತ ಭವಪಾಶ, ಶ್ರೀಶ ಎಂಬುದಾಗಿ. ವಿವಾಹದ ನಿಯಮಗಳು ಸಂಸಾರಿಗಳಿಗೆ; ಕರ್ಮದ ಬಂಧನಕ್ಕೆ ಸಿಲುಕಿದವರಿಗೆ; ಇವರು ಈ ನಿಯಮಗಳನ್ನು ಪಾಲಿಸಿದರೆ ಮುಂದಿನ ದಾಂಪತ್ಯಜೀವನ ಸುಗಮವಾಗುವುದು.

ಕೃಷ್ಣನಿಗೆ ಸಂಸಾರ, ಕರ್ಮಬಂಧನ ಯಾವುದೂ ಇಲ್ಲ. ಈತನ ದಾಂಪತ್ಯಜೀವನ ಅನಾದಿಕಾಲದಿಂದಲೂ ಸುಗಮವಾಗಿಯೇ ಇದೆ. ಆದ್ದರಿಂದ ಅದಕ್ಕಾಗಿ ತೀರ್ಥಯಾತ್ರೆ ಮಾಡಬೇಕಾಗಿ ಇಲ್ಲ.

ತೀರ್ಥಯಾತ್ರಾದಿ ನಿಯಮಗಳನ್ನು ಪಾಲಿಸಿದರೆ ದಂಪತಿಗಳಿಗೆ ತುಂಬಾ ಸಂಪತ್ತು ಜೀವನಪೂರ್ತಿ ಲಭಿಸುತ್ತದೆ. ಇಂತಹ ಸಂಪತ್ತಿನ ಆಸೆಯಿಂದ ಹೋಗುವುದೂ ಸರಿಯಲ್ಲ. ಯಾಕೆಂದರೆ ಕೃಷ್ಣನು ಸ್ವಯಂ ಲಕ್ಷ್ಮೀಪತಿ. ಹೀಗೆ ರಹಸ್ಯವಾಗಿ ಎರಡು ಕಾರಣಗಳನ್ನು ರಾಜರು ಹೇಳಿದರು. ಇನ್ನು ಸ್ಪಷ್ಟವಾಗಿಯೂ ತಿಳಿಸುತ್ತಾರೆ.

ತೀರ್ಥಯಾತ್ರೆ ಅಂದರೆ ತೀರ್ಥಗಳಿಗೆ ಅಭಿಮುಖವಾಗಿ ನಮ್ಮ ಯಾತ್ರೆ, ತೀರ್ಥಗಳು ಮುಂದಿನಿಂದ ಇರುತ್ತವೆ. ಅವುಗಳು ಇದ್ದಲ್ಲಿಗೆ ನಾವು ಹೋಗುವುದು. ಇದು ಜೀವರಿಗೆ ಆಯಿತು. ಈಶನಾದ ಕೃಷ್ಣನಿಗೆ ಈ ರೀತಿ ತೀರ್ಥಯಾತ್ರೆ ಆಗುವುದಿಲ್ಲ. ಯಾಕೆಂದರೆ ನೀನು ಮೆಟ್ಟಿದ ಮಣ್ಣಿನ ಕಣಗಳಲ್ಲಿ ಎಲ್ಲಾ ತೀರ್ಥಗಳ ಸನ್ನಿಧಾನ ಇದೆ ಎಂದು ಸಮಸ್ತಶಾಸ್ತ್ರಗಳೂ ಹೇಳುತ್ತವೆ. ಎಲ್ಲರ ಪಾದದ ಗುರುತು ದಾರಿಯಲ್ಲಿ ಮಣ್ಣಿನಲ್ಲಿ ಮೂಡಿದರೂ ನಿನ್ನ ಹೆಜ್ಜೆಯ ಗುರುತಿನಲ್ಲಿ ವ್ಯತ್ಯಾಸ ಸ್ಪಷ್ಟವಾಗಿ ತೋರುತ್ತದೆ. ನಿನ್ನ ಪಾದದಲ್ಲಿ ಇರುವ ಧ್ವಜ ವಜ್ರಾಯುಧ ಇತ್ಯಾದಿಗಳ ರೇಖಯು ಆ ಗುರುತಿನಲ್ಲಿ ಮೂಡಿರುತ್ತದೆ. ಇದನ್ನು ಪತ್ತೆಹಚ್ಚುತ್ತವೆ ಎಲ್ಲಾ ತೀರ್ಥಗಳು. ನೀನು ಹೆಜ್ಜೆ ಊರಿದ ಮೇಲೆ ತಾನೆ ಅದರಲ್ಲಿ ತೀರ್ಥಗಳು ಸನ್ನಿಹಿತಗಳಾಗುವುದು. ಹೆಜ್ಜೆಯನ್ನು ಊರಿ ತೆಗೆದು ಮುಂದೆ ಇಟ್ಟರೆ ತೀರ್ಥಗಳು ಹಿಂದಿನಿಂದ ಇರುವಂತೆ ಆಯಿತು. ಇತರರಂತೆ ತೀರ್ಥಕ್ಕೆ ಅಭಿಮುಖವಾಗಿ ಹೋಗಬೇಕಾದರೆ ತೆಗೆದ ಹೆಜ್ಜೆಯನ್ನು ಹಿಂದೆ ಇಡಬೇಕು. ಆಗ ತೀರ್ಥಗಳು ಮುಂದೆ ಇರುವಂತೆ ಆಗುತ್ತದೆ. ಆದ್ದರಿಂದ ಕೃಷ್ಣ ತೀರ್ಥಯಾತ್ರೆಗೆಂದು ಮುಂದೆ ಮುಂದೆ ಹೋಗದೆ ಹಿಂದೆ ಹಿಂದೆ ಬಾ.

ಶ್ರೀರಾಜರು ಇಲ್ಲಿ ತನ್ನ ಕೌಶಲ್ಯವನ್ನು ಬಹಳ ಮೆರೆದಿದ್ದಾರೆ.

<u>**ಸಂದೇಶ**</u> : ದೇವರ ಸ್ಮರಣೆಪೂರ್ವಕ ಮಾಡುವ ತೀರ್ಥಯಾತ್ರೆಯಿಂದ ಸಾಂಸಾರಿಕ ದುಃಖದ ನಿವೃತ್ತಿ. ಸಂಪತ್ತಿನ ಪ್ರಾಪ್ತಿ.

**ಯರ್ಹೀಶ ತೇ ಸಕಲತೀರ್ಥನಿಷೇವಣೇಚ್ಛಾ**
**ತರ್ಹಿ ತ್ವದೀಯಮುನಯಃ ಕಿಲ ತತ್ರ ತತ್ರ ।**
**ತ್ವಾಂ ಸ್ನಾಪಯಂತಿ ಜಲಮಧ್ಯಗತಂ ವಿವೇಕೈಃ**
**ಕುರ್ವಂತಿ ತತ್ತವ ಕಿಮದ್ಯ ವಿಧೇಯಮಸ್ತಿ** ॥ ೫೫ ॥

ಈಶ=ಒಡೆಯನೇ; ಯರ್ಹಿ=ಒಂದುವೇಳೆ; ತೇ=ನಿನಗೆ; ಸಕಲ=ಎಲ್ಲಾ; ತೀರ್ಥ=

**ತೀರ್ಥಗಳ; ನಿಷೇವಣ=ಸೇವಿಸುವುದರಲ್ಲಿ; ಇಚ್ಛಾ=ಅಪೇಕ್ಷೆಯಾದರೆ; ತರ್ಹಿ=ಹಾಗಾದರೆ; ತ್ವದೀಯ=ನಿನ್ನ; ಮುನಯಃ=ಋಷಿಗಳು; ತತ್ರ, ತತ್ರ=ಅಲ್ಲಲ್ಲಿ; ತ್ವಾಂ=ನಿನ್ನನ್ನು; ಸ್ನಾಪಯಂತಿ=ಸ್ನಾನ ಮಾಡಿಸುತ್ತಾರೆ; ವಿವೇಕೈಃ=ಮಂತ್ರವಿಶೇಷಗಳಿಂದ; ಜಲ=ನೀರಿನ; ಮಧ್ಯ=ಮಧ್ಯದಲ್ಲಿ; ಗತಂ=ಇರುವವನನ್ನಾಗಿ; ಕುರ್ವಂತಿ=ಮಾಡುತ್ತಾರೆ; ತತ್=ಆದ್ದರಿಂದ; ತವ=ನಿನಗೆ; ಅದ್ಯ=ಈಗ; ವಿಧೇಯಂ=ಮಾಡತಕ್ಕದ್ದು; ಕಿಂ=ಏನು; ಅಸ್ತಿ=ಇದೆ.**

ಕೃಷ್ಣನು ತೀರ್ಥಯಾತ್ರೆಯನ್ನು ಮಾಡಬೇಕಾಗಿಲ್ಲ ಎಂಬುದನ್ನು ರಾಜರು ಇನ್ನೊಂದು ರೀತಿಯಿಂದ ತಿಳಿಸುತ್ತಾರೆ– ಎಲೋ ಕೃಷ್ಣನೇ, ಸಜ್ಜನರು ಸದಾ ನಿನ್ನ ಪೂಜೆಯನ್ನು ಶಾಲಿಗ್ರಾಮಾದಿಗಳಲ್ಲಿ ಮಾಡುತ್ತಿರುತ್ತಾರೆ. ಸಜ್ಜನರು ಪ್ರಾಯಶಃ ನದೀ ಬದಿಯಲ್ಲಿಯೇ ವಾಸಿಸುತ್ತಾರೆ. ಅವರು ಈ ತೀರ್ಥಗಳ ಜಲದಿಂದಲೇ ಶಾಲಿಗ್ರಾಮಾದಿಗಳಿಗೆ ಅಭಿಷೇಕ ಮಾಡುತ್ತಾರೆ. ಈ ರೀತಿ ನಿನಗೆ ಸದಾ ತೀರ್ಥಸ್ನಾನ ಆಗುತ್ತಾ ಇರುತ್ತದೆ. ಹೀಗಿರುವಾಗ ನೀನು ಪ್ರತ್ಯೇಕ ತೀರ್ಥಯಾತ್ರೆ ಯಾಕೆ ಮಾಡಬೇಕು? ಮಾವನ ಮಾತಿಗೆ ಕೃಷ್ಣನು ಈ ರೀತಿ ಉತ್ತರಿಸಿದನು– ಸಾತ್ವಿಕರು ನನ್ನನ್ನು ತೀರ್ಥಜಲದಿಂದ ಸ್ನಾನ ಮಾಡಿಸುತ್ತಾರೆ ಎಂಬುದು ಸರಿ. ಅವರು ತಂಬಿಗೆಯಿಂದ ನೀರನ್ನು ಎತ್ತಿ ಅಭಿಷೇಕದ ಮೂಲಕ ಸ್ನಾನಮಾಡಿಸುವುದು. ನಿನಗೆ ಮುಳುಗಿ ಸ್ನಾನಮಾಡುವ ಆಸೆ ಇದೆ. ಆದ್ದರಿಂದ ತೀರ್ಥ ಯಾತ್ರೆಗೆ ಅಪ್ಪಣೆ ಕೊಡಿ ಎಂದು. ಇದಕ್ಕೆ ಅವರು ಉತ್ತರಿಸಿದರು– ಸಜ್ಜನರು ತಾವು ಮೊದಲು ಸ್ನಾನಮಾಡುವುದು. ಆ ಸಂದರ್ಭದಲ್ಲಿ 'ಅಘಮರ್ಷಣ' ಎಂಬ ಮಂತ್ರವನ್ನು ಹೇಳುತ್ತಾರೆ. ಹೃದಯದಲ್ಲಿ ನಿನ್ನನ್ನು ಧ್ಯಾನಿಸುತ್ತಾರೆ. ಆಗ ಅವರ ಜೊತೆಗೆ ನಿನಗೂ ಅವಗಾಹನವಾಗುತ್ತದೆ. ಆದ್ದರಿಂದ ನಿನ್ನದು ತೀರ್ಥಯಾತ್ರೆಯು ಈ ರೀತಿಯಿಂದಲೂ ಸರಿಯಲ್ಲ.

**<u>ಸಂದೇಶ</u> : ಪ್ರತಿದಿನ ಶಾಲಿಗ್ರಾಮಾದಿಗಳಲ್ಲಿ ದೇವರ ಪೂಜೆಯನ್ನು ಶುದ್ಧಜಲದಿಂದ ಅಭಿಷೇಕ ಪೂರ್ವಕವಾಗಿ ಮಾಡಬೇಕು. ನಾವೂ ಮುಳುಗಿಯೇ ಸ್ನಾನಮಾಡಿದರೆ ಉತ್ತಮ. ಸ್ನಾನ ಮಾಡುವಾಗ ದೇವರನ್ನೇ ಚಿಂತಿಸಬೇಕು.**

**ಯತ್ರ ತ್ವದೀಯಗುಣಕೀರ್ತನ ನರ್ತನಾದಿ**
**ತತ್ರೈವ ತೀರ್ಥನಿಕರಾಃ ಕಿಲ ಸಂವಸಂತಿ ।**
**ಯತ್ರಾರ್ಪಯಂತಿ ಸುಜನಾಃ ಸುಕೃತಂ ಸಮಸ್ತಂ**
**ತಸ್ಯೇಶ ತೇ ಸಕಲಮಾಕಲಯಾಮಿ ಪೂರ್ಣಮ್** ॥ ೫೬ ॥

ಈಶ=ಕೃಷ್ಣನೇ; ಯತ್ರ=ಎಲ್ಲಿ; ತ್ವದೀಯ=ನಿನ್ನ; ಗುಣ=ಗುಣಗಳ; ಕೀರ್ತನ=ಹೊಗಳು ವಿಕೆಯು; ನರ್ತನ=ನೃತ್ಯವು; ಆದಿ=ಮೊದಲಾದ್ದೋ; ತತ್ರ ಏವ=ಅಲ್ಲಿಯೇ; ತೀರ್ಥ= ತೀರ್ಥಗಳ; ನಿಕರಾಃ=ಸಮೂಹಗಳು; ಸಂವಸಂತಿ ಕಿಲ=ವಾಸಿಸುತ್ತವೆ ತಾನೆ;

ಸುಜನಾಃ=ಸಜ್ಜನರು; ಸಮಸ್ತಂ=ಎಲ್ಲಾ; ಸುಕೃತಂ=ಪುಣ್ಯವನ್ನು; ಯತ್ರ=ಯಾರಲ್ಲಿ; ಅರ್ಪಯಂತಿ=ಅರ್ಪಿಸುತ್ತಾರೋ; ತಸ್ಯ=ಅಂತಹ; ತೇ=ನಿನಗೆ; ಸಕಲಂ=ಎಲ್ಲವನ್ನೂ; ಪೂರ್ಣಂ=ಪೂರ್ಣವನ್ನಾಗಿ; ಆಕಲಯಾಮಿ=ತಿಳಿಯುತ್ತೇನೆ.

ತೀರ್ಥಯಾತ್ರೆಗೆ ಹೋಗದಿರಲು ಇನ್ನೂ ಒಂದು ಕಾರಣ– ಎಲ್ಲಿ ದೇವರಿಗೆ ಸಂಬಂಧಿಸಿದ ಪುರಾಣಪುಣ್ಯಕಥೆಗಳು ನಡೆಯುತ್ತವೋ, ಹಾಗೆಯೇ ನೃತ್ಯಗಾನಾದಿಗಳೂ ಜರಗುತ್ತವೋ, ಅಲ್ಲಿ ಎಲ್ಲಾ ತೀರ್ಥಗಳ ಸನ್ನಿಧಾನ ಇರುವುದಾಗಿ ಪುರಾಣಗಳು ಹೇಳುತ್ತವೆ. 'ಸರ್ವಾಣಿ ತೀರ್ಥಾನಿ ವಸಂತಿ ತತ್ರ ಯತ್ರಾಚ್ಯುತೋದಾರಕಥಾಪ್ರಸಂಗಃ' ಎಂದು. ಆದ್ದರಿಂದ ಇಲ್ಲಿ ಇದ್ದುಕೊಂಡೇ ಅಚ್ಯುತ ಅನಂತ ಇತ್ಯಾದಿ ನಾಮಗಳನ್ನು ಶ್ರದ್ಧೆಯಿಂದ ಉಚ್ಚರಿಸಿದರೆ ಇಲ್ಲೇ ಎಲ್ಲಾ ತೀರ್ಥಗಳ ಸನ್ನಿಧಾನ ಬರುತ್ತದೆ. ಆದ್ದರಿಂದ ತೀರ್ಥಯಾತ್ರೆಗೆ ಹೋಗಬೇಡ. ಇಷ್ಟೇ ಅಲ್ಲ. ಎಲ್ಲಾ ಸಾತ್ವಿಕರೂ ತಾವು ಮಾಡುವ ತೀರ್ಥಯಾತ್ರೆಯೇ ಮೊದಲಾದ ಎಲ್ಲಾ ಸತ್‌ಕರ್ಮಗಳನ್ನು ನಿನಗೆ ಅರ್ಪಿಸುತ್ತಾರೆ. ತಾವು ಪೂರ್ಣ ಫಲವನ್ನು ಪಡೆಯುತ್ತಾರೆ. ಅವರಿಗೆ ಪೂರ್ಣಫಲವನ್ನು ಕೊಡಬೇಕಾದರೆ ನಿನ್ನಲ್ಲಿ ಪೂರ್ಣತೆ ಇರಲೇಬೇಕು. ತೀರ್ಥಯಾತ್ರೆಯ ಫಲವೂ ನಿನ್ನಲ್ಲಿ ಮೊದಲೇ ತುಂಬಿದೆ. ತೀರ್ಥಯಾತ್ರೆ ಮಾಡಿ ಸಂಪಾದಿಸತಕ್ಕದ್ದು ಏನೂ ಇಲ್ಲ. ಆದ್ದರಿಂದಲೂ ತೀರ್ಥಯಾತ್ರೆಗೆ ಹೋಗಬೇಡ.

**<u>ಸಂದೇಶ</u>** : ದೈಹಿಕವಾಗಿ ತೀರ್ಥಯಾತ್ರೆಗಿಂತ ಮಾನಸಿಕವಾದ ಹರಿಸಂಕೀರ್ತನೆಗೆ ಹೆಚ್ಚಿನ ಫಲ.

**ಗಂಗಾದಿತೀರ್ಥನಿಕರಾಃ ಕಿಲ ಯತ್ಪದಾಬ್ಜ–**
**ಸಂಗಾತ್ ಪುನಂತಿ ಭುವಿ ತಾನಪಿ ಪಾವಯಂತಿ ।**
**ಅಂಗಾನುಷಂಗಕರಣಾದ್ಭವದಂತರಂಗಾಃ**
**ಕಿಂ ಗಾಹನೇನ ತವ ತೀರ್ಥಚಯೇಷು ತಸ್ಯ ॥ ೫೭ ॥**

ಗಂಗಾ=ಗಂಗೆಯೇ; ಆದಿ=ಮೊದಲಾದ; ತೀರ್ಥ=ತೀರ್ಥಗಳ; ನಿಕರಾಃ=ಸಮೂಹಗಳು; ಯತ್=ಯಾರ; ಪದ=ಚರಣವೆಂಬ; ಅಬ್ಜ=ಕಮಲಗಳ; ಸಂಗಾತ್=ಸಂಬಂಧದಿಂದ; ಪುನಂತಿ=ಪವಿತ್ರಮಾಡುತ್ತವೋ; ಭವತ್=ನೀನು; ಅಂತರಂಗಾಃ=ಮನದಲ್ಲಿ ಉಳ್ಳವರು; ಅಂಗ=ದೇಹದ; ಅನುಷಂಗ=ಸಂಬಂಧದ; ಕರಣಾತ್=ಮಾಡುವುದರಿಂದ; ತಾನ್ ಅಪಿ=ತೀರ್ಥಗಳನ್ನೂ; ಭುವಿ=ಭೂಮಿಯಲ್ಲಿ; ಪಾವಯಂತಿ=ಪವಿತ್ರಗೊಳಿಸುತ್ತಾರೆ; ತಸ್ಯ=ಅಂತಹ; ತವ=ನಿನಗೆ; ತೀರ್ಥ=ತೀರ್ಥಗಳ; ಚಯೇಷು=ಸಮೂಹಗಳಲ್ಲಿ; ಗಾಹನೇನ=ಮುಳುಗುವುದರಿಂದ; ಕಿಂ=ಏನು ಲಾಭ?

ಇನ್ನೊಂದು ಕಾರಣ– ಕೃಷ್ಣ, ನೀನು ತೀರ್ಥಯಾತ್ರೆಗೆ ಹೋಗಿ ಪ್ರಯೋಜನ ಇಲ್ಲ. ನಿನಗೆ ಸ್ನಾನಾದಿಗಳಿಂದ ಪಾವಿತ್ರ್ಯ ಬರುವುದಿಲ್ಲ. ಪಾವಿತ್ರ್ಯಕ್ಕೋಸ್ಕರ ತಾನೆ

ಸ್ನಾನ ಯಾಕೆ ಹೀಗೆ ಎಂದು ಕೃಷ್ಣನ ಪ್ರಶ್ನೆಗೆ ಉತ್ತರ ಮಾವನಿಂದ- ತೀರ್ಥಗಳು ಜಡಗಳು. ಅವುಗಳಿಗೆ ಅಭಿಮಾನಿಗಳು ಅಸ್ವತಂತ್ರರು. ಆದ್ದರಿಂದ ಜಡವಾದ ನೀರಾಗಲೀ ಅಭಿಮಾನಿಗಳಾದ ದೇವತೆಗಳಾಗಲೀ ತಾವು ನಮ್ಮನ್ನು ಶುದ್ಧೀಕರಿಸಲು ಸಮರ್ಥಗಳಲ್ಲ. ಮತ್ತೆ ಹೇಗೆ ಅಂದರೆ ಕೃಷ್ಣ, ನಿನ್ನ ಪಾದದ ಸಂಪರ್ಕದಿಂದ ಅವುಗಳಿಗೆ ಈ ಶಕ್ತಿ ಬರುವುದು. ಈ ವಿಷಯದಲ್ಲಿ ಭಾಗವತದ ಮಾತು ಆಧಾರವಾಗಿದೆ- "ಯಾ ವೈ ಲಸತ್ ಶ್ರೀತುಲಸೀವಿಮಿಶ್ರಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ" ಗಂಗೆಯು ಎಲ್ಲಾ ತೀರ್ಥಗಳಿಗೂ ನಾಯಕಿಯು. ಇತರ ತೀರ್ಥಗಳೆಲ್ಲಾ ಇವಳ ಹಿಂದೆ. ಇತರ ತೀರ್ಥಗಳೂ ಸಾಮಾನ್ಯಗಳಲ್ಲ. ಅವುಗಳಲ್ಲಿ ನಿನ್ನ ಕೊರಳಿನ ತುಳಸೀಮಾಲೆಯ ಮಂಜರೀ ಬಿದ್ದಿರುತ್ತದೆ. ನಿನ್ನ ಪಾದದ ಧೂಳೂ ಸೇರಿರುತ್ತದೆ. ಆದ್ದರಿಂದ ಬಹಳ ಮಹತ್ವವನ್ನು ಪಡೆದಿರುತ್ತವೆ ಎಂದು. ಈ ಜಲಗಳಿಗೆ ಮಹತ್ವ ಬರಲು ನಿನ್ನ ಸಂಪರ್ಕವೇ ಆಗಬೇಕಾಗಿಲ್ಲ. ನಿನ್ನನ್ನು ಹೃದಯದಲ್ಲಿ ಸದಾ ಹೊತ್ತುಕೊಂಡು ಸಂಚರಿಸುವ ಋಷಿಗಳಿದ್ದಾರಲ್ಲಾ. ಅವರು ಈ ಜಲಗಳನ್ನು ಸ್ಪರ್ಶಮಾಡಿದರೂ ಸಾಕು. ಈ ಜಲಗಳು ತೀರ್ಥಗಳಾಗುತ್ತವೆ. ಈ ವಿಷಯದಲ್ಲಿ 'ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಸ್ಥೇನ ಗದಾಭೃತಾ' ಎಂಬ ಭಾಗವತದ ಮಾತು ದಾಖಲೆ. ಸಾತ್ವಿಕರು ತಮ್ಮ ಹೃದಯದಲ್ಲಿ ಗದಾಧಾರಿಯಾದ ದೇವರನ್ನು ಧ್ಯಾನಿಸುತ್ತಾ ನೀರಿನಲ್ಲಿ ಅವಗಾಹನ ಮಾಡುತ್ತಾರೆ. ತನ್ಮೂಲಕ ಜಲವನ್ನು ತೀರ್ಥವನ್ನಾಗಿ ಮಾಡುತ್ತಾರೆ ಎಂದು ಇದರ ಅರ್ಥ. ಈ ರೀತಿ ನಿನ್ನ ಭಕ್ತರೇ ತಾವು ಈ ಜಲದಿಂದ ಪಾವಿತ್ರ್ಯ ಎಂಬ ಲಾಭ ಪಡೆಯುವುದಿಲ್ಲ. ಬದಲಾಗಿ ಜಲಕ್ಕೇ ಪಾವಿತ್ರ್ಯವನ್ನು ಕೊಡುತ್ತಾರೆ. ಹೀಗಿರಬೇಕಾದರೆ ಸದಾ ಪವಿತ್ರನಾದ ನಿನಗೆ ತೀರ್ಥಯಾತ್ರೆಯಿಂದ ಏನು ಲಾಭ? ನೀರಿಗೆ ಪಾವಿತ್ರ್ಯ ಕೊಡಲು ನಿನ್ನ ಭಕ್ತರಿದ್ದಾರೆ. ಆದ್ದರಿಂದ ಅದಕ್ಕಾಗಿಯೂ ಹೋಗಬೇಕಾಗಿಲ್ಲ.

**ಸಂದೇಶ** : ಸದಾ ಹರಿಸ್ಮರಣೆ ಮಾಡುವ ವ್ಯಕ್ತಿ ಯಾವುದನ್ನೇ ಮುಟ್ಟಿದರೂ ಪವಿತ್ರವಾಗುತ್ತದೆ.

**ಯದ್ರೋಮಕೂಪಮಪಿ ಪೂರಯಿತುಂ ನ ಶೇಕುಃ**
**ಬ್ರಹ್ಮಾಂಡಖರ್ಪರಶತಾಯುತಕೋಟಯೋಽಪಿ ।**
**ಗಂಗಾಪಿ ಯಚ್ಚರಣಸನ್ನಖಸೇಕಮಾತ್ರಂ**
**ತತ್ ಕ್ವಾಸ್ತಿ ಮಜ್ಜನವಿಧೌ ತವ ತೀರ್ಥಮುರ್ವ್ಯಾಮ್** ॥ ೫೮ ॥

ಬ್ರಹ್ಮಾಂಡ=ಬ್ರಹ್ಮಾಂಡಗಳ; ಖರ್ಪರ=ಹೊರ ಪರಿಧಿಗಳ; ಶತ=ನೂರು, ಅಯುತ= ಹತ್ತುಸಾವಿರ; ಕೋಟಯಃ ಅಪಿ=ಕೋಟಿಗಳೂ ಕೂಡಾ; ಯತ್=ಯಾರ; ರೋಮ= ರೋಮದ; ಕೂಪಂ ಅಪಿ=ರಂಧ್ರವನ್ನೂ; ಪೂರಯಿತುಂ=ತುಂಬಿಸಲು; ನ ಶೇಕುಃ= ಸಮರ್ಥಗಳಲ್ಲ; ಗಂಗಾ ಅಪಿ=ಗಂಗೆಯೂ ಕೂಡಾ; ಯತ್=ಯಾರ; ಚರಣ=ಕಾಲಿನ; ಸತ್=ಒಳ್ಳೆಯ; ನಖ=ಉಗುರಿನ; ಸೇಕಮಾತ್ರಂ=ಸಿಂಪಡಿಸುವಿಕೆ ಮಾತ್ರ; ತತ್=

ಆದ್ದರಿಂದ; ತವ=ನಿನ್ನ; ಮಜ್ಜನ=ಮುಳುಗುವಿಕೆಯ; ವಿಧೌ=ಕೆಲಸದಲ್ಲಿ; ಉರ್ವ್ಯಾಂ= ಭೂಮಿಯಲ್ಲಿ; ತೀರ್ಥಂ=ತೀರ್ಥವು; ಕ್ವ=ಎಲ್ಲಿ; ಅಸ್ತಿ=ಇದೆ.

ಇನ್ನೊಂದು ಕಾರಣ– ಇದು ಸ್ವಲ್ಪ ಹಾಸ್ಯದಿಂದ ಕೂಡಿದೆ –ಈ ಬ್ರಹ್ಮಾಂಡದ ಮಧ್ಯದಲ್ಲಿ ಮೇರುಪರ್ವತ ಇದೆ. ಈ ಪರ್ವತದಿಂದ ನಾಲ್ಕೂ ದಿಕ್ಕಿಗೂ ಇಪ್ಪತ್ತೈದು ಕೋಟಿ ಯೋಜನದಷ್ಟು ದೂರ ಬ್ರಹ್ಮಾಂಡ ಹರಡಿದೆ. ಇಂತಹ ಬ್ರಹ್ಮಾಂಡಗಳು ನೂರೋ, ಹತ್ತುಸಾವಿರನೋ, ಕೋಟಿಯೋ ಎಷ್ಟೇ ಇರಲಿ, ದೇವರ ಮೈಯ ಒಂದು ರೋಮದ ರಂಧ್ರವನ್ನು ಪೂರ್ಣ ಮುಚ್ಚಲು ಸಾಧ್ಯವಿಲ್ಲ. ಅಷ್ಟೂ ದೊಡ್ಡದು ನಿನ್ನ ಶರೀರ. ನಾನಾರೀತಿಯ ನೀರುಗಳಲ್ಲಿ ಹೆಚ್ಚು ಇರುವುದು ಗಂಗಾಜಲ. ಈ ಜಲವೂ ನಿನ್ನ ಕಾಲಿನ ಉಗುರಿಗೆ ಸಿಂಪಡಿಸಿದ ನೀರಿನ ಹನಿಯಂತೆ ಇದೆ. ಇಷ್ಟು ದೊಡ್ಡದು ನಿನ್ನ ಶರೀರ. ಇಂತಹ ಶರೀರವನ್ನು ತನ್ನಲ್ಲಿ ಮುಳುಗಿಸಿಕೊಳ್ಳುವ ನೀರು ಯಾವುದಿದೆ? ಆದ್ದರಿಂದ ಹೋಗಬೇಡ.

<u>**ಸಂದೇಶ**</u> : ದೇವರು ಅಣುವಿಗಿಂತ ಅಣುವೂ ಮಹತ್ತಿಗಿಂತ ಮಹತ್ತೂ ಹೌದು.

**ಭ್ರೂಕಾಶೀಂ ವರನಾಭಿಮಾನಸವತೀಂ ಹಾರಾವಲೀಜಾಹ್ನವೀಂ**
**ನೀವೀ ದಿವ್ಯಸರಸ್ವತೀಂ ಪ್ರವಿಲಸದ್ರೋಮಾಲಿಸೂರ್ಯಾತ್ಮಜಾಮ್ ।**
**ಕಾಂಚೀಶೋಭಿಕಟಿಂ ಕುಚೋಚ್ಚಬದರೀಂ ನೇತ್ರಾಂತಯುಗ್ಮಪ್ರಭಾ–**
**ಕಾವೇರ್ಯಂತರಗಾಸ್ಯಚಂದ್ರಸರಸೀಂ ಯಾತ್ರಾಸ್ತು ಭೈಷ್ಮೀಂ ಪ್ರತಿ ॥ ೫೯ ॥**

ಭ್ರೂ=ಹುಬ್ಬುಗಳೆಂಬ; ಕಾಶೀಂ=ಕಾಶಿವುಳ್ಳ; ವರ=ಉತ್ತಮವಾದ; ನಾಭಿ=ಹೊಕ್ಕುಳೆಂಬ; ಮಾನಸವತೀಂ=ಮಾನಸಸರವುಳ್ಳ; ಹಾರ=ಮುತ್ತುಗಳ; ಆವಲೀ=ಸಮೂಹವೆಂಬ; ಜಾಹ್ನವೀಂ=ಗಂಗೆವುಳ್ಳ; ನೀವೀ=ಸೀರೆಯ ನೆರಿಗೆ ಎಂಬ; ದಿವ್ಯ=ಉತ್ತಮವಾದ; ಸರಸ್ವತೀಂ=ಸರಸ್ವತಿವುಳ್ಳ; ಪ್ರವಿಲಸತ್=ಶೋಭಿಸುವ; ರೋಮ=ರೋಮಗಳ; ಆಲಿ= ಸಮೂಹವೆಂಬ; ಸೂರ್ಯ=ಸೂರ್ಯನ; ಆತ್ಮಜಾಂ=ಮಗಳುಳ್ಳ; ಕಾಂಚೀ=ಕಾಂಚಿ ಎಂಬ; ಶೋಭಿ=ಶೋಭಿಸುವ; ಕಟಿಂ=ಸೊಂಟವುಳ್ಳ; ಕುಚ=ಸ್ತನಗಳೆಂಬ; ಉಚ್ಚ= ಎತ್ತರವಾದ; ಬದರೀಂ=ಬದರೀವುಳ್ಳ; ನೇತ್ರ=ಕಣ್ಣುಗಳ; ಅಂತ=ಕೊನೆಯ; ಯುಗ್ಮ= ಎರಡರ; ಪ್ರಭಾ= ಪ್ರಕಾಶವೆಂಬ; ಕಾವೇರೀ=ಕಾವೇರಿಯ; ಅಂತರ=ಮಧ್ಯದಲ್ಲಿ; ಗ=ಇರುವ; ಆಸ್ಯ= ಮುಖವೆಂಬ; ಚಂದ್ರಸರಸೀಂ=ಚಂದ್ರಸರೋವರವುಳ್ಳ; ಭೈಷ್ಮೀಂ ಪ್ರತಿ= ರುಗ್ಮಿಣಿಯನ್ನು ಕುರಿತು; ಯಾತ್ರಾ=ಯಾತ್ರೆಯು; ಅಸ್ತು=ಅಗಲಿ.

ಯಾತ್ರಾಸ್ಥಳಗಳು ಬಹಳ ಇವೆ. ಕಾಶಿ, ಮಾನಸಸರೋವರ, ಗಂಗೆ, ಯಮುನೆ, ಸರಸ್ವತೀ, ಬದರೀ, ಕಾಂಚೀ, ಚಂದ್ರಪುಷ್ಕರಣೀ ಇತ್ಯಾದಿಗಳು. ಕೃಷ್ಣ ಇವುಗಳಲ್ಲಿ ಯಾವ ಕ್ಷೇತ್ರಕ್ಕೆ ಹೋಗಬೇಕು? ಎಲ್ಲದಕ್ಕೂ ಹೋಗಬೇಕೋ? ಒಂದು ಸಾಕೋ? ಯಾವ

ಪಕ್ಷವನ್ನು ಆರಿಸಿದರೂ ಸರಿಯೇ. ನೀನು ಮನೆಯಿಂದ ಹೊರಗೆ ಹೋಗಬೇಕಾಗಿಲ್ಲ. ನಿನ್ನ ಮಡದಿಯಾಗುವ ರುಗ್ಮಿಣಿಯಲ್ಲೇ ಎಲ್ಲಾ ತೀರ್ಥಗಳೂ ಇವೆ.

ಹೇಗೆಂದರೆ– ಈಕೆಯ ಹುಬ್ಬುಗಳೇ ಕಾಶೀಕ್ಷೇತ್ರ, ಕಾಶೀಪಟ್ಟಣವೂ ಬಿಲ್ಲಿನ ಆಕಾರದಲ್ಲಿದೆ. ಹುಬ್ಬುಗಳೂ ಅದೇ ಆಕಾರವುಳ್ಳವುಗಳು. ಈ ರೀತಿ ಹುಬ್ಬುಗಳಿಗೂ ಕಾಶಿಗೂ ಹೋಲಿಕೆಯಿದೆ. ಆಕೆಯ ಹುಬ್ಬುಗಳ ಕಡೆ ನಿನ್ನ ಪ್ರಯಾಣ ಬೆಳೆಯಿತೆಂದರೆ ಕಾಶಿಗೆ ಹೋದಂತೆ ಆಗುತ್ತದೆ. ಆಕೆಯ ಹೊಕ್ಕುಳು ಮಾನಸಸರೋವರದಂತೆ ಇದೆ. ಮಾನಸಸರೋವರವು ಬಹಳ ಆಳ ಇದೆ. ಹೊಕ್ಕುಳು ಆಳವಾಗಿರುವುದೇ ಲಕ್ಷಣ. ಶ್ರೀಸೂಕ್ತವು ಲಕ್ಷ್ಮಿಯನ್ನು "ಗಂಭೀರಾವರ್ತನಾಭಿ" ಆಳವಾದ, ಸುಳಿಯಿಂದ ಕೂಡಿದ ಹೊಕ್ಕುಳು ಉಳ್ಳವಳು ಎಂದು ಹೊಗಳುತ್ತದೆ. ಆದ್ದರಿಂದ ಮಾನಸಸರೋವರಕ್ಕೆ ಹೋಗುವ ಆಸೆಯಿದ್ದರೆ ಬಹಳ ದೂರ ಹೋಗಬೇಕಾಗುತ್ತದೆ. ಬಹಳ ಶ್ರಮ ಆಗುತ್ತದೆ. ಇವಳ ನಾಭಿಯ ಬಳಿಗೆ ಹೋದರೆ ಅಲ್ಲಿಗೆ ಹೋದಂತೆ. ಈ ಹುಡುಗಿಯು ಮುತ್ತಿನ ಹಾರಗಳನ್ನು ತುಂಬಾ ಧರಿಸಿದ್ದಾಳೆ. ಮುತ್ತುಗಳ ಬಣ್ಣ ಗಂಗೆಯ ಬಣ್ಣಕ್ಕೆ ಸಮಾನವಾಗಿದೆ. ನೀನು ಗಂಗಾಸ್ನಾನದ ಆಸೆವುಳ್ಳವನಾದರೆ ಇವಳು ಧರಿಸಿರುವ ಮುತ್ತಿನ ಹಾರಗಳ ಬಳಿಗೆ ಹೋಗು. ಕೃಷ್ಣನು ಹೇಳಿದನು– ನನಗೆ ಸರಸ್ವತಿ, ಯಮುನಾ ಇವುಗಳಲ್ಲಿ ಸ್ನಾನ ಮಾಡಬೇಕೆಂದು ಆಸೆ ಇದೆ ಎಂದು. ಇದಕ್ಕೆ ಮಾವನ ಉತ್ತರ– ಈಕೆ ಪೀತಾಂಬರವನ್ನು ಉಟ್ಟಿದ್ದಾಳೆ. ಶಾಸ್ತ್ರಗಳು ಹೇಳುತ್ತವೆ: ಸರಸ್ವತೀನದೀನೀರು ಹಳದಿ ಎಂದು. ಇವಳ ಸೀರೆಯ ನೆರಿಗೆಯನ್ನು ಆಶ್ರಯಿಸಿದರೆ ಸರಸ್ವತೀಯಾತ್ರೆಯ ಫಲ. ಯಮುನೆಯ ನೀರು ಕಪ್ಪು. ಇವಳ ನಾಭಿಯಿಂದ ಎದೆಯ ತನಕ ಕಪ್ಪಾದ ರೋಮಗಳ ಸಾಲು ಇದೆ. ಇದು ಯಮುನೆಯಂತೆ ಇದೆ. ಕೃಷ್ಣ, ನಿನಗೆ ಎತ್ತರವಾದ ಬೆಟ್ಟಗಳಿಂದ ಕೂಡಿದ ಬದರಿಗೆ ಹೋಗಬೇಕೆಂದು ಆಸೆ ಇದೆಯಾ? ಆ ಬೆಟ್ಟಗಳ ತಪ್ಪಲಲ್ಲಿ ನಾರಾಯಣನಿದ್ದಾನೆ. ಇವಳ ಸ್ತನಗಳು ಬಹಳ ಪುಷ್ಟವಾಗಿವೆ. ಆದ್ದರಿಂದ ಬೆಟ್ಟಗಳಂತೆ ತೋರುತ್ತವೆ. ಇವುಗಳ ಬುಡದಲ್ಲಿ ಹೃದಯದಲ್ಲಿ ದೇವರಿದ್ದಾನೆ. 'ಹೃದಿ ಹಿ ಏಷಃ ಆತ್ಮಾ' ದೇವರು ಎಲ್ಲರ ಹೃದಯದಲ್ಲಿ ಇದ್ದಾನೆ ಎಂದು ಪ್ರಮಾಣ ಇದೆ. ಬಹಳ ಕಷ್ಟಸಾಧ್ಯವಾದ ಆ ಬದರೀಯಾತ್ರೆಗಿಂತ ಈ ಬದರೀಯಾತ್ರೆಯು ಬಹಳ ಸುಲಭ. ಈ ರೀತಿ ಉತ್ತರಭಾರತ ಯಾತ್ರೆ ಸಾಕುಮಾಡು. ಇನ್ನು ದಕ್ಷಿಣಭಾರತ ಯಾತ್ರೆ ಮಾಡಬೇಕೆಂದಿದ್ದೀಯಾ? ಅದು ಯಾವುದು? ಕಾಂಚಿಯಾ? ಅಥವಾ ಕಾವೇರಿ ಮಧ್ಯದಲ್ಲಿರುವ ಚಂದ್ರಪುಷ್ಕರಣಿಯೋ? ಅವೂ ಕೂಡಾ ಇವಳಲ್ಲಿಯೇ ಇವೆ. ಕಾಂಚೀ ಎಂಬ ಹೆಸರಿನ ಊರು ತಮಿಳುನಾಡಿನಲ್ಲಿದೆ. ಇಲ್ಲಿ ಇವಳ ಸೊಂಟದಲ್ಲಿ ಕಾಂಚೀ ಇದೆ. ಇದರ ಅಭಿಪ್ರಾಯ ಹೀಗಿದೆ– ತಮಿಳು ನಾಡಿನಲ್ಲಿರುವ ಕಾಂಚೀ ಎಂದರೆ ಒಂದು ಊರು. ಸೊಂಟದಲ್ಲಿರುವ ಕಾಂಚೀ ಎಂದರೆ ಒಂದು ಆಭರಣ. ಅರ್ಥವ್ಯತ್ಯಾಸ ಇದ್ದರೂ ಶಬ್ದದಿಂದ ಸಾಮ್ಯ ಇದೆ. ತಮಿಳುನಾಡಿಗೆ ಹೋದರೆ ಕಾಂಚಿ ಸಿಗುವಂತೆ ಸೊಂಟದ ಕಡೆಗೆ ಹೋದರೂ ಕಾಂಚೀ ಸಿಗುತ್ತದೆ

ಎಂದು. ಕೃಷ್ಣ, ತಮಿಳುನಾಡಿನ ಕಾಂಚಿಯು ಬಹಳ ದೂರ ಇದೆ. ಇಲ್ಲೇ ಸಮೀಪವಿರುವ ನಿನ್ನ ಭಾವಿ ಪತ್ನಿಯಲ್ಲಿರುವ ಕಾಂಚಿ ಕಡೆಗೆ ನಿನ್ನ ಯಾತ್ರೆ ಆಗಲಿ.

ಇನ್ನು ಚಂದ್ರಪುಷ್ಕರಣೀ ಯಾತ್ರೆ ಈ ರೀತಿ ಇದೆ. ಶ್ರೀರಂಗದಲ್ಲಿ ಕಾವೇರಿಯು ಎರಡು ಕವಲಾಗಿ ಹರಿಯತ್ತದೆ. ಈ ಕವಲುಗಳ ಮಧ್ಯದಲ್ಲಿ ಚಂದ್ರಪುಷ್ಕರಣಿಯು ಇದೆ. ಇಂತಹ ಪುಷ್ಕರಣಿಯು ಈಕೆಯ ದೇಹದಲ್ಲಿಯೇ ಇದೆ. ಹೇಗೆಂದರೆ– ಕಡೆಗಣ್ಣುಗಳು ಎರಡು. ಅವುಗಳಿಂದ ಪ್ರಭೆಗಳು ಎರಡು ಕವಲಿನಂತೆ ಹೊರಟಿವೆ. ಇವುಗಳೇ ಕಾವೇರಿಯ ಎರಡು ಕವಲುಗಳು. ದೂರದಲ್ಲಿ ನಿಂತು ನೋಡಿದಾಗ ಈ ಪ್ರಭೆಗಳ, ಕವಲುಗಳ ಮಧ್ಯದಲ್ಲಿ ಮುಖವು ಕಾಣುತ್ತದೆ. ಮುಖವನ್ನು ಚಂದ್ರನಿಗೆ ಹೋಲಿಸುವುದು ಸಹಜ. ತಥಾಚ ಕಾವೇರಿಯ ಕವಲುಗಳ ಮಧ್ಯದಲ್ಲಿ ಚಂದ್ರಪುಷ್ಕರಣಿಯಂತೆ ಪ್ರಭೆಗಳ ಕವಲುಗಳ ಮಧ್ಯದಲ್ಲಿ ಮುಖಚಂದ್ರವು ಇದೆ. ಇದೇ ಚಂದ್ರಪುಷ್ಕರಣಿ. ಆದ್ದರಿಂದ ಶ್ರೀರಂಗಕ್ಕೆ ಹೋಗದೆ ಈಕೆಯ ಮುಖಚಂದ್ರದತ್ತ ನಿನ್ನ ಪಾದವು ಬೆಳೆಯಲಿ.

ಬಾಹ್ಯದಲ್ಲಿ ಒಂದೊಂದು ತೀರ್ಥವು ಒಂದೊಂದು ಕಡೆ ಇದೆ. ಇಲ್ಲಿ ಎಲ್ಲಾ ತೀರ್ಥಗಳು ಒಂದೇ ಕಡೆ ಇದೆ.

<u>**ಸಂದೇಶ**</u> : ಪತ್ನಿಯು ತನ್ನಕ್ಕಿಂತ ಕಿರಿಯಳೆಂದು ಪತಿಯಾದವನು ಆಕೆಯನ್ನು ತಿರಸ್ಕಾರ ದೃಷ್ಟಿಯಿಂದ ನೋಡಬಾರದು. ಆಕೆಯಲ್ಲಿ ಸಕಲ ತೀರ್ಥಾಭಿಮಾನಿದೇವತೆಗಳ ಸನ್ನಿಧಾನವನ್ನು ಅನುಸಂಧಾನಿಸಬೇಕು. ಹಾಗೆಯೇ ಗೌರವಿಸಬೇಕೂ ಕೂಡಾ.

**ಕ್ಷೇತ್ರೇ ತ್ವಮಸ್ಮಿನ್ ಪರಿಗೃಹ್ಯ ಭೈಷ್ಮ್ಯಾಃ**
**ಪಾಣಿಂ ಜಗತ್ಯಪ್ರತಿಮಂ ತದೇತತ್ ।**
**ತೀರ್ಥಂ ವಿಧೇಹೀಶ ನ ಕೃಷ್ಣಯಾತ್ರಾಂ**
**ವ್ಯಾಪ್ತಸ್ಯ ತೇ ಸಂಪ್ರತಿ ನಂದಯಾಮಃ ॥ ೬೦ ॥**

ಈಶ=ಒಡೆಯನೇ; ಅಸ್ಮಿನ್=ಈ; ಕ್ಷೇತ್ರೇ=ಕ್ಷೇತ್ರದಲ್ಲಿ; ತ್ವಂ=ನೀನು; ಭೈಷ್ಮ್ಯಾಃ= ರುಗ್ಮಿಣಿಯ; ಪಾಣಿಂ=ಕೈಯನ್ನು; ಪರಿಗೃಹ್ಯ=ಹಿಡಿದು; ತತ್=ಆ; ಏತತ್=ಈ; ತೀರ್ಥಂ= ತೀರ್ಥವನ್ನು; ಜಗತಿ=ಲೋಕದಲ್ಲಿ; ಅಪ್ರತಿಮಂ=ಅಸದೃಶವನ್ನಾಗಿ; ವಿಧೇಹಿ=ಮಾಡು; ಕೃಷ್ಣ=ಕೃಷ್ಣನೇ; ಸಂಪ್ರತಿ=ಈಗ; ವ್ಯಾಪ್ತಸ್ಯ=ವ್ಯಾಪ್ತನಾದ; ತೇ=ನಿನಗೆ; ಯಾತ್ರಾಂ= ಸಂಚಾರವನ್ನು; ನ ನಂದಯಾಮಃ=ಆಶಿಸುವುದಿಲ್ಲ.

ಕೃಷ್ಣ, ನೀನು ಸರ್ವತ್ರ ವ್ಯಾಪಿಸಿದವನು. ಸರ್ವತ್ರ ವ್ಯಾಪಿಸಿದವರಿಗೆ ಚಲನೆಯೇ ಕೂಡುವುದಿಲ್ಲ, ಆಕಾಶದಂತೆ. ಆಕಾಶವು ಸರ್ವತ್ರ ಇದೆ. ಆದ್ದರಿಂದ ಅದಕ್ಕೆ ಚಲನೆ ಇಲ್ಲ. ಆಕಾಶ ಜಡ. ಅದಕ್ಕೆ ಚಲಿಸುವ ಶಕ್ತಿ ಇಲ್ಲ. "ನಾನು ಸ್ವತಂತ್ರ ಶಕ್ತ. ಆದ್ದರಿಂದ ವ್ಯಾಪ್ತನಾದರೂ ಚಲಿಸುತ್ತೇನೆ. ಆದ್ದರಿಂದ ಯಾತ್ರೆಗೆ ಹೋಗುತ್ತೇನೆ"ಂದು ನೀನು ಹೇಳಬಹುದು. ಸರಿ,

ಒಪ್ಪೋಣ. ಆದರೂ ತೀರ್ಥಯಾತ್ರೆ ವಿಹಿತವಲ್ಲ. ಯಾಕೆಂದರೆ ನೀನು ವ್ಯಾಪ್ತನಾದ್ದರಿಂದ ಯಾವ ಕ್ಷೇತ್ರಕ್ಕೆ ಹೋಗಬೇಕೆಂದು ಆಶಿಸಿದ್ದೀಯಾ. ಅಲ್ಲಿ ನೀನು ಮೊದಲೇ ಇದ್ದಿ ತಾನೆ. ಆದ್ದರಿಂದ ಯಾಕೆ ಹೋಗಬೇಕು?

ನೀನು ಯಾವುದೋ ತೀರ್ಥವನ್ನು ಹುಡುಕಿಕೊಂಡು ಯಾಕೆ ಹೋಗುತ್ತಿ? ಸದ್ಯ ನೀನಿರುವ ಈ ಜಾಗವನ್ನೇ ಎಲ್ಲದ್ದಕ್ಕಿಂತ ದೊಡ್ಡ ಕ್ಷೇತ್ರವನ್ನಾಗಿ ಮಾಡು. ಹೇಗೆಂದರೆ– ನೀನು ರುಗ್ಮಿಣಿಯನ್ನು ವಿವಾಹವಾಗು. ಆಗ ಜನರೆಲ್ಲಾ ರಮಾನಾರಾಯಣರು ಒಟ್ಟುಸೇರಿದ ಜಾಗ ಎಂದು ಇದನ್ನೇ ಬಹಳವಾಗಿ ಆದರಿಸುತ್ತಾರೆ. ಆಗ ಈ ಜಾಗವು ಸಹಜವಾಗಿ ದೊಡ್ಡದಾಗಿ ಬೆಳೆಯುತ್ತದೆ.

**ಸಂದೇಶ** : ರಮಾನಾರಾಯಣರು ಜೊತೆಯಾಗುವುದು ಅಂದರೆ ಪಾಠಪ್ರವಚನ ಎಂದರ್ಥ. ಮಾತುಗಳು ಅಂದರೆ ಲಕ್ಷ್ಮೀ. ಅವುಗಳು ನಾರಾಯಣನನ್ನು ಹೇಳಬೇಕು. ಆಗ ರಮಾನಾರಾಯಣರು ಜೊತೆಸೇರಿದರು ಎಂದರ್ಥ. ಇದು ತೀರ್ಥಯಾತ್ರೆಗಿಂತ ಉತ್ತಮ ಕೆಲಸ. ಎಲ್ಲಿ ಪ್ರವಚನಗಳು ನಡೆಯುತ್ತವೋ ಅವುಗಳು ಇತರ ಕ್ಷೇತ್ರಗಳಗಿಂತ ಶ್ರೇಷ್ಠವು. ಆದ್ದರಿಂದ ತೀರ್ಥಯಾತ್ರೆಗಿಂತ ನಮ್ಮ ಮನೆಯಲ್ಲೇ ಉಪನ್ಯಾಸಾದಿಗಳನ್ನು ಮಾಡಬೇಕು. ನಮ್ಮ ಮನೆಯನ್ನು ಉತ್ತಮ ಕ್ಷೇತ್ರವನ್ನಾಗಿ ಮಾಡಬೇಕು.

**ನಿತ್ಯಂ ನಿಜೋರುಸ್ಥಿತಭೀಷ್ಮಪುತ್ರೀನೃತ್ಯದ್ಘನೋತ್ತುಂಗಕುಚಗ್ರಹಸ್ಯ ।**
**ಪ್ರತ್ಯೂಹಶಾಂತೀರಿವ ಕಾಂಕ್ಷಮಾಣಶ್ಚಕ್ರೇ ಸ ಶೌರಿರ್ಗ್ರಹಶಾಂತಿಕರ್ಮ ॥ ೬೧ ॥**

ಸಃ=ಆ; ಶೌರಿಃ=ಕೃಷ್ಣನು; ನಿತ್ಯಂ=ಯಾವಾಗಲೂ; ನಿಜ=ತನ್ನ; ಊರು=ತೊಡೆಯಲ್ಲಿ; ಸ್ಥಿತ=ಇರುವ; ಭೀಷ್ಮ=ಭೀಷ್ಮಕನ; ಪುತ್ರೀ=ಮಗಳ; ನೃತ್ಯತ್=ಕುಣಿಯುವ; ಘನ= ಗಟ್ಟಿಯಾದ; ಉತ್ತುಂಗ=ಎತ್ತರದ; ಕುಚ=ಸ್ತನಗಳ; ಗ್ರಹಸ್ಯ=ಹಿಡಿಯುವಿಕೆಯ; ಪ್ರತ್ಯೂಹ= ವಿಘ್ನಗಳ; ಶಾಂತೀಃ=ಪರಿಹಾರಗಳನ್ನು; ಕಾಂಕ್ಷಮಾಣಃ ಇವ; ಆಶಿಸುವವನಂತೆ; ಗ್ರಹಶಾಂತಿ=ನವಗ್ರಹಶಾಂತಿಯ; ಕರ್ಮ=ಕೆಲಸಗಳನ್ನು; ಚಕ್ರೇ=ಮಾಡಿದನು.

ವಿವಾಹದ ಪ್ರಸಂಗದಲ್ಲಿ ನವಗ್ರಹಶಾಂತಿಯನ್ನು ಮಾಡುವುದುಂಟು. ಕೃಷ್ಣನು ಮಾಡಿಸಿದ, ಸಂಪ್ರದಾಯ ಮುರಿಯುವುದು ಬೇಡ ಎಂದು. ಆದರೆ ಶ್ರೀರಾಜರು ಇದನ್ನು ಸ್ವಲ್ಪ ತಮಾಷೆಯ ರೂಪದಿಂದ ನಿರೂಪಿಸಿದ್ದಾರೆ. ಈ ಕನ್ಯೆಯು ಕೃಷ್ಣನ ತೊಡೆಯಲ್ಲಿ ಸದಾ ಇರುವವಳು. ಒಳ್ಳೆಯ ಲಕ್ಷಣದಿಂದ ಕೂಡಿದ ಕನ್ಯೆ ಇವಳು. ಇವಳ ಸ್ತನಗಳು ಬಹಳ ಪುಷ್ಟಗಳಾಗಿವೆ. ಗಟ್ಟಿಯಾಗಿಯೂ ಇವೆ. ದಾಂಪತ್ಯಜೀವನದಲ್ಲಿ ಇಂತಹ ಕುಚಗಳನ್ನು ಪತಿಯಾದವನು ಏಕಾಂತದಲ್ಲಿ ಹಿಡಿಯುತ್ತಾನೆ. ಈ ಸಂದರ್ಭದಲ್ಲಿ ನವಗ್ರಹರು ಯಾರೂ ವಿಘ್ನಮಾಡದಿರಲಿ ಎಂಬ ಉದ್ದೇಶದಿಂದಲೋ ಎಂಬಂತೆ ಅವರಿಗೆ ಶಾಂತಿಯನ್ನು ಮಾಡಿಸಿದನು. ಅವರು ವಿಘ್ನವನ್ನಾದರೂ ಯಾಕೆ ಮಾಡುತ್ತಾರೆ? ಅಂದರೆ

ತಮಗೆ ಅವುಗಳನ್ನು ಹಿಡಿಯಲು ಆಗುವುದಿಲ್ಲವೆಂಬ ಮತ್ಸರದಿಂದ. ಯದ್ಯಪಿ ನವಗ್ರಹರಿಗೆ ಅಂತಹ ದುರಾಸೆ ಎಂದೂ ಬರುವುದಿಲ್ಲ. ಆದರೂ ಇದೂ ಒಂದು ಕುಚೋದ್ಯ. ಕೃಷ್ಣನ ದೃಷ್ಟಿಯಲ್ಲಿ ನವಗ್ರಹಶಾಂತಿಯು ಒಂದು ಕ್ಷುಲ್ಲಕ. ನಮ್ಮ ಜೀವನದಲ್ಲಿ ಮಾತ್ರ ಇಂತಹ ಶಾಂತಿಗಳಿಗೆ ಮಹತ್ವ ಬರುವುದು.

**ಸಂದೇಶ** : ಪತ್ನಿ ಜೊತೆಯಲ್ಲಿದ್ದರೂ ರಮಿಸುವ ಅದೃಷ್ಟ ಇಲ್ಲದಿರಬಹುದು. ಅದಕ್ಕಾಗಿ ಇಂತಹ ದೇವತೆಗಳ ಪ್ರತಿಮೆಗಳಲ್ಲಿ ದೇವರನ್ನು ಅರ್ಚಿಸಬೇಕು.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸರ್ಗಃ ಪಂಚದಶೋಮುದಾಮಯಮಭೂತ್ ಸ್ವರ್ಗೀಶ್ವರಾಣಾಂ ಕುಲೇ ॥ ೬೨ ॥**

**॥ ಇತಿ ಪಂಚದಶಃ ಸರ್ಗಃ ॥**

## ॥ ಅಥ ಷೋಡಶಃ ಸರ್ಗಃ ॥

**ಸ್ವಯಂವರ ಸಮುದ್ಯೋಗೇ ಸ್ವಯಂಭುಪ್ರಮುಖಾನ್ ಸುರಾನ್ ।**
**ಸಮಾಗತಾನ್ ಸಮೀಕ್ಷ್ಯೇತ್ಥಂ ಬಭಾಷೇ ರುಗ್ಮಿಣೀಂ ಸಖೀ ॥ ೧ ॥**

ಸ್ವಯಂವರ=ಸ್ವಯಂವರದ; ಸಮುದ್ಯೋಗೇ=ತಯಾರಾಗುತ್ತಿರಲು; ಸಮಾಗತಾನ್=ಬಂದಿರುವ; ಸ್ವಯಂಭು=ಬ್ರಹ್ಮನೇ; ಪ್ರಮುಖಾನ್=ಮೊದಲಾದ; ಸುರಾನ್=ದೇವತೆಗಳನ್ನು; ಸಮೀಕ್ಷ್ಯ=ನೋಡಿ; ಸಖೀ=ಗೆಳತಿಯು; ಇತ್ಥಂ=ಈ ರೀತಿಯಾಗಿ; ಬಭಾಷೇ=ಹೇಳಿದಳು.

ರುಗ್ಮಿಣಿಯ ಸ್ವಯಂವರದ ಪ್ರಕ್ರಿಯೆ ಆರಂಭವಾಗುತ್ತದೆ. ಈ ನಿಮಿತ್ತದಿಂದ ಶ್ರೀ ವಾದಿರಾಜರು ಹರಿಯ ಸರ್ವೋತ್ತಮತ್ವವನ್ನು ಸಾಧಿಸಲು ಹೊರಟಿದ್ದಾರೆ. ಸ್ವಯಂವರ ಮಂಟಪಕ್ಕೆ ಬ್ರಹ್ಮಾದಿ ಸಮಸ್ತದೇವತೆಗಳೂ ಬಂದಿದ್ದಾರೆ. ಇವರೆಲ್ಲರನ್ನೂ ರುಗ್ಮಿಣಿಯ ಗೆಳತಿಯು ನೋಡಿದ್ದಾಳೆ. ನೋಡಿ ರುಗ್ಮಿಣಿಯನ್ನು ಕುರಿತು ವಿವರಿಸುತ್ತಿದ್ದಾಳೆ. ಬುದ್ಧಿಯೇ ಗೆಳತಿಯ ಸ್ಥಾನದಲ್ಲಿ ಇದೆ. ಅಂದರೆ ರುಗ್ಮಿಣಿಯು ತನ್ನ ಮನದಿಂದ ವಿಚಾರ ಮಾಡಿದಳು ಎಂದರ್ಥ.

ಸಂದೇಶ : **ಯಾವುದೇ ಕೆಲಸವನ್ನು ವಿಚಾರಮಾಡದೆ ಮಾಡಬಾರದು.**

**ಕಲ್ಪಾದಿವಾರ್ಷು ಕಮನೀಯ ಫಣೀಂದ್ರತಲ್ಪೇ**
**ಲಕ್ಷ್ಮ್ಯಾ ಸಹಾದಿಪುರುಷಸ್ಯ ಕೃತಾಲಯಸ್ಯ ।**
**ಮುಕ್ತೌಘಸೇವಿತಪದಸ್ಯಕಿಲ ನಾಭಿದೇಶಾತ್**
**ಪದ್ಮಂ ಪುರಾಜನಿ ತತಃ ಸಖಿ ಪದ್ಮಯೋನಿಃ ॥ ೨ ॥**

ಪುರಾ=ಹಿಂದೆ; ಕಲ್ಪ=ಬ್ರಹ್ಮಕಲ್ಪದ; ಆದಿ=ಮೊದಲನ; ವಾರ್ಷು=ನೀರಿನಲ್ಲಿ; ಕಮನೀಯ=ಚಂದದ; ಫಣೀಂದ್ರ=ಶೇಷನ; ತಲ್ಪೇ=ಹಾಸಿಗೆಯಲ್ಲಿ; ಲಕ್ಷ್ಮ್ಯಾ=ರಮೆಯಿಂದ; ಸಹ=ಕೂಡಿಕೊಂಡು; ಕೃತ=ಮಾಡಿದ; ಆಲಯಸ್ಯ=ಮನೆವುಳ್ಳ; ಆದಿ=ಮೊದಲಿನ; ಪುರುಷಸ್ಯ=ಪುರುಷನ; ಮುಕ್ತ=ಮುಕ್ತರ; ಓಘ=ಸಮೂಹದಿಂದ; ಸೇವಿತ=ಸೇವಿಸಲ್ಪಡುವ; ಪದಸ್ಯ=ಚರಣವುಳ್ಳ ಹರಿಯ; ನಾಭಿ=ಹೊಕ್ಕಳನ; ದೇಶಾತ್=ಪ್ರದೇಶದಿಂದ; ಪದ್ಮಂ=ಕಮಲವು; ಅಜನಿ ಕಿಲ=ಹುಟ್ಟಿತಷ್ಟೇ; ಸಖಿ=ಗೆಳತಿಯೇ; ತತಃ=ಅದರಿಂದ; ಪದ್ಮಯೋನಿಃ=ಬ್ರಹ್ಮನು; ಅಜನಿ=ಹುಟ್ಟಿದನು.

ಆರಂಭದಲ್ಲಿ ಚತುರ್ಮುಖನ ಬಗ್ಗೆ ವಿಮರ್ಶೆ ಮಾಡುತ್ತಾಳೆ. ಈ ಸೃಷ್ಟಿಯ

ಆದಿಯಲ್ಲಿ ಎಲ್ಲಾ ಕಡೆಯೂ ನೀರು ಆವರಿಸಿತ್ತು. ಆ ನೀರಿನಲ್ಲಿ ಒಂದು ದೊಡ್ಡ ಸರ್ಪವು ಇತ್ತು. ಆ ಸರ್ಪದ ಮೇಲೆ ಒಬ್ಬ ಮಲಗಿದ್ದನು. ಇವನು ಉತ್ಪತ್ತಿರಹಿತನು. ಇವನ ಜೊತೆಗೆ ರಮೆಯೂ ಇದ್ದಳು. ಇವನ ಸುತ್ತಲೂ ಮುಕ್ತರಾದ ಜೀವರು ಈತನ ಸೇವೆಯನ್ನು ಮಾಡಿಕೊಂಡಿದ್ದರು. ಈತನ ಹೊಕ್ಕಳಿನಿಂದ ಒಂದು ಕಮಲವು ಉದಿಸಿತು. ಈ ಕಮಲದಿಂದ ಈ ಚತುರ್ಮುಖನೆಂಬ ಹುಡುಗನು ಉದ್ಭವಿಸಿದನು. ಈ ರೀತಿಯಾಗಿ ಪದ್ಮದಿಂದ ಉದಿಸಿದ್ದರಿಂದ ಈತನನ್ನು ಪದ್ಮಯೋನಿ ಎಂದೂ ಕರೆಯುವರು.

**ಆತ್ಮಾಭಿಧಃ ಸ್ವಯಮಿತಿ ಪ್ರತಿಥೋ ಹ್ಯವಾಚ್ಯಃ**
**ತಾತೋಽಸ್ಯ ಯನ್ಮುರರಿಪುಸ್ತದಮುಂ ಮುನೀಂದ್ರಾಃ ।**
**ಖ್ಯಾತ್ಯಾ ಸ್ವಯಂಭುವಮಜಂ ವಿದುರಾತ್ಮ ಯೋನಿಂ**
**ಚೇತಸ್ಥಿತಶ್ರುತಿತತಿಂ ಸಖಿ ವೇದಗರ್ಭಮ್ ॥ ೩ ॥**

ಯತ್=ಯಾವ ಕಾರಣದಿಂದ; ಅಸ್ಯ=ಇವನ; ತಾತಃ=ತಂದೆಯಾದ; ಮುರ=ಮುರಾಸುರನ; ರಿಪುಃ=ವೈರಿಯಾದ ಹರಿಯು; ಆತ್ಮಾ=ಆತ್ಮ ಎಂಬ; ಅಭಿಧಃ=ಹೆಸರುಳ್ಳವನೋ; ಸ್ವಯಂ=ಸ್ವಯಂ ಎಂಬ ಶಬ್ದದಿಂದ; ಪ್ರತಿಥಃ=ಪ್ರಸಿದ್ಧನೋ; ಅ=ಅಕಾರದಿಂದ; ವಾಚ್ಯಃ=ಹೇಳಲ್ಪಡುವವನೋ; ತತ್=ಆದ್ದರಿಂದ; ಮುನೀಂದ್ರಾಃ=ಋಷಿ ಶ್ರೇಷ್ಠರು; ಖ್ಯಾತ್ಯಾ=ಹೆಸರಿನಿಂದ; ಸ್ವಯಂಭುವಂ=ಸ್ವಯಂಭುವನ್ನಾಗಿ; ಅಜಂ=ಅಜನನ್ನಾಗಿ; ಆತ್ಮಯೋನಿಂ=ಆತ್ಮಯೋನಿಯನ್ನಾಗಿ; ಚೇತಃ=ಮನದಲ್ಲಿ; ಸ್ಥಿತ=ಇರುವ; ಶ್ರುತಿ=ವೇದಗಳ; ತತಿಂ=ಸಮೂಹವುಳ್ಳವನನ್ನು; ವೇದಗರ್ಭಂ=ವೇದಗರ್ಭನನ್ನಾಗಿ; ಸಖಿ=ಗೆಳತಿಯೇ; ವಿದುಃ=ತಿಳಿಯುತ್ತಾರೆ.

ರುಗ್ಮಿಣಿಯು ತನ್ನ ಗೆಳತಿಯಲ್ಲಿ ಕೇಳುತ್ತಾಳೆ– ಎಲೋ ಸಖಿಯೇ, ನೀನು ಬ್ರಹ್ಮನು ಕಮಲದಿಂದ ಹುಟ್ಟಿದನೆಂದು ಹೇಳುತ್ತಿ. ಆದರೆ ಆತನಿಗಿರುವ ಕೆಲವು ಹೆಸರುಗಳು ಆತನಿಗೆ ಉತ್ಪತ್ತಿ ಇಲ್ಲವೆಂದು ಹೇಳುತ್ತವೆ. ಆ ಹೆಸರುಗಳು ಯಾವುವು? ಎಂದರೆ ಆತ್ಮ–ಯೋನಿ, ಸ್ವಯಂಭೂ, ಅಜ ಇತ್ಯಾದಿಗಳು. ಆತ್ಮಯೋನಿ ಅಂದರೆ ತನಗೆ ತಾನೇ ಕಾರಣ. ತಾನು ಇನ್ನೊಂದರಿಂದ ಹುಟ್ಟಿದ್ದಲ್ಲ ಎಂದು ಅರ್ಥ. ಹೀಗಿರುವಾಗ ಕಮಲದಿಂದ ಈತನ ಉತ್ಪತ್ತಿಯಾಗಲು ಹೇಗೆ ಸಾಧ್ಯ? ಸ್ವಯಂಭೂ ಶಬ್ದಕ್ಕೆ ಇದೇ ಅರ್ಥ. ಸ್ವಯಂ ತಾನಾಗಿಯೇ ಭೂ=ಆಗುತ್ತಾನೆ. ಇನ್ನೊಂದರ ಅಪೇಕ್ಷೆ ಇಲ್ಲದೆ ಕಾಣಿಸಿಕೊಳ್ಳುವವನು ಎಂದು ಅರ್ಥ. ಅಜ– ನ ಜಾಯತೇ –ಹುಟ್ಟುವುದಿಲ್ಲ ಎಂಬರ್ಥದಲ್ಲಿ ಅಜ ಎಂಬ ಶಬ್ದ ಇರುವುದು. ಈತನು ಕಮಲದಲ್ಲಿ ಹುಟ್ಟಿದ್ದರೆ ಅಜ ಎಂಬ ಹೆಸರು ಈತನಿಗೆ ಹೇಗೆ?

ಸಖಿಯ ಉತ್ತರ– ಆತ್ಮ, ಸ್ವಯಂ, ಅ –ಇವುಗಳು ಭಗವಂತನ ಹೆಸರುಗಳು.

ದೇವರು ಸರ್ವತ್ರ ವ್ಯಾಪ್ತ ಹಾಗೂ ಸರ್ವ ತಿಳುವಳಿಕೆ ಉಳ್ಳವನು. ಆದ್ದರಿಂದ ದೇವರಿಗೆ ಆತ್ಮ ಎಂದು ಹೆಸರು. ಯೋನಿ ಎಂದರೆ ಕಾರಣ. ಆತ್ಮಯೋನಿ ಅಂದರೆ ದೇವರೇ ಕಾರಣನಾಗಿ ಉಳ್ಳವ, ಎಂದರೆ ದೇವರಿಂದ ಹುಟ್ಟಿದವ ಎಂದು ಅರ್ಥ ಹೊರತು ತನಗೆ ತಾನೇ ಕಾರಣ ಎಂದರ್ಥವಲ್ಲ. ಸ್ವಯಂ ಅಂದರೆ ಸ್ವ=ಸ್ವತಂತ್ರವಾಗಿ 'ಯ'=ಗಮನವುಳ್ಳವ ಎಂದರ್ಥ. ನಮ್ಮ ಎಲ್ಲರ ಚಟುವಟಿಕೆಯು ಅಸ್ವತಂತ್ರ, ದೇವರದ್ದು ಮಾತ್ರ ಸ್ವತಂತ್ರ, ಆದ್ದರಿಂದ ಸ್ವಯಂ ಅಂದರೆ ದೇವರು ಎಂದು ಅರ್ಥ. ಇಂತಹ ಸ್ವಯಂಶಬ್ದವಾಚ್ಯನಾದ ದೇವರಿಂದ ಭವತಿ=ಹುಟ್ಟುತ್ತಾನೆ. ಆದ್ದರಿಂದ ಸ್ವಯಂಭೂ ಎಂದು ಚತುರ್ಮುಖನ ಹೆಸರು. ಹೊರತು ತಾನಾಗಿಯೇ ಕಾಣಿಸಿಕೊಳ್ಳುವವನು ಎಂದರ್ಥವಲ್ಲ. ಅಕಾರಕ್ಕೂ ದೇವರು ಎಂದು ಅರ್ಥ. 'ಅ ಇತಿ ಬ್ರಹ್ಮ' ಎಂಬ ವೇದವು ಇದನ್ನು ತಿಳಿಸುತ್ತದೆ. ಅಜ ಎಂದರೆ ಅಕಾರ ಎಂದು ಹೆಸರುಳ್ಳ ದೇವರಿಂದ ಹುಟ್ಟಿದವನು ಎಂದರ್ಥ ಹೊರತು ಹುಟ್ಟು ಇಲ್ಲದವನು ಎಂಬ ಅರ್ಥದಲ್ಲಿ ಅಜ ಎಂಬ ಹೆಸರು ಬ್ರಹ್ಮನಿಗಿಲ್ಲ. ಈ ಹುಡುಗನ ಯೋಗ್ಯತೆಗನುಸಾರವಾಗಿ ಬಹಳ ವೇದಗಳನ್ನು ಈತನು ಸದಾ ಮನನ ಮಾಡುತ್ತಲೇ ಇರುತ್ತಾನೆ. ಆದುದರಿಂದ ಈತನು ವೇದಗರ್ಭನೂ ಹೌದು. ವೇದಗಳನ್ನು ತನ್ನ ಗರ್ಭದಲ್ಲಿ ಅಂದರೆ ಮನದಲ್ಲಿ ಇಟ್ಟುಕೊಂಡವನು.

ಸಂದೇಶ : **ಶಬ್ದಗಳಿಂದ ಇತರ ದೇವತೆಗಳನ್ನು ಕರೆಯುವಾಗ ಬಹಳ ಎಚ್ಚರಿಕೆ ಬೇಕು. ಶಾಸ್ತ್ರದ ಹಿನ್ನೆಲೆ ಬೇಕು.**

**ಮಹೋರ್ಮಿಸಂಘಾತ ಶತಾತತಾಂಭಸ್ಯ ದೃಷ್ಟಸದ್ವಿಷ್ಟರ ಪದ್ಮಮೂಲಃ ।**
**ವಿಧಿಜ್ಞೋ ವಿಜಿತಾಕ್ಷವೃತ್ತಿಸ್ತಪಃ ಸ ತೇಪೇ ಪಿತರಂ ದಿದೃಕ್ಷುಃ ॥ ೪ ॥**

ಮಹ=ದೊಡ್ಡದಾದ; ಊರ್ಮಿ=ತೆರೆಗಳ; ಸಂಘಾತ=ಸಮೂಹಗಳ; ಶತ= ನೂರರಿಂದ; ಆತತ=ಹಬ್ಬಿದ; ಅಂಭಸಿ=ನೀರಲ್ಲಿ; ಅದೃಷ್ಟ=ಕಾಣದಿರುವ; ಸತ್=ಒಳ್ಳೆಯ; ವಿಷ್ಟರ=ಪೀಠವಾದ; ಪದ್ಮ=ಕಮಲದ; ಮೂಲಃ=ಮೂಲವುಳ್ಳ; ವಿಧಿ=ನಿಯಮಗಳನ್ನು; ಜ್ಞಃ=ತಿಳಿದಿರುವ; ವಿಜಿತ=ಗೆದ್ದಿರುವ; ಅಕ್ಷ=ಇಂದ್ರಿಯಗಳ; ವೃತ್ತಿ=ಕೆಲಸವುಳ್ಳ; ಸಃ=ಆ; ವಿಧಿಃ=ಬ್ರಹ್ಮನು; ಪಿತರಂ=ತಂದೆಯನ್ನು; ದಿದೃಕ್ಷುಃ=ಕಾಣುವ ಸಲುವಾಗಿ; ತಪಃ=ತಪಸ್ಸನ್ನು; ತೇಪೇ=ಮಾಡಿದನು.

ಪ್ರಳಯಕಾಲದ ನೀರು. ಅದರಲ್ಲಿ ಒಂದರ ಹಿಂದೆ ಒಂದರಂತೆ ಬರುವ ನೂರಾರು ತೆರೆಗಳು. ದೃಷ್ಟಿ ಹಾಯಿಸಿದಷ್ಟು ದೂರದ ತನಕ ನೀರು. ಈ ನೀರಲ್ಲಿ ಒಂದು ಕಮಲ. ಈ ಕಮಲವೇ ಮಣೆಯಂತೆ. ಇದರಲ್ಲಿ ಬ್ರಹ್ಮನು ಕುಳಿತಿದ್ದಾನೆ. ಈತನಿಗೆ ಈ ಪದ್ಮ ಎಲ್ಲಿಂದ ಬಂತು ಎಂಬುದು ತಿಳಿದಿಲ್ಲ. ಹಾಗೆಯೇ ಈತನಿಗೆ ಕಾರಣನಾದವನೂ ಕಾಣುತ್ತಿಲ್ಲ. ಇದನ್ನು ತಿಳಿಯುವ ಆಸೆಯುಂಟಾಯಿತು ಈತನಿಗೆ. ಯಾವ ಕೆಲಸವನ್ನು ಹೇಗೆ ಮಾಡಬೇಕೆಂಬ ತಿಳುವಳಿಕೆ ಈತನಿಗೆ ಚೆನ್ನಾಗಿದೆ. ಒಂದು ಸಾಧಿಸುವ ಆಸೆ

ಉಂಟಾದರೆ ಅದು ಕೈಗೂಡದೆ ಮಧ್ಯದಲ್ಲಿ ನಿಲ್ಲಿಸುವುದಿಲ್ಲ. ಇಂತಹ ಇಂದ್ರಿಯನಿಗ್ರಹ ಈತನಿಗಿದೆ. ತನ್ನ ಮೂಲವನ್ನು ತಿಳಿಯಲು ಬ್ರಹ್ಮನು ತಪಸ್ಸಿಗೆ ಆರಂಭಿಸಿದನು. ಈ ಹುಡುಗನಿಗೆ ಅಜ್ಞಾನ ಇದೆ ಎಂದಾಯಿತು. ಹಾಗೆಯೇ ತಪಸ್ಸುಮಾಡಲು ಆರಂಭಿಸಿದ್ದರಿಂದ ಸಾಧಿಸತಕ್ಕದ್ದು ಇನ್ನೂ ಇದೆ ಎಂದಾಯಿತು.

<u>ಸಂದೇಶ</u> : **ದೇವರನ್ನು ಇಂದ್ರಿಯಗಳಾಗಲೀ ಯುಕ್ತಿಗಳಾಗಲೀ ತಿಳಿಸುವುದಿಲ್ಲ; ತಪಸ್ಸು ಮಾತ್ರ ತಿಳಿಸುತ್ತದೆ. ತಪಸ್ಸು=ಸ್ವಾಧ್ಯಾಯಪ್ರವಚನಗಳು. ಇಂತಹ ತಪಸ್ಸಿಗೆ ಮಾತ್ರ ದೇವರು ಒಲಿಯುತ್ತಾನೆ.**

**ಅಥಾಂಬುಕಲ್ಲೋಲವಿಲೋಲಡೋಲಾಂತರಸ್ಥನಾಗಾಧಿಪಭೋಗಶಯ್ಯಾಮ್ ।**
**ಫಣಾಸಹಸ್ರಾಮಲರತ್ನರಶ್ಮಿತೃಣೀಕೃತಾರ್ಕೋಡುಪಲಕ್ಷಲಕ್ಷ್ಮೀಮ್ ॥ ೫ ॥**

ಅಥ=ಅನಂತರ; ಫಣ=ಹೆಡೆಗಳ; ಸಹಸ್ರಂ=ಸಾವಿರಗಳ; ಅಮಲ=ಸ್ವಚ್ಛವಾದ; ರತ್ನ=ಮಣಿಗಳ; ರಶ್ಮಿ=ಕಾಂತಿಯಿಂದ; ತೃಣೀಕೃತ=ತಿರಸ್ಕರಿಸಲ್ಪಟ್ಟ; ಅರ್ಕ=ಸೂರ್ಯರ; ಉಡುಪ=ಚಂದ್ರರ; ಲಕ್ಷ=ನೂರುಸಾವಿರದ; ಲಕ್ಷ್ಮೀಂ=ಕಾಂತಿವುಳ್ಳ; ಅಂಬು=ನೀರಿನ; ಕಲ್ಲೋಲ=ತೆರೆಗಳೆಂಬ; ವಿಲೋಲ=ಅಲುಗಾಡುವ; ಡೋಲಾ=ತೊಟ್ಟಿಲಿನ; ಅಂತರ=ಒಳಗೆ; ಸ್ಥ=ಇರುವ; ನಾಗ=ಸರ್ಪಗಳಿಗೆ; ಅಧಿಪ=ಒಡೆಯನ; ಭೋಗ=ಶರೀರವೆಂಬ; ಶಯ್ಯಾಂ=ಹಾಸಿಗೆಯನ್ನು ನೋಡಿದನು.

ಬ್ರಹ್ಮನು ತಪಸ್ಸಿನ ಫಲವಾಗಿ ಆ ಪ್ರಳಯದ ನೀರಿನಲ್ಲಿ ಶೇಷನನ್ನು ಕಂಡನು. ಶೇಷನಿಗೆ ಸಾವಿರ ಹೆಡೆಗಳು. ಆ ಹೆಡೆಗಳಲ್ಲಿ ಸಾವಿರ ಮಣಿಗಳು. ಆ ಮಣಿಗಳಿಂದ ಪ್ರಖರವಾದ ಬೆಳಕು ಹೊರಹೊಮ್ಮುತ್ತಿತ್ತು. ಒಂದುಲಕ್ಷ ಸೂರ್ಯಚಂದ್ರರ ಜೊತೆಯಾದ ಪ್ರಕಾಶವನ್ನು ಈ ಮಣಿಗಳ ಪ್ರಕಾಶವು ಮೀರುತ್ತಿತ್ತು. ಪ್ರಳಯದ ನೀರಿನ ತೆರೆಗಳು ತೊಟ್ಟಿಲಿನಂತೆ ಅತ್ತಿತ್ತ ಓಲಾಡುತ್ತಿತ್ತು. ಇಂತಹ ತೆರೆಗಳಲ್ಲಿ ಶೇಷನ ದೇಹವು ಹಾಸಿಗೆಯಂತೆ ಇತ್ತು.

**ಅಪಶ್ಯದಸ್ಯಾಂ ಸಹ ಸಿಂಧುಪುತ್ರ್ಯಾ ಶಯಾನಮಂಭೋಜ ವಿಶಾಲ ನೇತ್ರಮ್ ।**
**ಮನೋಜ್ಞದೋರ್ದಂಡಸಹಸ್ರಭಾಸಂ ಪ್ರವಾಲಮೃದ್ವಂಘ್ರ್ಯರುಣೀಕೃತಾಶಮ್ ॥ ೬ ॥**

ಅಸ್ಯಾಂ=ಇದರಲ್ಲಿ; ಸಿಂಧು=ಸಮುದ್ರದ; ಪುತ್ರ್ಯಾ=ಮಗಳಿಂದ; ಸಹ=ಕೂಡಿಕೊಂಡು; ಶಯಾನಂ=ಮಲಗಿರುವ; ಅಂಭೋಜ=ಕಮಲದಂತೆ; ವಿಶಾಲ=ಅಗಲವಾದ; ನೇತ್ರಂ=ಕಣ್ಣುಳ್ಳ; ಮನೋಜ್ಞ=ಚಂದದ; ದೋಃ=ಕೈಗಳೆಂಬ; ದಂಡ=ಕೋಲುಗಳ; ಸಹಸ್ರ=ಸಾವಿರದ; ಭಾಸಂ=ಕಾಂತಿವುಳ್ಳ; ಪ್ರವಾಲ=ಚಿಗುರಿನಂತೆ; ಮೃದು=ಮೆತ್ತಗಿನ; ಅಂಘ್ರಿ=ಪಾದಗಳಿಂದ; ಅರುಣೀಕೃತ=ಕೆಂಪಾಗಿ ಮಾಡಲ್ಪಟ್ಟ; ಆಶಂ=ದಿಕ್ಕುಳ್ಳ.

ಬ್ರಹ್ಮನು ಈ ಹಾಸಿಗೆಯಲ್ಲಿ ದೇವರನ್ನು ಕಂಡನು. ದೇವರ ಜೊತೆಗೆ ರಮೆಯೂ

ಇದ್ದಳು. ದೇವರು ಮಲಗಿದ್ದನು. ನಿದ್ದೆ ಮಾಡುತ್ತಿರಲಿಲ್ಲ. ಕಮಲದಂತೆ ವಿಶಾಲವಾದ ಕಣ್ಣುಗಳು ಅರಳಿದ್ದವು. ಸಾವಿರತೋಳುಗಳು ಆತನಿಗಿದ್ದವು. ಅವುಗಳು ಬಹಳ ಆಕರ್ಷಣೀಯವಾಗಿದ್ದವು. ಪಾದಗಳು ಮೃದುವಾಗಿದ್ದವು. ಗಿಡಗಳ ಚಿಗುರೆಲೆಗಳಿಗಿಂತಲೂ ಮೆತ್ತಗೆ, ಜೊತೆಗೆ ಕೆಂಪಾಗಿಯೂ ಇದ್ದವು. ಪಾದಗಳು ಮಾತ್ರ ಕೆಂಪಲ್ಲ. ಇಂತಹ ಪಾದಗಳಿಂದ ಹೊರಟ ಪ್ರಭೆಯು ಎಲ್ಲಾ ಕಡೆ ಹರಡಿತ್ತು. ಇದರಿಂದಾಗಿ ಎಲ್ಲಾ ಕಡೆಯೂ ಕೆಂಪುಬಣ್ಣವೇ ಕಾಣುತ್ತಿತ್ತು.

**ಸುವರ್ಣವರ್ಣಾಂಬರಶೋಭಿ ಮಧ್ಯಂ ಅಗಣ್ಯಲಾವಣ್ಯಸಮುದ್ರಹೃದ್ಯಮ್ ।**
**ವಿಶಾಲನೀಲಾಚಲಕಲ್ಪಮಲ್ಪಸ್ಮಿತಾನನಾಧಃ ಕೃತಚಂದ್ರದರ್ಪಮ್ ॥ ೭ ॥**

ಸುವರ್ಣ=ಬಂಗಾರದ; ವರ್ಣ=ಬಣ್ಣವುಳ್ಳ; ಅಂಬರ=ಬಟ್ಟೆಯಿಂದ; ಶೋಭಿ=ಶೋಭಿಸುವ; ಮಧ್ಯಂ=ಮಧ್ಯವುಳ್ಳ; ಅಗಣ್ಯ=ಲೆಕ್ಕವಿಲ್ಲದ; ಲಾವಣ್ಯ=ಸೌಂದರ್ಯದಿಂದ; ಸಮುದ್ರ=ಸಮುದ್ರದಂತೆ; ಹೃದ್ಯಂ=ಮನೋಹರನಾದ; ವಿಶಾಲ=ವಿಸ್ತಾರವಾದ; ನೀಲ=ನೀಲಬಣ್ಣದ; ಅಚಲಕಲ್ಪಂ=ಬೆಟ್ಟದಂತಿರುವ; ಅಲ್ಪ=ಸ್ವಲ್ಪ; ಸ್ಮಿತ=ನಗುವುಳ್ಳ; ಆನನ=ಮುಖದಿಂದ; ಅಧಃಕೃತ=ತಿರಸ್ಕರಿಸಲ್ಪಟ್ಟ; ಚಂದ್ರ=ಚಂದ್ರನ; ದರ್ಪಂ=ಅಹಂಕಾರವುಳ್ಳ.

ನಾರಾಯಣನು ಪೀತಾಂಬರವನ್ನು ಧರಿಸಿದ್ದಾನೆ. ಊಹಿಸಲು ಸಾಧ್ಯವಿಲ್ಲದ ಸೌಂದರ್ಯದಿಂದ ಸಮುದ್ರದಂತೆ ಇದ್ದನು. ಈತನ ಮೈಬಣ್ಣ ನೀಲ. ಇದೊಂದು ದೇವರ ವಿರಾಟ್‌ರೂಪ. ಒಂದು ದೊಡ್ಡ ನೀಲ ಪರ್ವತದಂತೆ ತೋರುತ್ತಿದ್ದಾನೆ. ಮುಖದಲ್ಲಿ ಒಂದು ಮಂದಹಾಸ. ಚಂದ್ರನಿಗೆ ಒಂದು ರೀತಿಯ ಅಹಂಕಾರ ಇತ್ತು. ತಾನೇ ಚಂದ. ನನ್ನಿಂದಾಗಿಯೇ ಜನರಿಗೆ ಒಂದು ರೀತಿಯ ನೆಮ್ಮದಿ ಎಂದು. ಆದರೆ ದೇವರ ನಗುಮುಖವನ್ನು ಕಂಡಾಗ ಚಂದ್ರನ ಎಲ್ಲಾ ಅಹಂಕಾರವು ಇಳಿದುಹೋಗಿತ್ತು. ಇಂತಹ ದೇವರನ್ನು ಬ್ರಹ್ಮನು ಕಂಡನು.

**ಪರಿಸ್ಫುರತ್ಕುಂಡಲಹಾರಕಾಂಚೀಕಿರೀಟಮುದ್ರಾಂಗದನೂಪುರಾದ್ಯೈಃ ।**
**ವಿರಾಜಿತಂ ತಿಗ್ಮಮರೀಚಿರೋಚಿಃ ಶರೀರಸಂಭಾಸಿತಸರ್ವದೇಶಮ್ ॥ ೮ ॥**

ಪರಿಸ್ಫುರತ್=ಶೋಭಿಸುವ; ಕುಂಡಲ=ಕಿವಿಯ ಆಭರಣ; ಹಾರ=ಸರಗಳು; ಕಾಂಚೀ=ಉಡುದಾರ; ಕಿರೀಟ=ಕಿರೀಟವು; ಮುದ್ರಾ=ಉಂಗುರವು; ಅಂಗದ=ಬಾಹುಭೂಷಣ; ನೂಪುರ=ಕಾಲಿನಗೆಜ್ಜೆ; ಆದ್ಯೈಃ=ಮೊದಲಾದವುಗಳಿಂದ; ವಿರಾಜಿತಂ=ಶೋಭಿಸುವ; ತಿಗ್ಮ=ಬಿಸಿಯಾದ; ಮರೀಚಿ=ಕಿರಣಗಳಿಂದ; ರೋಚಿಃ=ಶೋಭಿಸುವ; ಶರೀರ=ದೇಹದಿಂದ; ಸಂಭಾಸಿತ=ಪ್ರಕಾಶಿಸುವ; ಸರ್ವ=ಎಲ್ಲಾ; ದೇಶಂ=ಪ್ರದೇಶವುಳ್ಳ.

ದೇವರ ದೇಹದ ನಾನಾ ಭಾಗಗಳಲ್ಲಿ ಯೋಗ್ಯಗಳಾದ ಆಭರಣಗಳು ಶೋಭಿಸುತ್ತವೆ. ಸೂರ್ಯನಂತೆ ಪ್ರಖರವಾದ ಪ್ರಕಾಶವು ದೇಹದಿಂದ ಹೊರಹೊಮ್ಮುತ್ತಿದೆ. ಇದರಿಂದ

ಎಲ್ಲಾ ಕಡೆಯು ಬಹಳ ಪ್ರಕಾಶ ಹರಡಿದೆ. ಇಂತಹ ದೇವರ ದರ್ಶನವು ಬ್ರಹ್ಮನಿಗೆ ಆಯಿತು.

**ವಿಶಾಲವಕ್ಷಃಸ್ಥಲಶೋಭಿರತ್ನಂ ವಿಮುಕ್ತಶಕ್ರಾರ್ಕವಿರಿಂಚಮುಖ್ಯೈಃ ।**
**ವಿಚಿತ್ರಭೂಷಾವಲಿಭೂಷಿತಾಂಗೈಃ ವಿವೃದ್ಧಭಕ್ತ್ಯಾಽವನತೈಃ ಪರೀತಮ್ ॥ ೯ ॥**

ವಿಶಾಲ=ವಿಶಾಲವಾದ; ವಕ್ಷಃಸ್ಥಲ=ಎದೆಯಲ್ಲಿ; ಶೋಭಿ=ಶೋಭಿಸುವ; ರತ್ನಂ=ರತ್ನವುಳ್ಳ; ವಿಚಿತ್ರ=ನಾನಾ ರೀತಿಯ; ಭೂಷಾ=ಆಭರಣಗಳ; ಆವಲಿ= ಸಮೂಹಗಳಿಂದ; ಭೂಷಿತ=ಅಲಂಕರಿಸಲ್ಪಟ್ಟ; ಅಂಗೈಃ=ಅವಯವಗಳುಳ್ಳ; ವಿವೃದ್ಧ=ಹೆಚ್ಚಾಗಿ; ಭಕ್ತ್ಯಾ=ಭಕ್ತಿಯಿಂದ; ಅವನತೈಃ=ಬಗ್ಗಿದ; ವಿಮುಕ್ತ=ಮುಕ್ತರಾದ; ಶಕ್ರ=ಇಂದ್ರನು; ಅರ್ಕ=ಸೂರ್ಯನು; ವಿರಿಂಚ=ಬ್ರಹ್ಮನು; ಮುಖ್ಯೈಃ=ಮೊದಲಿಗರಿಂದ; ಪರೀತಂ=ಕೂಡಿರುವ.

ದೇವರ ಎದೆಯಲ್ಲಿ ಕೌಸ್ತುಭಮಣಿಯು ಶೋಭಿಸುತ್ತಿದೆ. ದೇವರ ಸುತ್ತಲೂ ಮುಕ್ತರಾದ ಬ್ರಹ್ಮಾದಿದೇವತೆಗಳು ಇದ್ದಾರೆ. ಭಕ್ತಿಯಿಂದ ಬಹಳ ವಿನೀತರಾಗಿದ್ದಾರೆ. ಇವರೂ ಕೂಡಾ ನಾನಾ ರೀತಿಯ ಆಭರಣಗಳಿಂದ ಅಲಂಕೃತರಾಗಿದ್ದಾರೆ.

**ಉನ್ನಾಲಾಬ್ಜವರಾತಪತ್ರಮಹಿರಾಡುನ್ನಮ್ರಸಿಂಹಾಸನಮ್**
**ಸನ್ನದ್ಧೋರ್ಜಿತಮುಕ್ತಭೃತ್ಯನಿಕರಂ ಮಾನ್ಯೋರ್ಮಿಸಚ್ಚಾಮರಮ್ ।**
**ತನ್ನಾದಾಭಿಧದುಂದುಭಿಂ ಶುಭಯಶಶ್ಚಿನ್ನೋಕ್ತಿಭಿರ್ಬಂದಿವತ್**
**ತನ್ನಾರಾಯಣಚಕ್ರವರ್ತಿನಮಸೌ ಉನ್ಮೀಲಿತಾಕ್ಷಂ ವ್ಯಧಾತ್ ॥ ೧೦ ॥**

ಅಸೌ=ಬ್ರಹ್ಮನು; ಉತ್=ಶ್ರೇಷ್ಠವಾದ; ನಾಲ=ದಂಟು ಉಳ್ಳ; ಅಬ್ಜ=ಕಮಲವೆಂಬ; ವರ=ಉತ್ತಮವಾದ; ಆತಪತ್ರಂ=ಕೊಡೆವುಳ್ಳ; ಅಹಿರಾಟ್=ಶೇಷನೆಂಬ; ಉನ್ನಮ್ರ=ಎತ್ತರವಾಗಿ ಬಗ್ಗಿದ; ಸಿಂಹಾಸನಮ್=ಸಿಂಹಾಸನವುಳ್ಳ; ಸನ್ನದ್ಧ=ತಯಾರಾದ; ಊರ್ಜಿತ=ಶ್ರೇಷ್ಠರಾದ; ಮುಕ್ತ=ಮುಕ್ತರಾದ; ಭೃತ್ಯ=ಸೇವಕರ; ನಿಕರಂ=ಸಮೂಹವುಳ್ಳ; ಮಾನ್ಯ=ಯೋಗ್ಯವಾದ; ಊರ್ಮಿ=ತೆರೆಗಳೆಂಬ; ಸತ್=ಒಳ್ಳೆಯ; ಚಾಮರಂ=ಚಾಮರವುಳ್ಳ; ತತ್=ಆ ತೆರೆಗಳ; ನಾದ=ಧ್ವನಿ ಎಂಬ; ಅಭಿಧ=ಹೆಸರುಳ್ಳ; ದುಂದುಭಿಂ=ವಾದ್ಯವುಳ್ಳ; ತತ್=ಆ; ನಾರಾಯಣ=ದೇವರೆಂಬ; ಚಕ್ರವರ್ತಿನಂ=ಚಕ್ರವರ್ತಿಯನ್ನು; ಬಂದಿವತ್=ಹೊಗಳುಭಟರಂತೆ; ಶುಭ=ಒಳ್ಳೆಯ; ಯಶಃ=ಕೀರ್ತಿಗಳೆಂಬ; ಚಿಹ್ನ=ಗುರುತುಳ್ಳ; ಉಕ್ತಿಭಿಃ=ಮಾತುಗಳಿಂದ; ಉನ್ಮೀಲಿತಾಕ್ಷಂ=ಕಣ್ಣುತೆರೆದವನನ್ನಾಗಿ; ವ್ಯಧಾತ್=ಮಾಡಿದನು.

ನಾರಾಯಣನು ಚಕ್ರವರ್ತಿಯಾಗಿ ಬ್ರಹ್ಮನಿಗೆ ಕಂಡನು. ಚಕ್ರವರ್ತಿಗೆ ಒಂದು ಛತ್ರ, ಒಂದು ಸಿಂಹಾಸನ, ಸೇವಕರು, ಚಾಮರ, ವಾದ್ಯ, ಹೊಗಳುಭಟರು ಇರುತ್ತಾರೆ. ನಾರಯಣನಿಗೂ ಇವೆಲ್ಲಾ ಇವೆ. ಈತನ ನಾಭಿಯಿಂದ ಒಂದು ಕಮಲವು ಮೇಲ್ಮುಖವಾಗಿ ಹೊರಟಿದೆ. ಅದು ಅರಳಿದೆ. ಛತ್ರದಂತೆ ತೋರುತ್ತಿದೆ. ಶೇಷನ ಶರೀವು ಕುಂಡಲಾಕಾರವಾಗಿ

ಇದೆ. ಎತ್ತರವಾಗಿಯೂ ಇದೆ. ದೇವರ ಹಿಂಬದಿಯಲ್ಲಿ ಹೆಡೆಯನ್ನು ಶೇಷನು ಅರಳಿಸಿದ್ದಾನೆ. ತಲೆಭಾಗವು ಸ್ವಲ್ಪ ಮುಂದೆ ಬಾಗಿದೆ. ಇದು ಒಂದು ಸಿಂಹಾಸನದಂತೆ ತೋರುತ್ತಿದೆ. ಮುಕ್ತರಾದ ಬ್ರಹ್ಮಾದಿದೇವತೆಗಳು ಆತನ ಸುತ್ತಮುತ್ತ ಇದ್ದಾರೆ. ವೈಷ್ಣವಚಿಹ್ನೆಯನ್ನು ಧರಿಸಿದ್ದಾರೆ. ದೇವರ ಆಜ್ಞೆಗಾಗಿ ಕಾತರರಾಗಿದ್ದಾರೆ. ಇವರೇ ದೇವರಿಗೆ ಸೇವಕರು. ಬಿಳಿಯಾದ ತೆರೆಗಳು ಅತ್ತಿತ್ತ ಸುಳಿಯುತ್ತಿವೆ. ಇವುಗಳೇ ಚಾಮರಗಳು. ತೆರೆಗಳು ರಭಸವಾಗಿ ಬರುವಾಗ ಧ್ವನಿಯು ಹೊರಡುವುದು ಸಹಜ. ಇವುಗಳ ಧ್ವನಿಯನ್ನು ವಾದ್ಯಗಳಿಗೆ ಹೋಲಿಸಬಹುದು. ಇಂತಹ ನಾರಾಯಣನನ್ನು ಬ್ರಹ್ಮನು ಸ್ತೋತ್ರಗಳ ಮೂಲಕ ಹೊಗಳುತ್ತಿದ್ದಾನೆ. ಈತನ ಸ್ತುತಿಗೆ ಪುನೀತನಾದ ನಾರಾಯಣನು ನಿಧಾನವಾಗಿ ಕಣ್ಣು ತೆರೆದನು.

ಚಕ್ರವರ್ತಿಯಾಗಬೇಕಾದರೆ ಆತನ ಕೈಕೆಳಗೆ ಬಹಳ ರಾಜರುಗಳು ಇರಬೇಕು. ಪ್ರಳಯಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ. ಹೀಗಿರುವಾಗ ದೇವರು ಚಕ್ರವರ್ತಿ ಹೇಗಾಗುತ್ತಾನೆ?

ಚಕ್ರವರ್ತಿ ಶಬ್ದಕ್ಕೆ ಎರಡು ಅರ್ಥ ಇದೆ. ಚಕ್ರ ಅಂದರೆ ರಾಷ್ಟ್ರ. ಅದನ್ನು ವರ್ತಯತಿ=ಆಳುತ್ತಾನೆ ಎಂದು. ಇದು ಲೋಕದ ಚಕ್ರವರ್ತಿಗಳಲ್ಲಿ ಕೂಡುತ್ತದೆ. ದೇವರು ಅಲೌಕಿಕಚಕ್ರವರ್ತಿ. ಆದ್ದರಿಂದ ಈತನಿಗೆ ಬೇರೆಯೇ ಅರ್ಥದಲ್ಲಿ ಈ ಶಬ್ದ. ಈತನಲ್ಲಿ ಚಕ್ರ ಎಂಬ ಆಯುಧ ಇದೆ. ಇದನ್ನು ಸದಾ ವರ್ತಯತಿ=ತಿರುಗಿಸುತ್ತಾನೆ ಎಂದು. ಅರ್ಥ ಬೇರೆಬೇರೆಯಾದರೂ ಶಬ್ದ ಒಂದೆ.

<u>ಸಂದೇಶ</u> : **ದೇವರನ್ನು ಚಿಂತಿಸುವಾಗ ಈ ಕ್ರಮ ಇರಬೇಕು. ನಮ್ಮ ಸ್ತುತಿಯು ಆತನ ಕಣ್ಣು ತೆರೆಸುವಂತಿರಬೇಕು.**

**ರಮಾರಮೇಶಾನುಗೃಹೀತ ಏಷಃ ಕ್ರಮಾತ್ ಸಸರ್ಜಾಗ್ರ ಇದಂ ಸಮಸ್ತಮ್ ।**
**ಸದಾಚ್ಯುತಾಂಘ್ರಿ ಸ್ಮರಣೇನ ಧನ್ಯಸ್ತದೀಯ ಭಕ್ತೇಷ್ವಯಮಗ್ರಗಣ್ಯಃ ॥ ೧೧ ॥**

ಏಷಃ=ಈ ಬ್ರಹ್ಮನು; ರಮಾ=ರಮೆಯು; ರಮೇಶ=ನಾರಾಯಣನು ಇವರಿಂದ; ಅನುಗೃಹೀತಃ=ಅನುಗ್ರಹಿಸಲ್ಪಟ್ಟು; ಅಗ್ರೇ=ಮೊದಲು; ಇದಂ=ಈ; ಸಮಸ್ತಂ=ಎಲ್ಲವನ್ನೂ; ಕ್ರಮಾತ್=ಕ್ರಮದಿಂದ; ಸಸರ್ಜ=ಸೃಷ್ಟಿ ಮಾಡಿದನು; ತದೀಯ=ದೇವರ; ಭಕ್ತೇಷು= ಭಕ್ತರಲ್ಲಿ; ಅಗ್ರಗಣ್ಯಃ=ಉತ್ತಮನಾದ; ಅಯಂ=ಇವನು; ಸದಾ=ಯಾವಾಗಲೂ; ಅಚ್ಯುತ=ದೇವರ; ಅಂಘ್ರಿ=ಪಾದಗಳ; ಸ್ಮರಣೇನ=ಸ್ಮರಣೆಯಿಂದ; ಧನ್ಯಃ=ಧನ್ಯನು.

ಈ ಬ್ರಹ್ಮನು ದೇವರ ಭಕ್ತರ ಪೈಕಿ ಉತ್ತಮನು. ಇವನಿಗೆ ದೇವರನ್ನು ಮರೆಯಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದಲೇ ಈತನ ಮೇಲೆ ರಮಾನಾರಾಯರ ಅನುಗ್ರಹ ಬಹಳ. ಈತನು ಹುಟ್ಟಿ ಐವತ್ತು ವರ್ಷ ತಪಸ್ಸನ್ನು ಮಾಡಿದನು. ಅನಂತರ ಜಗತ್ತಿನ

ಸೃಷ್ಟಿಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡನು. ಈ ರೀತಿಯಾಗಿ ಗೆಳತಿಯು ರುಗ್ಮಿಣಿಗೆ ಬ್ರಹ್ಮನನ್ನು ಪರಿಚಯಿಸಿದಳು.

**ಅಯಂ ಸಖಿ ಪ್ರಾಣಗಣಾಧಿನಾಥ ಸ್ವಯಂಭುವಾ ಸರ್ವಗುಣೈಃ ಸಮಾನಃ ।**
**ಶಿವಾದಿದೇವಾ ವ್ಯವದಂತ ಪೂರ್ವಂ ತತೋಽಸ್ಯ ಸತ್ವಂ ಪ್ರಕಟೀಬಭೂವ ॥ ೧೨ ॥**

ಹೇ ಸಖಿ=ಎಲೋ ಗೆಳತಿಯೇ; ಅಯಂ=ಇವನು; ಪ್ರಾಣ=ಪ್ರಾಣಗಳ; ಗಣ=ಸಮೂಹಕ್ಕೆ; ಅಧಿನಾಥಃ=ಒಡೆಯನು; ಸರ್ವ=ಎಲ್ಲಾ; ಗುಣೈಃ=ಗುಣಗಳಿಂದ; ಸ್ವಯಂಭುವಾ=ಬ್ರಹ್ಮನಿಂದ; ಸಮಾನಃ=ಸದೃಶನು; ಪೂರ್ವಂ=ಮೊದಲು; ಶಿವ=ರುದ್ರನೇ; ಆದಿ=ಮೊದಲಾದ; ದೇವಾಃ=ದೇವತೆಗಳು; ವ್ಯವದಂತ=ಚರ್ಚೆ ಮಾಡಿದರು; ತತಃ=ಅನಂತರ; ಅಸ್ಯ=ಇವನ; ಸತ್ವಂ=ಶಕ್ತಿಯು; ಪ್ರಕಟೀಬಭೂವ=ಬೆಳಕಿಗೆ ಬಂತು.

ಗೆಳತಿಯು ರುಗ್ಮಿಣಿಗೆ ಮುಖ್ಯಪ್ರಾಣನನ್ನು ಪರಿಚಯಿಸುತ್ತಾಳೆ. ಎಲೋ ರುಗ್ಮಿಣಿಯೇ, ಈತನ ಹೆಸರು ಮುಖ್ಯಪ್ರಾಣ ಎಂದು. ಹೆಸರೇ ತಿಳಿಸುತ್ತದೆ, ಈತನು ಎಲ್ಲಾ ಪ್ರಾಣಗಳನ್ನೂ ಮೆಟ್ಟಿ ನಿಂತವನು ಎಂದು. ಈತನ ಮಹತ್ವ ಎಷ್ಟೆಂದರೆ ಈತನು ಯಾವ ವಿಷಯದಲ್ಲಿಯೂ ಹಿಂದೆ ಹೇಳಿದ ಬ್ರಹ್ಮನಿಗೆ ಕಡಿಮೆ ಇಲ್ಲ. ಈ ವಿಷಯವು ಉಪನಿಷತ್ತಿನ ಒಂದು ಘಟನೆಯಿಂದ ತಿಳಿಯುತ್ತದೆ- ಇಂದ್ರಿಯಾಭಿಮಾನಿದೇವತೆಗಳಾದ ರುದ್ರಾದಿಗಳಿಗೂ ಈ ಮುಖ್ಯಪ್ರಾಣನಿಗೂ ಉತ್ತಮತ್ವ ವಿಷಯದಲ್ಲಿ ಚರ್ಚೆ ನಡೆಯಿತು. ಯಾರು ದೇಹವನ್ನು ಬಿಟ್ಟು ಹೋದರೆ ದೇಹವು ಬೀಳುತ್ತೋ ಅವನು ದೊಡ್ಡವನು ಎಂದು ತೀರ್ಮಾನಿಸಿದರು. ಪರೀಕ್ಷೆಗಾಗಿ ಬ್ರಹ್ಮನ ದೇಹದಿಂದ ಮನಸ್ಸು ಕಣ್ಣು ಮೊದಲಾದ ಇಂದ್ರಿಯಗಳ ಅಭಿಮಾನಿಗಳಾದ ರುದ್ರ, ಸೂರ್ಯ ಮೊದಲಾದವರು ಹೊರಟರು. ಇದರಿಂದ ಕಣ್ಣು ಕಾಣಿಸದೆ ಹೋಯಿತು, ಹೊರತು ದೇಹವು ಬಿದ್ದಿಲ್ಲ. ಕೊನೆಗೆ ಮುಖ್ಯಪ್ರಾಣನು ಹೊರಟನು. ಆಗ ದೇಹವು ಬಿತ್ತು. ಅನೇಕ ಬಾರಿ ಪರೀಕ್ಷೆ ಮಾಡಿದಾಗಲೂ ಹೀಗೆಯೇ ಆಯಿತು. ಮುಖ್ಯಪ್ರಾಣ ದೊಡ್ಡವ ಎಂದು ಎಲ್ಲರೂ ಒಪ್ಪಿದರು. ಹೀಗೆ ಇವನ ಶಕ್ತಿಯು ಜಗಕೆ ತಿಳಿಯಿತು.

<u>ಸಂದೇಶ</u> : **ಎಷ್ಟೇ ಭಕ್ತಿ ಇದ್ದರೂ ಈತನು ಬ್ರಹ್ಮನಿಗೆ ಸಮಾನನೇ ಹೊರತು ಆತನ ತಂದೆಯಾದ ಈ ಕೃಷ್ಣನಿಗೆ ಸದೃಶವಲ್ಲ.**

**ಹರೇರ್ಮನುಂ ಜೀವನಿಕಾಯ ಕಾಯೇ ಜಪನ್ನಯಂ ಜೀವಯತೀಹ ವಿಶ್ವಮ್ ।**
**ನಿಜಾಂಕಮಾರೋಪ್ಯ ಕಿಲೈನಮಾರ್ಯೇ ಜಗತ್ಪತಿರ್ಜಾತ ಸುಖಂ ವಿಧತ್ತೇ ॥ ೧೩ ॥**

ಅಯಂ=ಇವನು; ಜೀವ=ಜೀವರ; ನಿಕಾಯ=ಸಮೂಹದ; ಕಾಯೇ=ಶರೀರದಲ್ಲಿ; ಹರೇಃ=ನಾರಾಯಣನ; ಮನುಂ=ಮಂತ್ರವನ್ನು; ಜಪನ್=ಜಪಿಸುತ್ತಾ; ಇಹ=ಈ ಲೋಕದಲ್ಲಿ; ವಿಶ್ವಂ=ಎಲ್ಲವನ್ನೂ; ಜೀವಯತಿ=ಬದುಕಿಸುತ್ತಾನೆ; ಹೇ ಆರ್ಯೇ=ಎಲೋ

ಪೂಜ್ಯಳೇ; ಜಗತ್=ಲೋಕಕ್ಕೆ; ಪತಿಃ=ಸ್ವಾಮಿಯು; ಏನಂ=ಇವನನ್ನು; ನಿಜ=ತನ್ನ; ಅಂಕಂ=ತೊಡೆಯನ್ನು; ಆರೋಪ್ಯ=ಏರಿಸಿ; ಜಾತ=ಉಂಟಾದ; ಸುಖಂ=ಸುಖಿಯನ್ನಾಗಿ; ವಿಧತ್ತೇ ಕಿಲ=ಮಾಡುತ್ತಾನೆ.

ಪ್ರತಿಯೊಬ್ಬನೂ ಉಸಿರಾಟದಿಂದ ಬದುಕುತ್ತಾನೆ. ಈ ಉಸಿರಾಟಕ್ಕೆ ಅಭಿಮಾನಿ ಈ ಮುಖ್ಯಪ್ರಾಣನು. ನಮಗೆ ಇದು ಕೇವಲ ಉಸಿರಾಟ. ಶಾಸ್ತ್ರದಲ್ಲಿ ಒಂದೊಂದು ಉಸಿರಾಟವನ್ನೂ ಒಂದೊಂದು ಮಂತ್ರಜಪಕ್ಕೆ ಹೋಲಿಸಿದ್ದಾರೆ. ಮುಖ್ಯಪ್ರಾಣನು ಈ ಉಸಿರಾಟದ ಮೂಲಕ ನಮ್ಮಲ್ಲಿ ಇದ್ದು ಮಂತ್ರವನ್ನು ಜಪಿಸುತ್ತಾನೆ. ಚೆನ್ನಾಗಿ ಜಪಿಸಿದ ಅಂದರೆ ಉಸಿರಾಟ ಚೆನ್ನಾಗಿ ಉಂಟು ಎಂದರ್ಥ. ತನ್ಮೂಲಕ ಜಗತ್ತನ್ನೇ ಬದುಕಿಸುವ ಅಥವಾ ಸಾಯಿಸುವ ಶಕ್ತಿ ಉಳ್ಳವನು. ಆದರೆ ದೇವರ ಮುಂದೆ ಈತನು ಶಿಶುವಿನಂತೆ. ತಂದೆ ಮಕ್ಕಳನ್ನು ತಮ್ಮ ತೊಡೆಯ ಮೇಲೆ ಕುಳ್ಳಿರಿಸುತ್ತಾರೆ. ಇದರಿಂದ ಆ ಮಕ್ಕಳಿಗೆ ಒಂದು ರೀತಿಯ ಆನಂದ. ಅದೇ ರೀತಿ ದೇವರು ಈತನನ್ನು ತನ್ನ ತೊಡೆಯಮೇಲೆಯೇ ಕುಳ್ಳಿರಿಸಿದ್ದಾನೆ. ಮನಸ್ಸಿಗೆ ನೆಮ್ಮದಿಯನ್ನು ಕೊಟ್ಟಿದ್ದಾನೆ.

ಇವನಿಗೆ ದೇವರಿಂದ ಸುಖ. ಸ್ವಂತಸುಖವನ್ನು ಪಡೆಯುವ ಅಧಿಕಾರ ಇಲ್ಲ. ಯಾರ ಮಂತ್ರವನ್ನು ಜಪಿಸುತ್ತೇವೋ ಅವರು ನಮ್ಮಕ್ಕಿಂತ ದೊಡ್ಡವರು. ಈತನು ಉಸಿರಾಟದಲ್ಲಿ ಇದ್ದು ದೇವರ ಮಂತ್ರವನ್ನು ಜಪಿಸುವನು. ಆದ್ದರಿಂದ ದೇವರು ದೊಡ್ಡವನು.

**ಕ್ವಚಿದ್ಧಿ ರಕ್ಷೋವಶತಾ ಸುರಾಣಾಂ ಭವೇದಮುಷ್ಮಿನ್ ನ ಕದಾಪಿ ಸಾಸ್ತಿ ।**
**ಅಯಂ ಕಿಲಾಚ್ಛಿನ್ನ ಮುಕುಂದ ಧರ್ಮೋ ವಿರಿಂಚತಾಮೇಷ್ಯತಿ ಭಾವಿಕಲ್ಪೇ ॥ ೧೪ ॥**

ಕ್ವಚಿತ್=ಒಮ್ಮೊಮ್ಮೆ; ಸುರಾಣಾಂ=ದೇವತೆಗಳಿಗೆ; ರಕ್ಷೋ=ರಾಕ್ಷಸರ; ವಶತಾ= ಅಧೀನತ್ವವು; ಭವೇತ್=ಆಗುತ್ತದೆ; ಅಮುಷ್ಮಿನ್=ಇವನಲ್ಲಿ; ಸಾ=ಅದು; ಕದಾಽಪಿ= ಯಾವಾಗಲೂ; ನಾಸ್ತಿ=ಇಲ್ಲ; ಅಯಂ=ಇವನು; ಅಚ್ಛಿನ್ನ=ಭಂಗ ಇಲ್ಲದ; ಮುಕುಂದ= ದೇವರ; ಧರ್ಮಃ=ಧರ್ಮ ಉಳ್ಳವನು; ಭಾವಿ=ಮುಂದಿನ; ಕಲ್ಪೇ=ಕಲ್ಪದಲ್ಲಿ; ವಿರಿಂಚತಾಂ= ಬ್ರಹ್ಮತ್ವವನ್ನು; ಏಷ್ಯತಿ=ಹೊಂದುತ್ತಾನೆ.

ಎಲೋ ರುಗ್ಮಿಣಿಯೇ, ಇವನನ್ನು ಬಿಟ್ಟು ಬೇರೆ ಎಲ್ಲಾ ದೇವತೆಗಳೂ ಆಗಾಗ್ಗೆ ದೇವರ ವಿಸ್ಮರಣೆ ಬರುವುದಿದೆ. ಕೆಲವು ಸಂದರ್ಭದಲ್ಲಿ ದೇವರಿಗೆ ವಿರುದ್ಧವಾಗಿ ನಿಲ್ಲುವುದೂ ಇದೆ. ಇವನಲ್ಲಿ ಯಾವ ಸಂದರ್ಭದಲ್ಲಿಯೂ ಅಂತಹ ಪ್ರಸಂಗ ಇಲ್ಲ. ಇವನು ಮುಂದಿನ ಕಲ್ಪದಲ್ಲಿ ಚತುರ್ಮುಖಬ್ರಹ್ಮನಾಗುತ್ತಾನೆ. ಆದ್ದರಿಂದ ಎಲ್ಲಾ ಕಾಲದೇಶಗಳಲ್ಲಿಯೂ ವೈದಿಕಧರ್ಮಗಳನ್ನು ಚಾಚೂತಪ್ಪದೆ ಮಾಡುತ್ತಾನೆ.

**ಪಯೋಽಬ್ಧಿಜಂ ದುರ್ವಿಷಹಂ ವಿಷಂ ಪ್ರಾಕ್**
**ಸ್ವಯಂ ಪಪೌ ನಷ್ಟಜವಂ ಶಿವೋಽಲ್ಪಮ್ ।**
**ವಿಮುಕ್ತಿಮಪ್ಯೇಷ ಹರೇರ್ನಿದೇಶಾತ್**
**ಪ್ರಿಯಾಯ ದಾತುಂ ಪ್ರಭುರಂಭುಜಾಕ್ಷಿ** ॥ ೧೫ ॥

ಅಂಬುಜ=ಕಮಲದಂತೆ; ಅಕ್ಷಿ=ಕಣ್ಣುಳ್ಳ ರುಗ್ಮಿಣಿಯೇ; ಪ್ರಾಕ್=ಮೊದಲು; ಏಷಃ=ಇವನು; ಪಯಃ=ಹಾಲಿನ; ಅಬ್ಧಿ=ಸಮುದ್ರದಲ್ಲಿ; ಜಂ=ಹುಟ್ಟಿದ; ದುರ್ವಿಷಹಂ= ಸಹಿಸಲು ಅಸಾಧ್ಯವಾದ; ವಿಷಂ=ವಿಷವನ್ನು; ಸ್ವಯಂ=ತಾನು; ಪಪೌ=ಕುಡಿದನು; ನಷ್ಟ=ಕಮ್ಮಿಯಾದ; ಜವಂ=ಸತ್ವವುಳ್ಳ; ಅಲ್ಪಂ=ಅಲ್ಪವನ್ನು; ಶಿವಃ=ರುದ್ರನು; ಪಪೌ= ಕುಡಿದನು; ಏಷಃ=ಇವನು; ಹರೇಃ=ದೇವರ; ನಿದೇಶಾತ್=ಅಪ್ಪಣೆಯಿಂದ; ಪ್ರಿಯಾಯ= ಭಕ್ತನಿಗೆ; ವಿಮುಕ್ತಿಂ ಅಪಿ=ಮೋಕ್ಷವನ್ನೂ ಕೂಡಾ; ದಾತುಂ=ಕೊಡಲು; ಪ್ರಭುಃ=ಸಮರ್ಥನು.

ಹಿಂದೆ ದೇವದೈತ್ಯರು ಸೇರಿ ಅಮೃತಕ್ಕಾಗಿ ಸಮುದ್ರವನ್ನು ಮಥಿಸಿದರು. ಆಗ ಮೊದಲು ವಿಷವು ಬಂದಿತು. ಅದು ಬಹಳ ತೀಕ್ಷ್ಣವಾಗಿತ್ತು. ಅದನ್ನು ಕುಡಿಯುವುದು ದೂರ ಇರಲಿ, ಅದನ್ನು ನೋಡಲೂ ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಅಂತಹ ವಿಷವನ್ನು ವಾಯುದೇವರು ಕೈಯಲ್ಲಿ ಸ್ವೀಕರಿಸಿದರು. ಆಗ ರುದ್ರದೇವರು ತನಗೆ ಬೇಕು ಎಂದು ವಾಯುದೇವರಲ್ಲಿ ಕೇಳಿದರು. ವಾಯುದೇವರು ಪಾತ್ರದಲ್ಲಿ ಬಂದಿರುವ ಆ ವಿಷದಲ್ಲಿ ಸ್ವಲ್ಪವನ್ನು ತೆಗೆದು ತನ್ನ ಕೈಯಲ್ಲಿ ಹಾಕಿಕೊಂಡರು. ಅದನ್ನು ಸರಿಯಾಗಿ ತಿಕ್ಕಿದರು. ಅದರ ಸತ್ವವನ್ನೆಲ್ಲಾ ತೆಗೆದರು. ಅನಂತರ ರುದ್ರದೇವರಿಗೆ ಕೊಟ್ಟರು. ಹಾಗಿದ್ದರೂ ರುದ್ರದೇವರಿಗೆ ಅದನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಪಾತ್ರದಲ್ಲಿ ಇನ್ನೂ ತುಂಬಾ ವಿಷ ಉಳಿದಿತ್ತು. ವಾಯುದೇವರು ಅದನ್ನು ಹಾಗೆಯೇ ಕುಡಿದರು. ಅಷ್ಟು ಶಕ್ತಿ ಇದೆ ಈ ಹುಡುಗನಿಗೆ.

ಯದ್ಯಪಿ ಮೋಕ್ಷವನ್ನು ಕೊಡುವುದು ದೇವರು ಮಾತ್ರ. ಒಮ್ಮೊಮ್ಮೆ ಈ ವಾಯುದೇವರೂ ಆ ಕೆಲಸವನ್ನು ಮಾಡುತ್ತಾರೆ. ಯಾಕೆಂದರೆ ದೇವರ ಅಪ್ಪಣೆ ಈತನಿಗೆ ಇದೆ. ಇದರಿಂದಲೇ ತಿಳಿಯುತ್ತದೆ ದೇವರಿಗೆ ಈತನ ಮೇಲೆ ಎಷ್ಟು ಪ್ರೀತಿ ಇದೆ ಎಂದು. ಅಸ್ವಾರಸ್ಯವೆಂದರೆ ಈತನು ಏನುಮಾಡಬೇಕಾದರೂ ದೇವರ ಅಪ್ಪಣೆ ಬೇಕು.

**ಇಹಾವತೀರ್ಯಾಥ ಹನೂಮದಾಖ್ಯೋ ವ್ಯಧತ್ತ ಸೇವಾಂ ಸ ತು ಭೀಮರೂಪಃ ।**
**ವಿಭೋರ್ವಿಧತ್ತೇಽದ್ಯ ಸಮದ್ವರೂಪೀ ವಿಧಾಸ್ಯತೇಽನ್ಯೈಸ್ತ್ರಿದಶೈರ ಸಾಧ್ಯಾಮ್** ॥ ೧೬ ॥

ಸಃ ತು=ಅವನಾದರೂ; ಹನೂಮತ್=ಹನುಮಂತನೆಂಬ; ಆಖ್ಯಃ=ಹೆಸರುಳ್ಳವನಾಗಿ; ಇಹ=ಇಲ್ಲಿ; ಅವತೀರ್ಯ=ಅವತರಿಸಿ; ಅನ್ಯೈಃ=ಬೇರೆ; ತ್ರಿದಶೈಃ=ದೇವತೆಗಳಿಂದ; ಅಸಾಧ್ಯಾಮ್=ಸಾಧ್ಯವಿಲ್ಲದ; ಸೇವಾಂ=ಸೇವೆಯನ್ನು; ವ್ಯಧತ್ತ=ಮಾಡಿದನು;

**ಭೀಮರೂಪಃ=ಭೀಮರೂಪನಾಗಿ; ವಿಭೋಃ=ಸಮರ್ಥನ; ಸೇವಾಂ=ಸೇವೆಯನ್ನು; ಅದ್ಯ=ಈಗ; ವಿಧತ್ರೇ=ಮಾಡುತ್ತಿದ್ದಾನೆ; ಮಧ್ವ=ಮಧ್ವನೆಂಬ; ರೂಪೀ=ರೂಪವುಳ್ಳವನಾಗಿ; ವಿಧಾಸ್ಯತೇ=ಮಾಡುತ್ತಾನೆ.**

ಈತನಿಗೆ ಮೂರು ಅವತಾರಗಳಿವೆ. ಅವುಗಳಿಗೆ ಹನುಮ, ಭೀಮ, ಮಧ್ವ ಎಂದು ಹೆಸರು. ಎಲೋ, ಕಮಲಾಕ್ಷಿಯಾದ ರುಗ್ಮಿಣಿಯೇ, ಈತನು ಹನುಮಂತನ ರೂಪದಿಂದ ಶ್ರೀರಾಮನ ಸೇವೆಯನ್ನು ಚೆನ್ನಾಗಿ ಮಾಡಿದ್ದ ತ್ರೇತಾಯುಗದಲ್ಲಿ. ದ್ವಾಪರಯುಗದಲ್ಲಿ ಕೃಷ್ಣನ ಸೇವೆಯನ್ನು ಮಾಡುತ್ತಿದ್ದಾನೆ. ಇನ್ನು ಮುಂದೆ ಕಲಿಯುಗದಲ್ಲಿ ಮಧ್ವನಾಗಿ ಅವತರಿಸುತ್ತಾನೆ. ಶ್ರೀ ವೇದವ್ಯಾಸರ ಸೇವೆಯನ್ನು ಶಾಸ್ತ್ರದ ರಚನೆಯ ಮೂಲಕ ಮಾಡುತ್ತಾನೆ. ಇಂತಹ ಸೇವೆಯನ್ನು ಬೇರೆ ದೇವತೆಗಳೂ ಮಾಡುತ್ತಾರಲ್ಲ? ಇಲ್ಲ. ಇವನಂತೆ ಮಾಡುವುದಿಲ್ಲ. ಸಣ್ಣಪುಟ್ಟ ಸೇವೆಯನ್ನು ಮಾಡುತ್ತಾರೆ. ಸಮುದ್ರದ ಹಾರುವಿಕೆ, ಜರಾಸಂಧನ ವಧೆ, ಮಾಯಾವಾದಿಗಳ ಖಂಡನೆ ಇದನ್ನು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಇದು ಇವನ ಸಾಮರ್ಥ್ಯ. ಇಲ್ಲಿ ಅಸ್ವಾರಸ್ಯ –ಇನ್ನೊಬ್ಬರ ಸೇವೆಮಾಡಿಯೇ ಈತನು ಬದುಕುವುದು.

**ಸ್ವಬುದ್ಧಿಸಖ್ಯೇತ್ಥ ಮುದೀರಿತಾ ಸಾ ಕೃಪಾಕಟಾಕ್ಷೇಣ ನಿರೀಕ್ಷ್ಯ ಭೈಷ್ಮೀ ।**
**ನಿಜಾಂಘ್ರಿಪದ್ಮಾವನತೌ ಸುತೌ ತೌ ಸ್ವಕಾಂತ ಮೇತತ್ ಪ್ರಭುಮೇವ ಮೇನೇ ॥ ೧೭ ॥**

ಸ್ವ=ತನ್ನ; ಬುದ್ಧಿ=ಬುದ್ಧಿ ಎಂಬ; ಸಖ್ಯಾ=ಗೆಳತಿಯಿಂದ; ಇತ್ಥಂ=ಈ ರೀತಿಯಾಗಿ; ಉದೀರಿತಾ=ಹೇಳಲ್ಪಟ್ಟ; ಸಾ=ಆ; ಭೈಷ್ಮೀ=ರುಗ್ಮಿಣಿಯು; ನಿಜ=ತನ್ನ; ಅಂಘ್ರಿ=ಪಾದಗಳೆಂಬ; ಪದ್ಮ=ಕಮಲಗಳಲ್ಲಿ; ಅವನತೌ=ನಮಸ್ಕರಿಸಿದ; ತೌ=ಆ; ಸುತೌ=ಮಕ್ಕಳನ್ನು; ನಿರೀಕ್ಷ್ಯ= ನೋಡಿ; ಏತತ್=ಬ್ರಹ್ಮವಾಯುಗಳಿಗೆ; ಪ್ರಭುಂ ಏವ=ಒಡೆಯನನ್ನೇ; ಸ್ವ=ತನ್ನ; ಕಾಂತಂ= ಪತಿಯನ್ನಾಗಿ; ಮೇನೇ=ತಿಳಿದಳು.

ರುಗ್ಮಿಣಿಯ ಬುದ್ಧಿಯೇ ಆಕೆಯ ಗೆಳತಿ. ಗೆಳತಿಯು ಬ್ರಹ್ಮವಾಯುಗಳ ಮಹಿಮೆಯನ್ನೂ ಅಸ್ವಾರಸ್ಯವನ್ನೂ ರುಗ್ಮಿಣಿಗೆ ಹೇಳಿದಳು ಅಂದರೆ ತಾನೇ ಬುದ್ಧಿಯಿಂದ ವಿಮರ್ಶಿಸಿದಳು ಎಂದು ಅರ್ಥ. ಈ ರೀತಿ ಆಲೋಚಿಸುತ್ತಾ ಬರುತ್ತಿರುವಾಗ ಬ್ರಹ್ಮವಾಯುಗಳು ಈಕೆಗೆ ನಮಸ್ಕರಿಸಿದರು. ಇವರಿಬ್ಬರೂ ಈಕೆಯ ಮಕ್ಕಳು. ಇಬ್ಬರ ಮೇಲೂ ಈಕೆ ಅನುಗ್ರಹದೃಷ್ಟಿಯನ್ನು ಬೀರಿದಳು. ಎಲ್ಲರಿಗೂ ಒಡೆಯನಾದ ಕೃಷ್ಣನೇ ತನಗೆ ಪತಿ ಎಂದು ತಿಳಿದಳು.

<u>ಸಂದೇಶ</u> : **ದೇವರ ಸರ್ವೋತ್ತಮತ್ವವನ್ನು ತಿಳಿಯುವಾಗ ಇತರ ದೇವತೆಗಳ ಮಹಿಮೆಯನ್ನು ತಿಳಿಯಬೇಕು. ಹಾಗೆಯೇ ಬ್ರಹ್ಮವಾಯುಗಳನ್ನು ಇತರ ದೇವತೆಗಳ ಜೊತೆಗೆ ಸೇರಿಸದೆ ಪ್ರತ್ಯೇಕವೇ ತಿಳಿಯಬೇಕು.**

**ಭವೋऽಯಮಬ್ಜಾಸನಲಬ್ಧಜನ್ಮಾ**
**ವಿಹಂಗರಾಜೋऽಯಮಹೀಶ್ವರೋऽಯಮ್ ।**
**ಸಮಾನವಿಜ್ಞಾನಬಲಪ್ರಮೋದಾ**
**ಮುಕುಂದಸೇವಾಭಿರತಾ ಕಿಲೈತೇ** ॥ ೧೮ ॥

ಅಯಂ=ಇವನು; ಅಬ್ಜ=ಕಮಲವೇ; ಆಸನ=ಆಶ್ರಯನಿಂದ; ಲಬ್ಧ=ಹೊಂದಿದ; ಜನ್ಮಾ=ಉತ್ಪತ್ತಿವುಳ್ಳ; ಭವಃ=ರುದ್ರನು; ಅಯಂ=ಇವನು; ವಿಹಂಗ=ಪಕ್ಷಿಗಳಿಗೆ; ರಾಜಃ= ರಾಜನು; ಅಯಂ=ಇವನು; ಅಹಿ=ಸರ್ಪಗಳಿಗೆ; ಈಶ್ವರಃ=ಒಡೆಯನು; ಏತೇ=ಇವರು; ಸಮಾನ=ಒಂದೇ ರೀತಿಯಾದ; ವಿಜ್ಞಾನ=ಜ್ಞಾನವು; ಬಲ=ಬಲವು; ಪ್ರಮೋದಾಃ= ಆನಂದವುಳ್ಳವರು; ಮುಕುಂದ=ದೇವರ; ಸೇವಾ=ಸೇವೆಯಲ್ಲಿ; ಅಭಿರತಾಃ ಕಿಲ=ಆಸಕ್ತರು ತಾನೆ.

ಇತರ ದೇವತೆಗಳನ್ನು ವಿಮರ್ಶಿಸುತ್ತಾಳೆ ರುಗ್ಮಿಣಿಯು. ಇತರ ದೇವತೆಗಳಲ್ಲಿ ಗರುಡ, ಶೇಷ, ರುದ್ರರು ಪ್ರಧಾನ. 'ಬ್ರಹ್ಮಣಃ ಪಿತರಂ ವಂದೇ ಶಂಕರಸ್ಯ ಪಿತಾಮಹಂ' –ಬ್ರಹ್ಮನ ತಂದೆಯಾದ ಹಾಗೆಯೇ ರುದ್ರನ ಅಜ್ಜನಾದ ದೇವರನ್ನು ವಂದಿಸುತ್ತೇನೆ ಎಂಬ ಪ್ರಮಾಣದ ಮಾತಿನಂತೆ ರುದ್ರದೇವರು ಬ್ರಹ್ಮನ ಮಗ. ಬ್ರಹ್ಮನು ದೇವರ ಮಗ. ಗರುಡನು ಆಕಾಶದಲ್ಲಿ ಹಾರುವ ಎಲ್ಲಾ ಪಕ್ಷಿಗಳಿಗೂ ಒಡೆಯನು. ಶೇಷನು ಸಮಸ್ತ ಸರ್ಪಕುಲಗಳಿಗೆ ರಾಜನು. ಈ ಮೂರು ಮಂದಿಯೂ ಸಮಾನವಾದ ಯೋಗ್ಯತೆ ಉಳ್ಳವರು. ಆದ್ದರಿಂದ ಇವರಲ್ಲಿ ಒಂದೇ ಪ್ರಮಾಣದ ಜ್ಞಾನ, ಭಕ್ತಿ, ಬಲ, ಆನಂದವು ಇದೆ. ಗರುಡನು ದೇವರಿಗೆ ವಾಹನನಾಗಿ ಶೇಷ ಹಾಸಿಗೆಯಾಗಿ ಸೇವೆಯನ್ನು ಸದಾ ಸಲ್ಲಿಸುತ್ತಾರೆ. ರುದ್ರದೇವರೂ ಹಾಗೆಯೆ. ಮೇಲ್ನೋಟಕ್ಕೆ ಗರುಡಶೇಷರಂತೆ ಇವರ ಸೇವೆಯು ನೇರವಾಗಿ ತೋರುವುದಿಲ್ಲ. ಇವರು ಮಾಡುವ ಸೇವೆಯೇ ವಿಲಕ್ಷಣ. ದೈತ್ಯರು ಇವರನ್ನು ತಪಸ್ಸಿನಿಂದ ಮೆಚ್ಚಿಸುತ್ತಾರೆ. ರುದ್ರದೇವರು ಇವರಿಗೆ ಯಥೇಚ್ಛವಾಗಿ ವರಗಳನ್ನು ಕೊಡುತ್ತಾರೆ. ಈ ವರಗಳಿಂದ ದೈತ್ಯರು ಕೊಬ್ಬಿ ಸಾತ್ವಿಕರಿಗೆ ಬಹಳಷ್ಟು ಉಪಟಳವನ್ನು ಮಾಡುತ್ತಾರೆ. ಇದನ್ನು ತಾಳಲಾರದೆ ಸಾತ್ವಿಕರು ದೇವರಿಗೆ ಮೊರೆಯಿಡುತ್ತಾರೆ. ದೇವರು ನಾನಾ ರೂಪಗಳಿಂದ ಅವತರಿಸಿ ದೈತ್ಯರನ್ನು ವಧಿಸಿ ನರಕಕ್ಕೆ ಅಟ್ಟುತ್ತಾರೆ. ಈ ರೀತಿ ದೈತ್ಯರನ್ನು ನರಕಕ್ಕೆ ಅಟ್ಟಲು ಬೇಕಾದ ವಾತಾವರಣವನ್ನು ನಿರ್ಮಿಸುವ ಮೂಲಕ ದೇವರ ಸೇವೆಯನ್ನು ಮಾಡುತ್ತಾರೆ. ಇವರು ಭಗವಂತನ ಸೇವಕರೆಂಬುದು ಇಲ್ಲಿ ಅಸ್ವಾರಸ್ಯ.

**ಶರ್ವಃ ಸುಪರ್ವರಿಪುಗರ್ವ ವಿಭೇದದಕ್ಷಃ**
**ಪೂರ್ವಂ ಪುರತ್ರಯಮಯಂ ಕಿಲ ದೇವ್ಯಜೈಷೀತ್ ।**

ಹರ್ಯಂಘ್ರಿತೀರ್ಥಪರಿಪೂರ್ಣ ಕಪರ್ದಮೇನಂ
ಗೌರ್ಯತ್ಯಸಾಧ್ಯಮಪಿ ತಂ ವಶಯಾಂ ಬಭೂವ ॥ ೧೯ ॥

ದೇವಿ=ಎಲೋ ರುಗ್ಮಿಣಿಯೇ; ಸುಪರ್ವ=ದೇವತೆಗಳ; ರಿಪು=ಶತ್ರುಗಳ; ಗರ್ವ=ಅಹಂಕಾರದ; ವಿಭೇದ=ನಾಶದಲ್ಲ; ದಕ್ಷಃ=ಸಮರ್ಥನಾದ; ಶರ್ವಃ=ರುದ್ರನು; ಪೂರ್ವಂ=ಹಿಂದೆ; ಅಯಂ=ಇವನು; ಪುರತ್ರಯಂ=ಮೂರು ಪಟ್ಟಣಗಳನ್ನು; ಅಜೈಷೀತ್ ಕಿಲ=ಗೆದ್ದನಷ್ಟೇ; ಗೌರೀ=ಪಾರ್ವತಿಯು; ಹರಿ=ದೇವರ; ಅಂಘ್ರಿ=ಪಾದದ; ತೀರ್ಥ=ಜಲದಿಂದ; ಪರಿಪೂರ್ಣ=ತುಂಬಿದ; ಕಪರ್ದಂ=ಜಟೆವುಳ್ಳ; ಅತಿ ಅಸಾಧ್ಯಂ ಅಪಿ=ಅಷ್ಟು ಸುಲಭ ವಲ್ಲದಿದ್ದರೂ; ತಂ ಏನಂ=ಅಂತಹ ಇವನನ್ನು; ವಶಯಾಂ ಬಭೂವ=ವಶೀಕರಿಸಿದಳು.

ಈ ಮೂರು ದೇವತೆಗಳನ್ನು ಈಗ ಪ್ರತ್ಯೇಕವಾಗಿ ವಿಮರ್ಶಿಸುತ್ತಾಳೆ. ದೈತ್ಯರು ದೇವತೆಗಳಿಗೆ ಬಹಳ ಉಪಟಳವನ್ನು ಮಾಡುತ್ತಾರೆ. ಅಂತಹ ದೈತ್ಯರನ್ನು ಈ ರುದ್ರದೇವರು ಹಿಂದೆ ಹೇಳಿದಂತೆ ಉಪಾಯದಿಂದ ಧ್ವಂಸ ಮಾಡುತ್ತಾರೆ. ಉದಾಹರಣೆಗೆ ಈ ರುದ್ರ ದೇವರಿಗೆ ಪುರಾರಿ ಎಂದು ಹೆಸರಿದೆ. ದೈತ್ಯರಿಗೆ ಮೂರು ಪಟ್ಟಣಗಳಿದ್ದವು. ಈ ಪಟ್ಟಣ ಗಳನ್ನು ನಾಶಗೊಳಿಸುವ ಮೂಲಕ ಅಸುರರನ್ನು ನಿರ್ಮೂಲನ ಮಾಡಿದರು. ನಾಶಮಾಡಲು ನಾರಾಯಣನನ್ನೇ ಬಾಣವನ್ನಾಗಿ ಮಾಡಿಕೊಂಡರು. ಇದು ರುದ್ರದೇವರು ಮಾಡಿದ ಉಪಾಯ. ಹರಿಯ ಚರಣದಿಂದ ಹರಿದುಬಂದ ಗಂಗೆಯನ್ನು ಈತನು ತನ್ನ ತಲೆಯಲ್ಲಿ ಭಕ್ತಿಯಿಂದ ಧರಿಸಿದ್ದಾನೆ. ಆದ್ದರಿಂದಲೇ ಈತನಿಗೆ ಇಂತಹ ಉಪಾಯ ಹೊಳೆದದ್ದು.

ಈತನಲ್ಲಿ ಇರುವ ಅಸ್ವಾರಸ್ಯ –ಈತನು ಹರಿಯ ಪಾದದ ಜಲವನ್ನು ತನ್ನ ತಲೆ ಯಲ್ಲಿ ಧರಿಸಿದ್ದಾನೆ. ಹಾಗೆಯೇ ಈತನಿಗೆ ಈಗಾಗಲೇ ಲಗ್ನವಾಗಿದೆ. ಇಷ್ಟೇ ಅಲ್ಲದೆ ಈತನ ಪತ್ನಿಯು ಸುಂದರಿಯೂ ಆಗಿದ್ದಾಳೆ. ಆದ್ದರಿಂದ ಈತನನ್ನು ವರಿಸುವುದು ಉಚಿತವಲ್ಲ.

ಪುಚ್ಛೇನ ಕಚ್ಛಪತನೋಃ ಪವನಸ್ಯ ಪೃಷ್ಠ–
ಮಚ್ಛೋಽವಲಂಬ್ಯ ಸರಿದರ್ಣವಶೈಲಪೂರ್ಣಾಮ್ ।
ಸಿದ್ಧಾರ್ಥಖಂಡಮಿವ ಕುಂಡಲಿರಾಟ್ ಸುಪೃಥ್ವೀಂ
ಪೃಥ್ವೀಮಯಂ ಕಿಲ ಬಿಭರ್ತಿ ಫಣಾತಪತ್ರೇ ॥ ೨೦ ॥

ಅಚ್ಛಃ=ನಿರ್ಮಲನಾದ; ಅಯಂ=ಈ; ಕುಂಡಲಿ=ಸರ್ಪಗಳಿಗೆ; ರಾಟ್=ರಾಜನಾದ ಶೇಷನು; ಪುಚ್ಛೇನ=ಬಾಲದಿಂದ; ಕಚ್ಛಪತನೋಃ=ಕೂರ್ಮನಾದ; ಪವನಸ್ಯ=ವಾಯುವಿನ; ಪೃಷ್ಠಂ=ಬೆನ್ನನ್ನು; ಅವಲಂಬ್ಯ=ಆಶ್ರಯಿಸಿ; ಸರಿತ್=ನದಿಗಳು; ಅರ್ಣವ=ಸಮುದ್ರ; ಶೈಲ=ಪರ್ವತಗಳಿಂದ; ಪೂರ್ಣಾಂ=ತುಂಬಿದ; ಸುಪೃಥ್ವೀಂ=ತುಂಬಾ ವಿಶಾಲವಾದ; ಪೃಥ್ವೀಂ=ಭೂಮಿಯನ್ನು; ಸಿದ್ಧಾರ್ಥ=ಸಾಸಿವೆಯ; ಖಂಡಂ ಇವ=ತುಂಡಿನಂತೆ; ಫಣ=ಹೆಡೆಗಳೆಂಬ; ಆತಪತ್ರೇ=ಕೊಡೆಯಲ್ಲಿ; ಬಿಭರ್ತಿ ಕಿಲ=ಧರಿಸುತ್ತಾನಷ್ಟೇ.

ಈಗ ಶೇಷನ ವಿಮರ್ಶೆ– ಈ ಭೂಮಿಯನ್ನು ದೇವರು ಆಮೆಯ ರೂಪದಿಂದ ಧರಿಸಿದ್ದಾನೆ. ಭೂಮಿ ಮಾತ್ರವಲ್ಲ, ಹದಿನಾಲ್ಕು ಲೋಕಗಳೂ ಈತನನ್ನು ಆಶ್ರಯಿಸಿವೆ. ದೇವರು ನೇರವಾಗಿ ಈ ಜಗತ್ತನ್ನು ಧರಿಸಿಲ್ಲ. ಈತನು ನೇರವಾಗಿ ಧರಿಸಿದ್ದು ವಾಯುದೇವರನ್ನು; ವಾಯುದೇವರೂ ಕೂಡಾ ಆಮೆಯ ರೂಪದಿಂದ ಈತನ ಮೇಲೆ ಇದ್ದಾರೆ. ವಾಯು ಕೂರ್ಮದ ಮೇಲೆ ಜಗತ್ತು ಇದೆ. ವಾಯುದೇವರು ಶೇಷನ ಮೂಲಕ ಜಗದ್ಧಾರಕರು. ಅಂದರೆ ವಾಯುಕೂರ್ಮವು ಶೇಷನಿಗೆ ಆಧಾರ. ಈ ಶೇಷನಿಗೆ ಸಾವಿರ ತಲೆ. ಇವುಗಳಲ್ಲಿ ಒಂದು ತಲೆಯ ಮೇಲೆ ಇಡೀ ಬ್ರಹ್ಮಾಂಡ ಇದೆ. ಶೇಷನಿಗೆ ಯಾವ ರೀತಿಯ ಆಯಾಸವೂ ಇಲ್ಲ. ಒಂದು ಸಾಸಿವೆಕಾಳನ್ನು ನಮ್ಮ ತಲೆಯಲ್ಲಿ ಇಟ್ಟರೆ ಹೇಗೆ ಹಾಗೆ ಅನಾಯಾಸವಾಗಿ ಧರಿಸಿದ್ದಾನೆ. ಇಂತಹ ಶಕ್ತಿ ಈತನದ್ದು. ಈತನಿಗೆ ಇಂತಹ ಶಕ್ತಿ ಬರಲು ಕಾರಣ ಹರಿಗುರುಗಳನ್ನು ಆಶ್ರಯಿಸಿದ್ದು. ಸ್ವಂತ ಶಕ್ತಿ ಅಲ್ಲ ಎಂಬುದು ಇಲ್ಲಿಯ ಅಸ್ವಾರಸ್ಯ.

**ಸೋಯಂ ಗರುಜ್ಜನಿಮರುಜ್ಜವಚಾಲಿತಾದ್ರಿ–**
**ದ್ವೀಪಾಂಬುರಾಶಿರಹಿವರ್ಣ್ಯ ಬಲ ಸುಪರ್ಣಃ ।**
**ಪ್ರಾದಾನ್ನಿಯುಧ್ಯ ಬಲಿನಾ ಬಲಿನಾ ಸಮಂ ಯೋ**
**ಗೋಮಂತಮೂರ್ಧ್ನಿ ಮುಕುಟಂ ನಿಜದೇವತಾಯೈ ॥ ೨೧ ॥**

ಅಹಿ=ಶತ್ರುಗಳಿಂದ; ವರ್ಣ್ಯ=ಹೊಗಳಲು ಯೋಗ್ಯವಾದ; ಬಲಃ=ಶಕ್ತಿವುಳ್ಳ; ಸುಪರ್ಣಃ=ಒಳ್ಳೆಯ ರೆಕ್ಕೆಗಳುಳ್ಳ; ಯಃ=ಯಾರು; ಗರುತ್=ರೆಕ್ಕೆಗಳಿಂದ; ಜನಿಮತ್= ಉದಿಸಿದ; ಮರುತ್=ಗಾಳಿಯ; ಜವ=ವೇಗದಿಂದ; ಚಾಲಿತ=ನಲುಗಿದ; ಅದ್ರಿ=ಬೆಟ್ಟಗಳು; ದ್ವೀಪ=ದ್ವೀಪಗಳು; ಅಂಬುರಾಶಿಃ=ಸಮುದ್ರವುಳ್ಳವನೋ; ಯಃ=ಯಾರು; ಬಲಿನಾ=ಬಲಿಷ್ಠನಾದ; ಬಲಿನಾ=ಬಲಿಯಿಂದ; ಸಮಂ=ಕೂಡಿಕೊಂಡು; ನಿಯುಧ್ಯ= ಹೋರಾಡಿ; ಗೋಮಂತ=ಗೋಮಂತ ಪರ್ವತದ; ಮೂರ್ಧ್ನಿ=ಶಿಖರದಲ್ಲಿ; ನಿಜ=ತನ್ನ; ದೇವತಾಯೈ=ಸ್ವಾಮಿಗೆ; ಮುಕುಟಂ=ಕಿರೀಟವನ್ನು; ಪ್ರಾದಾತ್=ಕೊಟ್ಟನೋ; ಸಃ=ಅವನೇ; ಅಯಂ=ಇವನು.

ಗರುಡನ ವಿಮರ್ಶೆ– ಈ ಗರುಡನಿಗೆ ಬಹಳ ಶಕ್ತಿ ಇದೆ. ಈತನು ಹಾರುವಾಗ ಸಹಜವಾಗಿ ರೆಕ್ಕೆಗಳಿಂದ ಗಾಳಿಯು ಉತ್ಪನ್ನವಾಗುವುದು. ಈ ಗಾಳಿಯು ಎಷ್ಟು ಪ್ರಬಲವಾಗಿದೆಯೆಂದರೆ ಬೆಟ್ಟಗಳು, ದ್ವೀಪಗಳು, ನದಿ, ಸಮುದ್ರಗಳು, ಭೂಮಿ ಎಲ್ಲವೂ ನಲುಗುತ್ತಿದ್ದವು. ಶತ್ರುಗಳೂ ಈತನನ್ನು ಎದುರಿಸುವುದಿಲ್ಲ. ಈತನು ಒಮ್ಮೆ ಹಾರುತ್ತಿದ್ದಾಗ ಹಿಮಾಲಯದ ಕೊಳದಲ್ಲಿದ್ದ ಒಂದು ಕಮಲವು ಈತನ ರೆಕ್ಕೆಯ ಗಾಳಿಗೆ ಸಿಲುಕಿತು. ಕೊಳದಿಂದ ಬೇರೆಯಾಯಿತು. ಹಾರುತ್ತಾ ಬಂದು ಬಹಳ ದೂರದಲ್ಲಿದ್ದ ಭೀಮ–

ದ್ರೌಪದಿಯರ ಸಮೀಪದಲ್ಲಿ ಬಿತ್ತು. ಅದು ಕೆಲವು ದೈತ್ಯರ ನಾಶಕ್ಕೆ ಕಾರಣವಾಯಿತು ಎಂಬ ವಿಷಯ ಭಾರತದಲ್ಲಿದೆ.

ಹೀಗೆಯೇ ಇನ್ನೊಂದು ಪ್ರಸಂಗ– ಒಮ್ಮೆ ದೇವತೆಗಳೂ ದೇವರೂ ಒಂದು ಕಡೆ ಸೇರಿದ್ದರು. ಇದೇ ಸಮಯದಲ್ಲಿ ಅಲ್ಲಿಗೆ ಬಲಿಯೂ ಬರುತ್ತಿದ್ದನು. ಆತನಿಗೆ ಆಗ ಅಸುರಾವೇಶ ಆಗಿತ್ತು. ಇದನ್ನು ದೇವತೆಗಳಿಗೆ ತಿಳಿಸಲು ದೇವರು ಒಂದು ಉಪಾಯ ಮಾಡಿದರು. ದೇವತೆಗಳನ್ನೆಲ್ಲಾ ನಿದ್ದೆ ಬಂದವರಂತೆ ನಟಿಸಲು ಹೇಳಿದನು. ತಾನೂ ಹಾಗೆಯೇ ನಟಿಸಿದನು. ಈ ಹೊತ್ತಿಗೆ ಬಲಿ ಅಲ್ಲಿಗೆ ತಲುಪಿದನು. ಎಲ್ಲರೂ ಮಲಗಿದ್ದನ್ನು ನೋಡಿದನು. ದೇವರ ಕಿರೀಟವನ್ನು ಕದಿಯಲು ಇಚ್ಛಿಸಿದನು. ಕದ್ದನೂ ಕೂಡಾ. ಅನಂತರ ಬಲಿ ಹೊರಟನು. ಎಲ್ಲರೂ ಕಣ್ಣು ತೆರೆದು ನಗಲು ಆರಂಭಿಸಿದರು. ಈ ದೃಶ್ಯವನ್ನು ಕಂಡ ಗರುಡನಿಗೆ ಸಹಿಸಲಾಗಲಿಲ್ಲ. ಬಲಿಯ ಹಿಂದೆ ಹೊರಟನು. ಪಾತಾಳ ತಲುಪಿದ್ದ ಬಲಿಯನ್ನು ಸೋಲಿಸಿ ಕಿರೀಟವನ್ನು ಹಿಡಿದುಕೊಂಡು ಹಿಂದೆ ಬರುತ್ತಿದ್ದನು. ಈ ಘಟನೆ ನಡೆದದ್ದು ಕೃಷ್ಣಾವತಾರದ ಸಮಯದಲ್ಲಿ. ಕೃಷ್ಣನು ಆಗ ಗೋಮಂತಬೆಟ್ಟದಲ್ಲಿದ್ದನು. ದಾರಿಯಲ್ಲಿ ಕೃಷ್ಣನನ್ನು ಕಂಡ ಗರುಡನು ಆ ಕಿರೀಟವನ್ನು ಕೃಷ್ಣಾರ್ಪಣ ಎಂದನು. ಇವೇ ಮೊದಲಾದವು ಆತನ ಶಕ್ತಿಯ ದ್ಯೋತಕ.

ಈತನು ಏನು ಶಕ್ತಿ ಪ್ರದರ್ಶಿಸಿದರೂ ಅದು ಇನ್ನೊಬ್ಬರ ಸೇವಾಭಾವದಿಂದ ಹೊರತು ತನಗಾಗಿ ಅಲ್ಲ ಎಂಬುದು ಈತನಲ್ಲಿರುವ ಅಸ್ವಾರಸ್ಯ.

**ಸ ವಿಷ್ಣುವಾಹತ್ವಮವಾಪ ತಾರ್ಕ್ಷ್ಯ–**
**ಸ್ತಪೋಭಿರಪ್ಯನ್ಯಸುರೈರಸಾಧ್ಯಮ್ ।**
**ತದೀಯತಲ್ಪತ್ವಮಹೀಶ್ವರೋಽಯಂ**
**ವಿಮುಕ್ತಿ ಮಾರ್ಗೌ ಕಿಲ ತೌ ಸುರಾಣಾಮ್** ॥ ೨೨ ॥

ಸಃ=ಆ; ತಾರ್ಕ್ಷ್ಯಃ=ಗರುಡನು; ಅನ್ಯ=ಬೇರೆ; ಸುರೈಃ=ದೇವತೆಗಳಿಂದ; ತಪೋಭಿಃ ಅಪಿ=ತಪಸ್ಸುಗಳಿಂದಲೂ; ಅಸಾಧ್ಯಂ=ಹೊಂದಲು ಅಸಾಧ್ಯವಾದ; ವಿಷ್ಣು=ದೇವರ; ವಾಹತ್ವಂ=ವಾಹನತ್ವವನ್ನು; ಅವಾಪ=ಹೊಂದಿದನು; ಅಹಿ=ಸರ್ಪಗಳಿಗೆ; ಈಶ್ವರಃ= ಒಡೆಯನಾದ; ಅಯಂ=ಈ ಶೇಷನು; ತದೀಯ=ಅವನ ಸಂಬಂಧಿಯಾದ; ತಲ್ಪತ್ವಂ= ಹಾಸಿಗೆತ್ವವನ್ನು; ಅವಾಪ=ಹೊಂದಿದನು; ತೌ=ಅವರು; ಸುರಾಣಾಂ=ದೇವತೆ ಗಳಿಗೆ; ವಿಮುಕ್ತಿ=ಮೋಕ್ಷಕ್ಕೆ; ಮಾರ್ಗೌ=ದಾರಿ; ಕಿಲ=ಪ್ರಸಿದ್ಧ.

ಈ ಗರುಡನು ದೇವರನ್ನು ಹೊರುವ ವಾಹನನಾಗಿದ್ದಾನೆ. ಈ ಭಾಗ್ಯ ಬೇರೆ ಯಾವ ದೇವತೆಗಳಿಗೂ ಇಲ್ಲ. ಎಂತಹ ಕಠಿಣ ತಪಸ್ಸು ಮಾಡಿದರೂ ಪಡೆಯಲು ಸಾಧ್ಯವೇ ಇಲ್ಲ. ಹಾಗೆಯೇ ಶೇಷನು ದೇವರಿಗೆ ಹಾಸಿಗೆಯ ರೂಪದಲ್ಲಿದ್ದಾನೆ. ಇದೂ

ಕೂಡಾ ಈತನಿಗೆ ಸಿಕ್ಕಿದ ದೊಡ್ಡ ಭಾಗ್ಯವೇ ಸರಿ. ಇಷ್ಟೇ ಅಲ್ಲದೆ ಇನ್ನೂ ಹೆಚ್ಚಿನ ಭಾಗ್ಯ ಇವರಿಗಿದೆ. ಮುಕ್ತಿಯೋಗ್ಯರು ಬ್ರಹ್ಮದೇವರ ಮೂಲಕ ದೇವರ ಬಳಿಗೆ ಹೋಗುವರು. ಬ್ರಹ್ಮದೇವರ ಬಳಿಗೆ ಹೋಗಬೇಕಾದರೆ ಇವರಿಬ್ಬರಲ್ಲಿ ಯಾರಾದರೊಬ್ಬರನ್ನು ಆಶ್ರಯಿಸಲೇ ಬೇಕು. ಇವರ ಮಾರ್ಗದಲ್ಲಿಯೇ ಹೋಗಬೇಕು. ಈ ಎರಡು ಮಾರ್ಗಗಳನ್ನು ಶಾಸ್ತ್ರಕಾರರು ಗರುಡಮಾರ್ಗ ಶೇಷಮಾರ್ಗ ಎಂದು ಉಲ್ಲೇಖಿಸಿದ್ದಾರೆ.

ಸಂದೇಶ : **ಇವರಿಬ್ಬರ ಭಾಗ್ಯ ದೊಡ್ಡದಿದ್ದರೂ ದೇವರ ಮುಂದೆ ಬಹಳ ಚಿಕ್ಕವರು ಎಂಬುದು ಅಸ್ವರಸ ಬೀಜ.**

**ಗರುತ್ಮದಂಸಾಚಲನೀಲ ಮೇಘಂ ಫಣೀಂದ್ರಹಾರೋಚ್ಚಯನೀಲರತ್ನಂ ।**
**ಉಮೇಶಹಂಸ ಪ್ರಿಯಪಾದಪದ್ಮಂ ಪತಿಂ ಸತೀ ಸಾ ಚಕಮೇ ರಮೇಶಮ್ ॥ ೨೩ ॥**

ಗರುತ್ಮತ್=ಗರುಡನ; ಅಂಸ=ಹೆಗಲೆಂಬ; ಅಚಲ=ಬೆಟ್ಟಕ್ಕೆ; ನೀಲ=ನೀಲವಾದ; ಮೇಘಂ=ಮೋಡದಂತಿರುವ; ಫಣಿ=ಹಾವುಗಳಿಗೆ; ಇಂದ್ರ=ಒಡೆಯನೆಂಬ; ಹಾರ=ಒಡವೆಗಳ; ಉಚ್ಚಯ=ಸಮೂಹಕ್ಕೆ; ನೀಲ=ನೀಲವಾದ; ರತ್ನಂ=ರತ್ನದಂತಿರುವ; ಉಮೇಶ=ರುದ್ರನೆಂಬ; ಹಂಸ=ಹಂಸಕ್ಕೆ; ಪ್ರಿಯ=ಇಷ್ಟವಾದ; ಪಾದ=ಚರಣವೆಂಬ; ಪದ್ಮಂ=ಕಮಲವುಳ್ಳ; ರಮೇಶಂ=ನಾರಾಯಣನನ್ನು; ಪತಿಂ=ಪತಿಯನ್ನಾಗಿ; ಸತೀ=ಸಾತ್ವಿಕಳಾದ; ಸಾ=ಅವಳು; ಚಕಮೇ=ಆಶಿಸಿದಳು.

ದೇವರಿಗೆ ಗರುಡವಾಹನನೆಂದೇ ಹೆಸರು. ಗರುಡನ ಮೇಲೆಯೇ ಈತನ ಸಂಚಾರ. ಆದ್ದರಿಂದಲೇ ಗರುಡನಿಗೆ ಹಿಂದೆ ಹೇಳಿದ ಬಲ. ಬೆಟ್ಟಗಳು ಬಹಳ ಎತ್ತರಗಳು ಅವುಗಳಲ್ಲಿ ಸದಾ ಹಸಿರು ಇರುತ್ತದೆ. ಇದು ಮಾನವನಿಂದ ಸಾಧ್ಯವಿಲ್ಲ. ಬೆಟ್ಟಗಳಿಗಿಂತಲೂ ಎತ್ತರವಾದ ಮೋಡಗಳು ಮಳೆಗರೆದರೆ ಮಾತ್ರ ಈ ಮೋಹಕವಾದ ಹಸಿರು ಸಾಧ್ಯ. ಅದೇ ರೀತಿ ಗರುಡನಿಗೆ ಇಂತಹ ಬಲ ಕೊಟ್ಟವರು ಬೇರೆ ಯಾರೂ ಅಲ್ಲ; ದೇವರೇ ಕೊಟ್ಟವನು. ತನ್ನ ವ್ಯಕ್ತಿತ್ವದಿಂದ ಬೆಟ್ಟದಂತೆ ಎತ್ತರಕ್ಕೇರಿದ ಈ ಗರುಡನಿಗೆ ಮೋಡದಂತೆ ನೀಲ ಬಣ್ಣವುಳ್ಳ ದೇವರು ಅಭೀಷ್ಟಗಳೆಂಬ ವರ್ಷಣೆ ಗೈದದ್ದೇ ಈತನು ಎತ್ತರಕ್ಕೇರಲು ಕಾರಣ.

ಹಾಗೆಯೇ ದೇವರು ಶೇಷಶಾಯೀ ಎಂಬ ಹೆಸರುಳ್ಳವನೂ ಕೂಡಾ. ಶೇಷನು ತನ್ನ ನೀಲವಾದ ದೇಹವನ್ನು ಸುರುಳಿಸಿಕೊಂಡು ಇರುವನು. ಈ ಸುರುಳಿಯ ಮಧ್ಯದಲ್ಲಿ ದೇವರು ಮಲಗುವನು. ಸುರುಳಿದ ಈ ದೇಹವು ಹಾರಗಳಂತೆ ತೋರುವುದು. ಕೇವಲ ಹಾರಗಳು ಚೆಂದ ಕಾಣುವುದಿಲ್ಲ. ಅವುಗಳ ಮಧ್ಯದಲ್ಲಿ ಒಂದು ಉತ್ತಮ ಜಾತಿಯ ನೀಲಮಣಿಯನ್ನು ಪೋಣಿಸಿದಾಗ ಮಾತ್ರ ಹಾರಗಳ ಸೌಂದರ್ಯ ಇಮ್ಮಡಿಮುಮ್ಮಡಿ

ಆಗುವುದು. ಈ ಶೇಷನ ದೇಹದ ಮಧ್ಯದಲ್ಲಿ ದೇವರು ನೀಲಮಣಿಯಂತೆ ಪವಡಿಸುತ್ತಾನೆ. ಇದರಿಂದ ಶೇಷನೆಂಬ ಹಾರವು ಬಹಳ ಬೆಲೆವುಳ್ಳದ್ದಾಯಿತು.

ಕೊಳಗಳಲ್ಲಿ ಹಂಸಪಕ್ಷಿಯೂ ತಾವರೆಗಳೂ ಇರುತ್ತವೆ. ಹಂಸಗಳು ಸಂತೋಷದಿಂದ ಬದುಕುವುದೇ ಈ ಹೂಗಳಿಂದ. ಈ ಹೂಗಳಲ್ಲದೆ ಬೇರೆ ಏನಿದ್ದರೂ ಅವುಗಳ ಸಂಕಟ ಹೇಳತೀರದು. ಅದೇ ರೀತಿ ಈ ರುದ್ರದೇವರೂ ಕೂಡಾ. ಹಾಲಾಹಲದ ಪಾನದಿಂದಾಗಿ ತಲೆನೋವು ಆರಂಭವಾಗಿತ್ತು. ಈ ಪೀಡಾಶಮನಕ್ಕಾಗಿ ದೇವರ ಪಾದದಿಂದ ಬಂದ ಗಂಗೆಯನ್ನು ಸದಾ ತಲೆಯಲ್ಲಿ ಧರಿಸಿದ್ದಾರೆ. ಆದ್ದರಿಂದ ಸದಾ ದೇವರ ಪಾದಪದ್ಮವನ್ನು ಆಶ್ರಯಿಸಿದ್ದಾರೆ. ಈ ರೀತಿಯಾಗಿ ಬಗೆಬಗೆಯಿಂದ ಉತ್ತಮತ್ವವುಳ್ಳ ನಾರಾಯಣನನ್ನು ಈ ರುಗ್ಮಿಣಿಯು ತನ್ನ ಪತಿಯನ್ನಾಗಿ ಆಶಿಸಿದಳು.

**ತ್ರಿವಿಷ್ಟಪೇಶೋಯಮಭೂದ್ಬಲಾರಿಸ್ತ್ರಿವಿಕ್ರಮಶ್ರೀಚರಣ ಪ್ರಸಾದಾತ್ ।**
**ವಿಮಥ್ನತಾ ತೇನ ಪಯಃ ಪಯೋಧಿಂ ವಿಚಿತ್ರಸೌಭಾಗ್ಯವೃತಃ ಕೃತೋಽಸೌ ॥ ೨೪ ॥**

ಬಲ=ಬಲ ಎಂಬ ದೈತ್ಯನಿಗೆ; ಅರಿಃ=ಶತ್ರುವಾದ; ಅಯಂ=ಇವನು; ತ್ರಿವಿಕ್ರಮ=ತ್ರಿವಿಕ್ರಮನ; ಶ್ರೀ=ಚಂದದ; ಚರಣ=ಕಾಲಿನ; ಪ್ರಸಾದಾತ್=ಅನುಗ್ರಹದಿಂದ; ತ್ರಿವಿಷ್ಟಪ=ಸ್ವರ್ಗಕ್ಕೆ; ಈಶಃ=ಒಡೆಯನು; ಅಭೂತ್=ಆದನು; ಪಯಃ=ಹಾಲಿನ; ಪಯೋಧಿಂ=ಸಮುದ್ರವನ್ನು; ವಿಮಥ್ನತಾ=ಮಥಿಸುವ; ತೇನ=ಅವನಿಂದ; ಅಸೌ=ಇವನು; ವಿಚಿತ್ರ=ನಾನಾ ರೀತಿಯ; ಸೌಭಾಗ್ಯ=ಸಂಪತ್ತುಗಳಿಂದ; ವೃತಃ=ಕೂಡಿದವನು; ಕೃತಃ=ಮಾಡಲ್ಪಟ್ಟನು.

ರುಗ್ಮಿಣಿಯ ಗೆಳತಿಯು ಇಂದ್ರನನ್ನು ಪರಿಚಯಿಸುತ್ತಾಳೆ. ಇಂದ್ರನು ನೂರು ಯಾಗಗಳನ್ನು ಮಾಡಿ ಇಂದ್ರಪದವಿಗೆ ಬಂದದ್ದು. ಇದನ್ನು ತಿಳಿದ ಬಲಿಚಕ್ರವರ್ತಿಯು ತನಗೆ ಈ ಕಲ್ಪದಲ್ಲಿಯೇ ಇಂದ್ರಪದವಿ ಬೇಕೆಂದು ತಾನೂ ತೊಂಬತ್ತೊಂಬತ್ತು ಯಾಗಗಳನ್ನು ಮಾಡಿದನು. ನೂರನೇ ಯಾಗ ಆರಂಭಿಸಿದನು. ಇದರಿಂದ ಭೀತನಾದ ಇಂದ್ರನು ದೇವರನ್ನು ಮೊರೆಹೊಂದಿದನು. ದೇವರು ವಾಮನನಾಗಿ ಅವತರಿಸಿದನು. ಬಲಿಯ ಬಳಿಗೆ ಹೋದನು. ಭೂಮಿಯನ್ನು ಬೇಡಿದನು. ಬಲಿಯು ಒಪ್ಪಿದನು. ವಾಮನನು ತ್ರಿವಿಕ್ರಮನಾದನು. ಬಲಿಯನ್ನು ಪಾತಾಳಕ್ಕೆ ಅಟ್ಟಿದನು. ಇಂದ್ರನ ಸ್ಥಾನವನ್ನು ಭದ್ರಮಾಡಿದನು. ಇಷ್ಟೇ ಅಲ್ಲದೆ ಈತನ ಹೆಸರಿಗೆ ತಕ್ಕಂತೆ ಈತನಿಗೆ ಸಕಲ ಐಶ್ವರ್ಯವನ್ನೂ ಪಾಲಿಸಿದನು. ಈ ಐಶ್ವರ್ಯಗಳೆಲ್ಲಾ ಸಮುದ್ರಮಥನದ ಸಂದರ್ಭದಲ್ಲಿ ಬಂದವುಗಳು. ಸಮುದ್ರಮಥನದ ಚರಿತ್ರೆ ಎಲ್ಲರಿಗೂ ತಿಳಿದಿದೆ. ಮೇಲ್ನೋಟಕ್ಕೆ ದೇವದೈತ್ಯರು ಸೇರಿ ಮಾಡಿದಂತೆ ತೋರುವುದು. ಇದು ಸರಿಯಲ್ಲ. ದೇವದೈತ್ಯರು ಬಳಲಿದಾಗ ದೇವರೇ ಸ್ವಯಂ ಮಾಡಿದನು.

ಈ ರೀತಿಯಾಗಿ ಇಂದ್ರನ ಪದವಿಯಾಗಲೀ ಪದವಿಗೆ ಸಂಬಂಧಪಟ್ಟ ಸಂಪತ್ತಾಗಲೀ ಎಲ್ಲವೂ ದೇವರಿಂದಲೇ ಬಂದದ್ದು ಎಂಬುದು ಇಂದ್ರನ ಬಗ್ಗೆ ಇರುವ ಅಸ್ವಾರಸ್ಯ.

**ಕಲ್ಪದ್ರುಮಃ ಕರಿವರಃ ಕವಿವರ್ಣ್ಯವಾಜೀ ।**
**ನಿತ್ಯಂ ವಶೇಽಸ್ಯ ಕಿಲ ದೇವಿ ಸಭಾಂ ಸ ದೈವೀಮ್ ।**
**ಮಧ್ಯೇ ಮಹಾಸನಗತಃ ಪರಿಪಾತ್ಯಜಸ್ರಂ–**
**ಇಂದ್ರೋಽಯಮಿಂದ್ರಪದಯೋಗ್ಯಮಹಾವಿಭೂತಿಃ ॥ ೨೫ ॥**

ಹೇ ದೇವಿ=ಎಲೋ ದೇವಿಯೇ; ಕಲ್ಪದ್ರುಮಃ=ಕಲ್ಪವೃಕ್ಷವು; ಕರಿ=ಆನೆಗಳಲ್ಲಿ; ವರಃ=ಶ್ರೇಷ್ಠವಾದದ್ದು; ಕವಿ=ಕವಿಗಳಿಂದ; ವರ್ಣ್ಯ=ವರ್ಣಿಸಲ್ಪಡುವ; ವಾಜೀ=ಆ ಕುದುರೆಯು; ಅಸ್ಯ=ಇವನ; ವಶೇ=ಅಧೀನದಲ್ಲಿ; ನಿತ್ಯಂ=ಯಾವಾಗಲೂ; ಅಸ್ತಿ ಕಿಲ=ಇದೆಯಷ್ಟೇ; ಇಂದ್ರ=ಇಂದ್ರನೆಂಬ; ಪದ=ಶಬ್ದಕ್ಕೆ; ಯೋಗ್ಯ=ಉಚಿತವಾದ; ಮಹಾ=ಬಹಳ; ವಿಭೂತಿಃ=ಸಂಪತ್ತುಳ್ಳ; ಅಯಂ=ಈ; ಇಂದ್ರಃ=ಇಂದ್ರನು; ಮಧ್ಯೇ=ಎಲ್ಲರ ಮಧ್ಯದಲ್ಲಿ; ಮಹಾ=ದೊಡ್ಡ; ಆಸನ=ಆಸನದಲ್ಲಿ; ಗತಃ=ಇರುವವನಾಗಿ; ಅಜಸ್ರಂ=ಯಾವಾಗಲೂ; ದೈವೀಂ=ದೇವಸಂಬಂಧಿಯಾದ; ಸಭಾಂ=ಸಭೆಯನ್ನು; ಪರಿಪಾತಿ=ರಕ್ಷಿಸುತ್ತಾನೆ.

ಸಮುದ್ರಮಥನದಿಂದ ಬಂದ ಭಾಗ್ಯವನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ. ಐರಾವತ ಎಂಬ ಆನೆ, ಕಲ್ಪವೃಕ್ಷವು ಸಮುದ್ರದಿಂದ ಬಂದವುಗಳು. ಹಾಗೆಯೇ ಒಂದು ಕುದುರೆಯೂ ಬಂದಿದೆ. ಕುದುರೆಯ ಸೌಂದರ್ಯ ಎಷ್ಟೆಂದರೆ ಜ್ಞಾನಿಗಳೂ ಈ ಕುದುರೆಗೆ ಮಾರುಹೋಗಿದ್ದಾರೆ. ದೇವರು ಇವನ್ನೆಲ್ಲಾ ಈತನಿಗೆ ಒದಗಿಸಿದನು. ಈತನಿಗಿರುವ ಇಂದ್ರ ಎಂಬ ಹೆಸರನ್ನು ಅನ್ವರ್ಥಕಗೊಳಿಸಿದ 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಇಂದ್ರ ಎಂಬ ಪದವು ಹೊರಟದ್ದು. ಅಂದರೆ ಬೇರೆ ಯಾರಿಗೂ ಇರದ ಸಂಪತ್ತು ಅಧಿಕಾರ ಎಂದರ್ಥ. ರುದ್ರಾದಿ ಕೆಲವು ದೇವತೆಗಳನ್ನು ಹೊರತು ಬೇರೆ ಯಾವ ದೇವತೆಗಳೂ ಇಂತಹ ಸಂಪತ್ತನ್ನಾಗಲೀ ಅಧಿಕಾರವನ್ನಾಗಲೀ ಹೊಂದಲಿಲ್ಲ. ಇಂತಹ ದೇವತೆಗಳನ್ನು ಸದಾ ರಕ್ಷಿಸುವ ಜವಾಬ್ದಾರಿ ಈತನಿಗಿದೆ.

<u>ಸಂದೇಶ</u> : **ಪದವಿ ಹಾಗೂ ಸಂಪತ್ತು ಏನೋ ದೊಡ್ಡದಿದೆ. ಆದರೆ ಸ್ವಯಂಸಂಪಾದಿಸಿದ್ದಲ್ಲ. ಬಹಳ ಕಾಲ ಉಳಿಯುವಂಥದ್ದೂ ಅಲ್ಲ.**

**ಅಯಂ ಸುರಾಣಾಂ ಗುರುರೇಷ ಧರ್ಮಃ ಸುಧಾಕರೋಽಸೌ ಸ ಸಹಸ್ರರಶ್ಮಿಃ ।**
**ಅಯಂ ಚ ರತ್ನಾಕರಶಬ್ದಿತೋಗ್ರ್ಯೇ ಮಹತ್ವಮೇಷಾಮಭಿಧೈವ ವಕ್ತಿ ॥ ೨೬ ॥**

ಹೇ ಅಗ್ರ್ಯೇ=ಎಲೋ ಉತ್ತಮಳೇ; ಅಯಂ=ಇವನು; ಸುರಾಣಾಂ=ದೇವತೆಗಳಿಗೆ; ಗುರುಃ=ಗುರುವು; ಏಷಃ=ಇವನು; ಧರ್ಮಃ=ಧರ್ಮರಾಜನು; ಅಸೌ=ಇವನು; ಸುಧಾ=ಅಮೃತಕ್ಕೆ ಸಮವಾದ; ಕರಃ=ಕಿರಣವುಳ್ಳವನು; ಸಃ=ಅವನು; ಸಹಸ್ರ=ಸಾವಿರ; ರಶ್ಮಿಃ=ಕಿರಣದವನು; ಅಯಂ ಚ=ಇವನಾದರೂ; ರತ್ನ=ರತ್ನಗಳಿಗೆ; ಆಕರಃ=ಆಶ್ರಯನು ಎಂಬ; ಶಬ್ದಿತಃ=ಶಬ್ದವುಳ್ಳವನು; ಏಷಾಂ=ಇವರ; ಅಭಿಧಾ ಏವ=ಹೆಸರೇ; ಮಹತ್ವಂ=ಉತ್ತಮತ್ವವನ್ನು; ವಕ್ತಿ=ಹೇಳುತ್ತದೆ.

ಆಗುವುದು. ಈ ಶೇಷನ ದೇಹದ ಮಧ್ಯದಲ್ಲಿ ದೇವರು ನೀಲಮಣಿಯಂತೆ ಪವಡಿಸುತ್ತಾನೆ. ಇದರಿಂದ ಶೇಷನೆಂಬ ಹಾರವು ಬಹಳ ಬೆಲೆವುಳ್ಳದ್ದಾಯಿತು.

ಕೊಳಗಳಲ್ಲಿ ಹಂಸಪಕ್ಷಿಯೂ ತಾವರೆಗಳೂ ಇರುತ್ತವೆ. ಹಂಸಗಳು ಸಂತೋಷದಿಂದ ಬದುಕುವುದೇ ಈ ಹೂಗಳಿಂದ. ಈ ಹೂಗಳಲ್ಲದೆ ಬೇರೆ ಏನಿದ್ದರೂ ಅವುಗಳ ಸಂಕಟ ಹೇಳತೀರದು. ಅದೇ ರೀತಿ ಈ ರುದ್ರದೇವರೂ ಕೂಡಾ. ಹಾಲಾಹಲದ ಪಾನದಿಂದಾಗಿ ತಲೆನೋವು ಆರಂಭವಾಗಿತ್ತು. ಈ ಪೀಡಾಶಮನಕ್ಕಾಗಿ ದೇವರ ಪಾದದಿಂದ ಬಂದ ಗಂಗೆಯನ್ನು ಸದಾ ತಲೆಯಲ್ಲಿ ಧರಿಸಿದ್ದಾರೆ. ಆದ್ದರಿಂದ ಸದಾ ದೇವರ ಪಾದಪದ್ಮವನ್ನು ಆಶ್ರಯಿಸಿದ್ದಾರೆ. ಈ ರೀತಿಯಾಗಿ ಬಗೆಬಗೆಯಿಂದ ಉತ್ತಮತ್ವವುಳ್ಳ ನಾರಾಯಣನನ್ನು ಈ ರುಗ್ಮಿಣಿಯು ತನ್ನ ಪತಿಯನ್ನಾಗಿ ಆಶಿಸಿದಳು.

**ತ್ರಿವಿಷ್ಟಪೇಶೋಽಯಮಭೂದ್ಬಲಾರಿಸ್ತ್ರಿವಿಕ್ರಮಶ್ರೀಚರಣ ಪ್ರಸಾದಾತ್ ।**
**ವಿಮಥ್ನತಾ ತೇನ ಪಯಃ ಪಯೋಧಿಂ ವಿಚಿತ್ರಸೌಭಾಗ್ಯವೃತಃ ಕೃತೋಽಸೌ ॥ ೨೪ ॥**

ಬಲ=ಬಲ ಎಂಬ ದೈತ್ಯನಿಗೆ; ಅರಿಃ=ಶತ್ರುವಾದ; ಅಯಂ=ಇವನು; ತ್ರಿವಿಕ್ರಮ=ತ್ರಿವಿಕ್ರಮನ; ಶ್ರೀ=ಚಂದದ; ಚರಣ=ಕಾಲಿನ; ಪ್ರಸಾದಾತ್=ಅನುಗ್ರಹದಿಂದ; ತ್ರಿವಿಷ್ಟಪ=ಸ್ವರ್ಗಕ್ಕೆ; ಈಶಃ=ಒಡೆಯನು; ಅಭೂತ್=ಆದನು; ಪಯಃ=ಹಾಲಿನ; ಪಯೋಧಿಂ=ಸಮುದ್ರವನ್ನು; ವಿಮಥ್ನತಾ=ಮಥಿಸುವ; ತೇನ=ಅವನಿಂದ; ಅಸೌ=ಇವನು; ವಿಚಿತ್ರ=ನಾನಾ ರೀತಿಯ; ಸೌಭಾಗ್ಯ=ಸಂಪತ್ತುಗಳಿಂದ; ವೃತಃ=ಕೂಡಿದವನು; ಕೃತಃ=ಮಾಡಲ್ಪಟ್ಟನು.

ರುಗ್ಮಿಣಿಯ ಗೆಳತಿಯು ಇಂದ್ರನನ್ನು ಪರಿಚಯಿಸುತ್ತಾಳೆ. ಇಂದ್ರನು ನೂರು ಯಾಗಗಳನ್ನು ಮಾಡಿ ಇಂದ್ರಪದವಿಗೆ ಬಂದದ್ದು. ಇದನ್ನು ತಿಳಿದ ಬಲಿಚಕ್ರವರ್ತಿಯು ತನಗೆ ಈ ಕಲ್ಪದಲ್ಲಿಯೇ ಇಂದ್ರಪದವಿ ಬೇಕೆಂದು ತಾನೂ ತೊಂಬತ್ತೊಂಬತ್ತು ಯಾಗಗಳನ್ನು ಮಾಡಿದನು. ನೂರನೇ ಯಾಗ ಆರಂಭಿಸಿದನು. ಇದರಿಂದ ಭೀತನಾದ ಇಂದ್ರನು ದೇವರನ್ನು ಮೊರೆಹೊಂದಿದನು. ದೇವರು ವಾಮನನಾಗಿ ಅವತರಿಸಿದನು. ಬಲಿಯ ಬಳಿಗೆ ಹೋದನು. ಭೂಮಿಯನ್ನು ಬೇಡಿದನು. ಬಲಿಯು ಒಪ್ಪಿದನು. ವಾಮನನು ತ್ರಿವಿಕ್ರಮನಾದನು. ಬಲಿಯನ್ನು ಪಾತಾಳಕ್ಕೆ ಅಟ್ಟಿದನು. ಇಂದ್ರನ ಸ್ಥಾನವನ್ನು ಭದ್ರಮಾಡಿದನು. ಇಷ್ಟೇ ಅಲ್ಲದೆ ಈತನ ಹೆಸರಿಗೆ ತಕ್ಕಂತೆ ಈತನಿಗೆ ಸಕಲ ಐಶ್ವರ್ಯವನ್ನೂ ಪಾಲಿಸಿದನು. ಈ ಐಶ್ವರ್ಯಗಳೆಲ್ಲಾ ಸಮುದ್ರಮಥನದ ಸಂದರ್ಭದಲ್ಲಿ ಬಂದವುಗಳು. ಸಮುದ್ರಮಥನದ ಚರಿತ್ರೆ ಎಲ್ಲರಿಗೂ ತಿಳಿದಿದೆ. ಮೇಲ್ನೋಟಕ್ಕೆ ದೇವದೈತ್ಯರು ಸೇರಿ ಮಾಡಿದಂತೆ ತೋರುವುದು. ಇದು ಸರಿಯಲ್ಲ. ದೇವದೈತ್ಯರು ಬಳಲಿದಾಗ ದೇವರೇ ಸ್ವಯಂ ಮಾಡಿದನು.

ಈ ರೀತಿಯಾಗಿ ಇಂದ್ರನ ಪದವಿಯಾಗಲೀ ಪದವಿಗೆ ಸಂಬಂಧಪಟ್ಟ ಸಂಪತ್ತಾಗಲೀ ಎಲ್ಲವೂ ದೇವರಿಂದಲೇ ಬಂದದ್ದು ಎಂಬುದು ಇಂದ್ರನ ಬಗ್ಗೆ ಇರುವ ಅಸ್ವಾರಸ್ಯ.

ಕಲ್ಪದ್ರುಮಃ ಕರಿವರಃ ಕವಿವರ್ಣ್ಯವಾಜೀ ।
ನಿತ್ಯಂ ವಶೇಽಸ್ಯ ಕಿಲ ದೇವಿ ಸಭಾಂ ಸ ದೈವೀಮ್ ।
ಮಧ್ಯೇ ಮಹಾಸನಗತಃ ಪರಿಪಾತ್ಯಜಸ್ರಂ-
ಇಂದ್ರೋಽಯಮಿಂದ್ರಪದಯೋಗ್ಯಮಹಾವಿಭೂತಿಃ ॥ ೨೫ ॥

ಹೇ ದೇವಿ=ಎಲೋ ದೇವಿಯೇ; ಕಲ್ಪದ್ರುಮಃ=ಕಲ್ಪವೃಕ್ಷವು; ಕರಿ=ಆನೆಗಳಲ್ಲಿ; ವರಃ=ಶ್ರೇಷ್ಠವಾದದ್ದು; ಕವಿ=ಕವಿಗಳಿಂದ; ವರ್ಣ್ಯ=ವರ್ಣಿಸಲ್ಪಡುವ; ವಾಜೀ=ಆ ಕುದುರೆಯು; ಅಸ್ಯ=ಇವನ; ವಶೇ=ಅಧೀನದಲ್ಲಿ; ನಿತ್ಯಂ=ಯಾವಾಗಲೂ; ಅಸ್ತಿ ಕಿಲ=ಇದೆಯಷ್ಟೇ; ಇಂದ್ರ=ಇಂದ್ರನೆಂಬ; ಪದ=ಶಬ್ದಕ್ಕೆ; ಯೋಗ್ಯ=ಉಚಿತವಾದ; ಮಹಾ=ಬಹಳ; ವಿಭೂತಿಃ=ಸಂಪತ್ತುಳ್ಳ; ಅಯಂ=ಈ; ಇಂದ್ರಃ=ಇಂದ್ರನು; ಮಧ್ಯೇ=ಎಲ್ಲರ ಮಧ್ಯದಲ್ಲಿ; ಮಹಾ=ದೊಡ್ಡ; ಆಸನ=ಆಸನದಲ್ಲಿ; ಗತಃ=ಇರುವವನಾಗಿ; ಅಜಸ್ರಂ=ಯಾವಾಗಲೂ; ದೈವೀಂ=ದೇವಸಂಬಂಧಿಯಾದ; ಸಭಾಂ=ಸಭೆಯನ್ನು; ಪರಿಪಾತಿ=ರಕ್ಷಿಸುತ್ತಾನೆ.

ಸಮುದ್ರಮಥನದಿಂದ ಬಂದ ಭಾಗ್ಯವನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ. ಐರಾವತ ಎಂಬ ಆನೆ, ಕಲ್ಪವೃಕ್ಷವು ಸಮುದ್ರದಿಂದ ಬಂದವುಗಳು. ಹಾಗೆಯೇ ಒಂದು ಕುದುರೆಯೂ ಬಂದಿದೆ. ಕುದುರೆಯ ಸೌಂದರ್ಯ ಎಷ್ಟೆಂದರೆ ಜ್ಞಾನಿಗಳೂ ಈ ಕುದುರೆಗೆ ಮಾರುಹೋಗಿದ್ದಾರೆ. ದೇವರು ಇವನ್ನೆಲ್ಲಾ ಈತನಿಗೆ ಒದಗಿಸಿದನು. ಈತನಿಗಿರುವ ಇಂದ್ರ ಎಂಬ ಹೆಸರನ್ನು ಅನ್ವರ್ಥಕಗೊಳಿಸಿದ 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಇಂದ್ರ ಎಂಬ ಪದವು ಹೊರಟದ್ದು. ಅಂದರೆ ಬೇರೆ ಯಾರಿಗೂ ಇರದ ಸಂಪತ್ತು ಅಧಿಕಾರ ಎಂದರ್ಥ. ರುದ್ರಾದಿ ಕೆಲವು ದೇವತೆಗಳನ್ನು ಹೊರತು ಬೇರೆ ಯಾವ ದೇವತೆಗಳೂ ಇಂತಹ ಸಂಪತ್ತನ್ನಾಗಲೀ ಅಧಿಕಾರವನ್ನಾಗಲೀ ಹೊಂದಲಿಲ್ಲ. ಇಂತಹ ದೇವತೆಗಳನ್ನು ಸದಾ ರಕ್ಷಿಸುವ ಜವಾಬ್ದಾರಿ ಈತನಿಗಿದೆ.

ಸಂದೇಶ : **ಪದವಿ ಹಾಗೂ ಸಂಪತ್ತು ಏನೋ ದೊಡ್ಡದಿದೆ. ಆದರೆ ಸ್ವಯಂಸಂಪಾದಿಸಿದ್ದಲ್ಲ. ಬಹಳ ಕಾಲ ಉಳಿಯುವಂಥದ್ದೂ ಅಲ್ಲ.**

ಅಯಂ ಸುರಾಣಾಂ ಗುರುರೇಷ ಧರ್ಮಃ ಸುಧಾಕರೋಽಸೌ ಸ ಸಹಸ್ರರಶ್ಮಿಃ ।
ಅಯಂ ಚ ರತ್ನಾಕರಶಬ್ದಿತೋಗ್ರ್ಯೇ ಮಹತ್ವಮೇಷಾಮಭಿಧೈವ ವಕ್ತಿ ॥ ೨೬ ॥

ಹೇ ಅಗ್ರ್ಯೇ=ಎಲೋ ಉತ್ತಮಳೇ; ಅಯಂ=ಇವನು; ಸುರಾಣಾಂ=ದೇವತೆಗಳಿಗೆ; ಗುರುಃ=ಗುರುವು; ಏಷಃ=ಇವನು; ಧರ್ಮಃ=ಧರ್ಮರಾಜನು; ಅಸೌ=ಇವನು; ಸುಧಾ=ಅಮೃತಕ್ಕೆ ಸಮವಾದ; ಕರಃ=ಕಿರಣವುಳ್ಳವನು; ಸಃ=ಅವನು; ಸಹಸ್ರ=ಸಾವಿರ; ರಶ್ಮಿಃ=ಕಿರಣದವನು; ಅಯಂ ಚ=ಇವನಾದರೂ; ರತ್ನ=ರತ್ನಗಳಿಗೆ; ಆಕರಃ=ಆಶ್ರಯನು ಎಂಬ; ಶಬ್ದಿತಃ=ಶಬ್ದವುಳ್ಳವನು; ಏಷಾಂ=ಇವರ; ಅಭಿಧಾ ಏವ=ಹೆಸರೇ; ಮಹತ್ವಂ=ಉತ್ತಮತ್ವವನ್ನು; ವಕ್ತಿ=ಹೇಳುತ್ತದೆ.

ಈ ಶ್ಲೋಕದಲ್ಲಿ ರುಗ್ಮಿಣಿಗೆ ಸಖಿಯು ಇತರ ದೇವತೆಗಳನ್ನು ಪರಿಚಯಿಸುತ್ತಾಳೆ. ಮೊದಲು ಬೃಹಸ್ಪತಿಯ ಪರಿಚಯ.' ಈತನು ಯೋಗ್ಯತೆಯಲ್ಲಿ ಕೆಲವು ದೇವತೆಗಳಿಗಿಂತ ಕೆಳಗಿನವನು. ಆದರೂ ಇವನಿಗೆ ದೇವಗುರು ಎಂಬ ಹೆಸರಿದೆ. ಎಲ್ಲಾ ದೇವತೆಗಳಿಗೂ ಅಂದರೆ ಈತನಿಗಿಂತ ಎತ್ತರದವರಿಗೂ ಈತನು ಗುರುವಿನ ಸ್ಥಾನದಲ್ಲಿದ್ದಾನೆ. ಉದಾ.: ಇಂದ್ರನು ಈತನಿಗಿಂತ ಉನ್ನತ ಸ್ಥಾನದವನು. ಆದರೂ ಇಂದ್ರನು ಈತನಿಗೆ ಗೌರವವನ್ನು ಕೊಡುವನು.

ಇನ್ನೊಬ್ಬ ಯಮಧರ್ಮರಾಜ- ಇಂತಹ ಒಂದು ಉತ್ತಮ ಹೆಸರು ಬೇರೆ ಯಾರಿಗೂ ಇಲ್ಲ. ಬೇರೆಯವರೆಲ್ಲಾ ಧರ್ಮಾಚರಣೆಯಿಂದ 'ಧಾರ್ಮಿಕ' ಎಂಬ ಬಿರುದನ್ನು ಪಡೆಯುವರು. ಸ್ವಲ್ಪ ತಮ್ಮ ಕರ್ತವ್ಯದಿಂದ ವಿಮುಖರಾಗಲೂಬಹುದು. ಆದರೆ ಈ ಯಮನು ತನ್ನ ಕರ್ತವ್ಯವನ್ನು ಚಾಚೂತಪ್ಪದೆ ಪಾಲಿಸುತ್ತಾನೆ. ಈತನ ಬಳಿ ದಯಾದಾಕ್ಷಿಣ್ಯಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಇವನನ್ನು 'ಧಾರ್ಮಿಕ' ಎನ್ನದೆ ಧರ್ಮ ಎಂಬ ಶಬ್ದದಿಂದಲೇ ಕರೆದಿದ್ದಾರೆ. ಇವನನ್ನೇ ಕುರಿತು ದಾಸರು "ಅಂತಕನ ದೂತರಿಗೆ ಕಿಂಚಿತ್ತೂ ದಯವಿಲ್ಲ" ಎಂದು ಹಾಡಿದ್ದು. ಮೂರನೇ ವ್ಯಕ್ತಿಯು ಚಂದ್ರನು- ಇವನಿಗೆ ಸುಧಾಕರ ಎಂಬ ಹೆಸರಿದೆ. ಸುಧಾ ಎಂದರೆ ಅಮೃತ. ಕರ ಎಂದರೆ ಕಿರಣ. ಅಮೃತಮಯವಾದ ಕಿರಣವುಳ್ಳವನು ಎಂದರ್ಥ. ಅಮೃತವು ವ್ಯಕ್ತಿಗೆ ಜೀವನದಲ್ಲಿ ತಂಪನ್ನು ಎರೆಯುತ್ತದೆ. ಕರ ಎಂಬ ಶಬ್ದಕ್ಕೆ ಕೈ ಎಂಬ ಅರ್ಥವೂ ಇದೆ. ಈತನ ಕೈಹಿಡಿದರೆ ಜೀವನಪೂರ್ತಿ ದೈಹಿಕವಾಗಿ ಹಾಗೂ ಮಾನಸಿಕವಾಗಿ ತಂಪೆರೆಯುತ್ತಾನೆ. ಇಂತಹ ಹುಡುಗನನ್ನು ಬಹಳ ಹುಡುಗಿಯರು ಪತಿಯನ್ನಾಗಿ ಆಶಿಸುತ್ತಾರೆ.

ಚಂದ್ರನ ಅನಂತರ ಕುಳಿತವನೇ ಸೂರ್ಯನು. ಈತನ ಹೆಸರು ಸಹಸ್ರರಶ್ಮಿ ಎಂದು. ರಶ್ಮಿ ಅಂದರೆ ಕಿರಣ ಅಥವಾ ತೇಜಸ್ಸು. ಈತನು ಬಹಳ ತೇಜಸ್ಸುಳ್ಳವನು. ಈತನಿದ್ದಲ್ಲಿ ಕತ್ತಲೆಗೆ ಅವಕಾಶವೇ ಇಲ್ಲ. ತೇಜಸ್ಸು ವಿಸ್ತೃತವಾದದ್ದು ಎಂಬರ್ಥದಲ್ಲಿ ರಶ್ಮಿ ಶಬ್ದವೂ ಇದೆ. ಚಂದ್ರನ ಕಿರಣ ಮನೆಯ ಅಂಗಳದಲ್ಲಿ ಬಿದ್ದಿರುತ್ತೆ. ಮನೆಯ ಒಳಗೆ ಕತ್ತಲೆಯೇ ಇರುತ್ತೆ. ಆದರೆ ಸೂರ್ಯನ ಕಿರಣಗಳು ಅಂಗಳದಲ್ಲಿ ಬಿದ್ದರೂ ಬೆಳಕು ಮನೆಯ ಒಳಗೂ ಚೆನ್ನಾಗಿ ಹರಡಿರುತ್ತದೆ. ಈ ರೀತಿ ಕಿರಣಗಳೆಂಬ ಕೀರ್ತಿಯಿಂದ ಸರ್ವತ್ರ ಪ್ರಸಿದ್ಧನಾದವನು ಸೂರ್ಯನು. ಕೀರ್ತಿವಂತ ಹುಡುಗರನ್ನು ಆಶಿಸುವ ಹುಡುಗಿಯರೂ ಇದ್ದಾರೆ.

ಈತನ ಜೊತೆಗೆ ಕೂತವ ವರುಣನು. ಈತನ ಹೆಸರು ರತ್ನಾಕರ ಎಂದು. ಈತನು ಸಮುದ್ರದ ಒಡೆಯನು. ಸಮುದ್ರಕ್ಕೂ ರತ್ನಾಕರ ಎಂದು ಹೆಸರಿದೆ. ರತ್ನಗಳು ಅಂದರೆ ಸಂಪತ್ತು. ಆಕರ ಅಂದರೆ ಆಶ್ರಯ. ಒಟ್ಟಭಿಪ್ರಾಯ ಶ್ರೀಮಂತ ಎಂದು. ಯಾವ

ಹುಡುಗಿಗೆ ಬೇಡ ಶ್ರೀಮಂತಹುಡುಗ. ವರುಣ ಅಂದರೆ ಸ್ವೀಕರಿಸುವವನು. ತಾನು ವರಿಸಿದ್ದನ್ನು ಎಂದೂ ತ್ಯಜಿಸುವವನಲ್ಲ.

ಬೃಹಸ್ಪತಿಗೆ ಗುರು ಎಂದು ಹೆಸರು. 'ಗೃಹ್ಣಾತಿ ಅಥವಾ ಗಿರತಿ ಇತಿ ಗುರು' ಅಂದರೆ ಮಾನವರು ಜ್ಞಾನಪಿಪಾಸುಗಳಾಗಿ ಇವರ ಬಳಿಗೆ ಬರುತ್ತಾರೆ. ಅಂತಹವರನ್ನು ಗುರುವು ಗೃಹ್ಣಾತಿ=ಸ್ವೀಕರಿಸುತ್ತಾನೆ. ಅನಂತರ ಅವರಿಗೆ ತನ್ನಲ್ಲಿರುವ ವಿದ್ಯೆಯನ್ನು ಧಾರೆಯೆರೆಯುತ್ತಾನೆ. ಹಾಗೆಯೇ ಆ ಜನರ ಅಜ್ಞಾನವನ್ನು ಗಿರತಿ=ನಾಶಮಾಡುತ್ತಾನೆ.

ಈ ರೀತಿ ಇಲ್ಲಿ ತಿಳಿಸಿದ ಎಲ್ಲ ದೇವತೆಗಳ ಹೆಸರುಗಳೇ ಅವರ ಮಹತ್ವವನ್ನು ತಿಳಿಸುತ್ತದೆ.

**ಇಮೇ ಸುರಾಃ ಶ್ರೀಪತಿ ನಿತ್ಯಸೇವಾವಿಯೋಗಭೀತ್ಯಾಽನಿಮಿಷಾ ವಿನಿದ್ರಾಃ ।**
**ಪ್ರಪೇದಿರೇ ತತ್ಕರುಣಾಪ್ರಭೂತಸುಧಾರಸಾಸ್ವಾದನತೋಽಮರತ್ವಮ್ ॥ ೨೭ ॥**

ಇಮೇ=ಈ; ಸುರಾಃ=ದೇವತೆಗಳು; ಶ್ರೀಪತಿ=ಶ್ರೀಪತಿಯ; ನಿತ್ಯ=ಸದಾ; ಸೇವಾ= ಸೇವೆಯ; ವಿಯೋಗ=ರಾಹಿತ್ಯದ; ಭೀತ್ಯಾ=ಹೆದರಿಕೆಯಿಂದ; ಅನಿಮಿಷಾಃ=ರೆಪ್ಪೆ ಮುಚ್ಚ ದವರು; ವಿನಿದ್ರಾಃ=ನಿದ್ರಾರಹಿತರಾಗಿ; ತತ್=ದೇವರ; ಕರುಣಾ=ದಯೆ ಎಂಬ; ಪ್ರಭೂತ= ಬಹಳ; ಸುಧಾ=ಅಮೃತದ; ಆಸ್ವಾದನತಃ=ಸವಿಯುವಿಕೆಯಿಂದ; ಅಮೃತತ್ವಂ=ಮರಣ ರಾಹಿತ್ಯವನ್ನು; ಪ್ರಪೇದಿರೇ=ಹೊಂದಿದರು.

ಈ ದೇವತೆಗಳು ಉನ್ನತ ಪದವಿಯಲ್ಲಿದ್ದರೂ ಈ ಔನ್ನತ್ಯಕ್ಕೆ ಕಾರಣ ಭಗವಂತನ ಸೇವೆ. ತಮ್ಮ ಈ ಸ್ಥಾನಮಾನಗಳು ಸದಾ ಉಳಿಯಬೇಕು ಎಂಬ ಆಶಯದಿಂದ ಸದಾ ದೇವರ ಸೇವೆಯಲ್ಲಿ ಆಸಕ್ತರು. ನಿದ್ರೆಯನ್ನೂ ಮಾಡುವುದಿಲ್ಲ. ಮಾಡಿದರೆ ಅಷ್ಟು ಸಮಯ ದೇವರಸೇವೆ ಇಲ್ಲವೆಂದಾಗುತ್ತದೆ ಎಂಬ ಭಯ. ಆದ್ದರಿಂದ ಇವರಿಗೆ ಅಸ್ವಪ್ನರು, ಅಂದರೆ ಸ್ವಪ್ನವನ್ನು ಕಾಣದವರು, ಅಂದರೆ ನಿದ್ರಾರಹಿತರು, ವಿನಿದ್ರರು ಎಂದು ಹೆಸರು. ನಿದ್ರೆ ಮಾಡುವುದು ದೂರ ಉಳಿಯಿತು. ರೆಪ್ಪೆಗಳನ್ನೂ ಪದೇಪದೇ ಮುಚ್ಚುವುದಿಲ್ಲ ಮಾನವರಂತೆ. ಯಾಕೆಂದರೆ ಮುಚ್ಚಿದರೆ ಆ ಒಂದು ಕ್ಷಣದಲ್ಲಿ ದೇವರದರ್ಶನ ತಪ್ಪುತ್ತೆ ಎಂಬ ಅಂಜಿಕೆ.

ಇವರಿಗೆ ಅಮರರು ಅಂದರೆ ಮರಣರಹಿತರು ಎಂಬ ಹೆಸರೂ ಇದೆ. ಮರಣವೇ ಇಲ್ಲ ಎಂದು ಅರ್ಥ ಅಲ್ಲ. ಮತ್ತೆ, ಮಾನವರಿಗಿಂತ ಬಹಳಷ್ಟು ವರ್ಷ ಹೆಚ್ಚು ಕಾಲ ಬದುಕುತ್ತಾರೆ ಎಂದರ್ಥ. ಇದಕ್ಕೆ ಕಾರಣ ಉತ್ತಮ ಆಹಾರವಾದ ಅಮೃತದ ಪಾನ. ಈ ಅಮೃತವು ಸಮುದ್ರದಿಂದ ಉದಿಸಲು ದೇವದೈತ್ಯರು ಇಬ್ಬರೂ ಕಾರಣ. ಆದರೂ ಸಿಕ್ಕಿದ್ದು ಹಾಗೂ ದಕ್ಕಿದ್ದು ದೇವತೆಗಳಿಗೆ ಮಾತ್ರ. ಇದಕ್ಕೆ ಕಾರಣ ದೇವರಿಗೆ ಇವರ ಮೇಲಿರುವ ಬಹಳವಾದ ಪ್ರೀತಿ.

ಈ ದೇವತೆಗಳು ಇನ್ನೊಬ್ಬರ ಸೇವಕರು. ಹಾಗೆಯೇ ಸಾವನ್ನು ಗೆದ್ದದ್ದು ತಮ್ಮ ಸ್ವಂತಬಲದಿಂದ ಅಲ್ಲ; ಇನ್ನೊಬ್ಬನ ಅನುಗ್ರಹದಿಂದ ಎಂಬ ಅಸ್ವಾರಸ್ಯವನ್ನು ರಮೆಯು ಈ ದೇವತೆಗಳಲ್ಲಿ ಕಂಡಳು.

**ಮರುತ್ವದತ್ಯುಚ್ಛ್ರಿತಭಾಗ್ಯಹೇತುಂ ಸುರೌಘಸಂಜೀವನಮೂಲಭೂತಮ್ ।**
**ನರಾಂಸ್ತೃಣೀಕೃತ್ಯ ಜಗಾಮ ಭೈಷ್ಮೀ ಪರಿಸ್ಫುರದ್ಭೂಷಣಭೂಷಣಾಂಗೀ ॥ ೨೮ ॥**

ಮರುತ್ವತ್=ಇಂದ್ರನಿಗೆ; ಅತ್ಯುಚ್ಛ್ರಿತ=ಬಹಳವಾದ; ಭಾಗ್ಯ=ಸಂಪತ್ತಿಗೆ; ಹೇತುಂ=ಕಾರಣನಾದ; ಸುರ=ದೇವತೆಗಳ; ಓಘ=ಸಮೂಹಕ್ಕೆ; ಸಂಜೀವನ=ಅಮೃತಕ್ಕೆ; ಮೂಲ-ಭೂತಂ=ಕಾರಣನಾದ ಕೃಷ್ಣನನ್ನು; ಪರಿಸ್ಫುರತ್=ಶೋಭಿಸುವ; ಭೂಷಣ=ಆಭರಣಗಳಿಗೆ; ಭೂಷಣ=ಅಲಂಕಾರವಾದ; ಅಂಗೀ=ಶರೀರವುಳ್ಳ; ಭೈಷ್ಮೀ=ರುಗ್ಮಿಣಿಯು; ನರಾನ್=ಮಾನವರನ್ನು; ತೃಣೀಕೃತ್ಯ=ಕಡೆಗಣಿಸಿ; ಜಗಾಮ= ಹೊರಟಳು.

ರುಗ್ಮಿಣಿಯು ಮೈತುಂಬಾ ಆಭರಣ ಧರಿಸಿದ್ದಳು. ನಾವೆಲ್ಲ ಆಭರಣ ಧರಿಸಿದರೆ ನಾವು ಚಂದ ಕಾಣುವುದು. ರುಗ್ಮಿಣಿಗೆ ಹಾಗಲ್ಲ, ಈಕೆ ಆಭರಣ ಧರಿಸಿದ್ದರಿಂದ ಆಭರಣವೇ ಚಂದ ಕಾಣುತ್ತಿತ್ತು. ಇಂತಹ ರುಗ್ಮಿಣಿಯು ಸ್ವಯಂವರ ಸಭೆಯಲ್ಲಿ ನಡೆದುಕೊಂಡು ಬರುತ್ತಿದ್ದಳು. ಆ ಸಭೆಯಲ್ಲಿ ಮಾನವರೂ ಕುಳಿತಿದ್ದರು. ಇವರಲ್ಲಿ ತನಗೆ ಯೋಗ್ಯನಾದ ವರನಿದ್ದಾನೋ ಎಂದು ವಿಚಾರಿಸುವ ಗೊಡವೆಗೇ ಹೋಗಲಿಲ್ಲ. ಅವರನ್ನು ಕಣ್ಣೆತ್ತಿಯೂ ನೋಡಲಿಲ್ಲ. ಯಾಕೆಂದರೆ ಮಾನವರಿಗಿಂತ ಉತ್ತಮರಾದ ದೇವತೆಗಳಲ್ಲಿಯೇ ಈಕೆಗೆ ಯೋಗ್ಯವರನು ಲಭಿಸಲಿಲ್ಲ. ನೇರವಾಗಿ ಕೃಷ್ಣನ ಬಳಿಗೆ ನಡೆದಳು. ಸಾಮಾನ್ಯವಾಗಿ ವಧುಗಳು ತಮ್ಮ ಪತಿ ಶ್ರೀಮಂತನಾಗಿರಬೇಕು; ತನಗೆ ಕೊನೆತನಕ ಮುತ್ತೈದೆಭಾಗ್ಯ ಇರಬೇಕು ಎಂದು ಆಶಿಸುತ್ತಾರೆ. ಈ ಎರಡು ರೀತಿಯ ಆಸೆಯು ಕೃಷ್ಣನನ್ನು ಪತಿಯನ್ನಾಗಿ ಪಡೆದರೆ ಲಭಿಸುತ್ತದೆ. ಕೃಷ್ಣನು ಇಂದ್ರನಿಗೆ ಸಕಲಸಂಪತ್ತನ್ನೂ ಒದಗಿಸಿದವನು. ಇಂದ್ರನು ದೇವೇಂದ್ರ, ಇವನಿಗೆ ಸಂಪತ್ತು ಬಂದದ್ದು ದೇವರಿಂದ ಎಂದಮೇಲೆ ಇತರ ದೇವತೆಗಳಿಗೆ ದೇವರಿಂದ ಬಂತೆಂದು ಕೈಮುತ್ಯನ್ಯಾಯದಿಂದ ಸಿದ್ಧ. ಇತರರನ್ನು ಶ್ರೀಮಂತರನ್ನಾಗಿ ಮಾಡಬೇಕಾದರೆ ತಾನು ಶ್ರೀಮಂತನಾಗಿರಲೇಬೇಕು. ಹಾಗೆಯೇ ದೇವತೆಗಳಿಗೆ ಮೃತ್ಯುಂಜಯತ್ವವನ್ನೂ ಒದಗಿಸಿದವನು. ಮೃತ್ಯುವನ್ನು ಗೆದ್ದವನಿಗೆ ಮಾತ್ರ ಇದು ಸಾಧ್ಯ.

ಸಂದೇಶ : **ನಮಗೆ ಬೇಕಾದ ವಸ್ತುಗಳನ್ನು ಆರಿಸುವಾಗ ದುಡುಕಬಾರದು. ವಧುಗಳು ತಮಗೆ ಯೋಗ್ಯ ವರನನ್ನು ಆರಿಸುವಾಗಲೂ ಈ ಶ್ಲೋಕವನ್ನು ನೂರೆಂಟು ಸಲ ಜಪಿಸುವುದು ಒಳಿತು.**

ಅಯಂ ಮುಕುಂದಃ ಸಖಿ ಚಿತ್ಪ್ರಮೋದ-
ಮಯಾವ್ಯಯಾಂಗೋಽಖಿಲದೋಷಶೂನ್ಯಃ

**ಅವಾತರದ್ವಿಶ್ವಜನಸ್ಯ ಗುಪ್ತ್ಯೈ**
**ಗುಣಾಂಬುರಾಶಿಃ ಕಿಲ ಭೂತಲೇಽಸ್ಮಿನ್ ॥ ೨೯ ॥**

ಹೇ ಸಖಿ=ಎಲೋ ಗೆಳತಿಯೇ; ಚಿತ್=ಜ್ಞಾನವು; ಪ್ರಮೋದ=ಆನಂದವೇ; ಮಯ=ಸ್ವರೂಪವಾದ; ಅವ್ಯಯ=ನಾಶರಹಿತವಾದ; ಅಂಗಃ=ದೇಹವುಳ್ಳ; ಅಖಿಲ=ಎಲ್ಲಾ; ದೋಷ=ದೋಷದಿಂದ; ಶೂನ್ಯಃ=ರಹಿತನಾದ; ಗುಣ=ಗುಣಗಳೆಂಬ; ಅಂಬು=ನೀರಿನ; ರಾಶಿಃ=ಗುಂಪಾದ; ಅಯಂ=ಈ; ಮುಕುಂದಃ=ಕೃಷ್ಣನು; ಅಸ್ಮಿನ್=ಈ; ಭೂತಲೇ=ಭೂಮಿಯಲ್ಲಿ; ವಿಶ್ವ=ಎಲ್ಲಾ; ಜನಸ್ಯ=ಜನರ; ಗುಪ್ತ್ಯೈ=ರಕ್ಷಣೆಗೋಸ್ಕರ; ಅವಾತರತ್=ಅವತರಿಸಿದನಷ್ಟೇ.

ಕೃಷ್ಣನ ಬಳಿಗೆ ಬಂದ ರುಗ್ಮಿಣಿಯು ಈ ರೀತಿ ಆಲೋಚಿಸುತ್ತಾಳೆ. ದೇವರು ಭೂಮಿಯಲ್ಲಿದ್ದು ಕೃಷ್ಣನಾಗಿ ಅವತರಿಸಿದ್ದಾನೆ. ಉದ್ದೇಶ– ದುಷ್ಟರನ್ನು ಸಂಹರಿಸುವುದು. ಶಿಷ್ಟರನ್ನು ಪಾಲಿಸುವುದು. ದುಷ್ಟರನ್ನು ಮರ್ದಿಸುವಾಗ ದೇವರಿಗೆ ಯಾವ ರೀತಿಯ ತೊಂದರೆಯೂ ಆಗುವುದಿಲ್ಲ. ಯಾಕೆಂದರೆ ಆತನದ್ದು ನಮ್ಮಂತೆ ರಕ್ತಮಾಂಸಮಯವಾದ ದೇಹವಲ್ಲ. ಜ್ಞಾನಾನಂದಮಯವಾದ ದೇಹ. ಈ ಜ್ಞಾನಾನಂದಗಳು ಅಜ್ಞಾನದುಃಖಗಳಿಂದ ಮಿಶ್ರಿತವಲ್ಲ. ಇವುಗಳು ಮಾತ್ರವಲ್ಲ; ಯಾವ ದೋಷಗಳೂ ಇಲ್ಲ, ಎಲ್ಲಾ ಗುಣಗಳಿಂದ ಎಲ್ಲಾ ರೀತಿಯಲ್ಲಿಯೂ ತುಂಬಿರುವಾಗ ದೋಷಗಳಿಗೆ ಅವಕಾಶವಾದರೂ ಹೇಗೆ?

**ಜಗಜ್ಜನಿಸ್ಥೇಮಲಯಾದಿಧರ್ಮಾ**
**ಭವಂತ್ಯಮುಷ್ಮಾತ್ ಕಿಲ ಶಾಸ್ತ್ರಯೋನೇಃ ।**
**ಅಮುಷ್ಯ ಸಾಮ್ಯಂ ಕತಮಃ ಸುರಾಣಾ–**
**ಮುಪೈತಿ ಯದ್ರೋಮಸು ವಿಶ್ವಕೋಶ ॥ ೩೦ ॥**

ಶಾಸ್ತ್ರ=ಶಾಸ್ತ್ರಗಳೇ; ಯೋನೇಃ=ಕಾರಣವಾಗಿವುಳ್ಳ; ಅಮುಷ್ಮಾತ್=ಇವನಿಂದ; ಜಗತ್=ಜಗತ್ತಿಗೆ; ಜನಿ=ಉತ್ಪತ್ತಿಯು; ಸ್ಥೇಮ=ಸ್ಥಿತಿಯು; ಲಯ=ನಾಶವು; ಆದಿ=ಮೊದಲಾದ; ಧರ್ಮಾಃ=ಧರ್ಮಗಳು; ಭವಂತಿ ಕಿಲ=ಆಗುತ್ತವಷ್ಟೇ; ಯತ್=ಯಾರ; ರೋಮಸು=ರೋಮಗಳಲ್ಲಿ; ವಿಶ್ವಕೋಶಾಃ= ಬ್ರಹ್ಮಾಂಡಗಳು; ಸುರಾಣಾಂ=ದೇವತೆಗಳ ಮಧ್ಯದಲ್ಲಿ; ಅಮುಷ್ಯ=ಇವನಿಗೆ; ಕತಮಃ=ಯಾರು; ಸಾಮ್ಯಂ=ಹೋಲಿಕೆಯನ್ನು; ಉಪೈತಿ=ಹೊಂದುತ್ತಾನೆ.

ಹದಿನಾಲ್ಕು ಲೋಕಗಳ ಸೃಷ್ಟಿಯೂ ಈತನಿಂದಲೇ. ಸೃಷ್ಟಿ ಮಾತ್ರವಲ್ಲ; ಪಾಲನೆಯನ್ನೂ ಕೊನೆಗೆ ಸಂಹಾರವನ್ನೂ ಮಾಡುವವನು ಇವನೇ. ಇವನ ಈ ಕೆಲಸಗಳನ್ನು ಪ್ರತ್ಯಕ್ಷವಾಗಿ ಕಂಡವರು ಯಾರೂ ಇಲ್ಲ. ಕಣ್ಣಿಗೆ ಕಾಣಿಸಿದ್ದನ್ನು ಮಾತ್ರ ಒಪ್ಪುವುದು ಮೂರ್ಖತನ. ಕೆಲವನ್ನು ಮಾತಿನಿಂದಲೂ ಒಪ್ಪಬೇಕಾಗುತ್ತದೆ. ಸದ್ಯ ದೇವರ ಜಗಜ್ಜನ್ಮಾದಿ ಕಾರಣತ್ವವನ್ನು

ವೇದದ ಮಾತಿನಿಂದಲೇ ನಂಬಬೇಕು. ಈ ವಿಷಯದಲ್ಲಿ ಶ್ರೀ ವೇದವ್ಯಾಸರು 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರವನ್ನೇ ರಚಿಸಿದ್ದಾರೆ. ಇದರ ಅರ್ಥ ದೇವರ ಕೆಲಸದ ವಿಷಯದಲ್ಲಿ ಶಾಸ್ತ್ರಗಳೇ ಪ್ರಮಾಣ ಎಂದು. ಜೇಡನು ತಾನು ನಿರ್ಮಿಸಿದ ಬಲೆಯನ್ನು ತಾನೇ ಕಬಳಿಸುತ್ತದೆ. ಅದೇ ರೀತಿ ನಷ್ಟವಾದ ಈ ಬ್ರಹ್ಮಾಂಡ ದೇವರ ಉದರದಲ್ಲಿ ಇರುತ್ತದೆ. ಬ್ರಹ್ಮಾಂಡದ ಪ್ರಮಾಣವು ಬಹಳ ದೊಡ್ಡದು. ಆದರೂ ದೇವರ ಉದರವು ಬ್ರಹ್ಮಾಂಡಕ್ಕೆ ಬಹಳ ದೊಡ್ಡದಾಗುತ್ತದೆ. ಉದರದ ವಿಚಾರ ಹಾಗೇ ಇರಲಿ. ಈ ಬ್ರಹ್ಮಾಂಡವನ್ನು ದೇವರ ಶರೀರದ ರೋಮರಂಧ್ರಗಳಲ್ಲಿ ಇಟ್ಟರೂ ಆ ರೋಮರಂಧ್ರಗಳಲ್ಲಿ ಇನ್ನೂ ಬಹಳ ಬ್ರಹ್ಮಾಂಡಗಳನ್ನಿಡಲು ಅವಕಾಶ ಇದೆ. ಬ್ರಹ್ಮಾಂಡವು ಎಲ್ಲಾ ಜೀವರಾಶಿಯನ್ನು ಒಳಗೊಂಡಿದೆ. ಇದು ದೇವರ ಮಹಿಮೆ. ಹೀಗಿರಲು ಯಾವ ದೇವತೆಯು ಈತನಿಗೆ ಸಾಟಿಯಾದಾರು. "ಈ ಪರಿಯ ಸೊಬಗ ಆವ ದೇವರಲಿ ಕಾಣೆ, ಗೋಪೀ ಜನಪ್ರಿಯ ಗೋಪಾಲಗಲ್ಲದೆ".

**ಸಮಸ್ತವೇದಾಃ ಕಿಲ ಸೇತಿಹಾಸಾಃ**
**ಪುರಾಣಯುಕ್ತಾಃ ಸ್ಮೃತಿಭಿಃ ಸಹೈನಮ್ ।**
**ಸಮಾನಶೂನ್ಯಂ ಪ್ರಭುಮಾಮನಂತಿ**
**ಪ್ರಮಥ್ಯ ಯೋಬ್ಧಿಂ ಲಭತೇ ಸ್ಮ ಲಕ್ಷ್ಮೀಮ್ ॥ ೩೧ ॥**

ಯಃ=ಯಾರು; ಅಬ್ಧಿಂ=ಸಮುದ್ರವನ್ನು; ಪ್ರಮಥ್ಯ=ಮಥಿಸಿ; ಲಕ್ಷ್ಮೀಂ=ರಮೆಯನ್ನು; ಲಭತೇ ಸ್ಮ=ಹೊಂದಿದ್ದಾನೋ; ಏನಂ=ಇವನನ್ನು; ಸೇತಿಹಾಸಾಃ=ಇತಿಹಾಸಗಳಿಂದ ಕೂಡಿದ; ಪುರಾಣ=ಪುರಾಣಗಳಿಂದ; ಯುಕ್ತಾಃ=ಕೂಡಿದ; ಸಮಸ್ತ=ಎಲ್ಲಾ; ವೇದಾಃ=ವೇದಗಳು; ಸ್ಮೃತಿಭಿಃ=ಸ್ಮೃತಿಗಳಿಂದ; ಸಹ=ಕೂಡಿಕೊಂಡು; ಪ್ರಭುಂ=ಪ್ರಭುವನ್ನಾಗಿ; ಸಮಾನ=ಸಾಮ್ಯದಿಂದ; ಶೂನ್ಯಂ=ರಹಿತನನ್ನಾಗಿ; ಆಮನಂತಿ=ಹೇಳುತ್ತವೆ.

ಅನಂತ ವೇದಗಳು, ಮಹಾಭಾರತ ರಾಮಾಯಣಗಳು, ಹದಿನೆಂಟು ಪುರಾಣಗಳು, ಯಾಜ್ಞವಲ್ಕ್ಯ, ಮನು ಮೊದಲಾದ ಸ್ಮೃತಿಗಳು –ಇವುಗಳನ್ನು ಶಾಸ್ತ್ರಗಳೆಂದು ಜ್ಞಾನಿಗಳು ಕರೆಯುತ್ತಾರೆ. ಹಿಂದಿನ ಶ್ಲೋಕದಲ್ಲಿ ದೇವರಿಗೆ 'ಶಾಸ್ತ್ರಯೋನಿ' ಎಂಬ ಹೆಸರು ಬಂದಿದೆ. ಅದರ 'ನ ತೇ ಮಹಿಮ್ನಃ' ಅರ್ಥವನ್ನು ಇಲ್ಲಿ ತಿಳಿಸುತ್ತಾರೆ. ಈ ಶಾಸ್ತ್ರಗಳಿಗೆ ಏಕವಾಕ್ಯತಾ ಇದೆ. ಅಂದರೆ ಇವುಗಳಿಗೆ ಹೆಸರು ಬೇರೆಬೇರೆಯಾದರೂ ಅಭಿಪ್ರಾಯ ಒಂದೇ. ವೇದಗಳು– "ನಲೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿನ್ಮಃ ಪರಂ ಅಂತಂ ಆಪ" ಎಲೋ ವ್ಯಾಪ್ತನಾದ ನಾರಾಯಣನೇ ನೀನು ಏನು ಮಹಿಮೆಯನ್ನು ಹೊಂದಿದ್ದಿಯೋ ಅಂತಹ ಮಹತ್ವವನ್ನು ಹೊಂದಿದವನು ತ್ರಿಕಾಲದಲ್ಲಿಯೂ ಇಲ್ಲ ಎಂದು ಹೇಳುತ್ತವೆ. ಪುರಾಣಾದಿಗಳು– "ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ" ದೇವರಿಗೆ ಸಮಾನನಾದವನು ಹಿಂದೆ ಹುಟ್ಟಿಲ್ಲ; ಮುಂದೆ ಹುಟ್ಟುವುದಿಲ್ಲ

ಎಂದು ಹೇಳುತ್ತವೆ. ಈ ರೀತಿ ಆಗಮಗಳೆಂಬ ಪ್ರಮಾಣಗಳು ದೇವರಿಗೆ ಸಮಾನರನ್ನು ಖಂಡಿಸುತ್ತದೆ. ಇದೇ ರೀತಿ ಯುಕ್ತಿ ಎಂಬ ಪ್ರಮಾಣವೂ ಇದೆ– ದೇವತೆಗಳಿಗೆ ಅಮೃತದ ಅಗತ್ಯ ಇತ್ತು. ಅದಕ್ಕಾಗಿ ಸಮುದ್ರವನ್ನು ಮಥಿಸಬೇಕಿತ್ತು. ಈ ಕೆಲಸವು ದೇವದೈತ್ಯರಿಂದ ಅಸಾಧ್ಯವಾಯಿತು. ಆಗ ಸ್ವಯಂ ದೇವರೆ ಆ ಕೆಲಸವನ್ನು ಮಾಡಿದನು. ಅಮೃತವನ್ನು ಒದಗಿಸಿದನು. ಅಮೃತದ ಜೊತೆಗೆ ಉದಿಸಿ ಬಂದ ರಮೆಯನ್ನು ಪತ್ನಿಯನ್ನಾಗಿ ಪಡೆದನು. ಇದರಿಂದ ಹರಿಸರ್ವೋತ್ತಮತ್ವವು ಸಿದ್ಧವಾಯಿತು.

ಆ ನಾರಾಯಣನೇ ಈಗ ಕೃಷ್ಣನಾಗಿ ಅವತರಿಸಿದ್ದಾನೆ. ಎಲೋ ರುಗ್ಮಿಣಿಯೇ ನೀನು ಲಕ್ಷ್ಮಿಯ ಅವತಾರ. ಆಗ ನಾರಾಯಣನು ನಿನ್ನನ್ನು ವರಿಸಿದ್ದನು. ಈಗ ನೀನು ಕೃಷ್ಣನನ್ನು ವರಿಸಬೇಕು ಎಂದು ಮನವೆಂಬ ಸಖಿಯು ಹೇಳುತ್ತಾಳೆ.

**ಯದೀಯಪಾದೋಂಡಕಟಾಹಭೇದೀ ವಿಧಾತೃಹಸ್ತಾರ್ಹಣಸಾರವೇದೀ ।**
**ಮೃಗಾಕ್ಷಿ ಸೋಽಯಂ ವಿವಿಧಾವತಾರವಿಯೋಜಿತಾತ್ಯುದ್ಧತಭೂಮಿಭಾರಃ ॥ ೩೨ ॥**

ಹೇ ಮೃಗಾಕ್ಷಿ=ಎಲೋ ಜಿಂಕೆಯಂತೆ ಕಣ್ಣುಳ್ಳವಳೇ; ಯದೀಯ=ಯಾರ ಸಂಬಂಧಿಯಾದ; ಪಾದಃ=ಕಾಲು; ಅಂಡ=ಬ್ರಹ್ಮಾಂಡದ; ಕಟಾಹ=ಪರಿಧಿಯನ್ನು; ಭೇದೀ=ಸೀಳತೋ; ವಿಧಾತೃ=ಬ್ರಹ್ಮನ; ಹಸ್ತ=ಕೈಯ; ಅರ್ಹಣ=ಪೂಜೆಯ; ಸಾರ=ಸಾರವನ್ನು; ವೇದೀ= ತಿಳಿದಿದೋ; ವಿವಿಧ=ನಾನಾರೀತಿಯ; ಅವತಾರ=ಅವತಾರದಿಂದ; ವಿಯೋಜಿತ=ನಾಶ ಮಾಡಲ್ಪಟ್ಟ; ಅತಿ=ಬಹಳ; ಉದ್ಧತ=ಕೊಬ್ಬಿದ; ಭೂಮಿ=ಭೂಮಿಯ; ಭಾರ=ಭಾರವುಳ್ಳ; ಸಃ=ಅವನೇ; ಅಯಂ=ಇವನು.

ನಾರಾಯಣನು ಬಲಿಚಕ್ರವರ್ತಿಯ ಮರ್ದನಕ್ಕಾಗಿ ವಾಮನನಾದನು. ಬಲಿಯು ಅರ್ಪಿಸಿದ ಮೂರು ಹೆಜ್ಜೆ ಭೂಮಿಯನ್ನು ಅಳೆಯಲು ತ್ರಿವಿಕ್ರಮನಾದನು. ಒಂದು ಪಾದದಿಂದ ಮೇಲಿನ ಭಾಗವನ್ನು ಅಳೆಯುವಾಗ ಪಾದದ ಉಗುರು ಬ್ರಹ್ಮಾಂಡದ ಚಿಪ್ಪಿಗೆ ತಾಗಿತು. ಆಗ ನಿರ್ಮಾಣಗೊಂಡ ರಂಧ್ರದಿಂದ ಹೊರಗಿನ ಶುದ್ಧನೀರು ಒಳಗೆ ಹರಿಯಿತು. ಅವನ್ನು ಬ್ರಹ್ಮನು ತನ್ನ ಗಿಂಡಿಯಿಂದ ಹಿಡಿದನು. ದೇವರ ಪಾದಕ್ಕೆ ಅಭಿಷೇಕಿಸಿದನು. ಹಾಗೆಯೇ ಪೂಜಿಸಿದನು. ಆತನು ಭಕ್ತಿಯಿಂದ ಮಾಡಿದ ಪೂಜೆಯ ಸಾರವನ್ನು ತಿಳಿದು ಸ್ವೀಕರಿಸಿದನು. ಹಾಗೆಯೇ ನಾನಾ ಅವತಾರಗಳನ್ನು ತಾಳುತ್ತಾನೆ. ಕೊಬ್ಬಿದ ಖಳರನ್ನು ಬಡಿಯುತ್ತಾನೆ. ಭೂಮಿಯ ಹೊರೆಯನ್ನು ಅಳಿಸುತ್ತಾನೆ. ಎಲೋ ರುಗ್ಮಿಣಿಯೇ ಇಂತಹ ಚರಿತ್ರೆಯ ನಾರಾಯಣನೇ ಸದ್ಯ ನಿನ್ನ ಎದುರಿಗೆ ಕೃಷ್ಣನಾಗಿ ಇದ್ದಾನೆ.

**ವಿವೇಕಸಖ್ಯೇತಿ ವಿಬೋಧಿತಾ ಸಾ ಬಭೂವ ತೂಷ್ಣೀಂ ಕಮಲಾತ್ತಮಾಲಾ ।**
**ಪ್ರಹರ್ಷಚಿಹ್ನಾನಿ ಪರಂ ತದೋಚುಃ ಪ್ರಭುಂ ತಮಾಕಾಂಕ್ಷತಿ ರುಗ್ಮಿಣೀತಿ ॥ ೩೩ ॥**

ಇತಿ=ಈ ರೀತಿಯಾಗಿ; ವಿವೇಕ=ಬುದ್ಧಿ ಎಂಬ; ಸಖ್ಯಾ=ಗೆಳತಿಯಿಂದ; ವಿಬೋಧಿತಾ= ತಿಳಿಯಲ್ಪಟ್ಟ; ಸಾ=ಆ; ಕಮಲಾ=ರುಗ್ಮಿಣಿಯು, ಆತ್ತ=ಸ್ವೀಕರಿಸಿದ; ಮಾಲಾ= ಮಾಲೆ ಉಳ್ಳವಳಾಗಿ; ತೂಷ್ಣೀಂ=ಸುಮ್ಮನೆ; ಬಭೂವ=ಆದಳು; ಪರಂ=ಆದರೆ; ಪ್ರಹರ್ಷ= ಸಂತೋಷದ; ಚಿಹ್ನಾನಿ=ಚಿಹ್ನೆಗಳು; ರುಗ್ಮಿಣೀ=ರುಗ್ಮಿಣಿಯು; ಪ್ರಭುಂ=ಶಕ್ತನಾದ'; ತಂ= ಅವನನ್ನು; ಆಕಾಂಕ್ಷತಿ=ಬಯಸುತ್ತಾಳೆ; ಇತಿ=ಎಂದು; ತದಾ=ಆಗ; ಊಚುಃ=ಹೇಳಿದವು.

ಗೆಳತಿಯು ರುಗ್ಮಿಣಿಯನ್ನು ಕರೆದುಕೊಂಡು ಎಲ್ಲಾ ದೇವತೆಗಳ ಬಳಿಗೆ ಹೋದಳು. ಹಾಗೆಯೇ ಅವರ ಮಹತ್ವವನ್ನು ತಿಳಿಸಿದಳು. ಆದರೆ ರುಗ್ಮಿಣಿಯು ಅವರಾರನ್ನೂ ವರಿಸಲಿಲ್ಲ. ಬದಲಾಗಿ ಅವರಲ್ಲಿರುವ ದೋಷಗಳನ್ನು ತಿಳಿಸಿದಳು. ಹಾಗೆಯೇ ಮುಂದುವರಿಯುತ್ತಾ ಕೃಷ್ಣನ ಬಳಿಗೆ ಬಂದರು. ಗೆಳತಿಯು ಕೃಷ್ಣನ ಮಹಿಮೆಯನ್ನು ತಿಳಿಸಿದಳು. ಇದಕ್ಕೆ ಪ್ರತಿಯಾಗಿ ರುಗ್ಮಿಣಿಯು ಯಾವ ಮಾತನ್ನೂ ಆಡದೆ ಸುಮ್ಮನಿದ್ದಳು. ಮನದ ಅಭಿಪ್ರಾಯವನ್ನು ಮಾತಿನ ಮೂಲಕ ತಿಳಿಸದೇ ಇರಬಹುದು. ಆದರೆ ಬಚ್ಚಿಡಲು ಸಾಧ್ಯವಿಲ್ಲ . ಮುಖವು ಮನದ ಕನ್ನಡಿ ಎಂಬ ಒಂದು ಮಾತಿದೆ. ಅದರಂತೆ ಈಕೆಯ ಮುಖದಲ್ಲಿ ಉಂಟಾದ ಪ್ರಸನ್ನತೆ, ಬಾಯಿಯ ಮಂದಹಾಸ, ಕಣ್ಣಿನ ಅರಳುವಿಕೆ ಈ ಎಲ್ಲಾ ಲಕ್ಷಣಗಳು ಈಕೆಗೆ ಕೃಷ್ಣನನ್ನು ಸ್ವೀಕರಿಸುವ ಆಸೆ ಇದೆ ಎಂದು ತಿಳಿಸುತ್ತವೆ.

<u>ಸಂದೇಶ</u> : **'ಮೌನಂ ಸಮ್ಮತಿ ಲಕ್ಷಣಂ'**

**ತಯೋರ್ಮುಹೂರ್ತಾವಧಿ ಮಧ್ಯದತ್ತಪಟಂ ವಿನಿರ್ಭಿದ್ಯ ಮಿಥಃ ಸ್ಪೃಶಂತ್ಯಃ ।**
**ಪ್ರಭಾಃ ಸದಾಽಖಂಡಿತಯೋಗಭಾಗ್ಯಂ ವಿಬೋಧಯಂತಿ ಸ್ಮ ವಿವೇಕಭಾಜಃ॥ ೩೪ ॥**

ಮುಹೂರ್ತ=ಮುಹೂರ್ತದ; ಅವಧಿ=ತನಕ; ತಯೋಃ=ಅವರ; ಮಧ್ಯ=ಮಧ್ಯದಲ್ಲಿ; ದತ್ತ=ಇರುವ; ಪಟಂ=ವಸ್ತ್ರವನ್ನು; ವಿನಿರ್ಭಿದ್ಯ=ಸೀಳಿ; ಮಿಥಃ=ಪರಸ್ಪರ; ಸ್ಪೃಶಂತ್ಯಃ= ಸ್ಪರ್ಶಿಸುವ; ಪ್ರಭಾಃ=ಕಿರಣಗಳು; ವಿವೇಕ=ಜ್ಞಾನವನ್ನು; ಭಾಜಃ=ಹೊಂದಿದವರಿಗೆ; ಸದಾ=ಯಾವಾಗಲೂ; ಅಖಂಡಿತ=ನಾಶ ಇಲ್ಲದ; ಯೋಗ=ಸಂಬಂಧ; ಭಾಗ್ಯಂ=ಭಾಗ್ಯ ವನ್ನು; ವಿಬೋಧಯಂತಿಸ್ಮ=ತಿಳಿಸುತ್ತವೆ.

ವಿವಾಹದ ಮುಹೂರ್ತ ಸಮೀಪಿಸುತ್ತಿದೆ. ವಧೂವರರನ್ನು ಎದುರುಬದುರು ನಿಲ್ಲಿಸಿದ್ದಾರೆ. ಮುಹೂರ್ತದ ಕ್ಷಣದ ತನಕ ಅವರಿಬ್ಬರ ಮಧ್ಯದಲ್ಲಿ ಒಂದು ಬಟ್ಟೆಯನ್ನು ಅಡ್ಡಹಿಡಿದಿದ್ದಾರೆ. ವರನು ಒಂದು ಕಡೆ; ವಧು ಒಂದು ಕಡೆ. ವರ ಇದ್ದಲ್ಲಿ ವಧು ಇಲ್ಲ. ವಧು ಇದ್ದಲ್ಲಿ ವರ ಇಲ್ಲ ಎಂದು ತೋರುತ್ತದೆ. ಇದು ಲೌಕಿಕ ವಧೂವರರಿಗೆ ಸರಿಹೋಗಬಹುದು. ಈ ವಧೂವರರು ಒಬ್ಬರನ್ನೊಬ್ಬರು ಅಗಲಿ ಇರುವುದು ಇದೆ. ಆದರೆ ರಮಾನಾರಾಯಣರೆಂಬ ವಧೂವರರ ವಿಷಯದಲ್ಲಿ ಈ ರೀತಿ ಇರುವುದು ಶಾಸ್ತ್ರವಿರುದ್ಧ. ಶಾಸ್ತ್ರವು ಹೇಳುವಂತೆ ಇವರಿಬ್ಬರು ಎಲ್ಲಾ ದೇಶದಲ್ಲಿಯೂ ಎಲ್ಲಾ

ಕಾಲದಲ್ಲಿಯೂ ಜೊತೆಗೇ ಇರುವವರು. ಶಾಸ್ತ್ರದ ಮಾತನ್ನು ಸರಿದೂಗಿಸುವ ಈ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು –ಇವರಿಬ್ಬರ ಮಧ್ಯದಲ್ಲಿ ಬಟ್ಟೆಯನ್ನು ಹಿಡಿದಿದ್ದರೂ ಇವರಿಬ್ಬರ ದೇಹದ ಕಿರಣಗಳು ಬಟ್ಟೆಯನ್ನೂ ಭೇದಿಸಿ ಪರಸ್ಪರ ದೇಹಗಳಿಗೆ ತಾಗಿಕೊಂಡವು. ಇದನ್ನು ಅಲ್ಲಿಯೇ ಚೆನ್ನಾಗಿ ಅನುಭವಿಸಿದರು. ಸಾಮಾನ್ಯ ಜನರಿಗೆ ಯಾಕೆ ಹೀಗೆ? ಎಂದು ಅರ್ಥ ಆಗದಿದ್ದರೂ ಪಂಡಿತರು ಈ ಘಟನೆಯಿಂದ ಒಂದು ಸಂದೇಶವನ್ನು ಪಡೆದರು –ರಮಾನಾರಾಯಣರಿಗೆ ಎಂದೂ ವಿಯೋಗ ಇಲ್ಲ. ಒಬ್ಬರನ್ನೊಬ್ಬರು ಪರಸ್ಪರ ಸಂಪರ್ಕಿಸಿಕೊಂಡೇ ಇರುವರು ಎಂಬುದನ್ನು ತಿಳಿಸಲು ಇಬ್ಬರ ದೇಹಗಳಿಂದ ಹೊರಟ ಕಿರಣಗಳು ಪರಸ್ಪರ ದೇಹಗಳನ್ನು ಸ್ಪರ್ಶಿಸಿದವು ಎಂದು.

ಸಂದೇಶ : **ರಮಾನಾರಾಯಣರ ನರನಟನೆಯನ್ನು ತಿಳಿಯುವಾಗ ಶಾಸ್ತ್ರದ ವಿರೋಧ ಬರಬಾರದು.**

**ಸೀತಾಸ್ವಯಂವರ ಮಹೋತ್ಸವಗಾನಕಾಲೇ**
**ಜಾತೌ ರಮಾಪುಲಕ ಮಾಧವ ಮಂದಹಾಸೌ ।**
**ಸಾ ಜಾನಕೀಯಮಯಮೇವ ಹಿ ರಾಮಚಂದ್ರಃ**
**ಕಿಂ ತನ್ಮೂಹೂರ್ತಕಥಯೇತಿ ಹಿ ಶಂಸತಃ ಸ್ಮ** ॥ ೩೫ ॥

ಸೀತಾ=ಸೀತೆಯ; ಸ್ವಯಂವರ=ಸ್ವಯಂವರದ; ಗಾನ=ಹಾಡಿನ; ಕಾಲೇ=ಸಮಯದಲ್ಲಿ; ರಮಾ=ರುಗ್ಮಿಣಿಗೆ; ಪುಲಕ=ರೋಮಾಂಚನವು; ಮಾಧವ=ಕೃಷ್ಣನಿಗೆ; ಮಂದಹಾಸೌ=ನಗುವು; ಜಾತೌ=ಉಂಟಾದವು; ಸಾ=ಆ; ಜಾನಕೀ ಏವ=ಸೀತೆಯೇ; ಇಯಂ=ಇವಳು; ರಾಮಚಂದ್ರ ಏವ=ರಾಮನೇ; ಅಯಂ=ಇವನು; ತತ್=ಆದ್ದರಿಂದ; ಮುಹೂರ್ತ=ಮುಹೂರ್ತದ; ಕಥಯಾ=ಹೇಳುವಿಕೆಯಿಂದ; ಕಿಂ=ಏನು? ಇತಿ=ಎಂದು; ಶಂಸತಃ ಸ್ಮ=ಹೇಳುತ್ತಿದ್ದವು; ಹಿ=ಪ್ರಸಿದ್ಧ.

ರುಗ್ಮಿಣಿಕೃಷ್ಣರ ವಿವಾಹಕಾರ್ಯಕ್ರಮವು ನಡೆಯುತ್ತಿತ್ತು. ಮುದಿಐದೆಯರು ಈ ಸಮಯದಲ್ಲಿ ಸೀತಾಸ್ವಯಂವರದ ಹಾಡನ್ನು ಹಾಡುತ್ತಿದ್ದರು. ಇದನ್ನು ಕೇಳಿಸಿಕೊಂಡ ರುಗ್ಮಿಣಿಗೆ ಮೈಯಲ್ಲಿ ರೋಮಾಂಚನವಾಯಿತು. ಕೃಷ್ಣನ ಮುಖದಲ್ಲಿ ನಗುವು ಕಾಣಿಸಿತು. ಇದರಿಂದ ಶಾಸ್ತ್ರದ ವಿಷಯವು ಇಲ್ಲಿ ಸಿದ್ಧವಾಯಿತು –ಆ ಸೀತಾರಾಮರೇ ಇಲ್ಲಿ ರುಗ್ಮಿಣೀಕೃಷ್ಣರಾಗಿ ಅವತರಿಸಿದ್ದಾರೆಂದು.

ಈ ವಿಷಯವನ್ನು ದೈನಂದಿನ ಜೀವನದಲ್ಲೂ ಕಾಣಬಹುದು. ನಮ್ಮ ಬಾಲ್ಯದಲ್ಲಿ ಒಂದು ವಿಚಿತ್ರವಾದದ್ದೋ, ಆನಂದಕರವಾದದ್ದೋ ಘಟನೆ ನಡೆದಿರುತ್ತದೆ ಎಂದಿಟ್ಟುಕೊಳ್ಳೋಣ. ನಾವು ದೊಡ್ಡವರಾದಮೇಲೆ ಅದು ನಮಗೆ ನೆನಪಿಗೆ ಬರಬಾರದು ಎಂದೇನಿಲ್ಲ. ಹೀಗೆ ನೆನಪಿಸುವಾಗ ಅದು ಆಶ್ಚರ್ಯಕರವಾದ ವಿಷಯವಾಗಿದ್ದರೆ ಮೈ

ರೋಮಾಂಚನವಾಗುತ್ತದೆ. ಆನಂದಕರವಾಗಿದ್ದರೆ ನಗುಬರುತ್ತದೆ. ಹೊರತು ಇನ್ನೊಬ್ಬರ ಜೀವನದಲ್ಲಿ ನಡೆದ ಇಂತಹ ಘಟನೆಗಳಿಂದ ನಮಗೆ ಆಶ್ಚರ್ಯನೂ ಆಗುವುದಿಲ್ಲ; ನಗುವೂ ಬರುವುದಿಲ್ಲ. ಸೀತಾಸ್ವಯಂವರದ ಹಾಡನ್ನು ಕೇಳಿದಾಗ ರುಗ್ಮಿಣಿಗೆ ಮೈಪುಲಕಿತವಾದದ್ದರಿಂದ ಸೀತೆಯೇ ಈಕೆ ಎಂದು ತಿಳಿಯಬಹುದು. ಕೃಷ್ಣನಿಗೆ ನಗು ಬಂದದ್ದರಿಂದ ರಾಮನೇ ಕೃಷ್ಣನು ಎಂದು ತಿಳಿಯಲು ಸಾಧ್ಯವಾಗುತ್ತದೆ. ಮೈಪುಳಕಿತ ಗೊಳ್ಳುವುದು ಹಾಗೆಯೇ ಆ ನಗುವನ್ನು ತೋರಿಸುವುದು ಇವರಿಬ್ಬರ ನಟನೆ. ಅನಾದಿಕಾಲದಿಂದ ಇವರು ದಂಪತಿಗಳಾದ್ದರಿಂದ ಹೊಸತು ಏನೂ ಇಲ್ಲ. ಹೊಸತು ಬಂದಾಗ ಆಶ್ಚರ್ಯವೋ ಆನಂದವೋ ಆಗುತ್ತದೆ. ಹಾಗಾದರೆ ನಟಿಸುವ ಉದ್ದೇಶ – ಸಾತ್ವಿಕರಿಗೆ ತತ್ವದ ಬೋಧನೆ.

ಈ ರೀತಿಯಾಗಿ ಅನಾದಿಕಾಲದಿಂದಲೂ ಇವರು ದಂಪತಿಗಳಾಗಿಯೇ ಇರುವುದರಿಂದ ಅಥವಾ ಸೀತಾರಾಮರೂಪದಲ್ಲಿ ಒಮ್ಮೆ ವಿವಾಹವೂ ಆಗಿದ್ದರಿಂದ ಪುನಃ ವಿವಾಹಕ್ಕೆ ಮುಹೂರ್ತ ನೋಡುವುದು ಯಾಕೆ?

ಅಥವಾ ಮುಹೂರ್ತ ನೋಡುವ ಉದ್ದೇಶ ದಾಂಪತ್ಯಜೀವನಕ್ಕೆ ವಿರಸ ಬಾರದಿರಲೆಂದು. ಇವರು ನಿತ್ಯ ಅವಿಯೋಗಿಗಳಾದ್ದರಿಂದ ವಿರಸದ ಪ್ರಶ್ನೆಯೇ ಇಲ್ಲ. ಹೀಗಿರುವಾಗ ಮಹೂರ್ತವನ್ನು ಯಾಕೆ ನೋಡಬೇಕು?

<u>ಸಂದೇಶ</u> : **'ತದೇವಲಗ್ನಂ ಸುದಿನಂ ತದೇವ...... ಲಕ್ಷ್ಮೀಪತೇ ತೇ ಅಂಘ್ರಿಯುಗಂ ಸ್ಮರಾಮಿ' ದೇವರ ಸ್ಮರಣೆ ಯಾವಾಗ ಬರುತ್ತೋ ಆಗಲೇ ಒಳ್ಳೆಯ ಮುಹೂರ್ತ. ಬೇರೆ ಮುಹೂರ್ತ ನೋಡುವ ಅಗತ್ಯವೇ ಇಲ್ಲ.**

**ಆಸೀತ್ ಪರಸ್ಪರ ನಿರೀಕ್ಷಣಕರ್ಮಕಾಲೇ**
**ಭೈಷ್ಮೀಮುಖಾಂಬುಜಗತಂ ನಯನಂ ಮುರಾರೇಃ**
**ತಸ್ಯಾಶ್ಚ ನಾಭಿಸರಸೀ ನಿಲಯಂ ತದೇತ–**
**ದ್ಯುಕ್ತಂ ಯದರ್ಕದೃಗಸಾವಿಯಮುತ್ಪಲಾಕ್ಷೀ** ॥ ೩೬ ॥

ಪರಸ್ಪರ=ಅನ್ಯೋನ್ಯವಾಗಿ; ನಿರೀಕ್ಷಣ=ನೋಟದ; ಕರ್ಮ=ಕೆಲಸದ; ಕಾಲೇಃ= ಕಾಲದಲ್ಲಿ; ಮುರಾರೇಃ=ಮುರಾರಿಯ; ನಯನಂ=ಕಣ್ಣು; ಭೈಷ್ಮೀ=ರುಗ್ಮಿಣಿಯ; ಮುಖ=ಮುಖವೆಂಬ; ಅಂಬುಜ=ಕಮಲದಲ್ಲಿ; ಗತಂ=ಇದ್ದದ್ದು; ಆಸೀತ್=ಆಯಿತು; ತಸ್ಯಾಃ ಚ=ಅವಳದ್ದಾದರೂ; ನಾಭಿ=ಹೊಕ್ಕಳೆಂಬ; ಸರಸೀ=ಸರೋವರ; ನಿಲಯಂ=ಆಶ್ರಯ ವುಳ್ಳದ್ದು; ತತ್ ಏತತ್=ಆ ಇದು; ಯುಕ್ತಂ=ಯೋಗ್ಯವು; ಯತ್=ಯಾವ ಕಾರಣದಿಂದ; ಅಸೌ=ಇವನು; ಅರ್ಕ=ಸೂರ್ಯನು; ದೃಕ್=ಕಣ್ಣುಳ್ಳವನು; ಇಯಂ=ಇವಳು; ಉತ್ಪಲ=ನೈದಿಲೆ ಎಂಬ; ಅಕ್ಷೀ=ಕಣ್ಣುಳ್ಳವಳು.

ವಿವಾಹದ ಮುಹೂರ್ತ ಬಂತು. ಮಧ್ಯದ ಬಟ್ಟೆಯನ್ನು ಸರಿಸಿದರು. ಪರಸ್ಪರ ದರ್ಶನಮಾಡುವ ಪದ್ಧತಿ. ಕೃಷ್ಣನು ರುಗ್ಮಿಣಿಯ ಮುಖವನ್ನು ನೋಡಿದನು. ಈತನ ಕಣ್ಣು ಚೆನ್ನಾಗಿ ಅರಳಿದೆ. ರುಗ್ಮಿಣಿಯು ಕೃಷ್ಣನ ನಾಭಿಯನ್ನು ನೋಡಿ ಬಹಳ ಆನಂದಪಟ್ಟಳು. ರುಗ್ಮಿಣಿಯು ನಾಚಿಕೆಯಿಂದ ಕೆಳಗೆ ನೋಡಿದಳು ಎಂದರ್ಥ. ನಾರಿಯರಿಗೆ ನಾಚಿಕೆಯೇ ಒಂದು ಅಲಂಕಾರ. ಕೃಷ್ಣನ ಕಣ್ಣುಗಳು ಅವಳ ಮುಖಾರವಿಂದವನ್ನು ನೋಡಿ ಅರಳಿದ್ದೂ ಈಕೆಯು ಈತನ ನಾಭಿಯನ್ನು ನೋಡಿ ನೆಮ್ಮದಿಪಟ್ಟದ್ದೂ ಸರಿ ಇದೆ. ಯಾಕೆಂದರೆ ಕೃಷ್ಣನ ಕಣ್ಣಿನಲ್ಲಿ ಸೂರ್ಯನಿದ್ದಾನೆ. ಇವಳ ಮುಖವು ಕಮಲದಂತಿದೆ. ಸೂರ್ಯನಿಗೂ ಕಮಲಕ್ಕೂ ಬಹಳ ಸಖ್ಯ ಇದೆ. ಸೂರ್ಯನ ದೃಷ್ಟಿಯು ಕಮಲಕ್ಕೆ ಬಿದ್ದಾಗ ಕಮಲ ಅರಳುವುದು ಸಹಜ. ಆದ್ದರಿಂದ ಇವಳ ಮುಖಕಮಲವು ಅರಳಿತು. ತನಗೆ ಪ್ರಿಯವಾದ ಕಮಲದ ದರ್ಶನವಾದ್ದರಿಂದ ಸೂರ್ಯನು ಉಬ್ಬಿದ. ಆಗ ಕೃಷ್ಣನ ಕಣ್ಣು ಸಹಜವಾಗಿ ಅರಳಿತು.

ಮದುವೆಯ ಪ್ರಸಂಗದಲ್ಲಿ ಮದುಮಗಳು ನಾಚಿ ಕೆಳಗೆ ನೋಡುವುದು ಯೋಗ್ಯ. ಪೂರಾ ಕೆಳಗೆ ಅಲ್ಲ. ವರನ ನಾಭಿಯನ್ನು ನೋಡಬೇಕು. ನಾಭಿಯು ಸರೋವರದಂತೆ ಆಳವಾಗಿರುವುದು ಲಕ್ಷಣ. ಕೃಷ್ಣನ ನಾಭಿಯು ಆ ರೀತಿ ಇದೆ. ಇವಳ ಕಣ್ಣು ನೈದಿಲೆಯಂತೆ ಇದೆ. ನೈದಿಲೆಗೆ ನೀರೇ ಆಸರೆ. ನೀರನ್ನು ಸಂಪರ್ಕಿಸಿದಾಗ ಅರಳುವುದು ಸಹಜ. ಆದ್ದರಿಂದ ಕಣ್ಣು ಇವಳ ನೆಮ್ಮದಿಯಿಂದ ಅರಳಿತು.

<u>ಸಂದೇಶ</u> : **ವಧೂವರರ ಪರಸ್ಪರ ನಿರೀಕ್ಷಣ ಕಾಲದಲ್ಲಿ ಪರಸ್ಪರ ಯಾವ ಭಾಗವನ್ನು ನೋಡಬೇಕು ಎಂದು ತಿಳಿಯುತ್ತದೆ. ವಧುವಿನ ಮುಖವನ್ನು ಅರಳಿದ್ದನ್ನಾಗಿಯೂ ವರನ ನಾಭಿಯನ್ನು ಆಳವನ್ನಾಗಿಯೂ ಚಿಂತಿಸಬೇಕು. ಗೃಹಿಣಿಯು ಪ್ರಸನ್ನಳಾಗಿದ್ದರೆ ಇಡೀ ಮನೆಯು ನೆಮ್ಮದಿಯಿಂದ ಇರುತ್ತದೆ. ನಾಭಿಯ ಆಳವು ಶ್ರೀಮಂತಿಕೆಯ ಸಂಕೇತ. ವಧುವು ವರನ ನಾಭಿಯನ್ನು ಆಳವನ್ನಾಗಿ ಚಿಂತಿಸಿದರೆ ಹೇರಳವಾದ ಸಂಪತ್ತು ಲಭಿಸುತ್ತದೆ.**

**ಗುಡಾನ್ವಿತಾಭಿಃ ಶುಭಜೀರಿಕಾಭಿಃ ಪರಸ್ಪರಂ ವರ್ಷತಿ ಬಂಧುವರ್ಗೇ ।**
**ವಕ್ಷಸ್ಥಿತಾಂ ಬೋಧಿಸುತಾಜಿತಸ್ತತ್ಪಕ್ಷ್ಯೈಃ ಪ್ರಯುಕ್ತಂ ಪ್ರಥಮಂ ಬಭಾರ ॥ ೩೭ ॥**

ಬಂಧು=ಬಂಧುಗಳ; ವರ್ಗೇ=ಸಮೂಹವು; ಗುಡ=ಬೆಲ್ಲದಿಂದ; ಅನ್ವಿತಾಭಿಃ=ಕೂಡಿದ; ಶುಭ=ಒಳ್ಳೆಯ; ಜೀರಿಕಾಭಿಃ=ಜೀರಿಗೆಗಳಿಂದ; ಪರಸ್ಪರಂ=ಅನ್ಯೋನ್ಯವಾಗಿ; ವರ್ಷತಿ= ಸಿಂಪಡಿಸುತ್ತಿರಲು; ವಕ್ಷ=ಎದೆಯಲ್ಲಿ; ಸ್ಥಿತ=ಇರುವ; ಅಂಭೋಧಿ=ಸಮುದ್ರದ; ಸುತಾ= ಮಗಳಿಂದ; ಜಿತಃ=ಸೋತಿರುವ ಕೃಷ್ಣನು; ತತ್=ರುಗ್ಮಿಣಿಯ; ಪಕ್ಷ್ಯೈಃ=ಪಕ್ಷದವರಿಂದ; ಪ್ರಯುಕ್ತಂ=ಹಾಕಲ್ಪಟ್ಟದ್ದನ್ನು; ಪ್ರಥಮಂ=ಮೊದಲಿಗೆ; ಬಭಾರ=ಧರಿಸಿದನು.

ವಧೂವರರ ಕಡೆಯವರು ಎದುರುಬದುರಾಗಿ ನಿಂತಿದ್ದಾರೆ. ಬೆಲ್ಲದಿಂದ ಕೂಡಿದ

ಜೀರಿಗೆಯನ್ನು ಪರಸ್ಪರ ಮೇಲೆ ಚೆಲ್ಲುವ ಸಂದರ್ಭ. ಇದರಲ್ಲಿ ಒಂದು ಸ್ಪರ್ಧೆ ಇದೆ. ವರನ ಕಡೆಯವರು ಬಿಸಾಡಿದ ಈ ವಸ್ತುವು ವಧುವಿನ ಕಡೆಯವರ ಮೇಲೆ ಮೊದಲು ಬಿದ್ದರೆ ವರನ ಕಡೆಯುವರು ಗೆದ್ದರು ಎಂದರ್ಥ. ಹಾಗೆಯೇ ವಧುವಿನ ಕಡೆಯಲ್ಲಿಯೂ ಕೂಡಾ. ಪ್ರಕೃತ ಇಲ್ಲಿ ವಧುವಿನ ಕಡೆಯವರೇ ಗೆದ್ದರು. ವಧುವಾದ ರುಗ್ಮಿಣಿಯು ಶ್ರೀವತ್ಸರೂಪದಿಂದ ಕೃಷ್ಣನ ಎದೆಯಲ್ಲಿ ಇದ್ದಾಳೆ. ನಾವು ಸಮೀಪವಿದ್ದಷ್ಟು ನಾವು ಬಿಸಾಡಿದ ವಸ್ತು ಇನ್ನೊಬ್ಬರ ಮೇಲೆ ಬೇಗ ಬೀಳುತ್ತದೆ. ಈ ರುಗ್ಮಿಣಿಯು ಕೃಷ್ಣನಿಗೆ ಬಹಳ ಸಮೀಪ ಇದ್ದಾಳೆ –ವಕ್ಷಸ್ಥಳದಲ್ಲಿ. ಆದ್ದರಿಂದ ವಧು ಬಿಸಾಡಿದ್ದು ವರನ ಮೇಲೆ ಮೊದಲು ಬಿತ್ತು. ಫಲಿತಾಂಶ ವಧುವಿನ ಕಡೆಯವರಿಗೆ ಜಯವಾಯಿತು.

ಸಂದೇಶ : **ಕೃಷ್ಣರುಗ್ಮಿಣಿಯರು 'ನಾರಾಯಣರಮಾರ' ಅವತಾರ ಎಂದು ಮತ್ತೊಮ್ಮೆ ಸ್ಪಷ್ಟವಾಯಿತು. 'ಅಹಂ ಭಕ್ತಪರಾಧೀನಃ' ಎಂದು ದೇವರ ಮಾತು. ಭಕ್ತರ ಮುಂದೆ ಭಗವಂತ ಸದಾ ಸೋಲುತ್ತಾನೆ.**

**ಆಕಂಠಮಾಪಾದತಲಾನ್ಮುರಾರೇ–**
**ರ್ನೇತ್ರಾಂತ ನೀಲೋತ್ಪಲ ಚಾರುಮಾಲಾಮ್ ।**
**ಶ್ರೀಃ ಸಂದಧೇ ತತ್ಕ್ಷಣಹೃಷ್ಟರೋಮ–**
**ಸತ್‌ಕಂಚುಕಂ ಶ್ರೀಪತಿರಾತ್ಮಪತ್ನ್ಯಾಮ್ ॥ ೩೮ ॥**

ಶ್ರೀಃ=ರುಗ್ಮಿಣಿಯು; ಮುರಾರೇಃ=ಕೃಷ್ಣನ; ಆ ಪಾದತಲಾತ್=ಪಾದವನ್ನು ಆರಂಭಿಸಿ; ಆಕಂಠಂ=ಕುತ್ತಿಗೆಯ ತನಕ; ನೇತ್ರ=ಕಣ್ಣಿನ; ಅಂತ=ಕೊನೆಯೆಂಬ; ನೀಲ=ನೀಲವಾದ; ಉತ್ಪಲ=ನೈದಿಲೆಯ; ಚಾರು=ಚಂದದ; ಮಾಲಾಮ್=ಮಾಲೆಯನ್ನು; ಸಂದಧೇ=ಹಾಕಿದಳು; ಶ್ರೀಪತಿಃ=ಲಕ್ಷ್ಮೀಪತಿಯು; ಆತ್ಮ=ತನ್ನ; ಪತ್ನ್ಯಾಂ=ಪತ್ನಿಯಲ್ಲಿ; ತತ್=ಆ; ಕ್ಷಣ=ಕ್ಷಣದಲ್ಲಿ; ಹೃಷ್ಟ=ಸಂತೋಷದ; ರೋಮ=ರೋಮಗಳೆಂಬ; ಸತ್=ಒಳ್ಳೆಯ; ಕಂಚುಕಂ=ರವಕೆಯನ್ನು; ಸಂದಧೇ=ತೊಡಿಸಿದನು.

ವಿವಾಹದ ಸಂದರ್ಭದಲ್ಲಿ ವಧುವು ವರನಿಗೆ ಹೂವಿನ ಹಾರವನ್ನು ತೊಡಿಸಬೇಕು. ವರನು ವಧುವಿಗೆ ಬಹಳ ವಸ್ತ್ರಗಳನ್ನು ಕೊಡಬೇಕು; ಇದು ಲೋಕರೂಢಿ. ಈ ವಧೂವರರು ಲೋಕವಿಲಕ್ಷಣರು. ಆದ್ದರಿಂದ ಲೋಕವಿಲಕ್ಷಣವಾದ ಹೂವಿನ ಹಾರ ಹಾಗೂ ವಸ್ತ್ರಗಳು. ಹೇಗೆಂದರೆ ರುಗ್ಮಿಣಿಯು ಕಮಲಾಕ್ಷಿಯು. ಈಕೆಯು ತನ್ನ ಕಣ್ಣುಗಳಿಂದ ಕೃಷ್ಣನನ್ನು ಕುತ್ತಿಗೆಯಿಂದ ಪಾದತನಕ ನೋಡಿದಳು. ಇದು ಒಂದು ಕಮಲದ ಮೇಲೆಯನ್ನು ತೊಡಿಸಿದಂತೆ ಆಯಿತು. ಮಾಲೆಯನ್ನು ಕುತ್ತಿಗೆಯಿಂದಲೇ ತೊಡುವುದು, ತಲೆಯಿಂದ ಅಲ್ಲ. ಆದ್ದರಿಂದಲೇ ಈಕೆಯು ಕೃಷ್ಣನನ್ನು ಕುತ್ತಿಗೆಯಿಂದಲೇ ನೋಡಲು ಆರಂಭಿಸಿ ಪಾದದಲ್ಲಿ ಕೊನೆಗೊಳಿಸಿದಳು. ಬಡವರು ಕೊಡುವ ಹಾರ ಚಿಕ್ಕದಿರುತ್ತದೆ. ಈಕೆ ಶ್ರೀಮತಿಯಾದ್ದರಿಂದ ದೊಡ್ಡ ಹಾರವನ್ನೇ ಕೊಟ್ಟಳು. ಇದರಿಂದ ನಾರಿಯರಿಗೆ ಅಗತ್ಯ

ಬೇಕಾದ ಲಜ್ಜೆಯನ್ನೂ ಶ್ರೀ ವಾದಿರಾಜರು ವ್ಯಕ್ತಮಾಡಿದ್ದಾರೆ. ಕುತ್ತಿಗೆ ತನಕ ಮಾತ್ರ ನೋಡಿದಳು. ಮುಖವನ್ನು ನೋಡಲಿಲ್ಲ. ಇದಕ್ಕೆ ಕಾರಣ ಲಜ್ಜೆ. ಇದು ಶ್ರೀ ವಾದಿರಾಜರು ವರ್ಣಿಸುವ ಕೌಶಲ್ಯ. ಇವಳ ಕಣ್ಣಿನ ಸೌಂದರ್ಯ, ಹೂಗಳಲ್ಲಿ ಉತ್ತಮವಾದದ್ದು ಕಮಲ. ಅವುಗಳದ್ದೇ ಮಾಲಿಕೆ. ಹಾಕುವ ಜಾಗ ಕುತ್ತಿಗೆ, ಆದ್ದರಿಂದ ಕುತ್ತಿಗೆಯ ತನಕವೇ ದರ್ಶನ, ಇದರಿಂದ ಪ್ರಕಟವಾಗುವ ನಾಚಿಕೆ –ಈ ರೀತಿ ವರ್ಣಿಸುವ ತಾಕತ್ತು ಕವಿಕುಲತಿಲಕರಾದ ಶ್ರೀ ವಾದಿರಾಜರಿಗೇ ಮೀಸಲು. ಈ ರೀತಿ ರುಗ್ಮಿಣಿಯು ಕೃಷ್ಣನಿಗೆ ಒಂದು ಮಾಲಿಕೆಯನ್ನು ತೊಡಿಸಿದಳು.

ಕೃಷ್ಣನು ಈಕೆಗೆ ತೊಡಿಸಿದ. ಉಡುಗೆಯ ವಿಚಾರ, –ಕೃಷ್ಣನು ಈಕೆಯನ್ನು ನಖಶಿಖಾಂತ ನೋಡಿದನು. ಇವಳ ದೇಹದ ಸೌಂದರ್ಯವನ್ನು ಆಸ್ವಾದಿಸಿದನು. ಇದರಿಂದ ಇವಳಿಗೆ ಇಡೀ ದೇಹದಲ್ಲಿ ರೋಮಾಂಚವಾಯಿತು– ಕೈಯಲ್ಲಿ, ಮೈಯಲ್ಲಿ, ಕಾಲಲ್ಲಿ ಸರ್ವತ್ರ. ಇದೆಲ್ಲಾ ರವಕೆಯಂತೆ, ಸೀರೆಯಂತೆ, ಮೇಲುಹೊದಿಕೆಯಂತೆ ಆಯಿತು. ನಾರಿಯರಿಗೆ ಬಟ್ಟೆ ಹೆಚ್ಚು ಇದ್ದಷ್ಟು ಭೂಷಣ. ಕೃಷ್ಣನ ದೃಷ್ಟಿ ಈಕೆಯ ಮೇಲೆ ಬಿದ್ದದ್ದರಿಂದ ಈಕೆಗೆ ಬಹಳ ರೋಮಾಂಚವಾಗಿತ್ತು. ಪತಿಯಿಂದ ಸಿಗುವ ಆನಂದದ ಮುಂದೆ ತಂದೆ, ತಾಯಿ, ಅಣ್ಣ, ತಮ್ಮ ಇತ್ಯಾದಿಗಳಿಂದ ಸಿಗುವ ಆನಂದ ನಗಣ್ಯ. ಈ ಆನಂದವು ಹೃದಯದ ಒಳಗೆ ಪ್ರವೇಶಿಸುತ್ತದೆ. ಆದ್ದರಿಂದ ತುಂಬಾ ರೋಮಾಂಚವಾಗುತ್ತದೆ.

**ಉಗ್ರೋಯಂ ಸಖಿ ಚಂಚಲೋಽಯಮಮಲೇ ಸೋಽಯಂ ರಮೇ ಗೂಢಪಾತ್**
**ವೃದ್ಧೋಽಸೌ ಜ್ವಲನೋಽಯಮೇಷ ತಪನಃ ಸದ್ವಕ್ರತುಂಡೋ ಹ್ಯಸೌ ।**
**ಮುಗ್ಧೇದಂತಕ ಏಷ ದೇವಿ ಜಲರಾಟ್ ಗೋತ್ರಾ ಸಹೋಽಸೌ ಕ್ಷಿತೌ**
**ಇತ್ಯಾದ್ಯಾಭಿಧಯೈವ ಧಿಕೃತಸುರಾ ಶ್ರೀರಾಸಾದಾಚ್ಯುತಮ್ ॥ ೩೯ ॥**

ಹೇ ಸಖಿ=ಎಲೋ ಗೆಳತಿಯೇ; ಅಯಂ=ಇವನು; ಉಗ್ರಃ=ಉಗ್ರನು; ಅಯಂ=ಇವನು; ಚಂಚಲಃ=ಚಂಚಲನು; ಅಮಲೇ=ನಿರ್ಮಲಳೇ; ರಮೇ=ರಮೆಯೇ; ಸಃ=ಆ; ಅಯಂ= ಇವನು; ಜ್ವಲನಃ=ಬೆಂಕಿಯು; ಏಷಃ=ಇವನು; ತಪನಃ=ತಪಿಸುವವನು; ಅಸೌ=ಇವನು; ಸತ್=ಚೆನ್ನಾಗಿ; ವಕ್ರ=ಬಗ್ಗಿದ; ತುಂಡಃ=ಕೊಕ್ಕು ಉಳ್ಳವನು; ಮುಗ್ಧೇ= ಮುಗ್ಧಳೇ; ಏಷಃ= ಇವನು; ಅದಂತಕಃ=ಹಲ್ಲು ಇಲ್ಲದವನು; ದೇವಿ=ದೇವಿಯೇ; ಏಷಃ=ಇವನು; ಜಲ=ನೀರಿಗೆ; ರಾಟ್=ಒಡೆಯನು; ಅಸೌ=ಇವನು; ಗೋತ್ರ=ಪರ್ವತ ಗಳನ್ನು; ಅಸಹಃ=ಸಹಿಸದವನು; ಇತಿ=ಈ ರೀತಿಯಾಗಿ; ಕ್ಷಿತೌ=ಭೂಮಿಯಲ್ಲಿ; ಆದಿ= ಮೊದಲಾದ; ಅಭಿಧಯಾ ಏವ= ಹೆಸರಿನಿಂದಲೇ; ಧಿಕೃತ=ಕಡೆಗಣಿಸಲ್ಪಟ್ಟ; ಸುರಾ=ದೇವತೆ ಗಳುಳ್ಳವಳಾಗಿ; ಶ್ರೀಃ= ರಮೆಯು; ಅಚ್ಯುತಮ್=ಕೃಷ್ಣನನ್ನು; ಆಸಸಾದ=ಸಮೀಪಿಸಿದಳು.

ಮೊದಲು ಗೆಳತಿಯು ರುಗ್ಮಿಣಿಗೆ ಇತರ ದೇವತೆಗಳ ಗುಣಗಳನ್ನು ಹೇಳಿದಳು.

ಇದರಿಂದ ಪರೋಕ್ಷವಾಗಿ ಅವರಲ್ಲಿರುವ ದೋಷಗಳು ಹೇಳಲ್ಪಟ್ಟವು. ಈಗ ಪ್ರತ್ಯಕ್ಷವಾಗಿಯೇ ಅವರಲ್ಲಿರುವ ದೋಷಗಳನ್ನು ತಿಳಿಸುತ್ತಾಳೆ. ಈ ದೇವತೆಗಳ ಹೆಸರುಗಳೇ ಅವರನ್ನು ದೋಷಿಗಳೆಂದು ತಿಳಿಸುತ್ತದೆ– ಅಲ್ಲಿ ರುದ್ರದೇವರು ಕುಳಿತಿದ್ದರು. ಗೆಳತಿಯು ಅವರನ್ನು ತೋರಿಸಿ, ಎಲೋ ರುಗ್ಮಿಣಿಯೇ ಈತನಿಗೆ ಉಗ್ರನೆಂದು ಹೆಸರು. ತುಂಬಾ ಕೋಪಿಷ್ಠನು. ಈತನನ್ನು ನೀನು ಲಗ್ನವಾದರೆ ನಿನಗೆ ಈತನಿಂದ ಹೇಗೆ ತಾನೇ ಸುಖ ಸಿಕ್ಕೀತು. ಈತನ ಕೋಪವನ್ನು ಕಂಡೇ ಈತನಿಗೆ ಉಗ್ರನೆಂಬ ಹೆಸರು ಬಂದಿದೆ. ಈತನು ತನ್ನ ಹೆಸರನ್ನೂ ಅದರ ಗುಣವನ್ನೂ ಬಿಡಲೊಲ್ಲನು. ಅನಂತರ ಇರುವವನು ವಾಯು. ಈತನು ಮಹಾಚಂಚಲ. ಸ್ಥಿರತೆ ಇಲ್ಲ. ದೈಹಿಕವಾಗಿ ಒಂದು ಕಡೆ ಇರುವವನೇ ಅಲ್ಲ. ಇವನನ್ನು ಕಟ್ಟಿಕೊಂಡರೆ ನಿನಗೆ ಏಕತ್ರ ವಾಸ ಕಷ್ಟಸಾಧ್ಯ. ಈ ರೀತಿಯ ಚಾಂಚಲ್ಯದಿಂದಾಗಿಯೇ ಇವನಿಗೆ ಚಂಚಲ ಎಂದು ಹೆಸರು.

ಅನಂತರದವನು ಶೇಷ. ಇವನ ಹೆಸರು ಗೂಢಪಾತ್. ಅಂದರೆ ಕಾಲುಗಳನ್ನು ಅಡಗಿಸಿಕೊಂಡವ. ಕಾಲುಗಳಿಂದ ನಡೆದು ಅಭ್ಯಾಸವೇ ಇಲ್ಲ. ಭುಜದಿಂದಲೇ ಸಂಚರಿಸುವವನು. ಹುಡುಗನು ತನ್ನ ಕಾಲಮೇಲೆ ತಾನು ನಿಂತರೆ ಅಂತಹ ಹುಡುಗನನ್ನು ವಧುಗಳು ಮೆಚ್ಚುತ್ತಾರೆ. ಹೀಗೆ ತನ್ನ ಕಾಲಮೇಲೆ ನಿಲ್ಲಲು ಶಕ್ತಿ ಇಲ್ಲದವನು ಎಂಬುದು ಈತನ ದೋಷ. ಮುಂದೆ ಇರುವವನು ಬ್ರಹ್ಮನು. ಎಲ್ಲರಿಗಿಂತ ಮೊದಲು ಹುಟ್ಟಿದವನು. ಐವತ್ತು ಸಂವತ್ಸರಗಳನ್ನು ಕಂಡಾಗಿದೆ. ಈಗ ಜೀವನದ ಉತ್ತರಾರ್ಧದಲ್ಲಿ ಇದ್ದಾನೆ ಆದ್ದರಿಂದಲೇ ವೃದ್ಧ ಅಂದರೆ ಮುದುಕ ಎಂಬ ಹಣೆಪಟ್ಟಿ ಕಟ್ಟಿಸಿಕೊಂಡಾಗಿದೆ. ನೀನು ಇನ್ನೂ ತಾರುಣ್ಯಾವಸ್ಥೆಗೆ ಕಾಲಿಡುತ್ತಿದ್ದಿಯಷ್ಟೇ. ಇವನನ್ನು ವರಿಸಿ ನಿನ್ನ ಗೃಹಿಣೀ ಜೀವನವನ್ನು ಹಾಳುಮಾಡಿಕೊಳ್ಳಬೇಡ. ಇವನ ಆಚೆ ಇರುವವನು ಅಗ್ನಿ. ಇವನಿಗೆ ಜ್ವಲನ ಎಂದು ಹೆಸರು. ಇವನ ಪಕ್ಕದಲ್ಲಿ ಕೂತವನು ಸೂರ್ಯನು. ಇವನಿಗೆ ತಪನ ಎಂದು ಹೆಸರು. ಇವರಿಬ್ಬರೂ ನಿನಗೆ ಪತಿಗಳಾಗಲು ಅಯೋಗ್ಯರು. ತಾವು ಯಾವಾಗಲೂ ಬಿಸಿಯಾಗಿರುವವರು. ಇನ್ನೊಬ್ಬರಿಗೂ ಬಿಸಿಮುಟ್ಟಿಸುವವರು. ತಂಪು ಎಂಬ ಶಬ್ದದ ಅರ್ಥ ಇವರ ಜೀವನದಲ್ಲಿ ಪ್ರವೇಶಿಸುವುದೇ ಇಲ್ಲ. ಎಲೋ ರುಗ್ಮಿಣಿಯೇ ನೀನು ಈತನಕ ಸಾಮದಲ್ಲೇ ಭೆಳೆದವಳು. ಅವರಿಬ್ಬರ ಹಾಗೂ ನಿನ್ನ ಗುಣಧರ್ಮಗಳಿಗೆ ರಾತ್ರಿಹಗಲಿನಷ್ಟು ವ್ಯತ್ಯಾಸ ಇದೆ. ನಿಮ್ಮಿಬ್ಬರಿಗೆ ಹೊಂದಾಣಿಕೆಯೇ ಆಗುವುದಿಲ್ಲ.

ಇವರನಂತರ ಗರುಡ ಕುಳಿತಿದ್ದ. ಆತನ ಬಳಿಗೆ ರುಗ್ಮಿಣಿಯು ಬಂದಳು. ಆಗ ಗೆಳತಿಯು ಹೇಳಿದಳು. ಎಲೋ ಚಂದದವಳೇ, ಈ ಹುಡುಗನನ್ನು ಒಮ್ಮೆ ನೋಡು. ಇವನು ಚಂದ ಇದ್ದಾನಾ? ಕವಿಗಳು ದೇಹದ ಒಂದೊಂದು ಭಾಗವನ್ನು ಒಂದೊಂದು ವಸ್ತುವಿಗೆ ಹೋಲಿಸುತ್ತಾರೆ. ಮೂಗನ್ನು ಸಂಪಿಗೆಗೆ ಹೋಲಿಸುತ್ತಾರೆ. ಇವನ ಮೂಗನ್ನು ನೋಡು. ತುಂಬಾ ಉದ್ದವಾಗಿದೆ. ಹಾಗೆ ಸೊಟ್ಟವೂ ಆಗಿದೆ. ಇದರಿಂದಾಗಿ ಮುಖದ

ಲಕ್ಷಣವೇ ಹೋಗಿದೆ. ಇಂತಹವನನ್ನು ವರಿಸಿದರೆ ಜನ ನಿಮ್ಮಿಬ್ಬರಿಗೂ ಪರಿಹಾಸ ಮಾಡುತ್ತಾರೆ. ಬುದ್ಧಿ ಮಾತ್ರ ಚಂದ ಇದ್ದರೆ ಸಾಲದು. ದೇಹವೂ ಚಂದ ಇರಬೇಕು. ಇವನ ಜೊತೆಗೆ ಕುಳಿತವನು ಪೂಷಾ ಎಂಬ ದೇವತೆಯು. ಇವನು ಬಾಹ್ಯವಾಗಿ ಚಂದ ಇದ್ದಾನೆ. ಆದರೆ ಮಾತನಾಡಲು ತೊಡಗಿದರೆ ಅರ್ಥವೇ ಆಗುವುದಿಲ್ಲ. ಯಾಕೆಂದರೆ ಇವನಿಗೆ ಒಂದು ಹಲ್ಲೂ ಇಲ್ಲ. ದಕ್ಷಯಜ್ಞ ಪ್ರಸಂಗದಲ್ಲಿ ಏನೋ ಮಾಡಲು ಹೋಗಿ ರುದ್ರಗಣದಿಂದ ಎಲ್ಲಾ ಹಲ್ಲುಗಳನ್ನೂ ಉದುರಿಸಿಕೊಂಡವ. ಊಟದ ಮೂಲಕ ಬದುಕಲು ಸಾಧ್ಯವಿಲ್ಲದವ. ನೀನು ಮದುವೆ ಆಗುವುದು, ನಿನ್ನನ್ನು ಆತನು ಸಾಕಬೇಕೆಂದು. ನೀನೇ ಆತನನ್ನು ಸಾಕುವ ಪ್ರಸಂಗ ಬಂದರೆ, ಎಲೋ ರಮೆಯೇ, ಏನು ಮಾಡುವಿ?

ಆದ್ದರಿಂದ ಮುಂದೆ ಹೋಗೋಣ. ಇಕೋ, ಇವನು ವರುಣ. ಇವನನ್ನು ಜಲರಾಟ್ ಎಂದೂ ಕರೆಯುತ್ತಾರೆ. ಇವನು ತುಂಬಾ ಜಲಸಂಪತ್ತನ್ನು ಕೂಡಿ ಹಾಕಿದ್ದಾನೆ. ಆದರೆ ಸ್ವಲ್ಪವೂ ತನಗಾಗಲೀ ಇನ್ನೊಬ್ಬರಿಗಾಗಲೀ ಉಪಯೋಗಕ್ಕೆ ಬಾರದು. ಯಾಕೆಂದರೆ ಅದು ಉಪ್ಪು. ಆಚಮನ ಮಾಡಲೂ ಆಗದು. ಉಪಯೋಗಕ್ಕೆ ಬಾರದ ಸಂಪತ್ತನ್ನು ಕೂಡಿಹಾಕುವವರು ಮೂರ್ಖರು. ಎಲೋ ಸಖಿ ರುಗ್ಮಿಣಿಯೇ, ಮೂರ್ಖರನ್ನು ನಮ್ಮ ಜೀವನದಲ್ಲಿ ಕಟ್ಟಿಕೊಂಡು ನಾವೂ ಮೂರ್ಖರಾಗುವುದು ಬೇಡ.

ವಾದಿರಾಜರು ವರುಣನನ್ನು ಜಲರಾಟ್ ಎಂಬ ಶಬ್ದದಿಂದ ಕರೆದಿದ್ದಾರೆ. ನೀರಿಗೆ ಅಧಿಪತಿ ಎಂಬ ಅರ್ಥ ಇದೆ. ಹಾಗೆಯೇ ಮೂರ್ಖ ಎಂಬ ಅರ್ಥವೂ ಆಗುತ್ತದೆ. ಸಂಸ್ಕೃತದಲ್ಲಿ 'ಲಡಯೋಃ ಅಭೇದಃ' ಎಂಬ ಮಾತಿನಂತೆ ಲಕಾರ ಡಕಾರಗಳನ್ನು ಪರಸ್ಪರವಾಗಿ ಒಂದರ ಜಾಗದಲ್ಲಿ ಮತ್ತೊಂದನ್ನು ಪ್ರಯೋಗಿಸಬಹುದು. ಆದ್ದರಿಂದ ಲಕಾರದ ಜಾಗದಲ್ಲಿ ಡಕಾರವನ್ನು ಬಳಸಿದರೆ 'ಜಡರಾಟ್' ಎಂದಾಗುತ್ತದೆ. ಜಡರಿಗೆ ಒಡೆಯ ಎಂದರ್ಥ. ಅಂದರೆ ಮೂರ್ಖ ಎಂದು ಪರ್ಯವಸಾನ.

ಅಲ್ಲಿಂದ ಮುಂದೆ ಹೋದಾಗ ಇಂದ್ರನ ದರ್ಶನವಾಯಿತು. ಇವನಿಗೆ ಸಂದ ಬಿರುದು 'ಗೋತ್ರಾಸಹ' ಎಂದು. ಗೋತ್ರವನ್ನು ಸಹಿಸದವನು ಎಂದು. ಮದುವೆಗೆ ಮೊದಲು ಜಾತಕದ ವಿಮರ್ಶೆ ನಡೆಯಬೇಕು. ಸಮಾನಗೋತ್ರಗಳಿಗೆ ವಿವಾಹವನ್ನು ಶಾಸ್ತ್ರಕಾರರು ನಿಷೇಧಿಸಿದ್ದಾರೆ. ಅದರ ಬಾಧಕ ಆಗಲೇ ಗೊತ್ತಾಗದಿದ್ದರೂ ಮುಂದಿನ ತಲೆಮಾರಿಗೆ ಖಂಡಿತವಾಗಿಯೂ ಗೊತ್ತಾಗುತ್ತದೆ. ಎಲೋ ರುಗ್ಮಿಣಿಯೇ, ಇವನು ಗೋತ್ರವಿಮರ್ಶೆಯನ್ನು ಸಹಿಸುವುದಿಲ್ಲ. ಈ ರೀತಿಯ ಗೋತ್ರ, ಜಾತಕ ವಿಮರ್ಶೆಗೆ ಅವಕಾಶ ಕೊಡದ ಹುಡುಗನನ್ನು ಆರಿಸಬೇಡ. ಮುಂದೆ ಆಗುವ ದುರಂತಕ್ಕೆ ಹೊಣೆಯಾಗಬೇಡ.

ವಾದಿರಾಜರು ಇಲ್ಲಿ 'ಗೋತ್ರಾಸಹ' ಎಂಬ ಶಬ್ದವನ್ನು ಬಳಸುವ ಮೂಲಕ

ಅರ್ಥಚಮತ್ಕಾರವನ್ನು ಮೆರೆದಿದ್ದಾರೆ. ಜಾತಕವನ್ನು, ಗೋತ್ರವನ್ನು ಸಹಿಸದವನು ಎಂಬರ್ಥದಲ್ಲಿ ಇಂದ್ರನಿಗೆ ಗೋತ್ರಾಸಹ ಎಂಬ ಹೆಸರಲ್ಲ. ಜಾತಕ, ಗೋತ್ರಗಳ ವಿಮರ್ಶೆ ಶಾಸ್ತ್ರೀಯವಾದದ್ದು. ದೇವತೆಗಳು ಎಂದೂ ಶಾಸ್ತ್ರವಿರೋಧಿಗಳಲ್ಲ. ಹಾಗಾದರೆ ಇಂದ್ರನಿಗೆ ಯಾವ ಅರ್ಥದಲ್ಲಿ ಗೋತ್ರಾಸಹ ಎಂಬ ಹೆಸರು? ಉತ್ತರ– ಪರ್ವತಗಳಿಗೆ ಗೋತ್ರಗಳೆಂದು ಹೆಸರಿದೆ. ಗೋ=ಭೂಮಿ. ತ್ರ=ರಕ್ಷಣೆ. ಭೂಮಿಯನ್ನು ಪರ್ವತಗಳು ರಕ್ಷಿಸುತ್ತವೆ. ಆದ್ದರಿಂದ ಪರ್ವತಗಳಿಗೆ ಗೋತ್ರಗಳೆಂದು ಹೆಸರು. ಈ ಪರ್ವತಗಳಿಗೆ ಪ್ರಾಚೀನ ಕಾಲದಲ್ಲಿ ರೆಕ್ಕೆಗಳಿದ್ದವು. ಇದರಿಂದಾಗಿ ಪರ್ವತಗಳು ಹಕ್ಕಿಗಳಂತೆ ಹಾರುತ್ತಿದ್ದವು. ಜನಸಮೂಹದಲ್ಲಿ, ಮನೆಗಳ ಮೇಲೆ ಬಂದು ಕೂಡುತ್ತಿದ್ದವು. ಇದರಿಂದ ಬಹಳಷ್ಟು ಸಾವುನೋವುಗಳು ಸಂಭವಿಸುತ್ತಿದ್ದವು. ಇದರಿಂದ ನೊಂದ ಇಂದ್ರನು ತನ್ನ ವಜ್ರಾಯುಧದಿಂದ ಇವುಗಳ ರೆಕ್ಕೆಗಳನ್ನು ಕತ್ತರಿಸಿದನು. ಈ ರೀತಿ ಇಂದ್ರನು ಗೋತ್ರಾಸಹನು ಆದನು.

ಈ ರೀತಿ ಈ ದೇವತೆಗಳಲ್ಲಿರುವ ದೋಷಗಳನ್ನು ಅವರವರ ಹೆಸರುಗಳಿಂದಲೇ ರುಗ್ಮಿಣಿಯು ತಿಳಿದಳು. ಆದ್ದರಿಂದಲೇ ಇವರನ್ನೆಲ್ಲಾ ತಿರಸ್ಕರಿಸಿದಳು. ನೇರವಾಗಿ ದೇವರ ಬಳಿಗೆ ಬಂದಳು. ದೇವರಲ್ಲಿ ಯಾವ ದೋಷವೂ ಇಲ್ಲ ಎಂಬುದನ್ನು ಅವನ ಹೆಸರೇ ತಿಳಿಸುತ್ತದೆ. ಅವನಿಗೆ ಅಚ್ಯುತ ಎಂದು ಹೆಸರು. ಚ್ಯುತಿ=ಕೊರತೆ, ನ್ಯೂನತೆ . ಚ್ಯುತ=ನ್ಯೂನತೆ ಉಳ್ಳವ. ಅಚ್ಯುತ ಅಂದರೆ ಯಾವ ನ್ಯೂನತೆಯೂ ಇಲ್ಲದವ.

**ವೇಧಾ ವೈದಿಕಮೌಲಿರೇಷ ಪವನೋ ಮಂತ್ರಂ ಜಪನ್ ಸಂತತಮ್**
**ಶರ್ವೋಽಸೌ ಸುವಿರಕ್ತಧೀಃ ಸ ಮಘವಾ ವ್ಯಾಪಾರಭಾರಾಕುಲಃ ।**
**ಸೂರ್ಯಃ ಪರ್ಯಟನಪ್ರಿಯಃ ಸತು ಶಶೀ ದೋಷಾಕರೋಽಸೌ ಸ್ಮರೋಽ**
**ನಂಗಶ್ಚೇತ್ಯಖಿಲಾನುಪೇಕ್ಷ್ಯ ಕಮಲಾ ವವ್ರೇ ಯದೂನಾಂ ಪತಿಮ್ ॥ ೪೦ ॥**

ಏಷಃ=ಈ; ವೇಧಾಃ=ಬ್ರಹ್ಮನು; ವೈದಿಕ=ವೈದಿಕರಿಗೆ; ಮೌಲಿಃ=ಶ್ರೇಷ್ಠನು; ಪವನಃ= ವಾಯುವು; ಸಂತತಂ=ಯಾವಾಗಲೂ; ಮಂತ್ರಂ=ಮಂತ್ರವನ್ನು; ಜಪನ್=ಜಪಿಸುವವನು; ಅಸೌ=ಈ; ಶರ್ವಃ=ರುದ್ರನು; ಸು=ಚೆನ್ನಾಗಿ; ವಿರಕ್ತ=ವಿರಕ್ತವಾದ; ಧೀಃ=ಬುದ್ಧಿಯವನು; ಸಃ=ಆ; ಮಘವಾ=ಇಂದ್ರನು; ವ್ಯಾಪಾರ=ಕೆಲಸಗಳ; ಭಾರ=ಒತ್ತಡದಿಂದ; ಆಕುಲಃ=ವ್ಯಗ್ರನಾದನು; ಸೂರ್ಯಃ=ಸೂರ್ಯನು; ಪರ್ಯಟನ=ಸಂಚಾರದಲ್ಲಿ; ಪ್ರಿಯಃ=ಇಷ್ಟನು; ಸಃ=ಆ; ಶಶೀ ತು=ಚಂದ್ರನಾದರೂ; ದೋಷಾ=ರಾತ್ರಿಯನ್ನು; ಕರಃ=ಮಾಡುವವನು; ಅಸೌ=ಈ; ಸ್ಮರಃ=ಕಾಮನು; ಅನಂಗಃ=ದೇಹ ಇಲ್ಲದವನು; ಇತಿ=ಈ ರೀತಿಯಾಗಿ; ಅಖಿಲಾನ್= ಎಲ್ಲರನ್ನೂ; ಉಪೇಕ್ಷ್ಯ=ತಿರಸ್ಕರಿಸಿ; ಕಮಲಾ= ರುಗ್ಮಿಣಿಯು; ಯದೂನಾಂ=ಯಾದವರಿಗೆ; ಪತಿಂ=ಒಡೆಯನನ್ನು; ವವ್ರೇ=ಹೊಂದಿದಳು.

ಇನ್ನೊಂದು ಮುಖದಿಂದ ದೇವತೆಗಳನ್ನು ಉಪೇಕ್ಷೆ ಮಾಡಲು ಕಾರಣವನ್ನು

ರಾಜರು ತಿಳಿಸುತ್ತಾರೆ– ಬ್ರಹ್ಮನು ಸದಾ ವೇದಾಧ್ಯಯನದಲ್ಲೇ ತನ್ನನ್ನು ತೊಡಗಿಸಿ ಕೊಂಡವನು. ತನ್ನ ಜೀವನದ ಮೊದಲಿನ ಐವತ್ತು ವರ್ಷ ವೇದಾಭ್ಯಾಸವನ್ನು ಮಾಡಿದನು. ದೇವರು ಅವನಿಗೆ ಉಪದೇಶಿಸಿದನು. ಇವನು ಸಂಸಾರವನ್ನು ಮಾಡಲು ಅನರ್ಹನು. ಅನಂತರದವನು ಇವನಿಗೆ ಸಮಾನನು. ಇವನಂತೆ ಸದಾ ಜಪ ಮಾಡಿ ಕೊಂಡಿರುವವನು. ಪ್ರತಿಯೊಬ್ಬರಲ್ಲಿಯೂ ಇದ್ದುಕೊಂಡು ಒಂದುಕ್ಷಣವೂ ಉದಾಸೀನ ಮಾಡದೆ ಹಂಸಮಂತ್ರ ವನ್ನು ಜಪಿಸುವವನು. ಇವರಿಬ್ಬರೂ ವೈದಿಕರೇ ಆಗಿದ್ದಾರೆ. ದಾಸರು ಒಂದು ಹಾಡಲ್ಲಿ ಹೇಳಿದಂತೆ "ಒಲ್ಲೆ ನಾ ವೈದಿಕ ಗಂಡನ" ಎಲೋ ರುಗ್ಮಿಣಿಯೇ, ಇವರು ನಿನ್ನ ಆರೈಕೆ ಯನ್ನು ಮಾಡುವುದಿಲ್ಲ. ಆದ್ದರಿಂದ ಇವರು ಬೇಡ.

ಸೂರ್ಯನು ಒಂದುಕ್ಷಣವೂ ನಿಲ್ಲದೆ ೨೪ ಗಂಟೆಯೂ ಸಂಚಾರ ಮಾಡಿಕೊಂಡೇ ಇರುವವನು. ಇವನು ಸಂಸಾರಪ್ರಿಯನಲ್ಲ. ಸಂಚಾರಪ್ರಿಯನು.

ಚಂದ್ರನು ರಾತ್ರಿಯಲ್ಲಿ ಸಂಚರಿಸುವವನು. ಸಾಮಾನ್ಯವಾಗಿ ಗೃಹಸ್ಥನಾದವನು ಹಗಲು ಸಂಚರಿಸಿ ರಾತ್ರಿ ಮನೆಯಲ್ಲಿ ಇರುವವನು. ಇವನು ಅದಕ್ಕೆ ವಿರುದ್ಧನು. ದೋಷಾಕರ ಎಂಬ ಶಬ್ದಕ್ಕೆ ದೋಷಾ=ರಾತ್ರಿಯನ್ನು; ಕರ=ಮಾಡುವವನು ಎಂದು ಪದವಿಭಾಗ ಮಾಡಿ ಮಾಡಿದ ಅರ್ಥ. ದೋಷ+ಆಕರ ಎಂದೂ ಪದವಿಭಾಗ ಮಾಡಲು ಆಗುತ್ತದೆ. ಆಗ ದೋಷಗಳಿಗೆ ಆಶ್ರಯ ಎಂದರ್ಥಬರುತ್ತದೆ. ಚಂದ್ರನಲ್ಲಿ ಕಪ್ಪುಕಲೆಗಳಿವೆ. ಇಂತಹ ಹುಡುಗನನ್ನು ರುಗ್ಮಿಣಿಯು ಒಲ್ಲಳು. ಮನ್ಮಥನಿಗೆ ದೇಹವೇ ಇಲ್ಲ. ಇವನ ದೇಹವನ್ನು ರುದ್ರದೇವರು ಸುಟ್ಟುಹಾಕಿದ್ದಾರೆ. ದೇಹವೇ ಇಲ್ಲದ ಮೇಲೆ ಮಾಲಿಕೆ ಯಾರ ಕೊರಳಿಗೆ? ಸಂಸಾರ ಹೇಗೆ? ಇತ್ಯಾದಿ ಅನೇಕ ಪ್ರಶ್ನೆಗಳು ಬರುತ್ತವೆ. ರುದ್ರನನ್ನು ವರಿಸಲು ಸಾಧ್ಯವೇ ಇಲ್ಲ. ಆತನು ಮದುವೆ ಸಂಸಾರ ಯಾವುದೂ ಬೇಡವೆಂದು ದೂರ ಸರಿದವನು. ಮದುವೆ ಅಂದಮೇಲೆ ಸ್ವಲ್ಪವಾದರೂ ರಾಗ ಇರಬೇಕು. ವಿರಾಗಿಗಳಿಗೆ ಮದುವೆಯಿಂದ ಏನು ಪ್ರಯೋಜನ. ಸಂಸಾರ ಹಾಳು ಅಷ್ಟೇ.

ಇಂದ್ರನಿದ್ದಾನೆ. ಸುಂದರನೂ ಹೌದು. ಶ್ರೀಮಂತನೂ ಆಗಿದ್ದಾನೆ. ಆಧಿಪತ್ಯನೂ ಇದೆ. ಆದರೆ ಸಂಸಾರ ಹೆಂಡತಿಯ ಕಡೆ ಗಮನಕೊಡಲು ಅವಕಾಶವೇ ಇಲ್ಲ. ಮೂರು ಲೋಕದ ರಕ್ಷಣೆಯ ಹೊಣೆ. ಪ್ರತಿಯೊಬ್ಬರೂ ಕಾಲಕಾಲಕ್ಕೆ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಂಡಿದ್ದಾರೋ ಎಂದು ನೋಡಬೇಕಾಗಿದೆ. ಅವರಿಗೆ ಆಪತ್ತುಗಳು ಬಂದಾಗ ಅದನ್ನು ಪರಿಹರಿಸಬೇಕು. ಹೀಗೆ ಒಂದಲ್ಲ ಎರಡಲ್ಲ, ಅನೇಕ ಕಾರ್ಯಗಳ ಒತ್ತಡ. ಪತಿಗೆ ಕಾರ್ಯಕ್ರಮಗಳು ಬೇಕು. ಆದರೆ ಪತ್ನಿ ಜೊತೆ ಕಳೆಯಲು ಸ್ವಲ್ಪವಾದರೂ ಅವಕಾಶ ಬೇಕು. ಅದಕ್ಕೆ ಅವಕಾಶವೇ ಇಲ್ಲವೆಂದ ಮೇಲೆ ಅಂತಹ ಹುಡುಗ ಬೇಡ. ಹೀಗೆ ಅಲ್ಲಿ ರುವ ಎಲ್ಲಾ ದೇವತೆಗಳನ್ನೂ ಕಡೆಗಣಿಸಿದಳು. ಕೃಷ್ಣನ ಬಳಿಗೆ ನಡೆದಳು. ಕೃಷ್ಣನಲ್ಲಿ ಇವೆಲ್ಲಾ ಇದ್ದರೂ ದೋಷರೂಪವಾಗಿ ಇಲ್ಲ. ಆದ್ದರಿಂದ ಕೃಷ್ಣನನ್ನು ಪತಿಯನ್ನಾಗಿ ವರಿಸಿದಳು.

**ಸಂದೇಶ : ರುಗ್ಮಿಣಿಯ ದೃಷ್ಟಿಯಲ್ಲಿ ಇವೆಲ್ಲಾ ದೋಷಗಳು ಆಗಬಹುದು. ಆದರೆ ಮಾನವರು ನಾವು ಹಾಗೆ ಗ್ರಹಿಸಬಾರದು. ನಮಗೆ ಆ ಅಧಿಕಾರವಿಲ್ಲ. ದೇವರು ಅವರಿಗೆಲ್ಲಾ ವಹಿಸಿಕೊಟ್ಟ ವೃತ್ತಿಗಳು. ಅದನ್ನು ಅವರು ಚೆನ್ನಾಗಿ ನಿಭಾಯಿಸುತ್ತಾರೆ ಎಂದು ತಿಳಿಯಬೇಕು.**

**ಪುತ್ರೋ ಯಸ್ಯ ಸ ಪದ್ಮಭೂಃ ಫಣಿಪತಿಃ ಶಯ್ಯಾ ಖಗೇಶೋ ರಥಃ**
**ಶಂಭುರ್ಯಚ್ಚರಣಾಂಬುಮೌಲಿರಗಭಿತ್ತದತ್ತ ಸಾಮ್ರಾಜ್ಯಭುಕ್ ।**
**ನಿತ್ಯಂ ಯತ್‌ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂಃ**
**ತಂ ವರ್ಯಂ ವರಯಾಂ ಬಭೂವ ಸುದತೀ ಸಾ ದ್ವಾರಕಾನಾಯಕಮ್॥ ೪೧ ॥**

ಸಃ=ಆ: ಪದ್ಮ=ಕಮಲದಿಂದ; ಭೂಃ=ಹುಟ್ಟಿದ ಬ್ರಹ್ಮನು; ಯಸ್ಯ=ಯಾರ; ಪುತ್ರಃ= ಮಗನೋ e; ಫಣಿ=ಸರ್ಪಗಳಿಗೆ; ಪತಿಃ=ಒಡೆಯನು; ಶಯ್ಯಾ=ಹಾಸಿಗೆಯೋ; ಖಗ=ಪಕ್ಷಿಗಳಿಗೆ, ಈಶಃ=ಒಡೆಯನು; ರಥಃ=ರಥವೋ; ಶಂಭುಃ=ರುದ್ರನು; ಯತ್=ಯಾರ; ಚರಣ= ಪಾದಗಳ; ಅಂಬು=ನೀರು; ಮೌಲಿಃ=ತಲೆಯಲ್ಲಿ ಉಳ್ಳವನೋ; ಅಗ=ಪರ್ವತ ಗಳನ್ನು; ಭಿತ್=ನಾಶಮಾಡಿದವನು; ತತ್=ಅವನಿಂದ; ದತ್ತ=ಕೊಡಲ್ಪಟ್ಟ; ಸಾಮ್ರಾಜ್ಯ= ರಾಜ್ಯವನ್ನು; ಭುಕ್=ಅನುಭವಿಸುವವನೋ; ವಿಧು=ಚಂದ್ರನು; ರವಿ=ಸೂರ್ಯನು; ನಿತ್ಯಂ= ಯಾವಾಗಲೂ; ಯತ್=ಯಾರ ಪದಚರಣದಲ್ಲಿ; ಸಂಗತೌ=ಸಂಬದ್ಧರೋ; ಶ್ರೀ=ಲಕ್ಷ್ಮೀ ಎಂಬ; ವಧೂಃ=ನಾರಿಯು; ಯತ್=ಯಾರ; ವಲ್ಲಭಾ=ಪತ್ನಿಯೋ; ದ್ವಾರಕಾ=ದ್ವಾರಕೆಯ; ನಾಯಕಂ=ಒಡೆಯನಾದ; ವರ್ಯಂ=ಪೂಜ್ಯನಾದ; ತಂ=ಅಂತಹ ಕೃಷ್ಣನನ್ನು; ಸುದತೀ=ಸುಂದರಿಯಾದ; ಸಾ=ಅವಳು; ವರಯಾಂ ಬಭೂವ=ವರಿಸಿದಳು.

ಇನ್ನೊಂದು ರೀತಿಯಿಂದ ದೇವತೆಗಳ ಚಿಕ್ಕತನವನ್ನು ರುಗ್ಮಿಣಿಯು ಪ್ರಕಟಿಸುತ್ತಾಳೆ. ರಮೆಯು ಕೃಷ್ಣನ ಪತ್ನಿಯು. ನಾನು ರಮೆಯ ಅವತಾರ. ಈ ಬ್ರಹ್ಮನು ಭಗವಂತನ ಮಗನು. ಆದ್ದರಿಂದ ನನಗೂ ಮಗನು. ಮಗನನ್ನು ವರಿಸುವುದು ಸರಿಯಲ್ಲ. ಶೇಷನನ್ನು ವರಿಸೋಣವೆಂದರೆ ಆತನು ದೇವರಿಗೆ ಹಾಸಿಗೆಯಾಗಿ ಸೇವೆಮಾಡುತ್ತಾನೆ. ಯಾವಾಗ ಬೇಕಾದರೂ ಯಜಮಾನ ಈತನನ್ನು ಸೇವೆಗಾಗಿ ಕರೆಯಬಹುದು. ಆಗ ನನಗೆ ಬೇಕಾದಾಗ ಸಿಗೋಲ್ಲ. ಗರುಡನೂ ಅಷ್ಟೇ... ವಾಹನನಾಗಿ ಕೆಲಸಮಾಡುವವನು. ದೇವರ ಪಾದವನ್ನು ತೊಳೆದ ನೀರು ಗಂಗೆಯಾಗಿ ಹರಿಯಿತು. ಅದನ್ನು ರುದ್ರನು ತನ್ನ ಪಾವಿತ್ರ್ಯಕ್ಕಾಗಿ ಶಿರದಲ್ಲಿ ಧರಿಸಿದನು. ಪಾದತೊಳೆದ ನೀರಿನಿಂದಲೇ ಇವನಿಗೆ ಶುದ್ಧಿ ಬಂದಿರಬೇಕಾದರೆ ಆ ನಾರಾಯಣ ಎಂಥವನಿರಬೇಕು. ಪರ್ವತಗಳನ್ನೂ ಚೆಂಡಿನಂತೆ ಆಡಿಸುವ ಬಲಿಷ್ಠ ಇಂದ್ರನಿದ್ದಾನೆ. ಆದರೆ ಇವನಿಗೆ ಏನು ಬಲ, ಸಂಪತ್ತು ಇದ್ದರೂ ಅದು ಆತನಿಂದ ಬಂದದ್ದು. ಆತನು ಯಾವಾಗ ಕಸಿದುಕೊಳ್ಳುತ್ತಾನೋ, ಯಾವಾಗ ಇವನನ್ನು ಬೀದಿಪಾಲಾಗಿಸುತ್ತಾನೋ ಗೊತ್ತಿಲ್ಲ. ಇನ್ನು ಸೂರ್ಯಚಂದ್ರರ ಪಾಡು.

ಯಾವಾಗಲೂ ವಿಷ್ಣುಪದವನ್ನೇ ನಂಬಿ ಬದುಕುವವರು. ವಿಷ್ಣುಪದ ಇಲ್ಲದಿದ್ದರೆ ಇವರಿಗೆ ಅಸ್ತಿತ್ವವೇ ಇಲ್ಲ (ವಿಷ್ಣುಪದ ಎಂದು ಆಕಾಶಕ್ಕೆ ಹೆಸರಿದೆ). ಆದ್ದರಿಂದ ಕೃಷ್ಣನನ್ನೇ ವರಿಸುವೆ. ಈತನು ಯಾರ ಮಗನೂ ಅಲ್ಲ ಎಂದು ರುಗ್ಮಿಣಿಯು ಕೃಷ್ಣನ ಬಗ್ಗೆ ವಿಮರ್ಶಿಸಿದಳು.

**ಯಾ ವೈ ಚಂಪಕಸಂಪದಾಬ್ಜವಸತೇರ್ದೂರ್ವಾಶ್ರಿಯಾ ಸ್ವಾತ್ಮನಃ**
**ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜ ಕಾಂತ್ಯಾ ವಿಧೋಃ ।**
**ಸನ್ನೀಲೋತ್ಪಲಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾಮತಾ**
**ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥ ೪೨ ॥**

ಯಾ=ಯಾವುದು; ಚಂಪಕ=ಸಂಪಿಗೆಯ; ಸಂಪದಾ=ಸಂಪತ್ತಿನಿಂದ; ಅಬ್ಜ=ಕಮಲದಲ್ಲಿ; ವಸತೇಃ=ವಾಸಿಸುವವನಿಗೆ; ಅಮತಾ=ಅನಿಷ್ಟವೋ; ದೂರ್ವಾ=ಗರಿಕೆಯ; ಶ್ರಿಯಾ=ಕಾಂತಿಯಿಂದ; ಸ್ವಾತ್ಮನಃ=ತನಗೇ; ಕೇತಕ್ಯಾಃ=ಕೇದಗೆಯ; ವಿಭವೇನ= ವೈಭವದಿಂದ; ಕೃತ್ತಿ=ಚರ್ಮವೇ; ವಸನಸ್ಯ=ಬಟ್ಟೆಯಾದವನಿಗೆ; ಅಂಭೋಜ=ಕಮಲದ; ಕಾಂತ್ಯಾ=ಕಾಂತಿಯಿಂದ; ವಿಧೋಃ=ಚಂದ್ರನಿಗೆ; ಸತ್=ಒಳ್ಳೆಯ; ನೀಲೋತ್ಪಲ=ನೈದಿಲೆಯ; ಶೋಭಯಾ=ಕಾಂತಿಯಿಂದ; ದಿನಮಣೇಃ=ಸೂರ್ಯನಿಗೆ; ಶ್ರೀಮತ್=ಕಾಂತಿವುಳ್ಳ; ತುಲಸ್ಯಾ=ತುಳಸಿಯಿಂದ; ಹೇರಂಬಸ್ಯ=ಗಣಪತಿಗೆ; ಅಮತಾ=ಅನಿಷ್ಟವೋ; ಸಾ=ಅಂತಹ; ಮಾಲಿಕಾ=ಮಾಲೆಯು; ಪರಂ=ಮುಖ್ಯವಾಗಿ; ಹರೇಃ=ಕೃಷ್ಣನಿಗೆ; ಸಮುಚಿತಾ=ಯೋಗ್ಯವಾಗಿ; ಶೋಭತೇ=ಶೋಭಿಸುತ್ತದೆ.

ರುಗ್ಮಿಣಿಯು ಕೈಯಲ್ಲಿ ಹಾರವನ್ನು ಹಿಡಿದುಕೊಂಡಿದ್ದಾಳೆ. ಆ ಹಾರದಲ್ಲಿ ಎಲ್ಲಾ ರೀತಿಯ ಹೂಗಳು ಇವೆ. ದೇವತೆಗಳೆಲ್ಲಾ ಕುಳಿತಿದ್ದಾರೆ. ಒಂದುವೇಳೆ ಈಕೆಯೇ ಈ ದೇವತೆಗಳನ್ನು ಆಶಿಸಿ ಹಾರಹಾಕಲು ಬಂದರೆ ಯಾವ ದೇವತೆಯೂ ಅದನ್ನು ಸ್ವೀಕರಿಸಲು ತಯಾರಿರಲಿಲ್ಲ. ಯಾಕೆಂದರೆ– ಆ ಹಾರದಲ್ಲಿ ಸಂಪಿಗೆ ಹೂಗಳಿವೆ. ಆದ್ದರಿಂದ ಬ್ರಹ್ಮನು ಕೊರಳನ್ನು ಒಡ್ಡಲಿಲ್ಲ. ಬ್ರಹ್ಮನು ಸದಾ ಕಮಲದಲ್ಲೇ ಇರುವವನು. ಕಮಲದಲ್ಲಿ ಸದಾ ಇರುವ ಪ್ರಾಣಿ ಎಂದರೆ ದುಂಬಿ. ಬ್ರಹ್ಮನು ದುಂಬಿಯಂತೆ ಆದನು. ದುಂಬಿ ಎಲ್ಲಾ ಪುಷ್ಪಗಳ ಬಳಿಗೂ ಹೋಗುತ್ತದೆ, ಸಂಪಿಗೆಯನ್ನು ಹೊರತು. ಆದ್ದರಿಂದ ಬ್ರಹ್ಮನು ಈ ಮಾಲೆ ತನಗೆ ಬೇಡ ಎಂದನು. ಮಾಲೆ ಹಾಕದೆ ಮದುವೆ ಏನು? ಆ ಮಾಲೆಯಲ್ಲಿ ಕೇದಗೆ ಹೂವಿತ್ತು. ರುದ್ರದೇವರಿಗೆ ಕೇದಗೆ ಹೂ ಆಗುವುದಿಲ್ಲ. ಚಂದ್ರನು ಉದಿಸುವಾಗ ಕಮಲಪುಷ್ಪಗಳೂ ಸೂರ್ಯ ಉದಿಸುವಾಗ ನೈದಿಲೆ ಹೂಗಳೂ ಮದುಡುತ್ತವೆ. ಈ ರೀತಿ ಅವರಿಬ್ಬರಿಗೆ ಆಗದ ಈ ಎರಡು ಜಾತಿಯ ಹೂಗಳು ಇದರಲ್ಲಿ ಸೇರಿವೆ. ಗಣಪತಿಗೆ ಆಗದ ತುಳಸೀದಳಗಳೂ ಈ ಹಾರದಲ್ಲಿವೆ. ಆದ್ದರಿಂದ ಇವರಾರೂ ಈ ಹಾರಕ್ಕೆ ಇಷ್ಟಪಡಲಿಲ್ಲ. ತಾನೇ ಕೊರಳಿಗೆ ಹಾಕೊಳ್ಳೋಣ ಅಂದರೆ ಅದರಲ್ಲಿ ಗರಿಕೆ ದಳಗಳಿವೆ. ದುರ್ಗೆಗೆ ಗರಿಕೆ ನಿಷಿದ್ಧ. ರುಗ್ಮಿಣಿಯು ಆಲೋಚಿಸುತ್ತಾಳೆ– ಎಲ್ಲಿಯೂ

ಸಲ್ಲದ ಈ ಮಾಲಿಕೆಗೆ ಯೋಗ್ಯವ್ಯಕ್ತಿಯು ನಾರಾಯಣನೇ ಆಗಿದ್ದಾನೆ. ಆತನಿಗೆ ಆಗದ ಹೂವೂ ಇದರಲ್ಲಿ ಇಲ್ಲ.

ಸಂದೇಶ : **ದೊಡ್ಡವರ ಲಕ್ಷಣವೇ ಈ ರೀತಿ– ಇದು ಆಗುತ್ತೆ, ಇದು ಆಗುವುದಿಲ್ಲ ಎಂಬ ಸಂಕುಚಿತ ಮನೋಭಾವನೆ ಇರುವುದಿಲ್ಲ.**

**ಹರೇಃ ಪ್ರಸಾದೈಕಭುಜಾಂ ಸುರಾಣಾ–**
**ಮಿಮಾಂ ಪ್ರದಾಸ್ಯಾಮಿ ಕಥಂ ತ್ವಿತೀವ ।**
**ರಮಾ ಪ್ರಮಾದೋತ್ಥಿತರೋಮರಾಜಿಃ**
**ಸಮರ್ಪಯಾಮಾಸ ಮುಕುಂದ ಕಂಠೇ ॥ ೪೩ ॥**

ಹರೇಃ=ನಾರಾಯಣನ; ಪ್ರಸಾದ ಏಕ=ಕೇವಲ ಪ್ರಸಾದವನ್ನು; ಭುಜಾಂ=ಅನುಭವಿಸುವ; ಸುರಾಣಾಂ=ದೇವತೆಗಳಗೆ; ಇಮಾಂ=ಇದನ್ನು; ಕಥಂ=ಹೇಗೆ?; ಪ್ರದಾಸ್ಯಾಮಿ=ಕೊಡುವೆನು; ಇತಿ ಇವ=ಎಂಬಂತೆ; ರಮಾ=ರುಗ್ಮಿಣಿಯು; ಪ್ರಮೋದ= ಆನಂದದಿಂದ; ಉತ್ಥಿತ=ಉಂಟಾದ; ರೋಮ=ರೋಮಗಳ; ರಾಜಿಃ=ಸಮೂಹವುಳ್ಳವಳಾಗಿ; ಮುಕುಂದ=ದೇವರ; ಕಂಠೇ=ಕುತ್ತಿಗೆಯಲ್ಲಿ; ಸಮರ್ಪಯಾಮಾಸ=ಅರ್ಪಿಸಿದಳು.

ಈ ಹಾರವನ್ನು ದೇವತೆಗಳು ಸ್ವೀಕರಿಸದಿರಲು ಇನ್ನೊಂದು ಕಾರಣ ಇದೆ– ಇವರೆಲ್ಲಾ ದೇವರ ಭಕ್ತರು. ದೇವರಿಗೆ ಅರ್ಪಿತವಾದದ್ದನ್ನು ಮಾತ್ರ ಸ್ವೀಕರಿಸುತ್ತಾರೆ. ಈ ಹಾರವು ಹೊಸತು. ಇನ್ನೂ ದೇವರಿಗೆ ಅರ್ಪಿತವಾಗಿಲ್ಲ. ಆದ್ದರಿಂದ ಈ ದೇವತೆಗಳು ಹೇಗೆ ಸ್ವೀಕರಿಸುತ್ತಾರೆ. ಸ್ವೀಕರಿಸಿದರೆ ಅವರಿಗೂ ದೋಷ ಇದೆ. ಕೊಟ್ಟರೆ ನನಗೂ ದೋಷ ಇದೆ. ಆದ್ದರಿಂದ ಈ ಹಾರಕ್ಕೆ ದೇವರೇ ಯೋಗ್ಯ ವ್ಯಕ್ತಿ ಎಂಬ ವಿಚಾರ ಆಕೆಗೆ ಬಂತು. ಆಗ ಬಹಳ ಆನಂದವೂ ಆಯಿತು. ಜೊತೆಗೆ ರೋಮಾಂಚವೂ ಆಯಿತು. ನೇರವಾಗಿ ಕೃಷ್ಣನ ಬಳಿಗೆ ಹೋಗಿ ಹಾರವನ್ನು ಕೃಷ್ಣನ ಕೊರಳಿಗೆ ಹಾಕಿದಳು.

ಸಂದೇಶ : **ದೇವರಿಗೆ ಅರ್ಪಿಸದ ಯಾವ ವಸ್ತುವೂ ಸ್ವೀಕಾರಾರ್ಹವಲ್ಲ.**

**ಸಾಧಾರಾಂಬುಕದಂಬಕೇನ ಸಹ ಸುಪ್ರೇಮಾಶ್ರುಧಾರಾಂ ಹರೇಃ**
**ಭ್ರಾಜನ್ಮಾಲಿಕಯಾ ಸಮಂ ಪ್ರಣಯ ಸನ್ಮಾಲಾಂ ಸುನೀರಾಜನಮ್ ।**
**ನೇತ್ರಾಂತೇನ ಶುಚಿಸ್ಮಿತಾಽಮೃತರಸೈರ್ನೈವೇದ್ಯ ಮಾವೇದ್ಯ ತತ್**
**ಪಾರ್ಶ್ವಂ ಮಂದಮುಪಾಶ್ರಯತ್ವಲಮಿವ ವ್ಯಾಲೋಲಹಾರೋಜ್ವಲಾ ॥ ೪೪ ॥**

ವ್ಯಾಲೋಲ=ಚಂಚಲವಾದ; ಹಾರ=ಮಾಲಿಕೆಯಿಂದ; ಉಜ್ವಲಾ=ಶೋಭಿಸುವ; ಸಾ=ಆಕೆಯು; ಧಾರಾ=ಧಾರೆಯ; ಅಂಬು=ನೀರಿನ; ಕದಂಬಕೇನ=ಸಮೂಹದಿಂದ; ಸಹ=ಕೂಡಿಕೊಂಡು; ಸು=ಒಳ್ಳೆಯ; ಪ್ರೇಮ=ಪ್ರೀತಿಯ; ಅಶ್ರು=ಕಣ್ಣೀರಿನ; ಧಾರಾಂ=

ಧಾರೆಯನ್ನು; ಭ್ರಾಜತ್=ಶೋಭಿಸುವ; ಮಾಲಿಕಯಾ=ಮಾಲೆಯಿಂದ; ಸಮಂ=ಕೂಡಿ; ಪ್ರಣಯ=ಪ್ರೀತಿ ಎಂಬ; ಸತ್=ಒಳ್ಳೆಯ; ಮಾಲಾಂ=ಮಾಲೆಯನ್ನು; ನೇತ್ರ=ಕಣ್ಣಿನ; ಅಂತೇನ=ಕೊನೆಯಿಂದ; ಸು=ಒಳ್ಳೆಯ; ನೀರಾಜನಮ್=ಆರತಿಯನ್ನು; ಅಮೃತ= ಅಮೃತದ; ರಸೈಃ=ರಸಗಳಿಂದ; ನೈವೇದ್ಯಂ=ನೈವೇದ್ಯವನ್ನು; ಹರೇಃ=ಕೃಷ್ಣನಿಗೆ; ಆವೇದ್ಯ= ಅರ್ಪಿಸಿ; ಶುಚಿ=ಶುದ್ಧವಾದ; ಸ್ಮಿತಾ=ನಗುವವಳಾಗಿ; ತತ್=ಕೃಷ್ಣನ; ಪಾರ್ಶ್ವಂ= ಬಳಿಯನ್ನು; ಮಂದಂ=ಮೆಲ್ಲಗೆ; ಫಲಂ ಇವ=ಫಲದಂತೆ; ಉಪಾಶ್ರಯತ್=ಆಶ್ರಯಿಸಿದಳು.

ರುಗ್ಮಿಣಿಯು ಮಂದಹಾಸ ಬೀರುತ್ತಾ ನಿಧಾನವಾಗಿ ಬರುತ್ತಿದ್ದಾಳೆ. ಇವಳ ಕುತ್ತಿಗೆಯಲ್ಲಿ ನಾನಾರೀತಿಯ ಹಾರಗಳು ಇವೆ. ಅವುಗಳು ನಿಧಾನವಾಗಿ ಅತ್ತಿತ್ತ ವಾಲುತ್ತಿವೆ. ಇದೂ ಒಂದು ಆಕೆಗೆ ಶೋಭೆಯನ್ನೇ ತಂದಿದೆ. ಮುಖದಲ್ಲಿರುವ ನಗುವಿನಲ್ಲಿ ಯಾವ ರೀತಿಯ ಕಾಪಟ್ಯವೂ ಇಲ್ಲ. ಹಿರಿಯರು ಇವಳ ಕೈಯನ್ನು ಕೃಷ್ಣನ ಕೈಮೇಲೆ ಇರಿಸಿ ಇವಳನ್ನು ಕೃಷ್ಣನಿಗೆ ನೀರಿನ ಮೂಲಕ ಧಾರೆ ಎರೆದು ಕೊಡುತ್ತಿದ್ದಾರೆ. ಆಗ ಇವಳ ಕಣ್ಣುಗಳಿಂದ ಆನಂದಾಶ್ರು ಹರಿಯಿತು. ಅದು ಈ ನೀರಿನ ಜೊತೆಗೆ ಸೇರಿತು. ಇಂತಹ ನೀರಿನಿಂದ ಕೃಷ್ಣನನ್ನು ಇವಳು ಅಭಿಷೇಕಿಸಿದಳು. ಮಾಲಿಕೆಯನ್ನು ಕೃಷ್ಣನಿಗೆ ಪ್ರೀತಿಪೂರ್ವಕವಾಗಿ ಅರ್ಪಿಸಿದಳು. ಈ ಮಾಲಿಕೆಯ ಜೊತೆ ಪ್ರೀತಿ ಎಂಬ ಮಾಲಿಕೆಯನ್ನೂ ಸೇರಿಸಿದಳು. ಇವಳ ತುಟಿಯಲ್ಲಿ ಅಮೃರಸ ಇದೆ. ಅದನ್ನು ಕೃಷ್ಣನಿಗೆ ನೈವೇದ್ಯ ಎಂದು ಅನುಸಂಧಾನಿಸಿದಳು. ಕೊನೆಗೆ ಒಂದು ಮಂಗಳಾರತಿ ಮಾಡಿದಳು. ಅಂದರೆ ಕೃಷ್ಣನನ್ನು ತನ್ನ ಕಡೆಗಣ್ಣಿನಿಂದ ಒಮ್ಮೆ ನಖಶಿಖಾಂತ ನೋಡಿದಳು. ಇದುವೇ ಆರತಿ. ದೇವರಿಗೆ ಪ್ರೀತಿಯಿಂದ ಅಭಿಷೇಕ ಮಾಡಿ, ಅಲಂಕಾರ ಮಾಡಿ, ನೈವೇದ್ಯವನ್ನು ಅರ್ಪಿಸಿ, ಒಂದು ಆರತಿಯನ್ನು ಮಾಡಿದರೆ ಅದರ ಫಲ ಮೋಕ್ಷದಲ್ಲಿ ದೇವರ ಸಾಮೀಪ್ಯ. ನಮಗೆಲ್ಲಾ ಈ ಫಲ ಈ ಜನ್ಮದಲ್ಲೇ ಸಿಗೋಲ್ಲ. ಆದರೆ ರುಗ್ಮಿಣಿಯು ಮಾಡಿದ ಈ ಎಲ್ಲಾ ಸೇವೆ ಯಲ್ಲಿಯೂ ಪರಮೋತ್ಕಟತ್ವ ಇದ್ದದ್ದರಿಂದ ಈ ದೇಹದಿಂದಲೇ ದೇವರ ಸಾಮೀಪ್ಯವನ್ನು ಪಡೆದಳು. ಅಂದರೆ ಧಾರೆ ಎರೆದು ಕೊಟ್ಟ ಅನಂತರ ಕೃಷ್ಣನ ಎಡಭಾಗದಲ್ಲಿ ಕೃಷ್ಣನಿಗೆ ಸಮೀಪದಲ್ಲಿ ನಿಂತಳು.

<u>ಸಂದೇಶ</u> : **ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ । ಪುಣ್ಯಕರ್ಮ ಅಥವಾ ಪಾಪಕರ್ಮಗಳು ಬಹಳ ಬಲಿಷ್ಠಗಳಾಗಿದ್ದರೆ ಅವುಗಳ ಫಲವನ್ನು ದೇವರು ಈ ಜನ್ಮದಲ್ಲೇ ಅನುಭವಕ್ಕೆ ಕೊಡುತ್ತಾನೆ.**

**ನಾರ್ಯೋಽಕ್ಷತಾನ್ ಪ್ರವವೃಷುಃ ನವಕುಂಕುಮಾಭಾನ್**
**ಸಂಗೀತಮಂಗಲಕಥಾಃ ಸಮಲಂಕೃತಾಂಗ್ಯಃ ।**
**ಸೌವರ್ಣವಿಷ್ಟರಗತೌ ಸದಯೈರಪಾಂಗೈಃ**
**ಕನ್ಯಾವರೌ ಚ ಫಲಮಕ್ಷಯಮೇವ ತಾಸಾಮ್** ॥ ೪೫ ॥

ಸಂಗೀತ=ಸಂಗೀತವು; ಮಂಗಲ=ಒಳ್ಳೆಯ; ಕಥಾಃ=ಕಥೆಗಳುಳ್ಳ; ಸಮ್=ಚೆನ್ನಾಗಿ; ಅಲಂಕೃತ=ಅಲಂಕರಿಸಲ್ಪಟ್ಟ; ಅಂಗ್ಯಃ=ದೇಹವುಳ್ಳ; ನಾರ್ಯಃ=ನಾರಿಯರು; ನವ=ಹೊಸ; ಕುಂಕುಮ=ಕುಂಕುಮದಿಂದ; ಆಭಾನ್=ಶೋಭಿಸುವ; ಅಕ್ಷತಾನ್=ಅಕ್ಷತೆಗಳನ್ನು; ಪ್ರವವೃಷುಃ=ಸಿಂಪಡಿಸಿದರು; ಸೌವರ್ಣ=ಚಿನ್ನದ; ವಿಷ್ಟರ=ಪೀಠದಲ್ಲಿ; ಗತೌ=ಇರುವ; ಕನ್ಯಾ=ಕನ್ಯೆಯು; ವರೌ=ವರನು; ಸದಯ್ಯೈಃ=ದಯೆಯಿಂದ ಕೂಡಿದ; ಅಪಾಂಗ್ಯೈಃ=ನೋಟ ದಿಂದ; ತಾಸಾಂ ಏವ=ಅವರಿಗೇ; ಅಕ್ಷಯಂ=ನಾಶ ಇಲ್ಲದ; ಫಲಂ=ಫಲವನ್ನು; ಪ್ರವವರ್ಷತುಃ=ಒದಗಿಸಿದರು.

ಈ ಸಮಯದಲ್ಲಿ ಬಹಳ ಮುದಿ ಐದೆಯರು ಸೇರಿದ್ದರು. ಪೀತಾಂಬರ, ನಾನಾ ಆಭರಣ, ಹೂಗಳು ಇವುಗಳಿಂದ ಅಲಂಕೃತರಾಗಿದ್ದರು. ಮದುವೆಮನೆ ಅಂದಮೇಲೆ ಹೆಮ್ಮಕ್ಕಳಿಗೇ ಪ್ರಾತಿನಿಧ್ಯ ತಾನೆ. ಬರೇ ಬಾಹ್ಯ ಶೃಂಗಾರ ಮಾತ್ರವಲ್ಲ; ಬಾಯಿಂದ ರಮಾನಾರಾಯಣರ ನಾನಾ ಚರಿತ್ರೆಗಳನ್ನು ಹಾಡುಗಳ ಮೂಲಕ ಹೇಳುತ್ತಿದ್ದರು. ಏನೋ ಹಾಳುಹರಟೆ ಮಾಡುತ್ತಿರಲಿಲ್ಲ. ಹಾಡುತ್ತ ಅರಸಿನ ಕುಂಕುಮದಿಂದ ಕೂಡಿದ ಅಕ್ಷತೆಗಳನ್ನು ಈ ನವದಂಪತಿಗಳ ಮೇಲೆ ಚೆಲ್ಲಿದರು. ಈ ದಂಪತಿಗಳು ಚಿನ್ನದ ಮಣೆಯಲ್ಲಿ ಆಸೀನರಾಗಿದ್ದರು. ತಮ್ಮ ಕರುಣಾಪೂರ್ಣವಾದ ದೃಷ್ಟಿಯಿಂದ ಇವರನ್ನೆಲ್ಲಾ ಒಮ್ಮೆ ನೋಡಿದರು. ತಮ್ಮ ಮೇಲೆ ಪ್ರೀತಿಯಿಂದ ಅಕ್ಷತೆಯನ್ನು ಚೆಲ್ಲಿದ್ದಕ್ಕೆ ತಾವು ಅವರಿಗೆ ಅಕ್ಷಯವಾದ ಅಂದರೆ ನಾಶರಹಿತವಾದ ಅಂದರೆ ಮೋಕ್ಷವೆಂಬ ಫಲವನ್ನೇ ಕೊಟ್ಟರು.

<u>ಸಂದೇಶ</u> : **'ತಂ ಯಥಾ ಯಥಾ ಉಪಾಸತೇ ತಥೈವ ಭವತಿ ।' ದೇವರನ್ನು ನಾವು ಯಾವ ರೀತಿ ಆರಾಧಿಸುತ್ತೇವೋ ಹಾಗೆಯೇ ನಮಗೆ ಫಲವು ಸಿಗುತ್ತದೆ.**

**ಗೃಹೀತಪಾಣೀ ಕಿಲ ಚಕ್ರತುಸ್ತೌ**
**ಪ್ರದಕ್ಷಿಣಂ ಲಾಜಸಮೇಧಿತಾಗ್ನೇಃ ।**
**ವಧೂವರೌ ರಮ್ಯರಹಸ್ಯಗೋಷ್ಠ್ಯಾಂ**
**ವಿಧಾತುಮಾತ್ಮೀಯಮಿವಾಸ್ಯಗಂ ತಮ್ ॥ ೪೬ ॥**

ಗೃಹೀತ=ಹಿಡಿಯಲ್ಪಟ್ಟ; ಪಾಣೀ=ಕೈವುಳ್ಳ; ತೌ=ಆ; ವಧೂವರೌ=ವಧೂವರರು; ಆಸ್ಯ= ಬಾಯಲ್ಲಿ; ಗಂ=ಇರುವ; ತಂ=ಅವನನ್ನು; ರಮ್ಯ=ಒಳ್ಳೆಯ; ರಹಸ್ಯ=ಗುಟ್ಟಿನ; ಗೋಷ್ಠ್ಯಾಂ=ಮಾತುಕತೆಯಲ್ಲಿ; ಆತ್ಮೀಯಂ=ತನ್ನವನನ್ನು; ವಿಧಾತುಂ ಇವ= ಮಾಡುವಂತೆ; ಲಾಜ=ಅರಳಿನಿಂದ; ಸಮೇಧಿತ=ಉರಿಯುವ; ಅಗ್ನೇಃ=ಬೆಂಕಿಗೆ; ಪ್ರದಕ್ಷಿಣಂ=ಪ್ರದಕ್ಷಿಣೆಯನ್ನು; ಚಕ್ರತುಃ=ಮಾಡಿದರು.

ನವದಂಪತಿಗಳು ಪರಸ್ಪರ ಕೈಹಿಡಿದುಕೊಂಡು ಅಗ್ನಿಗೆ ಪ್ರದಕ್ಷಿಣೆ ಬರುವುದು ವಿವಾಹದ ಒಂದು ಅಂಗ. ಅಗ್ನಿಗೆ ಅರಳಿನಿಂದ ಆಹುತಿ ಕೊಟ್ಟಮೇಲೆ ಈ ಕಾರ್ಯಕ್ರಮ

ಜರಗುತ್ತದೆ. ಸಾಮಾನ್ಯ ಜನರು ತಮ್ಮ ಗೃಹಸ್ಥಜೀವನದ ಶ್ರೇಯಸ್ಸಿಗಾಗಿ ಹೀಗೆ ಮಾಡಬೇಕು. ಈ ಕೃಷ್ಣರುಗ್ಮಿಣಿಯರು ಯಾಕೆ ಮಾಡಬೇಕು? ಇವರಿಗೆ ಶ್ರೇಯಸ್ಸಿನ ಆವಶ್ಯಕತೆ ಇಲ್ಲತಾನೆ. ಇದಕ್ಕೆ ಉತ್ತರವನ್ನು ಶ್ರೀ ವಾದಿರಾಜರು ಹಾಸ್ಯದ ಶೈಲಿಯಲ್ಲಿ ಕೊಡುತ್ತಾರೆ. ದಂಪತಿಗಳು ವಿವಾಹದನಂತರ ರಾತ್ರೆ ಹೊತ್ತಿನಲ್ಲಿ ಶೃಂಗಾರರಸಕ್ಕೆ ಸಂಬಂಧಪಟ್ಟ ಮಾತುಗಳನ್ನು ಆಡುವುದು ಸಹಜ. ಅದರಂತೆ ಇವರೂ ಆ ರೀತಿ ಮಾತನಾಡುತ್ತಾರೆ. ಕೃಷ್ಣನ ದೇಹದ ಒಂದೊಂದು ಭಾಗವು ಒಬ್ಬೊಬ್ಬ ದೇವತೆಯ ವಾಸಸ್ಥಳ. ಬಾಯಿಯು ಅಗ್ನಿಯ ಭಾಗ. ಇವರು ಎಷ್ಟು ರಹಸ್ಯವಾಗಿ ಮಾತನಾಡಿಕೊಂಡರೂ ಅಗ್ನಿಯು ಅದನ್ನು ಕೇಳಿಸಿಕೊಳ್ಳುತ್ತಾನೆ. ಅನಂತರ ಬೇರೆಯವರಿಗೆ ಹೇಳುವ ಸಂಭವವೂ ಬರುತ್ತದೆ. ಇದರಿಂದ ಈ ದಂಪತಿಗಳಿಗೆ ನಾಚಿಕೆ ಆಗಬಹುದು. ಅಗ್ನಿಯು ಈ ರೀತಿ ಹೇಳಿಕೊಂಡು ಬಾರದಿರಲು ಅವನನ್ನು ತನ್ನವನನ್ನಾಗಿ ಮಾಡಕೊಳ್ಳಬೇಕು. ಅದಕ್ಕಾಗಿ ಆತನಿಗೆ ಏನಾದರೂ ಕೊಡಬೇಕು. ಆ ದೃಷ್ಟಿಯಿಂದ ಆತನಿಗೆ ಅರಳಿನ ಆಮಿಷವನ್ನು ಒಡ್ಡಿದರು. ಪ್ರದಕ್ಷಿಣೆ ನಮಸ್ಕಾರದ ಮೂಲಕ ಯಾರಿಗೂ ಹೇಳಬೇಡವೆಂದು ಅಂಗಲಾಚುತ್ತಾರೋ ಎಂಬಂತಿತ್ತು ಎಂದು.

ಸಂದೇಶ : **ಎಷ್ಟೇ ದೊಡ್ಡವರಾದರೂ ತಾವೂ ವಿಹಿತಕರ್ಮಗಳನ್ನು ಬಿಡಬಾರದು.**

**ತತಶ್ಚತುರ್ಥೇ ದಿವಸೇ ಕಿಲೈತೌ ಚಿರಂ ರತೌ ತಲ್ಪತನೌ ಫಣೀಂದ್ರೇ ।**
**ವಿಲಂಬಿನಿ ಕ್ಷ್ಮಾಂ ವಹತೀತಿ ನೂನಂ ಪ್ರಚಕ್ರತುರ್ನಾಗಬಲಿಂ ಪ್ರಹೃಷ್ಟೌ ॥ ೪೭ ॥**

ತತಃ=ಅನಂತರ; ಪ್ರಹೃಷ್ಟೌ=ಸಂತುಷ್ಟರಾದ; ಏತೌ=ಇವರಿಬ್ಬರು; ಚಿರಂ=ಬಹಳ ಹೊತ್ತು; ರತೌ=ಕ್ರೀಡೆಯಲ್ಲಿ; ತಲ್ಪ=ಹಾಸಿಗೆಯಂತಿರುವ; ತನೌ=ಶರೀರವುಳ್ಳ; ಫಣಿ=ಹಾವುಗಳಿಗೆ; ಇಂದ್ರೇ=ಒಡೆಯನು; ವಿಲಂಬಿನಿ=ತಡಮಾಡುತ್ತಿರಲು; ಕ್ಷ್ಮಾಂ= ಭೂಮಿಯನ್ನು; ವಹತ=ಧರಿಸಿರಿ; ಇತಿ=ಎಂದು; ಚತುರ್ಥೇ=ನಾಲ್ಕನೆಯ; ದಿವಸೇ= ದಿನದಲ್ಲಿ; ನಾಗ=ಆನೆಗಳಿಗೆ; ಬಲಿಂ=ಬಲಿಯನ್ನು; ಪ್ರಚಕ್ರತುಃ=ಮಾಡಿದರು; ನೂನಂ=ನಿಶ್ಚಯ.

ಒಟ್ಟಿಗೆ ನಾಲ್ಕು ದಿವಸದ ವಿವಾಹ. ನಾಲ್ಕನೆಯ ದಿವಸ ಅಷ್ಟದಿಕ್ಕಿನ ಆನೆಗಳಿಗೆ ಬಲಿಯನ್ನು ಕೊಡುವ ಕಾರ್ಯಕ್ರಮ. ಅದನ್ನು ಈ ದಂಪತಿಗಳು ನೆರವೇರಿಸಿದರು. ಆನೆಗಳಿಂದ ಆಶೀರ್ವಾದವನ್ನು ಪಡೆಯುವ ಉದ್ದೇಶ ಅಲ್ಲ. ಇವರಿಗೆ ಯಾರ ಆಶೀರ್ವಾದದ ಅಗತ್ಯವೂ ಇಲ್ಲ. ಹಾಗಾದರೆ ಮಾಡಿದ ಉದ್ದೇಶ? ಇದನ್ನು ಶ್ರೀ ವಾದಿರಾಜರು ಸ್ವಾರಸ್ಯವಾಗಿ ವರ್ಣಿಸುತ್ತಾರೆ– ಈ ಭೂಮಿಯನ್ನು ಹೊರುವ ಕೆಲಸವನ್ನು ದೇವರು ಶೇಷನಿಗೆ ವಹಿಸಿದ್ದಾರೆ. ಸದ್ಯ ಈಗ ಶೇಷನನ್ನು ಆ ಕೆಲಸದಿಂದ ಬಿಡಿಸಿ ಮದುವೆ ಮನೆಗೆ ಕರೆಸಿದ್ದಾರೆ. ಆ ಕೆಲಸವನ್ನು ಈ ದಿಗ್ಗಜಗಳಿಗೆ ವಹಿಸಿದ್ದಾರೆ. ಈ ನವದಂಪತಿಗಳಾದ ಕೃಷ್ಣರುಗ್ಮಿಣಿಯರು ಪವಡಿಸುವುದು, ಸರಸವಾಡುವುದು ಈ ಶೇಷನ ಮೇಲೆ. ಹೊಸದಂಪತಿಗಳಾದ್ದರಿಂದ ಎಷ್ಟು ಸಮಯ ವಿಹರಿಸುತ್ತಾರೆ ಎಂದು ಹೇಳಬರದು.

ಈ ಮಧ್ಯೆ ಈ ಆನೆಗಳು ತಮಗೆ ವಹಿಸಿದ ಸಮಯ ಮುಗಿಯಿತೆಂದು ಭೂಮಿಯನ್ನು ಕೆಳಗಿಟ್ಟು ಹೋದರೆ ಪ್ರಜೆಗಳ ಗತಿ? ಅದಕ್ಕಾಗಿ ಈ ದಂಪತಿಗಳು ಆನೆಗಳ ಬಳಿಗೆ ಬಂದರು. ನಮ್ಮ ವಿಹಾರದಿಂದ ಶೇಷನು ಬರುವುದು ತಡವಾದೀತು. ಅಷ್ಟರತನಕ ಈ ಭೂಮಿಯನ್ನು ಹೊತ್ತುಕೊಂಡಿರಿ ಎಂದರು. ಇದಕ್ಕೆ ಪ್ರತಿಯಾಗಿ ಆನೆಗಳು ನಮಗೆ ಏನು ಕೊಡುತ್ತೀರಿ ಎಂದು ಕೇಳಿದಾಗ, ನಿಮ್ಮನ್ನು ಪೂಜಿಸುತ್ತೇವೆ ಎಂದು ಹೇಳಿ ಪೂಜೆಯನ್ನು ಮಾಡಿದರು.

**ಸಾ ಮಂದಸ್ಮಿತಮೌಕ್ತಿಕೇನ ಸದಪಾಂಗಾಖ್ಯೈರ್ಹಯೈರ್ಹೃಪುರಾ**
**ವಕ್ಷೋಜದ್ವಿರದೇನ ಕಾಯಕನಕೇನೋದ್ಭೂತರೋಮಾನುಗೈಃ ।**
**ತತ್ಸಂಸಕ್ತ ಮನೋರಥೇನ ವಿವಿಧಾಂಗ ಶ್ರೀವಿಚಿತ್ರಾಂಬರೈಃ**
**ತದ್ಯೋಗ್ಯಾಮೃತ ಸಾಧನಾಧರಭುವಾ ಸಂತರ್ಪಯಾ ಮಾಸ ತಮ್ ॥ ೪೮ ॥**

ಸಾ=ಆಕೆಯು; ಮಂದ=ಸ್ವಲ್ಪ; ಸ್ಮಿತ=ನಗುವೆಂಬ; ಮೌಕ್ತಿಕೇನ=ಮುತ್ತುಗಳಿಂದ; ಸತ್=ಒಳ್ಳೆಯ; ಅಪಾಂಗ=ಕಡೆಗಣ್ಣೆಂಬ; ಆಖ್ಯಾ=ಹೆಸರುಳ್ಳ; ಹಯೈಃ=ಕುದುರೆಗಳಿಂದ; ಹೃತ್=ಹೃದಯವೆಂಬ; ಪುರಾ=ಪಟ್ಟಣದಿಂದ; ವಕ್ಷ=ಎದೆಯಲ್ಲಿ; ಜ=ಹುಟ್ಟಿದ ಸ್ತನಗಳೆಂಬ; ದ್ವಿ=ಎರಡು; ರದೇನ=ದಾಡೆಗಳುಳ್ಳ ಆನೆಗಳಿಂದ; ಕಾಯ=ದೇಹವೆಂಬ; ಕನಕೇನ= ಬಂಗಾರದಿಂದ; ಉದ್ಭೂತ=ನಿಮಿರಿದ; ರೋಮ=ರೋಮಗಳೆಂಬ; ಅನುಗೈಃ=ಸೇವಕರಿಂದ; ತತ್=ಅವನಲ್ಲಿ; ಸಂಸಕ್ತ=ಆಸಕ್ತವಾದ; ಮನಃ=ಮನಸ್ಸೆಂಬ; ರಥೇನ=ರಥದಿಂದ; ವಿವಿಧ=ನಾನಾರೀತಿಯ; ಅಂಗ=ಅವಯವಗಳ; ಶ್ರೀ=ಕಾಂತಿ ಎಂಬ; ವಿಚಿತ್ರ=ನಾನಾ ರೀತಿಯ; ಅಂಬರೈಃ=ವಸ್ತ್ರಗಳಿಂದ; ತತ್=ಅವನಿಗೆ; ಯೋಗ್ಯ=ಉಚಿತವಾದ; ಅಮೃತ= ಅಮೃತಕ್ಕೆ; ಸಾಧನ=ಕಾರಣವಾದ; ಅಧರ=ತುಟಿ ಎಂಬ; ಭುವಾ=ಭೂಮಿಯಿಂದ; ತಂ=ಅವನನ್ನು; ಸಂತರ್ಪಯಾಮಾಸ=ತೃಪ್ತಿಪಡಿಸಿದಳು.

ಇನ್ನು ಮುಂದೆ ಉಡುಗೊರೆಯ ಪ್ರಸಂಗ– ಹುಡುಗಿಯ ತಂದೆತಾಯಿ ವಧುವಿನ ಮೂಲಕ ವರನಿಗೆ ನಾನಾರೀತಿಯ ಉಡುಗೊರೆಗಳನ್ನು ಅರ್ಪಿಸಿದರು. ಅರ್ಪಿಸಿದವಳು ವಧು. ತನ್ಮೂಲಕ ಕೃಷ್ಣನನ್ನು ತೃಪ್ತಿಪಡಿಸಿದಳು. ಉಡುಗೊರೆಯ ವಿವರ ಈ ರೀತಿ ಇದೆ– ಇದು ಕ್ಷತ್ರಿಯರ ವಿವಾಹ. ಆದ್ದರಿಂದ ಉಡುಗೊರೆಯಲ್ಲಿ ವೈವಿಧ್ಯ ಇದೆ. ಆನೆ, ಕುದುರೆ, ರಥ, ಭೂಮಿ, ಸೇವಕರು, ಬಂಗಾರ ಹಾಗೂ ಬಣ್ಣಬಣ್ಣದ ವಸ್ತ್ರಗಳು. ರುಗ್ಮಿಣಿಯು ಇವುಗಳನ್ನು ಪ್ರತ್ಯೇಕವಾಗಿ ಅರ್ಪಿಸದೆ ತನ್ನನ್ನೇ ಕೃಷ್ಣನಿಗೆ ಅರ್ಪಿಸುವ ಮೂಲಕ ಇವೆಲ್ಲವನ್ನೂ ಅರ್ಪಿಸಿ ಕೃಷ್ಣನನ್ನು ಸಂತೋಷಪಡಿಸಿದಳು. ಈಕೆಯ ಕಡೆಗಣ್ಣು ಕುದುರೆಗಳಂತೆ ಚಂಚಲ. ಕುದುರೆಗಳನ್ನು ಮುತ್ತುಗಳಿಂದ ಅಲಂಕರಿಸುತ್ತಾರೆ. ಈಕೆಯ ಕಡೆಗಣ್ಣ ನೋಟವು ಮಂದಹಾಸದಿಂದ ಕೂಡಿದೆ. ಮಂದವಾದ ಹಾಸವನ್ನು ಚಿಕ್ಕದಾದ

ಬಿಳಿಯಾದ ಮುತ್ತುಗಳಿಗೆ ಕವಿಗಳು ಹೋಲಿಸುತ್ತಾರೆ. ಮಂದಹಾಸವೆಂಬ ಮುತ್ತುಗಳಿಂದ ಕೂಡಿದ ಕಡೆಗಣ್ಣ ನೋಟವೆಂಬ ಕುದುರೆಗಳನ್ನು ಅರ್ಪಿಸಿದಳು.

ಇವಳ ಹೃದಯವೆಂಬುದು ಒಂದು ದೇವರಮನೆ. 'ಹೃದಯಂ ಬ್ರಹ್ಮಪುರಂ' ಹೃದಯವು ದೇವರ ಪಟ್ಟಣ ಎಂದು ಶ್ರುತಿಯು ಇದೆ. ಈಕೆಯು ಪ್ರಳಯಕಾಲದಲ್ಲಿ ದೇವರನ್ನು ಆಲಿಂಗಿಸಿಕೊಂಡಿರುತ್ತಾಳೆ. ಆಗ ದೇವರು ಇವಳ ಹೃದಯಕ್ಕೆ ತಾಗಿಕೊಂಡಿರುತ್ತಾನೆ ತಾನೆ. ಸದಾ ದೇವರನ್ನು ತನ್ನ ಹೃದಯದಲ್ಲಿ ಸ್ಮರಿಸುವುದರಿಂದ ದೇವರಿಗೆ ಒಂದು ಮನೆಯನ್ನು ಕೊಟ್ಟಂತಾಯಿತು.

ಈಕೆಯ ಸ್ತನಗಳು ಆನೆಗಳ ಕುಂಭಸ್ಥಳದಂತೆ ಎತ್ತರವಾಗಿವೆ. ಸ್ತನಗಳಿಗೆ ಪುಷ್ಟಿ ಎಂಬುದು ಹೆಮ್ಮಕ್ಕಳ ಲಕ್ಷಣ. ಇಂತಹ ಸ್ತನಗಳಿಂದ ಕೂಡಿ ಕೃಷ್ಣನ ಬಳಿಗೆ ಹೋಗುವಾಗ ಆನೆಗಳನ್ನು ಅರ್ಪಿಸುವಂತೆ ಆಯಿತು. ಇವಳ ಮೈಬಣ್ಣ ಬಂಗಾರದ್ದು. ಆಜಾನುಬಾಹುವಾದ ಈಕೆಯನ್ನು ಕೃಷ್ಣನಿಗೆ ಅರ್ಪಿಸುವಾಗ ಬಂಗಾರದ ಬೆಟ್ಟವನ್ನೇ ಬಳುವಳಿಯಾಗಿ ಕೊಟ್ಟಂತೆ. ಈಕೆಯ ಮೈಯಲ್ಲಿ ರೋಮಗಳ ಸಾಲುಗಳಿವೆ. ಕೃಷ್ಣನ ಬಳಿಯಲ್ಲಿ ಇರುವಾಗ ಈಕೆಗೆ ಮೈಪುಳಕಿತವಾಯಿತು. ಆಗ ರೋಮಗಳು ನೆಟ್ಟಗೆ ನಿಂತವು. ಕೃಷ್ಣನನ್ನು ಅನುಸರಿಸಿದ ಸಂದರ್ಭದಲ್ಲಿ ಇವುಗಳು ನೆಟ್ಟಗಾದದ್ದು. ಬಹಳ ಸಂಖ್ಯೆಯಲ್ಲಿ ಇದ್ದವೂ ಕೂಡಾ. ಯಜಮಾನ ಬರುವಾಗ ಎಚ್ಚರಗೊಳ್ಳುವುದು ಹಾಗೂ ಬಹಳ ಸಂಖ್ಯೆಯಲ್ಲಿ ಇರುವುದು ಸೇವಕರ ಲಕ್ಷಣ. ಹೀಗೆ ತನ್ನ ಮೈಯಲ್ಲಿರುವ ರೋಮಗಳನ್ನೇ ಸೇವಕರನ್ನಾಗಿ ಚಿಂತಿಸಿ ಅರ್ಪಿಸಿದಳು.

ಕೃಷ್ಣನ ಸಂಗ ತನಗೆ ಸದಾ ಇರಲಿ ಎನ್ನುವುದು ಈಕೆಯ ಮನೋರಥ. ಇಂತಹ ಮನವೆಂಬ ರಥವನ್ನು ಒಪ್ಪಿಸಿದಳು. ಈಕೆಯ ದೇಹದಲ್ಲಿ ಪಾದಾದಿ ಅಂಗಗಳು ಇವೆ. ಪಾದಗಳಿಂದ ಒಂದುರೀತಿಯ ಕಾಂತಿ. ಹಸ್ತತಲದಿಂದ ಇನ್ನೊಂದು ರೀತಿಯ ಕಾಂತಿ. ಮುಖ, ಕಟಾಕ್ಷ ಇವುಗಳಿಂದೆಲ್ಲಾ ಬೇರೆಬೇರೆ ರೀತಿಯ ಕಾಂತಿಗಳು ಹೊರಡುತ್ತವೆ. ಇವುಗಳೆಲ್ಲಾ ಮಿಶ್ರವಾದಾಗ ಒಂದು ವಿಚಿತ್ರವಾದ ಬಣ್ಣವಾಗುತ್ತದೆ. ಬಟ್ಟೆಗಳು ತರತರದ ಬಣ್ಣವುಳ್ಳವುಗಳು. ಬಣ್ಣಗಳಿಂದ ಬಟ್ಟೆಯ ಹೋಲಿಕೆ. ಇಂತಹ ಪ್ರಕಾಶಗಳೆಂಬ ಬಟ್ಟೆಗಳನ್ನು ಅರ್ಪಿಸಿದಳು.

ಕೊನೆಗೆ ಭೂದಾನ– ತನ್ನ ತುಟಿಗಳೆಂಬ ಭೂಮಿಯನ್ನು ಆತನಿಗೆ ದಾನಮಾಡಿದಳು. ಬಂಜರುಭೂಮಿಯನ್ನು ದಾನಮಾಡಬಾರದು. ಅದು ಫಲವತ್ತಾಗಿರಬೇಕು. ಅದರಲ್ಲಿ ಬರುವ ಬೆಳೆಯು ಅಮೃತಪ್ರಾಯವಾಗಿ ದಾನ ಸ್ವೀಕರಿಸುವವನಿಗೆ ಯೋಗ್ಯವಾಗಿರಬೇಕು. ಸದ್ಯ ಈಗ ಈಕೆಯ ತುಟಿಗಳಲ್ಲಿ ರಸವೆಂಬ ಅಮೃತವು ಇದೆ. ಇದು ಕೃಷ್ಣನಿಗೆ ಮಾತ್ರ ಯೋಗ್ಯವಾದದ್ದು. ಇದನ್ನು ಹೊರತು ಬೇರೆ ಯಾವ ಅಮೃತವನ್ನೂ ಆತನು ಸ್ವೀಕರಿಸುವುದಿಲ್ಲ. ಸಮುದ್ರಮಥನ ಕಾಲದಲ್ಲಿ ಅಮೃತವು ಉದಿಸಿತ್ತು. ಅದು ಈತನ

ಕೈಯಲ್ಲೇ ಇತ್ತು. ಆದರೂ ಅದನ್ನು ಆತನು ದೇವತೆಗಳಿಗೇ ಹಂಚಿದನು ಹೊರತು ತಾನು ಸ್ವೀಕರಿಸಲಿಲ್ಲ. ಈ ರೀತಿ ಕೃಷ್ಣರುಗ್ಮಿಣಿಯರ ಮದುವೆಯು ಉತ್ತಮ ಮಟ್ಟದಲ್ಲಿ ಪೂರ್ಣಪ್ರಮಾಣದಲ್ಲಿ ಆಯಿತು.

ಸಂದೇಶ : **ಸ್ವೀಕರಿಸುವವನಿಗೆ ಯೋಗ್ಯವಾದ ವಸ್ತುಗಳನ್ನು ದಾನಮಾಡಬೇಕು.**

**ಜ್ವಲತ್‌ಕಲಾಪಾಃ ಸ್ಫುರದಂಗಲೇಪಾ ವಿಚಿತ್ರವಸ್ತ್ರಾಃ ಸ್ಮಿತಶೋಭಿವಕ್ತ್ರಾಃ ।**
**ಸ್ವಯಂವರೇ ತತ್ರ ನರಾಶ್ಚ ನಾರ್ಯೋ ವಧೂವರಾಭಾಃ ಕಿಲ ಸಂಚರಂತಿ ॥ ೪೯ ॥**

ಜ್ವಲತ್=ಶೋಭಿಸುವ; ಕಲಾಪಾಃ=ಆಭರಣವುಳ್ಳ; ಸ್ಫುರತ್=ಚಂದದ; ಅಂಗ= ಅವಯವಗಳ; ಲೇಪಾಃ=ಚಂದನವುಳ್ಳ; ವಿಚಿತ್ರ=ನಾನಾರೀತಿಯ; ವಸ್ತ್ರಾಃ=ವಸ್ತ್ರವುಳ್ಳ; ಸ್ಮಿತ= ನಗುವಿನಿಂದ; ಶೋಭಿ=ಶೋಭಿಸುವ; ವಕ್ತ್ರಾಃ=ಮುಖವುಳ್ಳ; ನರಾಃ=ಪುರುಷರು; ನಾರ್ಯಃ ಚ=ಮಹಿಳೆಯರೂ ಕೂಡಾ; ತತ್ರ=ಆ; ಸ್ವಯಂವರೇ=ಸ್ವಯಂವರದಲ್ಲಿ; ವಧೂವರ= ವಧೂವರರ; ಆಭಾಃ=ಅಂತೆ; ಸಂಚರಂತಿ ಕಿಲ=ತಿರುಗಾಡಿದರಷ್ಟೇ.

ವಿವಾಹದ ಮಂಟಪವನ್ನು ಪ್ರವೇಶಿಸುವಾಗ ಯಾರಿಗಾದರೂ ಒಮ್ಮೆ ಈ ಪ್ರಶ್ನೆ ಬರಬಹುದು– ಏನು ಇಲ್ಲಿ ಸಾಮೂಹಿಕ ವಿವಾಹ ಜರಗುತ್ತಿದೆಯೇ ಎಂದು. ಯಾಕೆಂದರೆ ವಿವಾಹದ ಮನೆಮಂದಿಗಳು, ಬಂದಿರುವ ಅತಿಥಿಗಳು; ಅಭ್ಯಾಗತರು ಎಲ್ಲರೂ ಚಂದದ ಬಟ್ಟೆಗಳನ್ನು ಉಟ್ಟಿದ್ದರು. ಮೈತುಂಬಾ ಆಭರಣಗಳನ್ನು ಹಾಕಿಕೊಂಡು ಪರಿಮಳದ್ರವ್ಯವನ್ನು ಲೇಪಿಸಿಕೊಂಡಿದ್ದರು. ಮುಖವನ್ನು ಚೆನ್ನಾಗಿ ಅರಳಿಸಿಕೊಂಡು ಮಂದಹಾಸವನ್ನು ಬೀರುತ್ತಿದ್ದರು. ಲಗ್ನದ ಪ್ರಸಂಗದಲ್ಲಿ ನೂತನದಂಪತಿಗಳೂ ಇಷ್ಟನ್ನೇ ಮಾಡುವುದು ತಾನೆ. ಆದ್ದರಿಂದ ಎಲ್ಲರೂ ನವದಂಪತಿಗಳಂತೆ ತೋರುತ್ತಿದ್ದರು. ಸಂಭ್ರಮದ ವಾತಾವರಣ ವಾದ್ದರಿಂದ ಅತ್ತಿತ್ತ ಓಡಾಡುತ್ತಿದ್ದರು.

ಸಂದೇಶ : **ದೇವರನ್ನು ನಂಬಿ ದೇವರಿಗಾಗಿ ಓಡಾಡುವವರಿಗೆ ದೇವರು ತನ್ನ ಸಾರೂಪ್ಯವನ್ನು ಕೊಡುತ್ತಾನೆ.**

**ಸ್ವರ್ಗಿಭಿಃ ಗೀಯಮಾನಃ ಸ್ವಂ ದುರ್ಗಮಾವಿಶ್ಯ ದುರ್ಗಮಮ್ ।**
**ಭಗ್ನದುರ್ಜನ ದರ್ಪೋಽಸೌ ರುಗ್ಮಿಣೀರಮಣೋ ಬಭೌ ॥ ೫೦ ॥**

ಸ್ವರ್ಗಿಭಿಃ=ಸ್ವರ್ಗದವರಿಂದ; ಗೀಯಮಾನಃ=ಹೊಗಳಲ್ಪಡುವ; ಭಗ್ನ=ನಾಶಮಾಡಲ್ಪಟ್ಟ; ದುರ್ಜನ=ದುಷ್ಟರ; ದರ್ಪಃ=ಅಹಂಕಾರವುಳ್ಳ; ರುಗ್ಮಿಣೀ=ರುಗ್ಮಿಣಿಯ; ರಮಣಃ=ಪತಿ ಯಾದ; ಅಸೌ=ಇವನು; ದುರ್ಗಮಮ್=ಪ್ರವೇಶಿಸಲು ಅಸಾಧ್ಯವಾದ; ಸ್ವಂ=ತನ್ನ; ದುರ್ಗಂ=ಮನೆಯನ್ನು; ಆವಿಶ್ಯ=ಪ್ರವೇಶಿಸಿ; ಬಭೌ=ಶೋಭಿಸಿದನು.

ಈ ನವದಂಪತಿಗಳನ್ನು ಸ್ವರ್ಗದಲ್ಲಿರುವ ದೇವತೆಗಳು ಹೊಗಳಿದರು. ಈ ಕೃಷ್ಣನು

ನಾನಾ ದುಷ್ಷರ ಹುಟ್ಟನ್ನು ಅಡಗಿಸಿದವನು ಎಂದು. ಈ ಕೃಷ್ಣನು ತನ್ನ ಪತ್ನಿಯಾದ ರುಗ್ಮಿಣಿಯಿಂದ ಕೂಡಿಕೊಂಡು ದ್ವಾರಕೆಯನ್ನು ಶುಭಮುಹೂರ್ತದಲ್ಲಿ ಪ್ರವೇಶಿಸಿದನು. ದ್ವಾರಕೆಯಾದರೂ ದುರ್ಗಮವಾದ ಊರು. ಕೃಷ್ಣ ಹಾಗೂ ಈತನ ಭಕ್ತರು ಹೊರತು ಮತ್ತಾರಿಗೂ ಪ್ರವೇಶಿಸಲು ಸಾಧ್ಯವಿಲ್ಲ. ಇಲ್ಲಿ ಕೃಷ್ಣನು ತನ್ನ ಪತ್ನಿಯಿಂದ ಕೂಡಿಕೊಂಡು ಆರಾಮದಿಂದ ಇದ್ದನು.

**ಸ್ವಫೇನಕಾಂತ್ಯಾ ಸಿತಪಾರ್ಶ್ವಯುಗ್ಮಃ ಶಿಖಾಭಿರೌರ್ವಸ್ಯ ಸುಪೀತಮಧ್ಯಃ ।**
**ಸಿತೇತರೋಽನ್ಯತ್ರ ಸ ಭೂತಧಾತ್ರ್ಯಾಃ ವಿಚಿತ್ರವಸ್ತ್ರಶ್ರಿಯಮಾತನೋತಿ ॥ ೫೧ ॥**

ಸಃ=ಸಮುದ್ರವು; ಸ್ವ=ತನ್ನ; ಫೇನ=ನೊರೆಯ; ಕಾಂತ್ಯಾ=ಕಾಂತಿಯಿಂದ; ಸಿತ=ಬಿಳಿಯಾದ; ಪಾರ್ಶ್ವ=ಬದಿಗಳ; ಯುಗ್ಮಃ=ಎರಡುಳ್ಳದ್ದಾಗಿ; ಔರ್ವಸ್ಯ=ಸಮುದ್ರಾಗ್ನಿಯ; ಶಿಖಾಭಿಃ=ಜ್ವಾಲೆಗಳಿಂದ; ಸು=ಚೆನ್ನಾಗಿ; ಪೀತ=ಹಳದಿಯಾದ; ಮಧ್ಯಃ=ಮಧ್ಯವುಳ್ಳ; ಅನ್ಯತ್ರ=ಬೇರೆಕಡೆ; ಸಿತ=ಬಿಳಿಗಿಂತ; ಇತರಃ=ಬೇರೆಯಾಗಿ; ಭೂತಧಾತ್ರ್ಯಾಃ=ಭೂಮಿಗೆ; ವಿಚಿತ್ರ=ವಿಚಿತ್ರವಾದ; ವಸ್ತ್ರ=ಬಟ್ಟೆಯ; ಶ್ರಿಯಂ=ಶೋಭೆಯನ್ನು; ಆತನೋತಿ=ಉಂಟು ಮಾಡುತ್ತದೆ.

ಇನ್ನು ಮುಂದೆ ಸಮುದ್ರದ ವರ್ಣನೆ– ಈ ಸಮುದ್ರವು ಭೂಮಿ ಎಂಬ ಮಹಿಳೆ ಉಟ್ಟುಕೊಂಡ ಸೀರೆಯಂತಿದೆ. ಲೋಕದ ಹೆಮ್ಮಕ್ಕಳು ಉಡುವ ಸೀರೆ ಸಾಮಾನ್ಯವಾಗಿ ಒಂದೇ ಬಣ್ಣವುಳ್ಳದ್ದು. ಈ ಸೀರೆ ಮಾತ್ರ ಮೂರು ಬಣ್ಣವುಳ್ಳದ್ದು. ಸಮುದ್ರದ ಎರಡೂ ಬದಿಗಳಲ್ಲಿ ತೆರೆಗಳು ದಡಕ್ಕೆ ಬಡಿಯುತ್ತವೆ. ಆಗ ಅವುಗಳಲ್ಲಿ ನೊರೆಗಳು ಬರುತ್ತವೆ. ಇದು ಸೀರೆಯ ಎರಡು ಅಂಚುಗಳಲ್ಲಿ ಬಿಳಿ ಬಣ್ಣವನ್ನು ತಿಳಿಸುತ್ತದೆ. ಈ ಸಮುದ್ರದ ಮಧ್ಯದಲ್ಲಿ ಬೆಂಕಿ ಇದೆ. ಇದಕ್ಕೆ ವಡವಾ, ಜಾರ್ವ ಎಂದೂ ಕರೆಯುತ್ತಾರೆ. ಈ ಅಗ್ನಿಯ ಜ್ವಾಲೆಯು ಹಳದಿಬಣ್ಣವುಳ್ಳದ್ದು. ಆದ್ದರಿಂದ ಈ ಸೀರೆಯು ಮಧ್ಯಭಾಗದಲ್ಲಿ ಹಳದಿ ಬಣ್ಣವುಳ್ಳದ್ದಾಯಿತು. ಸಮುದ್ರದ ನೀರು ನೀಲವಾಗಿ ಕಾಣುವುದರಿಂದ ಸೀರೆಯ ಉಳಿದ ಭಾಗ ನೀಲಬಣ್ಣದ್ದು. ಹೀಗೆ ಕಾಮನಬಿಲ್ಲಿನಂತೆ ಮೂರು ಬಣ್ಣಗಳಿಂದ ಕೂಡಿದ ಈ ಸಮುದ್ರವು ಭೂತಾಯಿಗೆ ವಸ್ತ್ರದ ರೂಪದಲ್ಲಿ ಇದೆ.

ಸುತ್ತ ಸಮುದ್ರ ಇದ್ದು ಮಧ್ಯದಲ್ಲಿ ಭೂಮಿ ಇದೆ. ಹಿರಿಯರು ಭೂಪ್ರಾರ್ಥನೆಯ ಸಂದರ್ಭದಲ್ಲಿ 'ಸಮುದ್ರವಸನೇ ದೇವಿ' ಸಮುದ್ರವನ್ನು ವಸ್ತ್ರವನ್ನಾಗಿ ಮಾಡಿಕೊಂಡವಳೇ ಎಂದು ಹೊಗಳಿದ್ದಾರೆ.

**ಅಸಹ್ಯವಹ್ನಿ ವ್ಯಥಿತೋಽಪಿ ವಾರ್ಧಿಃ ಅನಂತರತ್ನಾನ್ಯದರೇ ಪಿಧಾಯ ।**
**ನ ಜಾತು ಪಾನೀಯಮಪಿ ಪ್ರದತ್ತೇ ಧನಸ್ಯ ಲಾಭಾದಧಿಕೋ ಹಿ ಲೋಭಃ॥ ೫೨ ॥**

ವಾರ್ಧಿಃ=ಉದಧಿಯು; ಅಸಹ್ಯ=ಸಹಿಸಲು ಸಾಧ್ಯವಿಲ್ಲದ; ವಹ್ನಿ=ಬೆಂಕಿಯಿಂದ;

**ವ್ಯಥಿತಃ ಅಪಿ**=ಸಂಕಟಪಟ್ಟರೂ ಕೂಡಾ. **ಅನಂತ**=ಲೆಕ್ಕವಿಲ್ಲದ; **ರತ್ನಾನಿ**=ರತ್ನಗಳನ್ನು; **ಉದರೇ**=ಉದರದಲ್ಲಿ; **ಪಿಧಾಯ**=ಮುಚ್ಚಿ; **ಜಾತು**=ಎಂದೂ; **ಪಾನೀಯಂ ಅಪಿ**=ನೀರನ್ನೂ ಕೂಡಾ; **ನ ಪ್ರದತ್ತೇ**=ಕೊಡುವುದಿಲ್ಲ; **ಧನಸ್ಯ**=ಸಂಪತ್ತಿನ; **ಲಾಭಾತ್**=ಲಾಭದಿಂದ; **ಅಧಿಕಃ**= ಬಹಳ; **ಲೋಭಃ**=ಆಸೆಯು; **ಹಿ**=ಪ್ರಸಿದ್ಧ.

ವಾದಿರಾಜರು ಸ್ವಾರಸ್ಯವಾಗಿ ವರ್ಣಿಸುತ್ತಾರೆ– ಸಮುದ್ರದ ಮಧ್ಯದಲ್ಲಿ ಬೆಂಕಿ ಇದೆ. ಸಂಪತ್ತೂ ಇದೆ. ಸಮುದ್ರಕ್ಕೆ ರತ್ನಾಕರ ಎಂದು ಹೆಸರು. ತಳದಲ್ಲಿ ಹೇರಳವಾದ ಸಂಪತ್ತು ಇದೆ. ಎಷ್ಟು ಸಂಪತ್ತಿದ್ದರೂ ಏನೂ ಪ್ರಯೋಜನವಿಲ್ಲ. ಸ್ವಲ್ಪವೂ ದಾನಮಾಡು ವುದಿಲ್ಲ. ಎಷ್ಟೆಂದರೆ ತನ್ನ ಬಳಿಗೆ ಬಂದವರಿಗೆ ನೀರನ್ನೂ ಕೊಡುವುದಿಲ್ಲ. ಅಷ್ಟೂ ಆಸೆ. ಅಭಿಪ್ರಾಯ ಹೀಗಿದೆ: ಸಮುದ್ರದ ನೀರು ಉಪ್ಪಾದ್ದರಿಂದ ಯಾರೂ ಪಾನಮಾಡುವುದಿಲ್ಲ. ಲೋಕದಲ್ಲಿ ಇದೇ ರೀತಿ ಇದೆ– ನಮ್ಮಲ್ಲಿ ತುಂಬಾ ಶ್ರೀಮಂತರಿದ್ದಾರೆ. ನಾನಾರೀತಿಯ ಸಮಸ್ಯೆಗಳಿಂದ ಜೀವನದಲ್ಲಿ ಬೆಯ್ಯುತ್ತಿರುತ್ತಾರೆ. ಆದರೂ ಇನ್ನೊಬ್ಬರಿಗೆ ದಾನಮಾಡಿ ಪುಣ್ಯ ಸಂಪಾದಿಸುವ; ಈ ತಾಪದಿಂದ ದೂರವಾಗುವ ಎನ್ನುವ ಬುದ್ಧಿ ಬರುವುದಿಲ್ಲ. ಯಾಕೆಂದರೆ ಸಂಪತ್ತು ಹೆಚ್ಚಾದಂತೆ ಆಸೆಯೂ ಹೆಚ್ಚಾಗುತ್ತದೆ.

ಸಂದೇಶ : **'ಲಾಭಾತ್ ಲೋಭಃ ವಿವರ್ಧತೆ' ಲಾಭದಿಂದ ಲೋಭವು ಹೆಚ್ಚಾಗುತ್ತದೆ.**

**ಸರಿತ್‌ಪತಿಸ್ತನ್ಮುಖತೋಽಹಿ ವೇಲಾಂ**
**ವಿಲಂಘಯತ್ಯತ್ರ ವಿವೇಕಹೀನಃ ।**
**ತಥಾ ಹಿ ನಾರ್ಯಾ ಸಹ ಸಂಗತಾನಾಂ**
**ಕುತೋ ವಿವೇಕಃ ಕುತ ಏವ ವೇಲಾ** ॥ ೫೩ ॥

ಸರಿತ್=ನದಿಗಳ; ಪತಿಃ=ಸ್ವಾಮಿಯು; ತತ್=ನದಿಗಳ; ಮುಖತಃ=ಮುಖದಲ್ಲಿ; ವೇಲಾಂ=ತೀರವನ್ನು; ವಿಲಂಘಯತಿ=ಮೀರುತ್ತದೆ; ಅತ್ರ=ಇಲ್ಲಿ; ವಿವೇಕ=ವಿವೇಕದಿಂದ; ಹೀನಃ=ರಹಿತವಾದದ್ದು; ತಥಾ ಹಿ=ಅದು ಹಾಗೆಯೇ; ನಾರ್ಯಾ=ನಾರಿಯಿಂದ; ಸಂಗತಾನಾಂ=ಸೇರಿದವರಿಗೆ; ವಿವೇಕಃ=ವಿವೇಕವು; ಕುತಃ=ಎಲ್ಲಿಂದ; ವೇಲಾ= ಸಮಯವೂ; ಕುತಃ ಏವ=ಎಲ್ಲಿಂದ ತಾನೆ?

ಸಮುದ್ರ ಹಾಗೂ ನದಿಗಳು ಪತಿಪತ್ನಿಯರು. ನದಿಗಳು ಸಮುದ್ರವನ್ನು ಸೇರುವ ಸ್ಥಳಕ್ಕೆ ನದೀಮುಖ ಎಂದು ಹೆಸರು. ಈ ಜಾಗದಲ್ಲಿ ಸಮುದ್ರದ ನೀರು ನದಿ ಒಳಗೆ ಬಹಳ ದೂರದವರೆಗೆ ಬರುವುದು ಸಹಜ. ಇಲ್ಲಿ ನದೀನೀರು ಸಮುದ್ರದ ನೀರಿನ ವ್ಯತ್ಯಾಸವೂ ಗೊತ್ತಾಗುವುದಿಲ್ಲ. ಇದನ್ನು ರಾಜರು ಶೃಂಗಾರಮಯವಾಗಿ ವರ್ಣಿಸುತ್ತಾರೆ. ಲೋಕದಲ್ಲಿಯೂ ಇದು ಸಾಮಾನ್ಯ. ಪತ್ನಿಯ ಜೊತೆ ವಿಹರಿಸುವ ಕಾಮುಕರಿಗೆ ಸಮಯಾಸಮಯದ ಧರ್ಮಾಧರ್ಮದ ಪ್ರಜ್ಞೆ ಇರುವುದಿಲ್ಲ. ಸಮುದ್ರವು ವೇಲಾವನ್ನು

ಮೀರಿದೆ ಅಂದರೆ ದಡವನ್ನು ದಾಟಿಬಂದಿದೆ ಎಂದರ್ಥ. ಕಾಮುಕರು ವೇಲಾವನ್ನು ದಾಟುವುದು ಎಂದರೆ ದಿನಗಳ ನಿಯಮಗಳನ್ನು ಮೀರುವುದು ಎಂದರ್ಥ. ದಶಮ್ಯಾದಿ ದಿನತ್ರಯಗಳು ಮೈಥುನಕ್ಕೆ ನಿಷಿದ್ಧ. ಅದನ್ನು ಮೀರುತ್ತಾರೆ. ವಿವೇಕಹೀನ ಅಂದರೆ ಆ ನದೀಬಾಗಿಲಿನಲ್ಲಿ ನದೀನೀರು ಇದು. ಇದು ಸಮುದ್ರದ ನೀರು ಎಂದು ವಿವೇಚನೆ ಮಾಡಲು ಸಾಧ್ಯವಿಲ್ಲ. ಕಾಮುಕರು ರತಿಯ ಸಮಯದಲ್ಲಿ ವಿವೇಕರಹಿತರು; ಪುಣ್ಯಾಪಾಪಗಳ ವಿವೇಚನೆ ರಹಿತರು. ಈ ರೀತಿ ವೇಲಾ, ವಿವೇಕ ಎಂಬ ಶಬ್ದಗಳು ಒಂದೇ. ಆದರೆ ಅರ್ಥಗಳು ಬೇರೆ ಬೇರೆ. ಅದೂ ಕೂಡಾ ಹೊಸ ಅರ್ಥ ಅಲ್ಲ. ಎಲ್ಲರ ಅನುಭವಕ್ಕೆ ಬರುವಂತಾದ್ದೆ.

ಸಂದೇಶ : **'ಕಾಮಾತುರಾಣಾಂ ನ ಭಯಂ ನ ಲಜ್ಜಾ' ಕಾಮುಕರಿಗೆ ಭಯವೂ ನಾಚಿಕೆಯೂ ಇಲ್ಲ. ಇದನ್ನೇ ಕನ್ನಡದಲ್ಲಿ ಕಾಮಕ್ಕೆ ಕಣ್ಣಿಲ್ಲ ಎನ್ನುವುದು.**

**ಬಹೂಪಭೋಗ್ಯಾಪಿ ಸರಿತ್ ಸಮುದ್ರತಟೇನ ಸಾ ಕಂಠಕಿತೋಪಕಂಠಾ ।**
**ರಹಸ್ಯುಪಾಹೂಯ ವಿಟಾನ್ ಸ್ವಭರ್ತೃತಟೇ ಸದಾಚಾರಪರಾ ಹಿ ಕಾಶ್ಚಿತ್ ॥ ೫೪ ॥**

ಸಾ=ಆ; ಸರಿತ್=ನದಿಯು; ಬಹು=ಬಹಳ ಜನರಿಂದ; ಉಪಭೋಗ್ಯಾ ಅಪಿ= ಸೇವಿಸಲ್ಪಟ್ಟರೂ; ಸಮುದ್ರ=ಸಮುದ್ರದ; ತಟೆ=ದಡದಲ್ಲಿ; ಕಂಠಕಿತಾ=ಉಪದ್ರವಗಳಿಂದ; ಉಪಕಂಠಾ=ಕೂಡಿದವಳು; ನ=ಅಲ್ಲ; ಕಾಶ್ಚಿತ್=ಕೆಲವರು; ರಹಸಿ=ಏಕಾಂತದಲ್ಲಿ; ವಿಟಾನ್= ವಿಟರನ್ನು; ಉಪಾಹೂಯ=ಕರೆದು; ಸ್ವ=ತನ್ನ; ಭರ್ತೃ=ಗಂಡನ; ತಟೇ=ಸಮೀಪ ದಲ್ಲಿ; ಸತ್=ಒಳ್ಳೆಯ; ಆಚಾರ=ಆಚಾರದಲ್ಲಿ; ಪರಾಃ=ಆಸಕ್ತರು; ಹಿ=ಪ್ರಸಿದ್ಧ.

ನದಿಯು ತನ್ನ ಉಗಮಸ್ಥಳದಲ್ಲಿ ತುಂಬಾ ಶುದ್ಧವಾಗಿ ಇರುತ್ತಾಳೆ. ಆಗ ಅವಳ ನೀರನ್ನು ಬಹಳಜನ ಸ್ನಾನಪಾನಾದಿಗಳಿಗೆ ಉಪಯೋಗಿಸುತ್ತಾರೆ. ಅಲ್ಲೇ ಜಪತಪಾದಿ ಗಳನ್ನು ಮಾಡಿಕೊಂಡಿರುತ್ತಾರೆ. ಅವಳು ಹರಿಯುತ್ತಾ ಮುಂದೆ ಬಂದಂತೆ ಅವಳಲ್ಲಿ ಕೆಸರು, ಕಸಕಡ್ಡಿಗಳು, ಮುಳ್ಳುಗಳು ಸೇರುತ್ತವೆ. ಸಮುದ್ರಕ್ಕೆ ಸೇರುವ ಸ್ಥಳದಲ್ಲಿಯಂತೂ ಉಪ್ಪುನೀರಿನಿಂದ ಕೂಡಿರುತ್ತಾಳೆ. ಆದ್ದರಿಂದ ಯಾರೂ ಅವಳನ್ನು ಉಪಯೋಗಿಸುವುದಿಲ್ಲ. ಇದು ವಸ್ತುಸ್ಥಿತಿ. ಇಲ್ಲಿಯೂ ರಾಜರು ಲೌಕಿಕ ಉದಾಹರಣೆಯ ಮೂಲಕ ಚಮತ್ಕಾರವನ್ನು ಮೆರೆಯುತ್ತಾರೆ –ಲೋಕದಲ್ಲಿ ಕೆಲವು ನಾರಿಯರು ತಾವು ಪತಿಗಿಂತ ದೂರ ಇರುವ ಸಮಯದಲ್ಲಿ ಅನೇಕ ಪುರುಷರ ಒಡನಾಟದಲ್ಲಿ ಇರುತ್ತಾರೆ. ಪತಿಯ ಸಮೀಪಕ್ಕೆ ಬಂದಾಗ ಪತಿವ್ರತೆಯರಂತೆ ವ್ಯವಹರಿಸುತ್ತಾರೆ. ಯಾರನ್ನೂ ತಮ್ಮ ಬಳಿಗೆ ಬರಗೊಡುವು ದಿಲ್ಲ. ಹಾಗೆಯೇ ಈ ನದಿಯೂ ಕೂಡಾ. ತಾನು ಪತಿಯಾದ ಸಮುದ್ರನಿಗಿಂತ ದೂರ ಇರುವಾಗ ಅಂದರೆ ತನ್ನ ಉಗಮಸ್ಥಾನದಲ್ಲಿ ಬಹಳ ಜನರ ಒಡನಾಟದಲ್ಲಿರುತ್ತಾಳೆ. ಅಂದರೆ ಉಗಮಸ್ಥಾನದಲ್ಲಿ ನೀರು ಶುದ್ಧವಾಗಿರುತ್ತದೆ. ಆದ್ದರಿಂದ ಬಹಳಜನರು ನದಿಗೆ ಬಂದು ಸ್ನಾನಪಾನಾದಿಗಳಿಗೆ ಉಪಯೋಗಿಸುತ್ತಾರೆ. ಮುಂದೆ ಈ ನದಿಯು

ಸಮುದ್ರವನ್ನು ಸೇರುತ್ತದೆ. ಅಂದರೆ ಪತಿಯ ಸಮೀಪ ಬರುತ್ತದೆ. ಆಗ ಯಾರನ್ನೂ ತನ್ನ ಬಳಿಗೆ ಬರಗೊಡುವುದಿಲ್ಲ. ಇದಕ್ಕೆ ನೈಜ ಕಾರಣ ನೀರು ಕಲುಷಿತವಾಗಿರುವುದು. ಉತ್ಪ್ರೇಕ್ಷಿತ ಕಾರಣ ಪತಿ ಸಮೀಪ ಇರುವುದು.

**ಸ್ವೀಯಾಶಾಯುವತಿಮುಪೇತ್ಯ ರಾಗಭಾಜಃ**
**ತೋಯೇಶಃ ಸುಹೃದಪಿ ವೀಕ್ಷ್ಯ ನಾಶಮಿಂದೋಃ ।**
**ಆನಂದಾದನಿಶಮುಪೈತಿ ವೃದ್ಧಿಮುಚ್ಚೈರೇಕ-**
**ಸ್ಯಾಮಭಿರತಿಮಿಚ್ಛತೋಃಕ್ವ ಮೈತ್ರೀ ॥ ೫೫ ॥**

ಸುಹೃತ್ ಅಪಿ=ಗೆಳೆಯನಾದರೂ; ತೋಯ=ನೀರಿಗೆ; ಈಶಃ=ಒಡೆಯನು; ಸ್ವೀಯ=ತನ್ನ; ಆಶಾ=ದಿಕ್ಕೆಂಬ; ಯುವತಿಂ=ನಾರಿಯನ್ನು; ಉಪೇತ್ಯ=ಹೊಂದಿ; ರಾಗ=ಕಾಮವನ್ನು; ಭಾಜ=ಹೊಂದಿರುವ; ಇಂದೋಃ=ಚಂದ್ರನ; ನಾಶಂ=ನಾಶವನ್ನು; ವೀಕ್ಷ್ಯ=ನೋಡಿ; ಆನಂದಾತ್=ಸಂತೋಷದಿಂದ; ಅನಿಶಂ=ಯಾವಾಗಲೂ; ವೃದ್ಧಿಂ=ವೃದ್ಧಿಯನ್ನು; ಉಚ್ಚೈಃ=ಚೆನ್ನಾಗಿ; ಉಪೈತಿ=ಹೊಂದುತ್ತಾನೆ; ಏಕಸ್ಯಾಂ=ಒಬ್ಬಳಲ್ಲಿ; ಅಭಿರತಿಂ=ಪ್ರೀತಿಯನ್ನು; ಇಚ್ಛತೋಃ=ಇಚ್ಛಿಸುವವರಿಗೆ; ಮೈತ್ರೀ=ಗೆಳೆತನವು; ಕ್ವ=ಹೇಗೆ?

ಚಂದ್ರೋದಯಕ್ಕೆ ಸಮುದ್ರ ಉಕ್ಕುವುದು. ಆದ್ದರಿಂದ ಚಂದ್ರನಿಗೂ ಸಮುದ್ರಕ್ಕೂ ಗೆಳೆತನವನ್ನು ಕವಿಗಳು ಕಲ್ಪಿಸುತ್ತಾರೆ. ಪಶ್ಚಿಮದಿಕ್ಕು ಸಮುದ್ರನ ಪತ್ನಿ ಎಂದೂ ಕವಿಸಮಯ. ಚಂದ್ರನು ಅಸ್ತನಾಗುವಾಗ ಕೆಂಪಾಗುತ್ತಾನೆ. ಅನಂತರ ಕಾಣಿಸದೆ ಹೋಗುತ್ತಾನೆ. ಈ ಸಮಯದಲ್ಲಿಯೂ ಸಮುದ್ರವು ಉಕ್ಕೇರುತ್ತದೆ.

ಇಷ್ಟನ್ನೇ ಇಟ್ಟುಕೊಂಡು ರಾಜರು ಈ ರೀತಿ ವರ್ಣಿಸುತ್ತಾರೆ-

ಚಂದ್ರನು ಸಮುದ್ರನ ಗೆಳೆಯ. ಸಮುದ್ರನ ಪತ್ನಿಯಾದ ಪಶ್ಚಿಮದಿಕ್ಕೆಂಬ ಅಂಗನೆಯಲ್ಲಿ ರಾಗವುಳ್ಳವನಾದನು. ಅಸ್ತಮಿಸುವಾಗ ಕೆಂಪಾದನು ಎಂದರ್ಥ. ರಾಗ ಅಂದರೂ ಕೆಂಪು ಅಂದರೂ ಒಂದೇ. ಅನಂತರದಲ್ಲಿ ನಾಶಹೊಂದಿದನು. ಅಂದರೆ ಅಸ್ತಮಿಸಿದನು. ಈ ಸಂದರ್ಭದಲ್ಲಿ ಗೆಳೆಯನಾದ ಸಮುದ್ರನು ಆನಂದದಿಂದ ಬಹಳ ಉಬ್ಬಿದನು. ಅಂದರೆ ಸಮುದ್ರವು ಉಕ್ಕೇರಿತು. ಗೆಳೆಯ ಸತ್ತಾಗ ಸಮುದ್ರವು ಸಂತೋಷ ಪಡುತ್ತದೆ. ಅಂದರೆ ಅವರ ಗೆಳೆತನ ಯಾವ ರೀತಿಯಾದ್ದು? ಇದಕ್ಕೆ ರಾಜರೇ ಉತ್ತರಿಸುತ್ತಾರೆ- ಸುಂದೋಪಸುಂದರು ಬಹಳ ಗೆಳೆಯರಾಗಿದ್ದರು. ಇಬ್ಬರೂ ಒಬ್ಬಳೇ ತಿಲೋತ್ತಮೆಯಲ್ಲಿ ಆಸಕ್ತರಾಗಿದ್ದರು. ಕೊನೆಗೆ ಅವಳಿಗಾಗಿ ಅವರ ಗೆಳೆತನವು ಮುರಿಯಿತು ಎಂದು ಪುರಾಣದಲ್ಲಿ ಕಥೆ ಇದೆ. ಅದೇ ರೀತಿ ಪಶ್ಚಿಮ ದಿಕ್ಕೆಂಬ ಅಂಗನೆಯಲ್ಲಿ ರತರಾದ ಇವರಿಬ್ಬರ ಗೆಳೆತನವೂ ಮುರಿಯಿತು.

<u>ಸಂದೇಶ</u> : **ಪರನಾರೀ ಮಾರೀ.**

ಅಂತಃಕೃತಾಂತೋಪಮವಾಡವಾಗ್ನಿ
ಸಂತಪ್ತಗಾತ್ರೋಽಪಿ ಮುದೇವ ಗರ್ಜನ್ ।
ಫೇನಸ್ಮಿತಶ್ರೀರ್ಗಗನಸ್ಪೃಗೂರ್ಮಿ–
ಗಾಂಭೀರ್ಯಮಾವೇದಯತೀವ ವಾರ್ಧಿಃ ॥ ೫೬ ॥

ಅಂತಃ=ಒಳಗೆ; ಕೃತಾಂತ=ಮೃತ್ಯುವಿಗೆ; ಉಪಮ=ಸಮಾನವಾದ; ವಾಡವ=ವಾಡವವೆಂಬ; ಅಗ್ನಿ=ಬೆಂಕಿಯಿಂದ; ಸಂತಪ್ತ=ಬೆಂದ; ಗಾತ್ರಃ ಅಪಿ=ಶರೀರವುಳ್ಳದ್ದಾದರೂ; ವಾರ್ಧಿಃ=ಸಮುದ್ರವು; ಮುದಾ ಇವ=ಸಂತೋಷದಿಂದ ಎಂಬಂತೆ. ಗರ್ಜನ್=ಧ್ವನಿಸುತ್ತಾ; ಫೇನ=ನೊರೆಗಳೆಂಬ; ಸ್ಮಿತ=ನಗುವಿನ; ಶ್ರೀಃ=ಕಾಂತಿವುಳ್ಳದ್ದಾಗಿ; ಗಗನ=ಆಕಾಶಕ್ಕೆ; ಸ್ಪೃಕ್=ಸ್ಪರ್ಶಿಸುವ; ಊರ್ಮಿಃ=ತೆರೆವುಳ್ಳದ್ದಾಗಿ; ಗಾಂಭೀರ್ಯಂ=ಗಾಂಭೀರ್ಯವನ್ನು; ಆವೇದ-ಯತಿ ಇವ=ತಿಳಿಸುವಂತಿದೆ.

ಸಮುದ್ರದ ಮಧ್ಯದಲ್ಲಿ ಭಾರೀ ಪ್ರಮಾಣದ ಅಗ್ನಿ ಇದೆ. ಅದಕ್ಕೆ ವಡವಾ ಎಂದು ಹೆಸರು. ಇದು ಪ್ರಳಯಕಾರಕ. ಇದರಿಂದ ಸಮುದ್ರವು ತುಂಬಾ ಬಿಸಿಯಾಗಿದೆ. ಆದರೂ ಅದನ್ನು ಹೊರಗೆ ತೋರಗೊಡುವುದಿಲ್ಲ. ತುಂಬಾ ಆನಂದದಿಂದ ಗರ್ಜಿಸುವಂತಿದೆ. ನೊರೆಭರಿತವಾದ ತೆರೆಗಳು ಮಂದಹಾಸದಂತೆ ತೋರುತ್ತಿದೆ. ಎತ್ತರಕ್ಕೆ ಚಿಮ್ಮುವ ತೆರೆಗಳು ಸಮುದ್ರವು ಕುಣಿದಾಡುವಂತಿದೆ. ಇದು ದೊಡ್ಡವರ ಲಕ್ಷಣ. ಅವರು ತಾವು ಎಷ್ಟು ಸಾಂಸಾರಿಕ ತಾಪದಿಂದ ನೊಂದುಕೊಂಡಿದ್ದರೂ ಹೊರಗೆ ತೋರಗೊಡುವುದಿಲ್ಲ. ಬಂದ ಅತಿಥಿಗಳನ್ನು ಮುಗುಳ್ನಗುವಿನಿಂದಲೇ ಸ್ವಾಗತಿಸುತ್ತಾರೆ. ಗಂಭೀರವಾಗಿಯೇ ವರ್ತಿಸುತ್ತಾರೆ. ಎಲ್ಲರೊಡನೆ ಚೆನ್ನಾಗಿಯೇ ವ್ಯವಹರಿಸುತ್ತಾರೆ.

ಸಂದೇಶ : **ನಮ್ಮ ಕಿರಿಕಿರಿಗಳನ್ನು ಇನ್ನೊಬ್ಬರ ಮುಂದೆ ಹೇಳಿ ಅವರಿಗೆ ಕಿರಿಕಿರಿ ಉಂಟು ಮಾಡಬಾರದು.**

ಅಸೇವ್ಯತಾಂ ದೋಷಿಸಖಿತ್ವಜಾತಾಂ ಜಹಾರ ಕೃಷ್ಣಃ ಸ್ವಗೃಹಸ್ಯ ಸಿಂಧೋಃ ।
ಇತಿ ಸ್ಮ ಚಿತ್ರಂ ನ ಯತಸ್ತದಿಷ್ಟಾ ಹರಂತಿ ಪಾಪಾನಿ ಮಹಾಂತಿ ಹೃಷ್ಟಾಃ ॥ ೫೭ ॥

ಕೃಷ್ಣಃ=ಕೃಷ್ಣನು; ಸ್ವ=ತನ್ನ; ಗೃಹಸ್ಯ=ಮನೆಯಾದ; ಸಿಂಧೋಃ=ಸಮುದ್ರದ; ದೋಷಿ=ದೋಷಿಯ; ಸಖಿತ್ವ=ಗೆಳೆತನದಿಂದ; ಜಾತಾಂ=ಉಂಟಾದ; ಅಸೇವ್ಯತಾಂ=ಸೇವನೆಗೆ ಅಯೋಗ್ಯತ್ವವನ್ನು; ಜಹಾರ=ಕಳೆದನು; ಇತಿ=ಎಂಬುದು; ಚಿತ್ರಂ=ಆಶ್ಚರ್ಯವು; ನ=ಅಲ್ಲ; ಯತಃ=ಯಾವ ಕಾರಣದಿಂದ; ಹೃಷ್ಟಾಃ=ಸಂತೋಷಗೊಂಡ; ತತ್=ಕೃಷ್ಣನ; ಇಷ್ಟಾಃ=ಪ್ರಿಯರು; ಮಹಾಂತಿ=ಬಹಳ; ಪಾಪಾನಿ=ಪಾಪಗಳನ್ನು; ಹರಂತಿ=ಕಳೆಯುತ್ತಾರೆ.

ಸಾತ್ವಿಕರಾದರೂ ಕೆಟ್ಟವರ ಸಹವಾಸದಲ್ಲಿದ್ದರೆ ಅಂತಹ ಸಾತ್ವಿಕರನ್ನು ಸೇವಿಸಬಾರದು ಎಂದಿದೆ. ಸದ್ಯ ಈ ಸಮುದ್ರವು ದೋಷಿಯಾದ ಚಂದ್ರನ ಗೆಳೆತನದಲ್ಲಿ ಇದೆ. ದೋಷಾ

ಸಮುದ್ರವನ್ನು ಸೇರುತ್ತದೆ. ಅಂದರೆ ಪತಿಯ ಸಮೀಪ ಬರುತ್ತದೆ. ಆಗ ಯಾರನ್ನೂ ತನ್ನ ಬಳಿಗೆ ಬರಗೊಡುವುದಿಲ್ಲ. ಇದಕ್ಕೆ ನೈಜ ಕಾರಣ ನೀರು ಕಲುಷಿತವಾಗಿರುವುದು. ಉತ್ಪ್ರೇಕ್ಷಿತ ಕಾರಣ ಪತಿ ಸಮೀಪ ಇರುವುದು.

**ಸ್ವೀಯಾಶಾಯುವತಿಮುಪೇತ್ಯ ರಾಗಭಾಜಃ**
**ತೋಯೇಶಃ ಸುಹೃದಪಿ ವೀಕ್ಷ್ಯ ನಾಶಮಿಂದೋಃ ।**
**ಆನಂದಾದನಿಶಮುಪೈತಿ ವೃದ್ಧಿಮುಚ್ಚೈರೇಕ-**
**ಸ್ಯಾಮಭಿರತಿಮಿಚ್ಛತೋಕ್ವ ಮೈತ್ರೀ** ॥ ೫೫ ॥

ಸುಹೃತ್ ಅಪಿ=ಗೆಳೆಯನಾದರೂ; ತೋಯ=ನೀರಿಗೆ; ಈಶಃ=ಒಡೆಯನು; ಸ್ವೀಯ=ತನ್ನ; ಆಶಾ=ದಿಕ್ಕೆಂಬ; ಯುವತಿಂ=ನಾರಿಯನ್ನು; ಉಪೇತ್ಯ=ಹೊಂದಿ; ರಾಗ=ಕಾಮವನ್ನು; ಭಾಜ=ಹೊಂದಿರುವ; ಇಂದೋಃ=ಚಂದ್ರನ; ನಾಶಂ=ನಾಶವನ್ನು; ವೀಕ್ಷ್ಯ=ನೋಡಿ; ಆನಂದಾತ್=ಸಂತೋಷದಿಂದ; ಅನಿಶಂ=ಯಾವಾಗಲೂ; ವೃದ್ಧಿಂ=ವೃದ್ಧಿಯನ್ನು; ಉಚ್ಚೈಃ=ಚೆನ್ನಾಗಿ; ಉಪೈತಿ=ಹೊಂದುತ್ತಾನೆ; ಏಕಸ್ಯಾಂ=ಒಬ್ಬಳಲ್ಲಿ; ಅಭಿರತಿಂ=ಪ್ರೀತಿಯನ್ನು; ಇಚ್ಛತೋಃ=ಇಚ್ಛಿಸುವವರಿಗೆ; ಮೈತ್ರೀ=ಗೆಳೆತನವು; ಕ್ವ=ಹೇಗೆ?

ಚಂದ್ರೋದಯಕ್ಕೆ ಸಮುದ್ರ ಉಕ್ಕುವುದು. ಆದ್ದರಿಂದ ಚಂದ್ರನಿಗೂ ಸಮುದ್ರಕ್ಕೂ ಗೆಳೆತನವನ್ನು ಕವಿಗಳು ಕಲ್ಪಿಸುತ್ತಾರೆ. ಪಶ್ಚಿಮದಿಕ್ಕು ಸಮುದ್ರನ ಪತ್ನಿ ಎಂದೂ ಕವಿಸಮಯ. ಚಂದ್ರನು ಅಸ್ತನಾಗುವಾಗ ಕೆಂಪಾಗುತ್ತಾನೆ. ಅನಂತರ ಕಾಣಿಸದೆ ಹೋಗುತ್ತಾನೆ. ಈ ಸಮಯದಲ್ಲಿಯೂ ಸಮುದ್ರವು ಉಕ್ಕೇರುತ್ತದೆ.

ಇಷ್ಟನ್ನೇ ಇಟ್ಟುಕೊಂಡು ರಾಜರು ಈ ರೀತಿ ವರ್ಣಿಸುತ್ತಾರೆ–

ಚಂದ್ರನು ಸಮುದ್ರನ ಗೆಳೆಯ. ಸಮುದ್ರನ ಪತ್ನಿಯಾದ ಪಶ್ಚಿಮದಿಕ್ಕೆಂಬ ಅಂಗನೆಯಲ್ಲಿ ರಾಗವುಳ್ಳವನಾದನು. ಅಸ್ತಮಿಸುವಾಗ ಕೆಂಪಾದನು ಎಂದರ್ಥ. ರಾಗ ಅಂದರೂ ಕೆಂಪು ಅಂದರೂ ಒಂದೇ. ಅನಂತರದಲ್ಲಿ ನಾಶಹೊಂದಿದನು. ಅಂದರೆ ಅಸ್ತಮಿಸಿದನು. ಈ ಸಂದರ್ಭದಲ್ಲಿ ಗೆಳೆಯನಾದ ಸಮುದ್ರನು ಆನಂದದಿಂದ ಬಹಳ ಉಬ್ಬಿದನು. ಅಂದರೆ ಸಮುದ್ರವು ಉಕ್ಕೇರಿತು. ಗೆಳೆಯ ಸತ್ತಾಗ ಸಮುದ್ರವು ಸಂತೋಷ ಪಡುತ್ತದೆ. ಅಂದರೆ ಅವರ ಗೆಳೆತನ ಯಾವ ರೀತಿಯಾದ್ದು? ಇದಕ್ಕೆ ರಾಜರೇ ಉತ್ತರಿಸುತ್ತಾರೆ– ಸುಂದೋಪಸುಂದರು ಬಹಳ ಗೆಳೆಯರಾಗಿದ್ದರು. ಇಬ್ಬರೂ ಒಬ್ಬಳೇ ತಿಲೋತ್ತಮೆಯಲ್ಲಿ ಆಸಕ್ತರಾಗಿದ್ದರು. ಕೊನೆಗೆ ಅವಳಿಗಾಗಿ ಅವರ ಗೆಳೆತನವು ಮುರಿಯಿತು ಎಂದು ಪುರಾಣದಲ್ಲಿ ಕಥೆ ಇದೆ. ಅದೇ ರೀತಿ ಪಶ್ಚಿಮ ದಿಕ್ಕೆಂಬ ಅಂಗನೆಯಲ್ಲಿ ರತರಾದ ಇವರಿಬ್ಬರ ಗೆಳೆತನವೂ ಮುರಿಯಿತು.

<u>ಸಂದೇಶ</u> : **ಪರನಾರೀ ಮಾರೀ.**

**ಅಂತಃಕೃತಾಂತೋಪಮವಾಡವಾಗ್ನಿ**
**ಸಂತಪ್ತಗಾತ್ರೋऽಪಿ ಮುದೇವ ಗರ್ಜನ್ ।**
**ಫೇನಸ್ಮಿತಶ್ರೀರ್ಗಗನಸ್ಪೃಗೂರ್ಮಿ–**
**ರ್ಗಾಂಭೀರ್ಯಮಾವೇದಯತೀವ ವಾರ್ಧಿಃ ॥ ೫೬ ॥**

ಅಂತಃ=ಒಳಗೆ; ಕೃತಾಂತ=ಮೃತ್ಯುವಿಗೆ; ಉಪಮ=ಸಮಾನವಾದ; ವಾಡವ=ವಾಡವವೆಂಬ; ಅಗ್ನಿ=ಬೆಂಕಿಯಿಂದ; ಸಂತಪ್ತ=ಬೆಂದ; ಗಾತ್ರಃ ಅಪಿ=ಶರೀರವುಳ್ಳದ್ದಾದರೂ; ವಾರ್ಧಿಃ=ಸಮುದ್ರವು; ಮುದಾ ಇವ=ಸಂತೋಷದಿಂದ ಎಂಬಂತೆ. ಗರ್ಜನ್=ಧ್ವನಿಸುತ್ತಾ; ಫೇನ=ನೊರೆಗಳೆಂಬ; ಸ್ಮಿತ=ನಗುವಿನ; ಶ್ರೀಃ=ಕಾಂತಿವುಳ್ಳದ್ದಾಗಿ; ಗಗನ=ಆಕಾಶಕ್ಕೆ; ಸ್ಪೃಕ್=ಸ್ಪರ್ಶಿಸುವ; ಊರ್ಮಿಃ=ತೆರೆವುಳ್ಳದ್ದಾಗಿ; ಗಾಂಭೀರ್ಯಂ=ಗಾಂಭೀರ್ಯವನ್ನು; ಆವೇದಯತಿ ಇವ=ತಿಳಿಸುವಂತಿದೆ.

ಸಮುದ್ರದ ಮಧ್ಯದಲ್ಲಿ ಭಾರೀ ಪ್ರಮಾಣದ ಅಗ್ನಿ ಇದೆ. ಅದಕ್ಕೆ ವಡವಾ ಎಂದು ಹೆಸರು. ಇದು ಪ್ರಳಯಕಾರಕ. ಇದರಿಂದ ಸಮುದ್ರವು ತುಂಬಾ ಬಿಸಿಯಾಗಿದೆ. ಆದರೂ ಅದನ್ನು ಹೊರಗೆ ತೋರಗೊಡುವುದಿಲ್ಲ. ತುಂಬಾ ಆನಂದದಿಂದ ಗರ್ಜಿಸುವಂತಿದೆ. ನೊರೆಭರಿತವಾದ ತೆರೆಗಳು ಮಂದಹಾಸದಂತೆ ತೋರುತ್ತಿದೆ. ಎತ್ತರಕ್ಕೆ ಚಿಮ್ಮುವ ತೆರೆಗಳು ಸಮುದ್ರವು ಕುಣಿದಾಡುವಂತಿದೆ. ಇದು ದೊಡ್ಡವರ ಲಕ್ಷಣ. ಅವರು ತಾವು ಎಷ್ಟು ಸಾಂಸಾರಿಕ ತಾಪದಿಂದ ನೊಂದುಕೊಂಡಿದ್ದರೂ ಹೊರಗೆ ತೋರಗೊಡುವುದಿಲ್ಲ. ಬಂದ ಅತಿಥಿಗಳನ್ನು ಮುಗುಳ್ನಗುವಿನಿಂದಲೇ ಸ್ವಾಗತಿಸುತ್ತಾರೆ. ಗಂಭೀರವಾಗಿಯೇ ವರ್ತಿಸುತ್ತಾರೆ. ಎಲ್ಲರೊಡನೆ ಚೆನ್ನಾಗಿಯೇ ವ್ಯವಹರಿಸುತ್ತಾರೆ.

ಸಂದೇಶ : **ನಮ್ಮ ಕಿರಿಕಿರಿಗಳನ್ನು ಇನ್ನೊಬ್ಬರ ಮುಂದೆ ಹೇಳಿ ಅವರಿಗೆ ಕಿರಿಕಿರಿ ಉಂಟು ಮಾಡಬಾರದು.**

**ಅಸೇವ್ಯತಾಂ ದೋಷಿಸಖಿತ್ವಜಾತಾಂ ಜಹಾರ ಕೃಷ್ಣಃ ಸ್ವಗೃಹಸ್ಯ ಸಿಂಧೋಃ ।**
**ಇತಿ ಸ್ಮ ಚಿತ್ರಂ ನ ಯತಸ್ತದಿಷ್ಟಾ ಹರಂತಿ ಪಾಪಾನಿ ಮಹಾಂತಿ ಹೃಷ್ಟಾಃ ॥ ೫೭ ॥**

ಕೃಷ್ಣಃ=ಕೃಷ್ಣನು; ಸ್ವ=ತನ್ನ; ಗೃಹಸ್ಯ=ಮನೆಯಾದ; ಸಿಂಧೋಃ=ಸಮುದ್ರದ; ದೋಷಿ=ದೋಷಿಯ; ಸಖಿತ್ವ=ಗೆಳೆತನದಿಂದ; ಜಾತಾಂ=ಉಂಟಾದ; ಅಸೇವ್ಯತಾಂ=ಸೇವನೆಗೆ ಅಯೋಗ್ಯತ್ವವನ್ನು; ಜಹಾರ=ಕಳೆದನು; ಇತಿ=ಎಂಬುದು; ಚಿತ್ರಂ=ಆಶ್ಚರ್ಯವು; ನ=ಅಲ್ಲ; ಯತಃ=ಯಾವ ಕಾರಣದಿಂದ; ಹೃಷ್ಟಾಃ=ಸಂತೋಷಗೊಂಡ; ತತ್=ಕೃಷ್ಣನ; ಇಷ್ಟಾಃ=ಪ್ರಿಯರು; ಮಹಾಂತಿ=ಬಹಳ; ಪಾಪಾನಿ=ಪಾಪಗಳನ್ನು; ಹರಂತಿ=ಕಳೆಯುತ್ತಾರೆ.

ಸಾತ್ವಿಕರಾದರೂ ಕೆಟ್ಟವರ ಸಹವಾಸದಲ್ಲಿದ್ದರೆ ಅಂತಹ ಸಾತ್ವಿಕರನ್ನು ಸೇವಿಸಬಾರದು ಎಂದಿದೆ. ಸದ್ಯ ಈ ಸಮುದ್ರವು ದೋಷಿಯಾದ ಚಂದ್ರನ ಗೆಳೆತನದಲ್ಲಿ ಇದೆ. ದೋಷಾ

ಅಂದರೆ ರಾತ್ರಿಗೆ ಹೆಸರಿದೆ. ದೋಷಗಳು ಅಂದರೆ ಕಲೆಗಳೂ ಆಗಬಹುದು. ಚಂದ್ರನ ಮೈಯಲ್ಲಿ ಕಪ್ಪು ಕಲೆಗಳಿವೆ. ಆದ್ದರಿಂದ ದೋಷಿಯಾದನು. ಚಂದ್ರನಿಗೂ ರಾತ್ರಿಗೂ ಸಂಬಂಧ ಇದೆ. ಆದ್ದರಿಂದಲೂ ಚಂದ್ರನು ದೋಷಿಯಾದನು. ಈ ಕಾರಣದಿಂದ ಇಂತಹ ಚಂದ್ರನ ಗೆಳೆತನವನ್ನು ಹೊಂದಿದ ಸಮುದ್ರವನ್ನು ಯಾರೂ ಸೇವಿಸಲಿಲ್ಲ ಎಂದು ಕವಿಗಳ ಉತ್ಪ್ರೇಕ್ಷೆ. ನಿಜವಾದ ಕಾರಣ ಸಮುದ್ರದಲ್ಲಿ ಉಪ್ಪು ನೀರು ಇರುವುದರಿಂದ. ಆದರೆ ಕೃಷ್ಣನು ಈ ಸಮುದ್ರದಲ್ಲಿ ಮನೆ ಮಾಡಿ ಈ ನೀರನ್ನು ಅಮೃತಮಯವನ್ನಾಗಿ ಮಾಡಿದನು. ಎಲ್ಲರೂ ಸೇವಿಸುವಂತೆ ಮಾಡಿದನು.

ರಾಜರು ತಿಳಿಸುತ್ತಾರೆ– ಇದು ಏನೂ ಆಶ್ಚರ್ಯವಲ್ಲ. ಪಾಪಿಗಳಾದ ನಾವು ಕೃಷ್ಣನ ಭಕ್ತರನ್ನು ಭಕ್ತಿಯಿಂದ ಆಶ್ರಯಿಸೋಣ. ಅವರು ಕರುಣಾಪೂರ್ಣ ದೃಷ್ಟಿಯಿಂದ ನಮ್ಮನ್ನು ಸಂತೋಷದಿಂದ ಹರಸಿದರೆ ನಮ್ಮ ಪಾಪಗಳೆಲ್ಲಾ ನಾಶವಾಗುತ್ತವೆ. ಈ ರೀತಿ ಕೃಷ್ಣಭಕ್ತರಿಗೆ ಒಬ್ಬನ ಪಾಪವನ್ನು ಪರಿಹರಿಸುವ ಶಕ್ತಿ ಇರುವಾಗ ಕೃಷ್ಣನಿಗೆ ಆ ಶಕ್ತಿ ಇದೆ ಎನ್ನುವುದು ಆಶ್ಚರ್ಯವಲ್ಲ.

**ಪುರಾಪ್ಯಜೇಯೋ ಮುರಜಿತ್‌ಕಿಲಾತ್ರ ಪುರೀಂ ವಿಧಾಯಾಭವದತ್ಯಜೇಯಃ ।**
**ಮಮೇತ್ಥಮಾಭಾತಿ ಕಲತ್ರವಸ್ತ್ರ ಕೃತಾಲಯಂ ಕಃ ಖಲು ಜೇತುಕಾಮಃ ॥ ೫೮ ॥**

ಪುರಾ ಅಪಿ=ಮೊದಲೂ ಕೂಡಾ; ಅಜೇಯಃ=ಸೋಲಿಲ್ಲದ; ಮುರ=ಮುರನನ್ನು; ಜಿತ್=ಗೆದ್ದಿರುವ ಕೃಷ್ಣನು; ಅತ್ರ=ಸಮುದ್ರದಲ್ಲಿ; ಪುರೀಂ=ಪಟ್ಟಣವನ್ನು; ವಿಧಾಯ=ಮಾಡಿ; ಅಜೇಯಃ=ಸೋಲಿಲ್ಲದವನು; ಅಭವತ್=ಆದನು; ಮಮ=ನನಗೆ; ಇತ್ಥಂ=ಈ ರೀತಿ; ಆಭಾತಿ=ತೋರುತ್ತದೆ; ಕಲತ್ರ=ಪತ್ನಿಯ; ವಸ್ತ್ರ=ವಸ್ತ್ರದಲ್ಲಿ; ಕೃತ=ಮಾಡಲ್ಪಟ್ಟ; ಆಲಯಂ= ಮನೆವುಳ್ಳವನನ್ನು; ಜೇತು=ಗೆಲ್ಲಲು; ಕಾಮಃ=ಆಸೆವುಳ್ಳವನು; ಕಃ ಖಲು=ಯಾರುತಾನೆ?

ಕೃಷ್ಣನು ಸಮುದ್ರದ ಮಧ್ಯದಲ್ಲಿ ಮನೆಯನ್ನು ಮಾಡಿದ್ದಾನೆ. ಇಲ್ಲಿಗೆ ಬರುವುದೇ ಕಷ್ಟಸಾಧ್ಯ. ಆದ್ದರಿಂದ ಕೃಷ್ಣನಿಗೆ ಈಗ ಪರಾಜಯದ ಪ್ರಶ್ನೆಯೇ ಇಲ್ಲ. ಇಲ್ಲಿಗೆ ಬರುವ ಮೊದಲು ಸೋಲು ಇತ್ತಾ? ಎಂಬ ಪ್ರಶ್ನೆ ಬರುವುದು. ಕೃಷ್ಣನಿಗೆ ಎಂದೂ ಸೋಲು ಎಂಬುದೇ ಇಲ್ಲ. ಈತನು ದೇವರು. ಆದರೂ ಸಾಮಾನ್ಯಜನರಿಗೆ ಈ ವಿಚಾರ ತಿಳಿಯುವುದಿಲ್ಲ. ಅವರು ಏನು ತಿಳಿಯುತ್ತಾರೆ ಅಂದರೆ ಕೃಷ್ಣನು ಸಮುದ್ರದ ಮಧ್ಯದಲ್ಲಿ ಮನೆ ಮಾಡಿದ್ದರಿಂದ ಆತನಿಗೆ ಸೋಲು ಇಲ್ಲ. ಅಲ್ಲಿಯ ತನಕ ಹೋಗಲು ಶತ್ರುಗಳಿಗೆ ಆಗುವುದಿಲ್ಲ ಎಂದು.

ಆದರೆ ರಾಜರು ಇದನ್ನು ತಮಾಷೆಯಾಗಿ ವರ್ಣಿಸುತ್ತಾರೆ –ಭೂಮಿಯು ಕೃಷ್ಣನ ಪತ್ನಿಯು. ಸಮುದ್ರವು ಇವಳ ವಸ್ತ್ರವು. ಯಾರು ಪತ್ನಿಯ ಸೀರೆಯಲ್ಲಿ ತನ್ನನ್ನು ಅಡಗಿಸಿಕೊಳ್ಳುತ್ತಾನೋ ಅವನ ತಂಟೆಗೆ ಯಾರೂ ಬರುವುದಿಲ್ಲ ಎಂದು.

**ಸರಮ್ಯಫೇನಾಸವಶೋಭಿವಕ್ತ್ರಸ್ತರಂಗಹಸ್ತೈರ್ಜಘನಂ ನದೀನಾಮ್ ।**
**ವಿಧೂದಯೇ ಸಂಸ್ಪೃಶತೀಂದುದೃಷ್ಟ್ಯಾ ನಕಸ್ಯ ಕಾಮಃ ಸರಸಸ್ಯ ಹಿ ಸ್ಯಾತ್ ॥ ೫೯ ॥**

ಸಃ=ಸಮುದ್ರವು; ರಮ್ಯ=ಚಂದದ; ಫೇನ=ನೊರೆಗಳೆಂಬ; ಆಸವ=ಮದ್ಯದಿಂದ; ಶೋಭಿ=ಶೋಭಿಸುವ; ವಕ್ತ್ರಃ=ಮುಖವುಳ್ಳದ್ದಾಗಿ; ತರಂಗ=ತೆರೆಗಳೆಂಬ; ಹಸ್ತೈಃ=ಕೈಗಳಿಂದ; ನದೀನಾಂ=ನದಿಗಳ; ಜಘನಂ=ಸೊಂಟವನ್ನು; ವಿಧು=ಚಂದ್ರನ; ಉದಯೇ=ಉದಯದಲ್ಲಿ; ಸಂಸ್ಪೃಶಂತಿ=ಮುಟ್ಟುತ್ತಾರೆ; ಇಂದು=ಚಂದ್ರನ; ದೃಷ್ಟ್ಯಾ=ದರ್ಶನದಿಂದ; ಕಸ್ಯ=ಯಾವ; ಸರಸಸ್ಯ=ರಸಿಕನಿಗೆ; ಕಾಮಃ=ಕಾಮವು; ನಸ್ಯಾತ್=ಆಗುವುದಿಲ್ಲ.

ಸಮುದ್ರದಲ್ಲಿ ತೆರೆಗಳು ಬರುವಾಗ ನೊರೆಗಳು ಬರುತ್ತವೆ. ಈ ನೊರೆಗಳು ಸಮುದ್ರದ ದಡದಲ್ಲಿ ಕಾಣುತ್ತವೆ. ಸಮುದ್ರದ ಬಾಯಲ್ಲಿ ಇದ್ದಂತೆ ತೋರುತ್ತದೆ. ಮದ್ಯವೂ ಬಿಳಿ ನೊರೆಗಳಿಂದ ಕೂಡಿದೆ. ಆದ್ದರಿಂದ ಸಮುದ್ರವು ಮದ್ಯಪಾನಮಾಡಿದಂತೆ ಕಾಣುತ್ತದೆ. ಎತ್ತರವಾದ ತೆರೆಗಳು ಕೈಗಳಂತೆ ಇವೆ. ಇತ್ತ ಚಂದ್ರೋದಯವೂ ಆಗಿದೆ. ಆಗ ಸಮುದ್ರದಲ್ಲಿ ಎತ್ತರದ ಅಲೆಗಳು ಏಳುತ್ತವೆ. ನದಿಗೆ ಬರುತ್ತವೆ. ಕಾಮುಕರು ಸಹಜವಾಗಿ ನಾರಿಯರಲ್ಲಿ ಆಸಕ್ತರಾಗಿರುತ್ತಾರೆ. ಮದ್ಯಪಾನ ಮಾಡಿದರೆ ನಾರಿಯನ್ನು ತಮ್ಮ ಕೈಗಳಿಂದ ಮುಟ್ಟುತ್ತಾರೆ. ಚಂದ್ರೋದಯವು ಇವರಿಗೆ ಸಹಾಯ ಮಾಡುತ್ತದೆ. ಸಮುದ್ರವೆಂಬ ಕಾಮುಕನು ನೊರೆಗಳೆಂಬ ಮದ್ಯವನ್ನು ಪಾನಮಾಡಿ ತೆರೆಗಳೆಂಬ ಕೈಗಳಿಂದ ನದಿ ಎಂಬ ಪತ್ನಿಯ ತಟವೆಂಬ ಕಟಿಪ್ರದೇಶವನ್ನು ಮುಟ್ಟುವಂತಿದೆ.

**ಸಿತೇತರಃ ಪಿತಕೃಶಾನುಮಧ್ಯಃ ಸಹಸ್ರಶಃ ಶ್ಲಿಷ್ಟತನುರ್ನದೀಭಿಃ ।**
**ಅನೇಕಯೋಷಿತ್ ಪರಿತೋಷದಾಯೀ ಸಪೀತವಾಸಾ ಇವ ಭಾಸತೇಬ್ಧಿಃ ॥ ೬೦ ॥**

ಸಿತ್=ಬಿಳಿಗಿಂತ; ಇತರಃ=ಬೇರೆಯಾದ; ಪೀತ=ಹಳದಿಯಾದ; ಕೃಶಾನು=ಅಗ್ನಿಯೇ; ಮಧ್ಯಃ=ಮಧ್ಯದಲ್ಲಿ ಉಳ್ಳ; ಸಹಸ್ರಶಃ=ಸಾವಿರಾರು;' ನದೀಭಿಃ=ನದಿಗಳಿಂದ; ಶ್ಲಿಷ್ಟ=ಆಲಿಂಗಿತ ವಾದ; ತನುಃ=ಶರೀರವುಳ್ಳ; ಸಃ=ಆ; ಅಬ್ಧಿಃ=ಸಮುದ್ರವು; ಅನೇಕ=ಬಹಳ; ಯೋಷಿತ್= ನಾರಿಯರಿಗೆ; ಪರಿತೋಷ=ಆನಂದವನ್ನು; ದಾಯೀ=ಕೊಡುವ; ಪೀತ=ಹಳದಿಯ; ವಾಸಾ ಇವ=ಬಟ್ಟೆವುಳ್ಳವನಂತೆ; ಭಾಸತೇ=ತೋರುತ್ತದೆ.

ಸಮುದ್ರವು ನೀಲಬಣ್ಣದ್ದು. ಇದರ ಮಧ್ಯದಲ್ಲಿ ಅಗ್ನಿ ಇದೆ. ಅದರ ಜ್ವಾಲೆಗಳು ಹಳದಿ. ಇದು ಸಮುದ್ರವು ತೊಟ್ಟ ಬಟ್ಟೆಯಂತಿದೆ. ಅನೇಕ ನದಿಗಳು ಸಮುದ್ರವನ್ನು ಸಂಧಿಸುತ್ತವೆ. ಈ ದೃಶ್ಯವನ್ನು ನೋಡುವಾಗ ಕೃಷ್ಣನದ್ದೇ ಸ್ಮರಣೆ ಬರುತ್ತದೆ. ಕೃಷ್ಣನೂ ನೀಲಬಣ್ಣದವನು. ಪೀತಾಂಬರವನ್ನು ಉಟ್ಟವನು. ಅನೇಕ ನಾರಿಯರ ಜೊತೆಗಿದ್ದು ಅವರನ್ನು ಸಂತೋಷಪಡಿಸುವವನು.

<u>ಸಂದೇಶ</u> : **ತನಗೆ ಆಶ್ರಯ ಕೊಟ್ಟವರಿಗೆ ದೇವರು ತನ್ನ ಸಾದೃಶ್ಯವನ್ನು ಕೊಡುವನು.**

ವರ್ತ್ಮನೀತ್ಥಂ ವಾರಿರಾಶಿಂ ವರ್ಣಯಂತೋ ಮುನೀಶ್ವರಾಃ ।
ಸಮೇತ್ಯ ತಾಂ ದ್ವಾರವತೀಂ ಮುದಾ ಕೃಷ್ಣಮುಪಾಸತೇ ॥ ೬೧ ॥

ಮುನಿಃ=ಋಷಿಗಳಿಗೆ: ಈಶ್ವರಾಃ=ಒಡೆಯನು: ವರ್ತ್ಮನಿ=ದಾರಿಯಲ್ಲಿ: ಇತ್ಥಂ=ಈ ರೀತಿಯಾಗಿ: ವಾರಿ=ನೀರುಗಳ: ರಾಶಿಂ=ರಾಶಿಯನ್ನು: ವರ್ಣಯಂತಃ=ಹೊಗಳುತ್ತಾ: ತಾಂ=ಆ: ದ್ವಾರವತೀಂ=ದ್ವಾರಕೆಯನ್ನು: ಸಮೇತ್ಯ=ಹೊಂದಿ: ಮುದಾ=ಆನಂದದಿಂದ: ಕೃಷ್ಣಂ=ಕೃಷ್ಣನನ್ನು: ಉಪಾಸತೇ=ಸೇವಿಸುತ್ತಾರೆ.

ಕೃಷ್ಣನು ದ್ವಾರಕೆಯಲ್ಲಿದ್ದಾನೆ. ಆತನ ಸೇವೆಗಾಗಿ ಬಹಳ ಋಷಿಗಳು ಬಂದರು. ಸಮುದ್ರವನ್ನು ದಾಟಿ ಬರಬೇಕು. ಮೊದಲು ಈ ಸಮುದ್ರವನ್ನು ಈ ಹಿಂದೆ ಹೇಳಿದಂತೆ ಹೊಗಳಿದರು. ಅನಂತರ ದ್ವಾರಕೆಯೊಳಗೆ ಪ್ರವೇಶಿಸಿದರು. ಅಲ್ಲಿ ಶ್ರೀಕೃಷ್ಣನ ಸೇವೆಯನ್ನು ಚೆನ್ನಾಗಿ ಮಾಡಿದರು. ಆನಂದದಿಂದ ದಿನಗಳನ್ನು ಕಳೆದರು.

ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಷೋಡಶಃ ॥ ೬೨ ॥

॥ ಇತಿ ಷೋಡಶಃ ಸರ್ಗಃ ॥

# ॥ ಅಥ ಸಪ್ತದಶಃ ಸರ್ಗಃ ॥

**ಸ್ವಭಜಕಾಬ್ಜಕುಲೋದಯ ಹೇತವೇ ಜಲನಿಧೌ ವರಭೋಗಿನಿಕೇತನೇ ।**
**ಭವಮಹಾನಲ ಮುಕ್ತ ಭಯಾನುಗಚ್ಛವಿಪದೇಽವಿಪದೇ ಲಸತೇ ನಮಃ ॥ ೧ ॥**

ಸ್ವ=ತನ್ನ; ಭಜಕ=ಭಕ್ತರಾದ; ಅಬ್ಜ=ಬ್ರಹ್ಮರ; ಕುಲ=ವಂಶಕ್ಕೆ; ಹೇತವೇ=ಕಾರಣನಾದ; ಭವ=ಸಂಸಾರವೆಂಬ; ಮಹಾ=ದೊಡ್ಡ; ಅನಲ=ಬೆಂಕಿಯಿಂದ; ಮುಕ್ತ=ದೂರವಾದ; ಭಯ ವುಳ್ಳ; ಅನುಗ=ಸೇವಕರ; ಛವಿ=ಕಾಂತಿಗೆ; ಪದೇ=ಆಶ್ರಯನಾದ; ಅವಿಪದೇ= ಆಪತ್ತು ಗಳಿಂದ ರಹಿತನಾದ; ಜಲ=ನೀರಿನ; ನಿಧೌ=ಆಶ್ರಯದಲ್ಲಿ; ವರ=ಉತ್ತಮನಾದ; ಭೋಗಿ= ಶೇಷನೆಂಬ; ನಿಕೇತನೇ=ಮನೆಯಲ್ಲಿ; ಲಸತೇ=ಶೋಭಿಸುವ ದೇವನಿಗೆ; ನಮಃ= ನಮಸ್ಕಾರವು.

ಸ್ವ=ತನ್ನ; ಭಜಕ=ಭಕ್ತನಾದ; ಅಬ್ಜ=ಚಂದ್ರನ; ಕುಲ=ವಂಶದ; ಉದಯ=ಅಭಿವೃದ್ಧಿಗೆ; ಹೇತವೇ=ಕಾರಣನಾದ; ಜಲ=ನೀರಿನಲ್ಲಿ; ನಿಧೌ=ಇರುವ ದ್ವಾರಾವತಿಯಲ್ಲಿ; ವರ= ಶ್ರೇಷ್ಠರಾದ; ಭೋಗಿ=ಸುಖಿಗಳಾದ ಜನರಿಗೆ; ನಿಕೇತನೇ=ಆಶ್ರಯನಾದ; ಭವ=ಉಂಟಾದ; ಮಹಾ=ದೊಡ್ಡ; ಅನಲ=ಬೆಂಕಿಯಿಂದ; ಮುಕ್ತ=ಬಿಡುಗಡೆಯಾದ; ಭಯ=ಭಯವುಳ್ಳ; ಅನುಗ=ಸೇವಕರ; ಛವಿ=ಶೋಭೆಗೆ; ಪದೇ=ಆಶ್ರಯನಾದ; ವಿ=ಗರುಡನಲ್ಲಿ; ಪದೇ= ಚರಣವುಳ್ಳ; ಲಸತೇ=ಶೋಭಿಸುವ ಕೃಷ್ಣನಿಗೆ; ನಮಃ=ನಮಸ್ಕಾರಗಳು.

ಈ ಸರ್ಗದಲ್ಲಿ ೨೪ನೇ ಶ್ಲೋಕದವರೆಗೆ ಕೃಷ್ಣಕಥೆಯನ್ನು ಹಾಗೆಯೇ ಬೇರೆಬೇರೆ ಅವತಾರಗಳ ಚರಿತ್ರೆಯನ್ನೂ ಜೊತೆಜೊತೆಯಾಗಿ ಹೇಳುತ್ತಾರೆ.

ಆರಂಭದಲ್ಲಿ ಮೂಲರೂಪವನ್ನೂ ಕೃಷ್ಣನನ್ನೂ ವರ್ಣಿಸುತ್ತಾರೆ.

ಮೂಲರೂಪದ ವರ್ಣನೆ ಈ ರೀತಿ ಇದೆ –ಬ್ರಹ್ಮನಿಗೆ ಅಬ್ಜ ಎಂದು ಹೆಸರು. ಆತನು ನೀರಿನಿಂದ ಹುಟ್ಟಿದವನು. ಈತನಿಗೆ ಋಜು ಎಂದು ಹೆಸರಿದೆ. ಇವರದ್ದು ನೂರು ಜನರ ಒಂದು ಗುಂಪು. ಇದಕ್ಕೆ ಋಜುಗಣ ಎಂದು ಹೆಸರು. ಇವರು ದೇವರ ಭಾರೀ ಭಕ್ತರು. ಇವರು ಒಬ್ಬೊಬ್ಬರಾಗಿಯೇ ಒಂದೊಂದು ಕಲ್ಪದಲ್ಲಿ ದೇವರ ಉದರದಿಂದ ಹೊರಬಂದ ಕಮಲದಲ್ಲಿ ಕಾಣಿಸಿಕೊಳ್ಳುವರು. ಇವರ ಎಲ್ಲಾ ರೀತಿಯ ಅಭಿವೃದ್ಧಿಯನ್ನು ನಾರಾಯಣನೇ ಮಾಡುವನು. ಇವನ ಮೂರು ಕಡೆಯ ಮನೆಗಳಲ್ಲಿ ಒಂದು ಶ್ವೇತದ್ವೀಪ. ಇಲ್ಲಿ ಈತನು ಶೇಷನ ಮೇಲೆ ಪವಡಿಸಿರುತ್ತಾನೆ. ಯಾರು ಈತನ ಸಹಜ ಭಕ್ತರೋ ಅವರಿಗೆ ಇರುವ ಸಂಸಾರ ಎಂಬ ಅಗ್ನಿಯನ್ನು ನಾಶಮಾಡುತ್ತಾನೆ. ಸ್ವರೂಪದಲ್ಲಿ

ಇರುವ ಪ್ರಕಾಶವನ್ನು ಅನುಭವಿಸುವಂತೆ ಮಾಡುತ್ತಾನೆ. ತಾನು ಯಾವುದೇ ರೀತಿಯ ಆಪತ್ತುಗಳಿಗೆ ಒಳಗಾಗುವುದಿಲ್ಲ. ಇಂತಹ ನಾರಾಯಣನಿಗೆ ನಮಸ್ಕಾರವು.

ಕೃಷ್ಣಾವತಾರದ ವರ್ಣನೆ– ಬ್ರಹ್ಮನಿಗೆ ಇದ್ದಂತೆ ಚಂದ್ರನಿಗೂ ಅಬ್ಜ ಎಂಬ ಹೆಸರಿದೆ. ಸಮುದ್ರಮಥನ ಕಾಲದಲ್ಲಿ ಚಂದ್ರನು ಸಮುದ್ರದಿಂದ ಹುಟ್ಟಿದವನು. ಆದ್ದರಿಂದ ಚಂದ್ರನೂ ಅಬ್ಜನು. ಇವನ ವಂಶದಲ್ಲಿ ಕೃಷ್ಣನು ಅವತರಿಸಿದನು. ಈ ಚಂದ್ರನು ಕೃಷ್ಣನ ಭಕ್ತನು. ಇಲ್ಲಿ ಅವತರಿಸಿ ಇಡೀ ಚಂದ್ರವಂಶಕ್ಕೆ ಮಹತ್ವವನ್ನು ಕೊಟ್ಟನು. ಕೃಷ್ಣನು ಸಮುದ್ರದ ಮಧ್ಯದಲ್ಲಿ ದ್ವಾರಕೆಯನ್ನು ನಿರ್ಮಿಸಿದ್ದನು. ಇಲ್ಲಿರುವ ಯಾದವರು ಬಹಳ ಸುಖಿಗಳು. ಸುಖಿಗಳನ್ನು ಭೋಗಿಗಳು ಎಂದು ಕರೆಯುವುದುಂಟು. ಹೀಗಿದ್ದರೂ ಇವರಿಗೆ ಒಮ್ಮೆ ಒಂದು ದೊಡ್ಡ ಆಪತ್ತು ಬಂದಿತ್ತು. ಕಾಶಿಯಲ್ಲಿದ್ದ ಒಬ್ಬ ದುಷ್ಟ ರಾಜನು ರುದ್ರನನ್ನು ಒಲಿಸಿ ಆತನಿಂದ ಒಂದು ಅಗ್ನಿಯನ್ನು ಪಡೆದಿದ್ದನು. ಅದನ್ನು ದ್ವಾರಕೆಯ ನಾಶಕ್ಕಾಗಿ ಕಳಿಸಿದನು. ಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಆ ಅಗ್ನಿಯನ್ನು ಸಂಹರಿಸಿದನು. ಯಾದವರನ್ನು ಕಾಪಾಡಿದನು. ತಾನು ವಿಪತ್ ಆಗಿ ದ್ವಾರಕೆಯಲ್ಲಿ ಶೋಭಿಸಿದನು. ವಿಪತ್: ವಿ=ಗರುಡ. ಆತನಲ್ಲಿ ಪತ್=ಚರಣವುಳ್ಳವನು ಎಂದರ್ಥ. ತುರ್ತಾಗಿ ಹೋಗಬೇಕಾದ ಪ್ರಸಂಗ ಬಂದರೆ ತಾನು ಗರುಡನ ಮೇಲೇರಿ ಸಂಚರಿಸುವವನು ಎಂದು ಒಟ್ಟಭಿಪ್ರಾಯ.

ಈ ರೀತಿಯಾಗಿ ಮುಂದಿನ ಶ್ಲೋಕಗಳು ಎರಡೆರಡು ಅವತಾರಗಳನ್ನು ವರ್ಣಿಸುತ್ತವೆ.

**ಕುಶಕೃತಸ್ಥಲಸಿದ್ಧಪುರೀಶ್ವರಂ ಕಠಿನತತ್ವಗತಿ ಶ್ರಮದಾಯುಧಮ್ ।**
**ಜನಕಕರ್ದಮ ಶೋಭಿ ಗೃಹಾಂಗಣೇ ಮುನಿಜನಾ ನಿಜನಾಥಮಮುಂ ಜಗುಃ॥ ೨ ॥**

ಕುಶ=ದರ್ಭೆಗಳಿಂದ; ಕೃತ=ಮಾಡಲ್ಪಟ್ಟ; ಸ್ಥಲ=ಸ್ಥಳವಾದ; ಸಿದ್ಧಪುರೀ=ಸಿದ್ಧಪುರೀ ಎಂಬ ಊರಿಗೆ; ಈಶ್ವರಂ=ಒಡೆಯನಾದ; ಕಠಿನ=ಕ್ಲಿಷ್ಟಗಳಾದ; ತತ್ವ=ತತ್ವಗಳ; ಗತಿ= ತಿಳುವಳಿಕೆಗೆ; ಶ್ರಮ=ದುಃಖವನ್ನು; ದ=ನಾಶಮಾಡುವ; ಆಯುಧಂ=ಆಯುಧರೂಪನಾದ; ಜನಕ=ಪ್ರಜಾಪತಿಯಾದ; ಕರ್ದಮ=ಕರ್ದಮನ; ಶೋಭಿ=ಶೋಭಿಸುವ; ಗೃಹ=ಮನೆಯ; ಅಂಗಣೇ=ಅಂಗಳದಲ್ಲಿ; ಮುನಿಜನಾ=ಮುನಿಜನರು; ನಿಜ=ತನ್ನ; ನಾಥಂ=ಒಡೆಯನಾದ; ಅಮುಂ=ಇವನನ್ನು; ಜಗುಃ=ಹೊಗಳಿದರು.

ಕುಶ=ಕುಶನಿಂದ; ಕೃತ=ರಚಿತವಾದ; ಸ್ಥಲ=ಜಾಗದಲ್ಲಿ; ಸಿದ್ಧ=ತಯಾರಾದ; ಪುರೀ=ಪಟ್ಟಣಕ್ಕೆ; ಈಶ್ವರಂ=ಒಡೆಯನಾದ; ಕಠಿನತ=ದಪ್ಪವಾದ; ತ್ವಕ್=ಚರ್ಮಕ್ಕೆ; ಅತಿ=ಬಹಳ; ಶ್ರಮ=ಶ್ರಮವನ್ನು; ದ=ಕೊಡುವ; ಆಯುಧಂ=ಆಯುಧವುಳ್ಳ; ಜನಕ= ತಂದೆಯ; ಕರ್ದಮ=ಕೆಸರಿನಿಂದ; ಶೋಭಿ=ಶೋಭಿಸುವ; ಗೃಹ=ಮನೆಯ; ಅಂಗಣೇ= ಅಂಗಳದಲ್ಲಿ; ಮುನಿಜನಾಃ, ನಿಜನಾಥಂ, ಅಮುಂ, ಜಗುಃ

ಕಪಿಲಾವತಾರದ ವರ್ಣನೆ– ದೇವರು ಕರ್ದಮಪ್ರಜಾಪತಿಗೆ ಮಗನಾಗಿ ಅವತರಿಸಿದವನು. ಈತನ ಹೆಸರು ಕಪಿಲ ಎಂದು. ಈತನ ವಾಸಸ್ಥಳ ಸಿದ್ಧಪುರೀ. ಅಂದರೆ ಮಾತೃಗಯಾ. ಈತನದ್ದು ಹಾಗೂ ಕರ್ದಮನದ್ದು ಋಷಿಜೀವನ. ಆದ್ದರಿಂದ ತಮ್ಮ ಆಶ್ರಮದ ಸುತ್ತ ದರ್ಭೆಗಳನ್ನು ಬೆಳೆಸಿದ್ದಾರೆ. ಈ ದರ್ಭೆಗಳಿಂದ ಯಾಗಾದಿಗಳನ್ನು ಮಾಡಲು ಅನುಕೂಲವಾಗುತ್ತದೆ. ಇಂತಹ ಸಿದ್ಧಪುರಿಯಲ್ಲಿರುವ ಮುನಿಗಳಿಗೆ ಒಡೆಯನಾಗಿದ್ದಾನೆ. ತನ್ನ ತಾಯಿಯಾದ ದೇವಹೂತಿಗೆ ತತ್ವವನ್ನು ಉಪದೇಶಿಸಿದನು. ಈ ತತ್ವಗಳ ತಿಳುವಳಿಕೆಯು ಅಷ್ಟು ಸುಲಭವೇನಲ್ಲ. ಎಷ್ಟು ಹೇಳಿದರೂ ಅರ್ಥವಾಗದು. ಅಥವಾ ವಿಪರೀತವಾಗಿ ಅರ್ಥವಾಗಬಹುದು. ಇದರಿಂದಾಗಿ ಬಹಳ ಶ್ರಮವಾಗುವ ಸಂದರ್ಭ ಇದೆ. ತತ್ವವನ್ನು ಸರಿಯಾಗಿ ತಿಳಿಯದೆ ಉಪದೇಶಿಸಿದರೆ ಆಗ ಮಾತ್ರ ಇಂತಹ ಶ್ರಮವಾಗುವುದು. ಕಪಿಲನು ಸರ್ವಜ್ಞನು. ಈತನ ಉಪದೇಶವನ್ನು ಕೇಳಿದವರಿಗೆ ಎರಡೂ ರೀತಿಯ ಶ್ರಮವಾಗುವುದಿಲ್ಲ. ಅಂತಹ ಶ್ರಮವನ್ನು ಪರಿಹರಿಸುವುದರಲ್ಲಿ ಆಯುಧದಂತೆ ಇರುವವನು. ಇವನ ಉಪದೇಶವನ್ನು ಕೇಳಿದ ತಾಯಿಯು ಎಲ್ಲಾರೀತಿಯ ಸಾಂಸಾರಿಕ ಶ್ರಮವನ್ನು ಪರಿಹರಿಸಿಕೊಂಡಳು. ತಾನು ನದಿಯಾಗಿ ಹರಿದಳು. ಕಪಿಲನ ಅವತಾರದ ಅನಂತರ ತಂದೆ ಕರ್ದಮಪ್ರಜಾಪತಿಯು ಆಶ್ರಮವನ್ನು ತ್ಯಜಿಸಿ ಹೋಗಿದ್ದರು. ಕಪಿಲನು ಅವರ ಆಶ್ರಮದ ಅಂಗಳದಲ್ಲಿ ವಾಸವಾಗಿದ್ದನು. ಏಕಾಕಿಯಾಗಿರುವ ಇವನ ಬಳಿಗೆ ಎಲ್ಲಾ ಋಷಿಗಳೂ ಬಂದರು. ತಮ್ಮ ಒಡೆಯನಾದ ತನ್ನನ್ನು ಯಥೇಚ್ಛವಾಗಿ ಹೊಗಳಿದರು.

ಕೃಷ್ಣಾವತಾರದ ವರ್ಣನೆ– ಕುಶ ಎಂಬ ಹೆಸರಿನ ಒಬ್ಬ ದೈತ್ಯನಿದ್ದನು. ಆತನ ರಾಜ್ಯ ಈಗಿನ ದ್ವಾರಕೆಯ ಸ್ಥಳದಲ್ಲಿತ್ತು. ಆತನೇ ನಿರ್ಮಾಣಮಾಡಿದ ಪಟ್ಟಣ. ಆದ್ದರಿಂದ ಅದಕ್ಕೆ ಕುಶಸ್ಥಲೀ ಎಂದು ಹೆಸರಿತ್ತು. ದೇವರು ತನ್ನ ತ್ರಿವಿಕ್ರಮಾವತಾರದಲ್ಲಿ ಆ ಅಸುರನನ್ನು ಕೊಂದನು. ಈತನಿಗೆ ರುದ್ರದೇವರ ವರವಿತ್ತು. ಏನೆಂದರೆ ದೇಹದ ಅಂಗಗಳು ತುಂಡಾಗಿ ಕೆಳಗೆ ಬಿದ್ದರೆ ಪುನಃ ಅಂಗಗಳು ಚಿಗುರಲಿ ಎಂದು. ರುದ್ರನ ಮಾತಿಗೆ ಗೌರವ ಕೊಡುವ ಸಲುವಾಗಿ ತ್ರಿವಿಕ್ರಮನೂ ಅದೇ ರೀತಿ ಆಗುವಂತೆ ಮಾಡಿದನು. ಇದು ತ್ರಿವಿಕ್ರಮನ ಲೀಲೆ. ಈ ರೀತಿ ಎಷ್ಟು ಹೊಡೆದರೂ ಕುಶನ ಅಂಗಗಳು ಚಿಗುರಿದವು. ಕೊನೆಗೆ ತ್ರಿವಿಕ್ರಮನು ಶೇಷನ ಕೈಯ ನೇಗಿಲಿನಿಂದ ಭೂಮಿಯನ್ನು ಅಗೆದನು. ಒಂದು ತೋಡನ್ನು ನಿರ್ಮಿಸಿದನು. ಅದರಲ್ಲಿ ಕುಶನನ್ನು ಮಲಗಿಸಿ ಅವನ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಿದನು. ಈ ಕುಶನು ಎಷ್ಟು ಶಿವಭಕ್ತನಾಗಿದ್ದನೆಂದರೆ ತಾನು ಎದ್ದರೆ ಎಲ್ಲಿ ಶಿವಲಿಂಗವು ಉರುಳುತ್ತೋ ಎಂಬ ಭಯದಿಂದ ಹಾಗೆಯೇ ಮಲಗಿದನು. ಅಲ್ಲೇ ಸತ್ತನು. ತ್ರಿವಿಕ್ರಮನ ಕೈಯಲ್ಲಿರುವ ಆ ಆಯುಧವೇ ಕೃಷ್ಣನ ಕೈಯಲ್ಲಿ ಇರುವುದು. ಆದ್ದರಿಂದ ಕೃಷ್ಣನು ಕುಶನ ಕಠಿಣವಾದ ತ್ವಕಿಗೆ ಅಂದರೆ ಚರ್ಮಕ್ಕೆ ಬಹಳ ಶ್ರಮವನ್ನು

ಕೊಡುವ ಆಯುಧವುಳ್ಳವನು. ಕೃಷ್ಣನು ಬಾಲ್ಯದಲ್ಲಿ ನಂದಗೋಪನ ಮನೆಯ ಅಂಗಳದಲ್ಲಿ ಆಡುತ್ತಿದ್ದನು. ನಂದಗೋಪನ ಅಂಗಳವನ್ನು ಸೇವಕರು ಪ್ರತಿದಿನ ಸೆಗಣಿಯಿಂದ ಸಾರಿಸುತ್ತಿದ್ದರು. ಇಂತಹ ಸೆಗಣಿಯ ಕೆಸರಿನಿಂದ ಕೂಡಿದ ಅಂಗಳದಲ್ಲಿರುವ ಕೃಷ್ಣನನ್ನು ಮುನಿಗಳು ಪ್ರತಿದಿನವೂ ಬಂದು ಬಾಯಿತುಂಬಾ ಮನಃಪೂರ್ವಕವಾಗಿ ಹೊಗಳುತ್ತಿದ್ದರು.

**ಯಮಜನಿಂ ಭಜ ತಾಪಸವಿಗ್ರಹಂ ಪ್ರಕಟಿತಂ ನಿಜಚಿದ್ಘನಮೂರ್ತಿತಃ ।**
**ನರಧೃತಂ ಗಿರಿಮೂರ್ಧನಿ ಯತ್ಪದಂ ವಿಲಸತೇ ಲಸತೇಡ್ಯನಖೇಂದುನಾ ॥ ೩ ॥**

ನರ=ನರನಿಂದ; ಧೃತಂ=ಧರಿಸಲ್ಪಟ್ಟ; ಲಸತಾ=ಶೋಭಿಸುವ; ಈಡ್ಯ=ಸ್ತುತ್ಯವಾದ; ನಖ=ಉಗುರೆಂಬ; ಇಂದುನಾ=ಚಂದ್ರನಿಂದ; ಗಿರಿ=ಬೆಟ್ಟದ; ಮೂರ್ಧನಿ=ಶಿಖರದಲ್ಲಿ; ಯತ್=ಯಾರ; ಪದಂ=ಸ್ವರೂಪವು; ವಿಲಸತೇ=ಶೋಭಿಸುತ್ತದೋ; ತತ್=ಅಂತಹ; ನಿಜ=ತನ್ನ; ಚಿತ್=ಜ್ಞಾನದಿಂದ; ಘನ=ನಿಬಿಡವಾದ; ಮೂರ್ತಿತಃ=ಮೂರ್ತಿಯಿಂದ; ಪ್ರಕಟಿತಂ=ಕಾಣಿಸಿಕೊಂಡ; ತಾಪಸ=ಋಷಿಯ; ವಿಗ್ರಹ=ಶರೀರವುಳ್ಳ; ಯಮ=ಯಮನ; ಜನಿಂ=ಮಗನನ್ನು; ಭಜ=ಆರಾಧಿಸು.

ಯತ್=ಯಾವ ಸ್ವರೂಪವು; ಗಿರಿ=ಮಾತುಗಳಲ್ಲಿ; ಮೂರ್ಧನಿ=ತಲೆಯಲ್ಲಿ; ನರ=ಅರ್ಜುನನಿಂದ; ಧೃತಂ=ಧರಿಸಲ್ಪಟ್ಟಿದ್ದಾನೆ; ಲಸತಾ=ಶೋಭಿಸುವ; ಈಡ್ಯ=ಸ್ತುತ್ಯವಾದ; ನಖ=ಉಗುರೆಂಬ; ಇಂದುನಾ=ಚಂದ್ರನಿಂದ; ವಿಲಸತೇ=ಶೋಭಿಸುತ್ತದೋ; ಯಂ=ಯಾರನ್ನು; ಅಜನಿಂ=ಉತ್ಪತ್ತಿರಹಿತನನ್ನಾಗಿ; ಭಜತ=ಭಜಿಸುತ್ತೀರೋ; ಸಃ=ಅವನು; ನಿಜ=ತನ್ನ; ಚಿತ್=ಜ್ಞಾನದಿಂದ; ಘನ=ನಿಬಿಡವಾದ; ಮೂರ್ತಿತಃ=ಮೂಲರೂಪದಿಂದ; ಪ್ರಕಟಿತಂ=ಕಾಣಿಸಿಕೊಂಡ; ವಿಗ್ರಹಂ=ದೇಹವನ್ನು; ಆಪ=ಹೊಂದಿನು.

ದೇವರು ಯಮಧರ್ಮನಿಗೆ ನಾರಾಯಣ ಎಂಬ ರೂಪದಿಂದ ಅವತರಿಸಿದ್ದಾನೆ. ಅದನ್ನು ಕೃಷ್ಣಾವತಾರದಲ್ಲಿ ಜೊತೆಯಲ್ಲಿ ವರ್ಣಿಸುತ್ತಾರೆ. ಯಮಧರ್ಮನ ಪತ್ನಿಯ ಹೆಸರು ಮೂರ್ತಿ ಎಂದು. ಇವಳಲ್ಲಿ ದೇವರ ಬಗ್ಗೆ ಬಹಳ ತಿಳುವಳಿಕೆ ಇದೆ. ಯಮನು ಇವಳಲ್ಲಿ ದೇವರನ್ನು ಮಗನನ್ನಾಗಿ ಪಡೆದನು. ಭಗವಂತನು ಈ ಅವತಾರದಲ್ಲಿ ಋಷಿಯ ವೇಷವನ್ನು ತೊಟ್ಟಿದ್ದನು. ಅವತಾರದ ಅನಂತರ ಬದರಿಕಾಶ್ರಮದಲ್ಲಿ ವಾಸವಾಗಿದ್ದನು. ಇವನ ಜೊತೆಗೆ ಶೇಷನು ನರರೂಪದಿಂದ ಹುಟ್ಟಿದನು. ಈ ನರನು ನಾರಾಯಣನ ಸೇವೆ ಮಾಡಿಕೊಂಡು ಬದರಿಕಾಶ್ರಮದಲ್ಲೇ ಇದ್ದಾನೆ. ಈ ನಾರಾಯಣನ ದೇಹವು ಬಹಳ ತೇಜೋಮಯ ಎಂಬುದನ್ನು ಸ್ಥಾಲೀಪುಲಾಕ ನ್ಯಾಯದಿಂದ ತಿಳಿಸುತ್ತಾರೆ. ಅಂದರೆ ಪಾತ್ರೆಯಲ್ಲಿರುವ ಅನ್ನ ಬೆಂದಿದೆಯೇ ಎಂದು ತಿಳಿಯಲು ಒಂದು ಅಗಳನ್ನು ನೋಡಿದರೆ ಸಾಕು. ಅದೇ ರೀತಿ ವಾದಿರಾಜರು ಈ ನಾರಾಯಣನ ಒಂದು ಉಗುರನ್ನು ವರ್ಣಿಸುವ ಮೂಲಕ ದೇಹದ ಪ್ರಕಾಶವನ್ನು ತಿಳಿಸುತ್ತಾರೆ. ಶುಭ್ರವಾದ ಅರ್ಧಚಂದ್ರನು ಕೆಳಮುಖನಾಗಿ ಇರುವಂತೆ ಈ ಉಗುರು ಇದೆ. ಶುಭ್ರವಾಗಿದೆ. ಈ ಅವತಾರದ

ತಂದೆತಾಯಿಗಳ ಹೆಸರು, ಅವತಾರದ ಜಾಗ, ಈ ಅವತಾರದ ಸ್ವರೂಪ, ದೇಹದ ಕಾಂತಿ, ಅನುಚರರ ಸೇವಾಕ್ರಮ ಇವೆಲ್ಲವನ್ನೂ ವರ್ಣಿಸಿದ್ದಾರೆ. ಇಂತಹ ರೂಪವನ್ನು ಭಜಿಸಬೇಕೆಂದು ಇತರ ಋಷಿಗಳು ಒಬ್ಬ ಋಷಿಗೆ ಹೇಳುತ್ತಾರೆ.

ಇದೇ ಶ್ಲೋಕದಲ್ಲಿ ಕೃಷ್ಣಾವತಾರವನ್ನು ವರ್ಣಿಸುತ್ತಾರೆ– ಕೃಷ್ಣನ ದೇಹವು ಪಾಂಚಭೌತಿಕವಲ್ಲ. ಮೂಲರೂಪದ ಕೃಷ್ಣ ಕೇಶವು ವಸುದೇವದೇವಕಿಯರ ಮೂಲಕ ಸಮಾಜಕ್ಕೆ ಕಾಣಿಸಿಕೊಂಡಿತು. ಮೂಲರೂಪವು ಜ್ಞಾನದಿಂದ ನಿಬಿಡವಾಗಿದೆ. ದೇವರಿಗೂ ಆತನ ಅವಯವಗಳಿಗೂ ಯಾವ ಭೇದವೂ ಇಲ್ಲ. ಆದ್ದರಿಂದ ದೇವರ ಕೂದಲೂ ಜ್ಞಾನಮಯ. ಅದೇ ಕೂದಲು ಕೃಷ್ಣರೂಪವಾದ್ದರಿಂದ ಕೃಷ್ಣನೂ ಜ್ಞಾನಮಯ. ಜೀವರಿಗೆ ಉತ್ಪತ್ತಿ ಇದೆ. ದೇವರಿಗೆ ಉತ್ಪತ್ತಿ ಇಲ್ಲ. ಆತನನ್ನು ಅಜನಿ=ಜನಿ ಇಲ್ಲದವನು ಎಂದು ಭಜಿಸುತ್ತಾರೆ. ಈತನಿಗೆ ನಮ್ಮಂತೆ ಹುಟ್ಟು ಇಲ್ಲ ಎಂಬುದಕ್ಕೆ ಇಂದ್ರನ ಅವತಾರನಾದ ನರನ ಆವೇಶದಿಂದ ಕೂಡಿದ ಅರ್ಜುನನೇ ಸಾಕ್ಷಿ. ಈತನು ಕೃಷ್ಣನ ವಿಶ್ವರೂಪವನ್ನು ಕಂಡವನು. ಮಾತಿನ ಮೂಲಕ ಬಹಳ ಹೊಗಳಿದವನು. ಮನಸ್ಸಿನಲ್ಲಿ ಸದಾ ಇವನನ್ನೇ ಧ್ಯಾನಿಸಿದವನು. ಭೌತಿಕ ದೇಹದವರಿಗೆ ವಿಶ್ವರೂಪ ಪ್ರದರ್ಶನದ ಶಕ್ತಿ ಇರುವುದಿಲ್ಲ. ನಾರಾಯಣ ರೂಪದಂತೆ ಕೃಷ್ಣರೂಪವೂ ಬಹಳ ಕಾಂತಿಯನ್ನು ಹೊರಸೂಸುತ್ತಿದೆ. ಇಂತಹ ಕೃಷ್ಣರೂಪವನ್ನು ಭಜಿಸುವಂತೆ ಒಬ್ಬ ಋಷಿಯು ಇತರ ಋಷಿಗಳಿಗೆ ಆದೇಶಿಸುತ್ತಾರೆ.

**ವಿಮಲದತ್ತಪದಃ ಪ್ರಣತಾರ್ಜುನಾಭ್ಯುದಯಹೇತುರಮಾನವ ಯೋಗಧೃತ್ ।**
**ಹೃದಿ ಧೃತಃ ಸುಧಿಯಾ ಹ್ಯನಸೂಯಯಾ ಸಭವತಾತ್ ಭವತಾಪಹರೋ ಮಮ ॥ ೪ ॥**

ವಿಮಲ=ಸ್ವಚ್ಛವಾದ; ದತ್ತ=ದತ್ತ ಎಂಬ; ಪದ=ಹೆಸರುಳ್ಳ; ಪ್ರಣತ=ನಮಸ್ಕರಿಸಿದ; ಅರ್ಜುನ=ಅರ್ಜುನನ; ಅಭ್ಯುದಯ=ಏಳಿಗೆಗೆ; ಹೇತುಃ=ಕಾರಣನಾದ; ಅಮಾನವ=ಮಾನವರನ್ನು ಮೀರಿದ; ಯೋಗ=ಯೋಗವನ್ನು; ಧೃತ್=ಧರಿಸಿದ; ಸುಧಿಯಾ=ಒಳ್ಳೇ ಬುದ್ಧಿವುಳ್ಳ; ಅನಸೂಯಯಾ=ಅನಸೂಯೆಯಿಂದ; ಹೃದಿ=ಗರ್ಭದಲ್ಲಿ; ಧೃತಃ=ಧರಿಸಲ್ಪಟ್ಟ; ಸಃ=ಅವನು; ಮಮ=ನನಗೆ; ಭವ=ಸಂಸಾರದ; ತಾಪ=ದುಃಖವನ್ನು; ಹರಃ=ಪರಿಹರಿಸುವವನು; ಭವತಾತ್=ಆಗಲಿ.

ವಿಮಲ=ನಿರ್ಮಲರಿಗೆ; ದತ್ತ=ಕೊಡಮಾಡಿದ; ಪದಃ=ಜಾಗವುಳ್ಳ; ಪ್ರಣತ=ವಿನೀತನಾದ; ಅರ್ಜುನ=ಅರ್ಜುನನ; ಅಭ್ಯುದಯ=ಉನ್ನತಿಗೆ; ಹೇತುಃ=ಕಾರಣನಾದ; ಅಮಾನ=ಮಿತಿ ಇಲ್ಲದ; ವಯಃ=ಪಕ್ಷಿಗಳುಳ್ಳ; ಅಗ=ಪರ್ವತವನ್ನು; ಧೃತ್=ಧರಿಸಿದ; ಅನಸೂಯಯಾ=ಮತ್ಸರ ಇಲ್ಲದ; ಸುಧಿಯಾ=ಒಳ್ಳೆಯ ಜ್ಞಾನದಿಂದ; ಹೃದಿ=ಹೃದಯದಲ್ಲಿ; ಧೃತಃ=ಧರಿಸಲ್ಪಟ್ಟ; ಸಃ=ಮಮ ಭವತಾಪ ಹರಃ ಭವತಾತ್.

ಈ ಶ್ಲೋಕದಲ್ಲಿ ದತ್ತಾತ್ರೇಯನನ್ನೂ ಕೃಷ್ಣನನ್ನೂ ವರ್ಣಿಸುತ್ತಾರೆ– ದತ್ತನು ಅತ್ರಿಋಷಿಯಿಂದ ಅನುಸೂಯಾಳಲ್ಲಿ ಅವತರಿಸಿದನು. ಹೆಸರು ದತ್ತ ಎಂದು. ಅತ್ರಿಯ ಮಗನಾದ್ದರಿಂದ ಆತ್ರೇಯ. ಒಟ್ಟಿಗೆ ದತ್ತಾತ್ರೇಯ. ದತ್ತಾತ್ರೇಯ ಎಂದಾಗ ನಮ್ಮ ತಲೆಗೆ ಒಂದು ಅಶಾಸ್ತ್ರೀಯವಾದ ಚಿತ್ರವು ಬರುತ್ತದೆ– ಮೂರು ತಲೆ, ನಾಲ್ಕು ನಾಯಿಗಳು. ಇನ್ನೂ ಏನೇನೋ.. ಅದಾವುದೂ ಅಲ್ಲ. ಕೇವಲ ಒಂದು ತಲೆಯ ರೂಪ. ತಾಯಿಯಾದರೂ ಹೆಸರೇ ಹೇಳುವಂತೆ ಅಸೂಯಾರಹಿತಳು. ನಿರ್ಮಲವಾದ ಮನಸ್ಸುಳ್ಳವಳು. ಈಕೆಯು ಅತ್ರಿಯಿಂದ ಗರ್ಭವನ್ನು ಧರಿಸಿದಳು. ಗರ್ಭದಲ್ಲಿ ಭಗವಂತನು ಸೇರಿಕೊಂಡನು. ಮಾನವರಂತೆ ಒಂಬತ್ತು ತಿಂಗಳು ಇದ್ದು ಅವತರಿಸಿದನು. ಯದುವಂಶದಲ್ಲಿ ಬಂದ ಕಾರ್ತವೀರ್ಯಾರ್ಜುನನು ಈತನ ಪರಮಭಕ್ತನು. ಯಯಾತಿ ರಾಜನ ಶಾಪದಿಂದಾಗಿ ಯದುವಂಶದವರಿಗೆ ರಾಜ್ಯ ಇಲ್ಲ. ಆದರೂ ಈತನು ರಾಜನು ಮಾತ್ರವಲ್ಲ, ಚಕ್ರವರ್ತಿಯಾಗಿಯೇ ಮೆರೆದನು. ಇದನ್ನು ಆಚಾರ್ಯಮಧ್ವರೇ ಹೇಳುತ್ತಾರೆ. ಅಷ್ಟೂ ಅನುಗ್ರಹವಿತ್ತು ಇವನ ಮೇಲೆ ದತ್ತಾತ್ರೇಯನದ್ದು. ಸಾತ್ವಿಕರ ಮನಸ್ಸು ದೇವರ ಜೊತೆ ಹೊಂದಿಕೊಳ್ಳಲು ಬೇಕಾದ ಯೋಗಾಭ್ಯಾಸ ಪ್ರವರ್ತಕನೂ ಆಗಿದ್ದನು. ವಿಶೇಷವಾಗಿ ಇದು ಮಾನವೀಯತೆಯನ್ನು ಮೀರಿದ ದೇವತೆಗಳಿಗೆ ಸಂಬಂಧಿಸಿದ್ದು. ಈ ಶ್ಲೋಕದಲ್ಲಿ ದೇವರ ಅವತಾರದ ಹೆಸರು, ತಾಯಿಯ ಹೆಸರು, ಕೆಲಸ, ಈತನ ಭಕ್ತನ ಹೆಸರು ಇಷ್ಟನ್ನು ತಿಳಿಸಿದಂತಾಯಿತು.

ಕೃಷ್ಣಾವತಾರದ ವರ್ಣನೆ– ಕೃಷ್ಣನ ದ್ವಾರಕೆಗೆ ಎಲ್ಲರಿಗೂ ಪ್ರವೇಶವಿಲ್ಲ. ಈ ಬಗ್ಗೆ ಹರಿವಂಶದಲ್ಲಿ ಒಂದು ಮಾತಿದೆ– 'ಸಾಮುದ್ರಿತಾ ಪ್ರವೇಷ್ಟವ್ಯ ಯಾವದಾಗಮನಂ ಮಮ' ಚಕ್ರಶಂಖಧಾರಣೆ ಮಾಡದವರು ದ್ವಾರಕೆಯನ್ನು ಪ್ರವೇಶಿಸಬಾರದು ಎಂದು. ಈ ರೀತಿ ನಿರ್ಮಲರಿಗೆ ಮಾತ್ರ ಅಲ್ಲಿ ಕೃಷ್ಣನು ಸ್ಥಾನವನ್ನು ಒದಗಿಸಿದ್ದಾನೆ. ಯುದ್ಧದ ಪ್ರಸಂಗ ಮಾತ್ರವಲ್ಲದೆ, ಅನೇಕ ಸಂದರ್ಭಗಳಲ್ಲಿ ಅರ್ಜುನನು ಏನು ಮಾಡಲೂ ತೋಚದೆ ಕೃಷ್ಣನಿಗೆ ಶರಣುಬಂದಿದ್ದಾನೆ. ಆಗ ಕೃಷ್ಣನು ಆತನಿಗೆ ಸರಿದಾರಿಯನ್ನು ತೋರಿ ಆತನನ್ನು ಉದ್ಧರಿಸಿದ್ದಾನೆ. ಕೃಷ್ಣನು ಗೋಕುಲದಲ್ಲಿರುವಾಗ ಇಂದ್ರನು ಒಮ್ಮೆ ಬಹಳ ಮಳೆಗೆರೆದನು. ಆಗ ಕೃಷ್ಣನು ಗೋವರ್ಧನ ಬೆಟ್ಟವನ್ನೇ ಎತ್ತಿದನು. ಮಾಡಿನಂತೆ ಮಾಡಿದನು. ಎಲ್ಲರನ್ನೂ ಕಾಪಾಡಿದನು. ಈ ಬೆಟ್ಟವಾದರೂ ಲೆಕ್ಕವಿಲ್ಲದಷ್ಟು ಪಕ್ಷಿಗಳಿಗೆ ಪ್ರಾಣಿಗಳಿಗೆ ಆಶ್ರಯವನ್ನು ಕೊಡುತ್ತಿದೆ. ಹೀಗೆ ೫–೬ ವರ್ಷದ ಕೃಷ್ಣನು ಪ್ರಚಂಡ ಕೆಲಸವನ್ನು ಮಾಡಿದಾಗ ಎಲ್ಲರಿಗೂ ಆಶ್ಚರ್ಯ. ಈತನು ದೇವರೇ ಸೈ ಎಂದು ಉದ್ಗರಿಸಿದರು. ಯಾರೂ ಅಸೂಯೆ ಪಡಲಿಲ್ಲ. ಕೃಷ್ಣನನ್ನು ಸರಿಯಾಗಿ ತಿಳಿದರು. ಇಂತಹ ಕೃಷ್ಣನನ್ನು ಸದಾ ಹೃದಯದಲ್ಲಿ ಧ್ಯಾನಿಸಿದರು. ಹೀಗೆ ಈ ಎರಡು ರೂಪಗಳು ನಮ್ಮ ಸಂಸಾರದ ತಾಪಗಳನ್ನು ಪರಿಹರಿಸಲಿ.

**ಭರತಶಾಸ್ತ್ರವಿಶಾರದತಾಕರಂ ಪ್ರಿಯಕೃತಂ ಪಿತೃವನ್ನವಯೋಗಿನಾಮ್ ।**
**ಯಮೃಷಭಂ ಸುಮತಿರ್ಹಿ ಜಯಂತ್ಯಗಾತ್ ಸುಮಧುರಾ ಮಧುರಾಧಿಪಮಂತಿಕೇ**

**॥ ೫ ॥**

ಭರತ=ಭರತನಿಗೆ; ಶಾಸ್ತ್ರ=ಶಾಸ್ತ್ರಗಳಿಗೆ; ವಿಶಾರದತಾ=ಪ್ರಾಮಾಣ್ಯವನ್ನು; ಕರಂ=ಮಾಡಿದ; ನವ=ಒಂಭತ್ತು; ಯೋಗಿನಾಂ=ಯೋಗಿಗಳಿಗೆ; ಪಿತೃವತ್=ತಂದೆಯಂತೆ; ಪ್ರಿಯಕೃತಂ=ಇಷ್ಟವನ್ನು ಮಾಡಿದ; ಮಧುರ=ಒಳ್ಳೆಯವರಿಗೆ; ಅಧಿಪಂ=ಒಡೆಯನಾದ; ಯಂ=ಯಾವ; ಋಷಭಂ=ಋಷಭನನ್ನು; ಸುಮತಿಃ=ಒಳ್ಳೆಯ ಮನಸ್ಸುಳ್ಳ; ಸುಮಧುರಾ=ಚಂದದ; ಜಯಂತೀ=ಜಯಂತೀ ಎಂಬ ಹುಡುಗಿಯು; ಅಂತಿಕೇ=ಸಮೀಪದಲ್ಲಿ; ಅಗಾತ್=ಹೊಂದಿದಳು.

ಭರತಶಾಸ್ತ್ರ=ನಾಟ್ಯಶಾಸ್ತ್ರದಲ್ಲಿ; ವಿಶಾರದತಾ=ಪಾಂಡಿತ್ಯಕ್ಕೆ; ಆಕರಂ=ಆಶ್ರಯನಾದ; ನವ=ಹೊಸತಾಗಿ; ಯೋಗಿನಾಂ=ಉಪನೀತರಿಗೆ; ಪಿತೃವತ್=ತಂದೆಯಂತೆ; ಪ್ರಿಯಕೃತಂ=ಇಷ್ಟವನ್ನು ಮಾಡುವ; ಮಧುರಾ=ಮಧುರೆಗೆ; ಅಧಿಪಂ=ಒಡೆಯನಾದ; ಋಷಭಂ=ಶ್ರೇಷ್ಠನಾದ; ಯಂ=ಯಾರನ್ನು; ಜಯಂತೀ=ಗೆಲ್ಲುವ; ಸುಮಧುರಾ=ಒಳ್ಳೆಯ; ಸುಮತಿಃ=ಬುದ್ಧಿಯು; ಅಂತಿಕೇ=ಸಮೀಪದಲ್ಲಿ; ಅಗಾತ್=ಸೇರಿತು.

ಈ ಶ್ಲೋಕದಲ್ಲಿ ಭಗವಂತನ ಋಷಭಾವತಾರವನ್ನು ಕೃಷ್ಣಾವತಾರದಿಂದ ಕೂಡಿಕೊಂಡು ವರ್ಣಿಸುತ್ತಾರೆ– ದೇವರು ಸ್ವಾಯಂಭುಮನುವಿನ ವಂಶದಲ್ಲಿ ಋಷಭ ಎಂಬ ಹೆಸರಿನಿಂದ ಅವತರಿಸಿದನು. ಇವನ ತಂದೆಯ ಹೆಸರು ನಾಭಿ ಎಂದು. ಈ ಋಷಭನಿಗೆ ಬಹಳ ಮಕ್ಕಳಿದ್ದರು. ಇವರಲ್ಲಿ ಭರತನು ಹಿರಿಯವನು. ಇವನಿಗೆ ಸಮಗ್ರ ಶಾಸ್ತ್ರವನ್ನು ಉಪದೇಶಿಸಿದನು. ಪ್ರಾಮಾಣ್ಯವನ್ನು ಸಮರ್ಥಿಸಿದನು. ಈ ಭರತನಿಗೆ ಒಂಭತ್ತು ಜನ ಸಹೋದರರಿದ್ದರು. ಇವರಿಗೂ ಋಷಭನು ಪಿತೃಸ್ಥಾನದಲ್ಲಿದ್ದು ಒಳ್ಳೆಯದನ್ನು ಮಾಡಿದನು. ಲೋಕದ ತಂದೆಯಂತೆ ದೇವರು ಯಾರಿಗೂ ತಂದೆ ಅಲ್ಲ. ಅದಕ್ಕೆ ಪಿತೃವತ್ ಎಂದು ಹೇಳಿದ್ದು. ಈ ಒಂಭತ್ತು ಜನ ಸಹೋದರರೂ ಭರತನಂತೆ ಉತ್ತಮ ಜ್ಞಾನಿಗಳಾಗಿದ್ದರು. ಈ ಋಷಭನು ಎಲ್ಲರ ಜೊತೆಗೂ ಉತ್ತಮ ಸಂಬಂಧವನ್ನು ಹೊಂದಿದ್ದನು. ಮಧುರವಾಗಿ ವ್ಯವಹರಿಸುವವರಲ್ಲಿ ಉತ್ತಮನಾಗಿದ್ದನು. ಈ ಋಷಭನ ಪತ್ನಿಯ ಹೆಸರು ಜಯಂತೀ ಎಂದು. ಇಂದ್ರನು ಇವಳನ್ನು ಋಷಭನಿಗೆ ಧಾರೆ ಎರೆದು ಕೊಟ್ಟಿದ್ದನು. ದೈಹಿಕವಾಗಿ ಈಕೆ ಬಹಳ ಚಂದದ ಹುಡುಗಿ. ದೈಹಿಕವಾಗಿ ಮಾತ್ರ ಅಲ್ಲ, ಮಾನಸಿಕವಾಗಿಯೂ ಕೂಡಾ ಚಂದ ಇದ್ದಳು. ಅಂದರೆ ಒಳ್ಳೆಯ ಮನಸ್ಸಿನವಳು. ಸದಾ ಭಗವಂತನ ಚಿಂತನೆಯಲ್ಲೇ ತನ್ನನ್ನು ತೊಡಗಿಸಿಕೊಂಡವಳು. ಇಲ್ಲಿ ದೇವರ ಅವತಾರದ ಹೆಸರು, ಅವತಾರದ ಪ್ರಯೋಜನ, ಪತ್ನಿಯ ಹೆಸರು ಹಾಗೂ ಸೌಮ್ಯ ಅವತಾರ ಇತ್ಯಾದಿಗಳು ಹೇಳಲ್ಪಟ್ಟಿವೆ.

ಕೃಷ್ಣಾವತಾರದ ವರ್ಣನೆ– ಕೃಷ್ಣನಲ್ಲಿ ೬೪ ವಿದ್ಯೆಗಳೂ ತುಂಬಿದ್ದವು. ವಿಶೇಷವಾಗಿ ಭರತಶಾಸ್ತ್ರದಲ್ಲಿ ಅಂದರೆ ನಾಟ್ಯಶಾಸ್ತ್ರದಲ್ಲಿ ತುಂಬಾ ಪಳಗಿದ್ದನು. ತಾನು ವೃಂದಾವನದಲ್ಲಿರುವಾಗ ಗೋಪಿಯರ ಜೊತೆ ಉತ್ತಮವಾದ ನಾಟ್ಯವನ್ನು ಮಾಡುತ್ತಿದ್ದನು. ಉಪನೀತ

ರಾದ ವಟುಗಳು ಹೊಸ ಯೋಗಿಗಳು. ಉಪನಯದ ತನಕ ಯಥೇಚ್ಛವಾಗಿ ವಿಹರಿಸುವವರು. ಅನಂತರ ಮಂತ್ರದ ಸಿದ್ಧಿಗಾಗಿ ವಿಶೇಷವಾಗಿ ಪ್ರಯತ್ನಿಸುವವರು. ಈ ದಾರಿಯಲ್ಲಿ ಹಚ್ಚುವವನು ತಂದೆಯು. ಗಾಯತ್ರಿಯನ್ನು ಉಪದೇಶಿಸಿ ಅನುಗ್ರಹಿಸುವವನು. ತಂದೆಯಂತೆ ಕೃಷ್ಣನೂ ಕೂಡಾ ಇಂತಹ ವಟುಗಳ ಅಂತಃಕರಣ ಶುದ್ಧಿಗೆ ಕಾರಣನಾಗಿದ್ದಾನೆ. ಲೋಕದಲ್ಲಿ ಉಪನಯನದ ದಿನ ಗಾಯತ್ರಿ, ಅಷ್ಟಾಕ್ಷರಮಂತ್ರಗಳ ಜೊತೆಗೆ ಕೃಷ್ಣಮಂತ್ರವನ್ನೂ ಉಪದೇಶಿಸುತ್ತಾರೆ. ಈ ಕೃಷ್ಣಮಂತ್ರವನ್ನು ಜಪಿಸುವುದರಿಂದ ಅಂತಃಕರಣ ಶುದ್ಧವಾಗುತ್ತದೆ. ಸಾಧನೆಗೆ ಅನುಕೂಲವಾಗುತ್ತದೆ. ಇದರಿಂದ ಕೃಷ್ಣಭಕ್ತರು ಬಹಳ ಆನಂದಿಸುತ್ತಾರೆ. ವಿಷಯಗಳ ಕಡೆಯಿಂದ ಇಂದ್ರಿಯಗಳನ್ನು ಎಳೆದು ಹತೋಟಿಯಲ್ಲಿ ಇಟ್ಟುಕೊಳ್ಳುವ ಮೂಲಕ ಇಂದ್ರಿಯಗಳನ್ನು ಜಯಿಸಿದವರಾಗುತ್ತಾರೆ. ಇಂತಹ ಇಂದ್ರಿಯಗಳನ್ನು ಕೃಷ್ಣನ ಕಡೆಗೆ ಕಳಿಸುತ್ತಾರೆ. ಕೃಷ್ಣನನ್ನು ಧ್ಯಾನಿಸುತ್ತಾರೆ. ವಿಷಯಗಳಿಂದ ವಿಮುಖವಾದ್ದರಿಂದ ಬುದ್ಧಿಯಲ್ಲಿ ವ್ಯಗ್ರತೆಯೂ ಇರುವುದಿಲ್ಲ. ಅಲ್ಲದೆ ಶುದ್ಧವಾಗಿಯೂ ಇರುತ್ತದೆ. ಇಂತಹ ಮನದಿಂದ ಜನರು ಕೃಷ್ಣನನ್ನು ಈಗ ಮಧುರೆಯ ಅಧಿಪತಿ ಎಂದು ಧ್ಯಾನಿಸಿದರು. ಕಂಸನು ಬದುಕಿರುವಾಗ ಈ ರೀತಿಯಾಗಿ ತಿಳಿಯಲು ಭಯಪಡುತ್ತಿದ್ದರು. ಕೃಷ್ಣನು ಕಂಸನನ್ನು ಕೊಂದು ಉಗ್ರಸೇನನಿಗೆ ಪಟ್ಟಕಟ್ಟಿದ ಮೇಲೆ ಜನರಿಗೆ ಯಾವ ರೀತಿಯ ಭಯವೂ ಇರಲಿಲ್ಲ. ಉಗ್ರಸೇನನು ಪಟ್ಟಾಭಿಷಿಕ್ತನಾಗಿದ್ದರೂ ಜನರು ಕೃಷ್ಣನನ್ನೇ ಮಧುರಾಧಿಪ ಎಂದು ತಿಳಿಯುತ್ತಿದ್ದರು.

ಈ ಶ್ಲೋಕದ ನಾಲ್ಕನೆಯ ಚರಣದಲ್ಲಿ ಇನ್ನೊಂದು ರೀತಿಯ ಪದವಿಭಾಗಮಾಡಿ ಹೊಸ ಅರ್ಥವನ್ನು ಹೊರಡಿಸುತ್ತಾರೆ– ಸುಮಧು, ರಾಮಧುರಾ ಆಧಿಪಂ. ಸುಮಧು= ಒಳ್ಳೆಯ ಮದ್ಯವನ್ನು; ರಾಮ=ರಾಮಚಂದ್ರನ, ಧುರಾ=ಕೆಲಸದಿಂದ, ಆಧಿ=ಮಾನಸಿಕ ವ್ಯಥೆಯನ್ನು, ಪಂ=ಹೆಚ್ಚಿಸುವ ಎಂದು ಪದವಿಭಾಗ. ಇದರ ತಾತ್ಪರ್ಯ ಈ ರೀತಿ ಇದೆ– ಮನಸ್ಸು ದೇವರ ಕಡೆಗೆ ಹೋಗಬೇಕಾದರೆ ಏನಾಗಬೇಕು ಎಂಬುದನ್ನು ತಿಳಿಸುತ್ತಾರೆ. ಜನರು ಮಾನಸಿಕ ಕ್ಲೇಶಕ್ಕೆ ಒಳಗಾಗುವುದು ಸಹಜ. ಅದರಿಂದ ಬಿಡುಗಡೆ ಹೊಂದಲು ಪ್ರಾಯಶಃ ಮದ್ಯಪಾನದಲ್ಲಿ ತೊಡಗುತ್ತಾರೆ. ಇದರಿಂದ ಕ್ಲೇಶ ಕಡಿಮೆ ಆದದ್ದಲ್ಲ, ಬದಲಾಗಿ ಹೆಚ್ಚಾಯಿತು. ಒಮ್ಮೊಮ್ಮೆ ಸಾತ್ವಿಕರೂ ಕೂಡಾ ಪ್ರಾರಬ್ಧವಶಾತ್ ಈ ಚಟಕ್ಕೆ ಬಲಿಯಾಗುತ್ತಾರೆ. ಅನಂತರ ಮಾನಸಿಕವಾಗಿ ತುಂಬಾ ತಾಪವನ್ನು ಪಡುತ್ತಾರೆ. ಪ್ರಾಯಶ್ಚಿತ್ತವಾಗಿ ಶ್ರೀರಾಮನ ಕೆಲಸವನ್ನು ಮಾಡುತ್ತಾರೆ. ಶ್ರೀರಾಮನು ವನವಾಸ, ಆಹಾರ ನಿದ್ರಾದಿಗಳ ನಿಯಂತ್ರಣವನ್ನು ಮಾಡಿದ. ಅಂತಹ ವ್ರತಗಳನ್ನು ತಾವು ಮಾಡಿ ಮದ್ಯಪಾನಾದಿಗಳನ್ನು ಗೆಲ್ಲುತ್ತಾರೆ. ಶುದ್ಧಮನದಿಂದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾರೆ. ವಿಷಯಗಳಲ್ಲಿ ಅನಾಸಕ್ತವಾದ ವ್ರತನಿಯಮಗಳಲ್ಲಿ ಆಸಕ್ತವಾದ ಮನಸ್ಸಿಗೆ ದೇವರು ವಿಷಯನಾಗುತ್ತಾನೆ ಎಂದು ಅಭಿಪ್ರಾಯ.

ಈ ರೀತಿ ಶ್ರೀ ವಾದಿರಾಜರು ಶಬ್ದಗಳ ಜೋಡಣೆಯಲ್ಲಿ ಕೌಶಲ್ಯವನ್ನು ಮೆರೆದಿದ್ದಾರೆ.

**ಜನಕದೋಷಮುಪೇತ್ಯ ಸ ಶರ್ವರೀತ್ಯನುಭವಂ ಜನನೀಮಪಿ ಹರ್ಷಯನ್ ।
ಘಟಯತೇ ದೃಶಿ ಬಾಲವಪುಃ ಸ್ಫುರತ್ ಸುರಸದೋ ಸರಸದೋಹಕೃದನ್ವಹಮ್
॥ ೬ ॥**

ಅನುಭವಂ=ಅವತಾರವನ್ನು ಅನುಸರಿಸಿ; ಸಃ=ನಾರಾಯಣನು; ಜನಕ= ಪ್ರಜಾಪತಿಯಾದ; ದೋಷಂ=ದೋಷ ಎಂಬುವವನನ್ನು; ಉಪೇತ್ಯ=ಹೊಂದಿ; ಶರ್ವರೀ ಇತಿ= ಶರ್ವರೀ ಎಂಬ; ಜನನೀಂ ಅಪಿ=ತಾಯಿಯನ್ನೂ; ಹರ್ಷಯನ್= ಸಂತೋಷಪಡಿಸುತ್ತಾ; ಅನ್ವಹಂ=ಯಾವಾಗಲೂ; ರಸ=ಹೊಸತ್ತಿನ; ದೋಹ=ಕೊಡುವಿಕೆಯನ್ನು; ಕೃತ್= ಮಾಡುವವನಾಗಿ; ಬಾಲ=ಬಾಲದಲ್ಲಿ; ವಪುಃ=ದೇಹದಲ್ಲಿ; ಸ್ಫುರತ್=ಶೋಭಿಸುವ; ಸುರ= ದೇವತೆಗಳ; ಸದಃ=ಸಭೆಯನ್ನು; ದೃಶಿ=ಕಣ್ಣುಗಳಲ್ಲಿ; ಘಟಯತೇ=ತೋರಿಸುತ್ತಾನೆ.

ಸ್ಫುರತ್=ಶೋಭಿಸುವ; ಸುರ=ದೇವತೆಗಳ; ಸದಃ=ಸಭೆಯ; ರಸ=ಆನಂದ; ದೋಹ=ವರ್ಷಣೆಯನ್ನು; ಕೃತ್=ಮಾಡುವ; ಬಾಲ=ಮಗುವಿನ; ವಪುಃ=ಶರೀರದ; ಸಃ=ಅವನು; ಜನಕ=ತಂದೆಯ; ದೋಷಂ=ಕೈಯನ್ನು; ಜನನೀಂ ಅಪಿ=ತಾಯಿಯನ್ನೂ; ಉಪೇತ್ಯ=ಹೊಂದಿ; ಹರ್ಷಯನ್=ಮೋದಗೊಳಸುತ್ತಾ; ಶರ್ವ=ರುದ್ರನ; ರೀತಿ=ಕ್ರಮದ; ಅನುಭವಂ=ಅನುಭವವನ್ನು; ಅನ್ವಹಂ=ಯಾವಾಗಲೂ; ದೃಶಿ=ಕಣ್ಣನಲ್ಲಿ; ಘಟಯತೇ= ಹೊಂದಿಸುತ್ತಾನೆ.

ಈ ಶ್ಲೋಕದಲ್ಲಿ ದೇವರ ಶಿಂಶುಮಾರ ಎಂಬ ರೂಪವನ್ನು ಕೃಷ್ಣರೂಪದ ಜೊತೆಗೆ ವರ್ಣಿಸುತ್ತಾರೆ. ದೋಷ ಎಂಬ ಪ್ರಜಾಪತಿ ಹಾಗೂ ಆತನ ಪತ್ನಿ ಶರ್ವರೀ ಎಂಬ ದಂಪತಿಗಳಲ್ಲಿ ಭಗವಂತನು ಶಿಂಶುಮಾರ ಎಂಬ ಹೆಸರಿನಿಂದ ಅವತರಿಸಿದನು. ಜೀವರು ಹುಟ್ಟುವ ಕ್ರಮದಂತೆ ಮೊದಲು ದೋಷನ ಉದರವನ್ನು ಪ್ರವೇಶಿಸಿ ಅಲ್ಲಿಂದ ಶರ್ವರಿಯ ಗರ್ಭದಲ್ಲಿ ಇದ್ದು ಇಬ್ಬರಿಗೂ ಮಗನಾಗಿ ಅವರನ್ನು ಸಂತೋಷಗೊಳಿಸಿದನು. ಅನ್ಯರಿಂದ ಮಾಡಲು ಅಸಾಧ್ಯವಾದ ಕೆಲಸಗಳನ್ನು ಸದಾ ಮಾಡುತ್ತಿದ್ದನು. ಶಿಂಶುಮಾರ ಎಂದು ಕೊಂಬಚೇಳಿಗೆ ಹೆಸರು. ದೇವರು ಆ ರೂಪದಿಂದ ಜ್ಯೋತಿರ್ಮಂಡಲವನ್ನು ತನ್ನ ಬಾಲದಿಂದ ಧರಿಸಿದ್ದಾನೆ. ಈ ಮಂಡಲದಲ್ಲಿ ಆದಿತ್ಯಾದಿ ನವಗ್ರಹರ ಮಂಡಲವೂ ಸೇರಿದೆ. ಕೇವಲ ಬಾಲದಿಂದ ಅಲ್ಲದೇ ತನ್ನ ದೇಹವನ್ನು ಇಡೀ ದೇವತಾಮಂಡಲಕ್ಕೆ ಆಶ್ರಯವನ್ನಾಗಿ ಮಾಡಿದ್ದಾನೆ. ಈ ದೃಶ್ಯವನ್ನು ಯೋಗಿಗಳು ಈಗಲೂ ತಮ್ಮ ಕಣ್ಣುಗಳಿಂದ ನೋಡುತ್ತಾರೆ.

ಕೃಷ್ಣಾವತಾರದ ವರ್ಣನೆ– ಕೃಷ್ಣನು ಮಧುರೆಯಲ್ಲಿ ಅವತರಿಸಿದನು. ಅಲ್ಲಿ ವಸುದೇವದೇವಕಿಯರನ್ನು ಆನಂದಗೊಳಿಸಿದನು. ವಸುದೇವನು ಕೃಷ್ಣನನ್ನು ತನ್ನ ಕೈಯಿಂದ ಹೊತ್ತುಕೊಂಡು ನಂದಗೋಕುಲಕ್ಕೆ ಬಂದು ನಂದಗೋಪನ ಕೈಗಿತ್ತನು. ಅಲ್ಲಿ ಯಶೋದಾನಂದಗೋಪರು ಈ ಮಗುವಿನಿಂದಾಗಿ ಬಹಳ ಆನಂದಿಸಿದರು. ಇವರಿಬ್ಬರೇ

ಏನು? ಯಾರೆಲ್ಲಾ ಈ ಮಗುವನ್ನು ನೋಡುತ್ತಿದ್ದರೋ ಅವರೆಲ್ಲಾ ಸ್ವರ್ಗಸುಖವನ್ನೇ ಅನುಭವಿಸುತ್ತಿದ್ದರು.

ಬೇರೆಬೇರೆ ದೇವತೆಗಳಲ್ಲಿ ಬೇರೆಬೇರೆ ಗುಣಧರ್ಮಗಳಿವೆ. ಅವೆಲ್ಲವೂ ಅವರಿಗೆ ದೇವರಿಂದಲೇ ಬಂದದ್ದು. ಎಲ್ಲಾ ಧರ್ಮಗಳಿಗೂ ದೇವರೇ ಆಶ್ರಯ. ಸದ್ಯ ಈಗ ಕೃಷ್ಣನು ತನ್ನ ರುದ್ರನ ರೀತಿಗಳನ್ನು ಅಂದರೆ ಧರ್ಮಗಳನ್ನು ತೋರಿಸುತ್ತಿದ್ದನು. ರುದ್ರನು ದಿಗಂಬರ, ಮೈಯೆಲ್ಲಾ ಧೂಳು, ತಲೆಯಲ್ಲಿ ಜಡೆಯವನು. ಹಣೆಯಲ್ಲಿ ಮೂರನೆಯ ಕಣ್ಣು. ಕೃಷ್ಣನೂ ಬಾಲ್ಯದಲ್ಲಿ ದಿಗಂಬರನು. ಅಂಗಳದಲ್ಲಿ ಆಡುವುದರಿಂದ ಮೈಯಲ್ಲಿ ಧೂಳು. ಚೂಡಾಕರ್ಮ ಆಗಿಲ್ಲವಾದ್ದರಿಂದ ತಲೆಕೂದಲು ಜಡೆಕಟ್ಟಿದೆ. ಚಿನ್ನದಿಂದ ಅಶ್ವತ್ಥದ ಎಲೆಯಾಕೃತಿಯ ಆಭರಣವನ್ನು ಮಾಡಿ ಹಣೆಯಲ್ಲಿ ನೇತಾಡಿಸಿದ್ದಾರೆ. ಇದು ಮೂರನೆಯ ಕಣ್ಣಿನಂತೆ ತೋರುತ್ತಿದೆ. ವೈಷ್ಣವರಿಗೆಲ್ಲಾ ರುದ್ರದೇವರು ಗುರುಗಳು. ಆದ್ದರಿಂದ ಅವರ ಧರ್ಮವನ್ನು ತನ್ನಲ್ಲಿ ತೋರಿಸಿದನು.

ಈ ಸರ್ಗದ ಎರಡನೇ ಶ್ಲೋಕದ ಜನಕ ಕರ್ದಮ ಶೋಭಿ ಗೃಹಾಂಗಣೇ ಎಂಬುದರ ವಿವರಣೆ ಇಲ್ಲಿದೆ.

**ವಿಜನಿತಾಪದವದ್ಯವನಾಯ ಯೋ ಹ್ಯಗದಪಾಣಿರಭೂಚ್ಛಮದಾಯಕಃ ।**
**ಉದಧಿರತ್ನಮಮುಂ ಸಹಜಶ್ರಿಯಂ ಹೃದಿಭಜೇದ್ಯಗತಿಂ ಕೃತೀ ॥ ೭ ॥**

ಯಃ=ಯಾರು; ಅಗದ=ಔಷಧಿಯು; ಪಾಣಿಃ=ಕೈಯಲ್ಲಿವುಳ್ಳವನಾಗಿ; ವಿಜನಿತ= ಉಂಟಾದ; ಆಪತ್=ದುಃಖವೆಂಬ; ಅವದ್ಯ=ದೋಷಗಳ; ವನಾಯ=ಕಾಡಿಗೋಸ್ಕರ; ಶಮ=ನಾಶವನ್ನು; ದಾಯಕಃ=ಕೊಡುವವನು; ಅಭೂತ್=ಆದನೋ; ಉದಧಿ=ಸಮುದ್ರಕ್ಕೆ; ರತ್ನಂ=ರತ್ನದಂತಿರುವ; ಸಹಜ=ಜೊತೆಯಲ್ಲಿ ಹುಟ್ಟಿದ; ಶ್ರಿಯಂ=ರಮೆವುಳ್ಳ; ಇಭಜ= ಆನೆಯಂತೆ; ಈಡ್ಯ=ಸ್ತುತ್ಯವಾದ; ಗತಿಂ=ಗಮನವುಳ್ಳ; ಅಮುಂ=ಇವನನ್ನು; ಕೃತೀ= ಪ್ರಯತ್ನಶೀಲನು; ಹೃದಿ=ಹೃದಯದಲ್ಲಿ; ಭಜೇತ್=ಧ್ಯಾನಿಸಬೇಕು.

ಯಃ=ಯಾರು; ಅಗದ=ಗದಾರಹಿತವಾದ; ಪಾಣಿಃ=ಕೈವುಳ್ಳವನಾಗಿ; ವಿ=ಪಕ್ಷಿಯಿಂದ; ಜನಿ=ಹುಟ್ಟಿದ್ದಕ್ಕೆ; ತಾಪದವತ್=ದುಃಖವನ್ನು ಕೊಡುವವನಂತೆ; ಯವನಾಯ=ಕಾಲಯವ ನನಿಗೆ; ಶಮ=ನಾಶವನ್ನು; ದಾಯಕಃ=ಕೊಡುವವನು; ಅಭೂತ್=ಆದನೋ; ಸಹಜ= ಸ್ವಾಭಾವಿಕವಾದ; ಶ್ರಿಯಂ=ಸಂಪತ್ತುಳ್ಳ; ಜ=ಹುಟ್ಟಿದ್ದರಿಂದ; ಈಡ್ಯ=ಸ್ತುತ್ಯವಾದ; ಗತಿಂ= ಗಮನವುಳ್ಳ; ಉದಧಿರತ್ನಂ. ಅಮುಂ. ಕೃತೀ ಹೃದಿ. ಭಜೇತ್.

ಈ ಶ್ಲೋಕದಲ್ಲಿ ಧನ್ವಂತರಿಯಿಂದ ಕೂಡಿಕೊಂಡು ಕೃಷ್ಣನನ್ನು ವರ್ಣಿಸುತ್ತಾರೆ. ಪ್ರಾಣಿಗಳ ಎಲ್ಲಾ ರೋಗಗಳಿಗೂ ಮೂಲ ವಾತ, ಪಿತ್ಥ, ಕಫಗಳು. ಈ ಮೂರು ದೋಷಗಳ ವಿಕಾರಗಳಿಂದ ಕಾಯಿಲೆಗಳು ಬರುವುವು. ಈ ಮೂರು ಕಾಡಿನಂತೆ

ಬಹಳವಾಗಿ ಬೆಳೆಯುತ್ತವೆ. ಇವುಗಳ ನಾಶಕ್ಕಾಗಿಯೇ ಧನ್ವಂತರಿಯ ಅವತಾರವಾಯಿತು. ಸಮುದ್ರದಿಂದ ಅವತರಿಸಿ ಬರುವಾಗಲೇ ಕೈಯಲ್ಲಿ ಔಷಧಿಯನ್ನು ತಂದಿದ್ದಾನೆ. ವ್ಯಕ್ತಿಗೆ ಆರೋಗ್ಯವೇ ಮೊದಲಿನ ಭಾಗ್ಯ ಎಂದು ತಿಳಿಸಲು ತನ್ನ ಜೊತೆಯಲ್ಲಿ ರಮೆಯೂ ಪ್ರಾದುರ್ಭವಿಸುವಂತೆ ಮಾಡಿದ್ದಾನೆ. ಮರಿ ಆನೆಯಂತೆ ಗಂಭೀರವಾದ ಅಷ್ಟೇ ಚುರುಕಾದ ನಡಿಗೆಯಿಂದ ಸಮುದ್ರದಿಂದ ಹೊರಬಂದನು. ಭಗವಂತನೆಂಬ ರತ್ನವನ್ನು ಕೊಟ್ಟದ್ದರಿಂದ ಸಮುದ್ರಕ್ಕೆ ರತ್ನಾಕರ ಎಂಬ ಹೆಸರೂ ಸಾರ್ಥಕವಾಯಿತು. ಸಾಧಕನು ತನ್ನ ಆರೋಗ್ಯಕ್ಕಾಗಿ ದೇವರ ಇಂತಹ ಧನ್ವಂತರಿ ರೂಪವನ್ನು ಧ್ಯಾನಿಸಬೇಕು.

ಕೃಷ್ಣನು ಕಾಲಯವನನ್ನು ಸಂಹರಿಸುವ ದೃಶ್ಯವನ್ನು ಇಲ್ಲಿ ವರ್ಣಿಸುತ್ತಾರೆ– ಕೃಷ್ಣನನ್ನು ಸಂಹರಿಸಲೆಂದೇ ಈತನು ರುದ್ರರ ವರದಿಂದ ಹುಟ್ಟಿದವನು. ವ್ಯತ್ಯಾಸವಾಗಿ ಈತನೇ ಕೃಷ್ಣನಿಂದ ಹತನಾದನು. ಈತನನ್ನು ಕೊಲ್ಲಲು ಕೃಷ್ಣನು ಯಾವ ಆಯುಧವನ್ನೂ ಸ್ವೀಕರಿಸಲಿಲ್ಲ. ಹಕ್ಕಿಯ ಮರಿಯನ್ನು ಕೊಲ್ಲಲು ಯಾವ ರೀತಿ ಶ್ರಮಪಡಬೇಕಾಗಿಲ್ಲವೋ ಅಷ್ಟೇ ಅನಾಯಾಸದಿಂದ ಈತನನ್ನು ಕೃಷ್ಣನು ಮುಚುಕುಂದನಿಂದ ಕೊಲ್ಲಿಸಿದನು. ಈತನನ್ನು ಸಂಹರಿಸುವ ಪೂರ್ವದಲ್ಲಿ ಕೃಷ್ಣನು ಸಮುದ್ರದ ಮಧ್ಯದಲ್ಲಿ ದ್ವಾರಕೆಯನ್ನು ರಚಿಸಿದನು. ಅಲ್ಲಿಗೆ ಮಧುರೆಯಲ್ಲಿದ್ದ ಯಾದವರನ್ನು ಕಳಿಸಿದನು. ಕೃಷ್ಣನೆಂಬ ರತ್ನವನ್ನು ತನ್ನಲ್ಲಿ ತುಂಬಿಸಿಕೊಂಡು ಸಮುದ್ರವು ತನ್ನ ರತ್ನಾಕರತ್ವವನ್ನು ಸಾರ್ಥಕಗೊಳಿಸಿತು. ದ್ವಾರಕೆಯಲ್ಲಿ ಕೃಷ್ಣನು ತನ್ನ ಸಹಜವಾದ ಸಂಪತ್ತಿನಿಂದ ಮೆರೆದನು. ಕೃಷ್ಣನ ಇಂತಹ ಕೌಶಲ್ಯವನ್ನು ಕಂಡು ಶತ್ರುಗಳೂ ಬೆರಗಾಗುತ್ತಿದ್ದರು. ಇದಕ್ಕೆ ಕಂಸನ ಆನೆಯಾದ ಕುವಲಯಾಪೀಡೆಯೇ ಸಾಕ್ಷಿ. ಇದನ್ನು ಕೊಲ್ಲುವ ಸಂದರ್ಭದಲ್ಲಿ ಕೃಷ್ಣನು ಭಕ್ತರಿಗಾಗಿ ಬಹಳ ಚಾಕಚಕ್ಯತೆಯನ್ನು ತೋರಿದ್ದನು. ಇವನನ್ನು ಕಂಡ ಆ ಆನೆಯು ಬೆರಗಾಗಿ ಉದ್ಗಾರವನ್ನು ಮಾಡಿತ್ತು. ಇಂತಹ ಕೃಷ್ಣರೂಪವನ್ನು ಸಾಧಕನು ಹೃದಯದಲ್ಲಿ ಧ್ಯಾನಿಸಬೇಕು.

**ಮಧುರಯಾಜಿತ ದಾನವ ಸದ್ಗಿರಾವಶನಿಕಾಯ ಗತಾಗಮಸಾಧಕ ।**
**ನರತುರಂಗಮ ಹರ್ಷಕರಾಕೃತೇ ಭವಗತಾವಗತಾಖಿಲ ಪಾಹಿ ನಃ ॥ ೮ ॥**

ಮಧು=ಮಧುವಿನ; ರಯ=ವೇಗದಿಂದ; ಅಜಿತ=ಸೋಲಿಲ್ಲದ; ದಾನವ=ದೈತ್ಯರ; ಸತ್=ಸಭೆ ಎಂಬ; ಗಿರೌ=ಬೆಟ್ಟದಲ್ಲಿ; ಅಶನಿ=ವಜ್ರದಂತೆ; ಕಾಯ=ಶರೀರದ; ಗತ=ಕಳೆದು ಹೋದ; ಆಗಮ=ವೇದಗಳ; ಸಾಧಕ=ಪ್ರಾಪಕನಾದ; ಹರ್ಷ=ನೆಮ್ಮದಿಯನ್ನು; ಕರ= ಮಾಡುವ; ಆಕೃತೇ=ದೇಹವುಳ್ಳ; ಭವ=ಸಂಸಾರದಿಂದ; ಗತ=ದೂರನಾದ; ಅವಗತ= ತಿಳಿಯಲ್ಪಟ್ಟ; ಅಖಿಲ=ಎಲ್ಲಾ ಉಳ್ಳ; ನರತುರಂಗಮ=ನರಕುದುರೆಯೇ; ನಃ=ನಮ್ಮನ್ನು; ಪಾಹಿ=ರಕ್ಷಿಸು.

ಮಧುರಯಾ=ಚಂದದ; ಸತ್=ಒಳ್ಳೆಯ; ಗಿರಾ=ಮಾತಿನಿಂದ; ಜಿತ=ಸೋತ; ದಾನವ=ದೈತ್ಯನುಳ್ಳ; ವಶ=ಅಧೀನರ; ನಿಕಾಯ=ಸಮೂಹಕ್ಕೆ; ಗತ=ಕಳಕೊಂಡಿದ್ದರ;

ಆಗಮ=ಪ್ರಾಪ್ತಿಗೆ: ಸಾಧಕ=ಕಾರಣನಾದ: ನರ=ಅರ್ಜುನನ: ತುರಂಗಮ=ಕುದುರೆಗಳಿಗೆ: ಹರ್ಷ=ನೆಮ್ಮದಿಯನ್ನು: ಕರ=ಕೊಡುವ: ಆಕೃತೇ=ದೇಹವುಳ್ಳ: ಭವ=ಭೂಮಿಯಲ್ಲಿ: ಗತೌ= ಇರುತ್ತಿರಲು: ಅಗತ=ಜೊತೆಗಿರುವ: ಅಖಿಲ=ಎಲ್ಲಾ ಉಳ್ಳವನೇ: ನಃ=ನಮ್ಮನ್ನು: ಪಾಹಿ=ರಕ್ಷಿಸು.

ಇಲ್ಲಿ ಕೃಷ್ಣನ ಜೊತೆ ಹಯಗ್ರೀವ ರೂಪದ ವರ್ಣನೆ– ಮಧುಕೈಟಭರೆಂಬ ಇಬ್ಬರು ಅಸುರರು ಇದ್ದರು. ಮಧು ಎಂಬವನು ಬ್ರಹ್ಮನ ಬಳಿಯಿರುವ ವೇದಾಭಿಮಾನಿಗಳನ್ನು ಒಯ್ದನು. ಆಗ ಭಗವಂತನು ಹಯಗ್ರೀವರೂಪವನ್ನು ತಾಳಿ ಆತನನ್ನು ಎದುರಿಸಿದನು. ಬಹಳ ವರ್ಷ ಯುದ್ಧವಾಯಿತು. ಮಧುವಿನ ಯಾವ ಆಟವೂ ದೇವರ ಮುಂದೆ ನಡೆಯಲಿಲ್ಲ. ಇಬ್ಬರು ದೈತ್ಯರನ್ನು ತನ್ನ ತೊಡೆಯ ಮೇಲೆ ಮಲಗಿಸಿ ತನ್ನ ಮುಷ್ಟಿಯಿಂದಲೇ ಕೊಂದನು. ಯಾವ ಆಯುಧದಿಂದಲೂ ಅಲ್ಲ. ವಜ್ರಾಯುಧದಿಂದ ಇಂದ್ರನು ಬೆಟ್ಟಗಳನ್ನು ಮರ್ದಿಸಿದ್ದನು. ಹಾಗೆಯೇ ಸಮಗ್ರ ದೈತ್ಯರೆಂಬ ಬೆಟ್ಟಗಳಿಗೆ ಈ ಹಯಗ್ರೀವನ ದೇಹವು ವಜ್ರಾಯುಧದಂತೆ ಇದೆ. ಈ ರೀತಿ ಮಧುಕೈಟಭರನ್ನು ಕೊಂದು ವೇದಗಳನ್ನು ಪುನಃ ಚತುರ್ಮುಖನಿಗೆ ಒಪ್ಪಿಸಿದನು. ಮಾನವದೇಹ, ಕುದುರೆಯ ತಲೆ ಹಾಗಿದ್ದರೂ ಬಹಳ ಸುಂದರಮೂರ್ತಿ. ನೋಡುಗರಿಗೆ ಆನಂದದಾಯಕ. ಸಂಸಾರದಿಂದ ದೂರ ಇರುವ, ಸರ್ವಜ್ಞನಾದ ಈ ಹಯಗ್ರೀವನು ನಮ್ಮನ್ನು ಸದಾ ರಕ್ಷಿಸಲಿ.

ಕೃಷ್ಣನ ವರ್ಣನೆ– ಮಹಾಭಾರತಯುದ್ಧದ ಕೃಷ್ಣನನ್ನು ಇಲ್ಲಿ ಚಿತ್ರಿಸುತ್ತಾರೆ. ಸಹಾಯಕ್ಕಾಗಿ ಅರ್ಜುನ–ದುರ್ಯೋಧನರು ಕೃಷ್ಣನ ಬಳಿಗೆ ಹೋಗುತ್ತಾರೆ. ಅಲ್ಲಿ ಕೃಷ್ಣನು ಈ ರೀತಿ ಹೇಳುತ್ತಾನೆ– ಒಂದು ಕಡೆ ನಿರಾಯುಧನಾದ ಯುದ್ಧಮಾಡದ ನಾನು, ಮತ್ತೊಂದೆಡೆ ಸಾಯುಧರಾದ ಹೋರಾಡುವ ನನ್ನ ಹತ್ತುಸಾವಿರ ಮಕ್ಕಳು ಎಂದು. ಈ ಮಾತಿನಿಂದ ಮೋಸಹೋದ ಸುಯೋಧನನು ಕೃಷ್ಣನನ್ನು ಬಿಟ್ಟನು. ದೇವರ ಬಾಯಿಂದ ಬಂದ ಮಾತಾದ್ದರಿಂದ ಒಳ್ಳೆಯ ಮಾತೆನ್ನುವುದರಲ್ಲಿ ಸಂಶಯ ಇಲ್ಲ. ಆದರೆ ದುರ್ಯೋಧನನು ಕೆಟ್ಟವನಾದ್ದರಿಂದ ಅದನ್ನು ಸರಿಯಾಗಿ ಅರ್ಥೈಸಲಾಗದೆ ವಂಚಿತನಾದ. ಅನಂತರ ಯುದ್ಧವಾಯಿತು. ಅಲ್ಲಿ ಕೃಷ್ಣನು ಅರ್ಜುನನಿಗೆ ಸಾರಥಿಯಾದ. ಸಾರಥಿಯ ಎಲ್ಲಾ ಕೆಲಸಗಳನ್ನೂ ಮಾಡಿದನು. ಕುದುರೆಗಳಿಗೆ ಹುಲ್ಲು ನೀರು ಇಡುವುದು, ಮೈ ತಿಕ್ಕುವುದು ಇತ್ಯಾದಿ. ಇದರಿಂದಾಗಿ ಕುದುರೆಗಳು ಮತ್ತಷ್ಟು ಉಲ್ಲಸಿತಗಳಾಗಿದ್ದವು. ಯುದ್ಧದಲ್ಲಿ ದುರ್ಯೋಧನನು ಎಲ್ಲವನ್ನೂ ಕಣ್ಣೆದುರಿಗೇ ಕಳೆದುಕೊಂಡು ಸತ್ತನು. ಮೋಸದ ಪಗಡೆಯಾಟದಲ್ಲಿ ಪಾಂಡವರು ಏನನ್ನು ಕಳೆದುಕೊಂಡಿದ್ದರೋ ಅದೆಲ್ಲವನ್ನೂ ಕೃಷ್ಣನು ಅವರಿಗೆ ಪುನಃ ಕೊಡಿಸಿದನು. ಪಾಂಡವರು ಕೃಷ್ಣಭಕ್ತರು. ಕೃಷ್ಣನ ಮಾತನ್ನು ತಪ್ಪದೇ ಪಾಲಿಸುತ್ತಿದ್ದರು. ಆದ್ದರಿಂದ ಕಳೆದುಕೊಂಡದ್ದನ್ನು ಪುನಃ ಪಡೆದರು. ಕೃಷ್ಣನು ಮಾತ್ರ ಈ ಅಣ್ಣತಮ್ಮಂದಿರ ಜಗಳದ ಮಧ್ಯದಲ್ಲಿದ್ದರೂ ಕೂಡಾ ತಾನು ನಿಶ್ಚಿಂತೆಯಿಂದ

ಜ್ಞಾನಾನಂದಮಯನಾಗಿಯೇ ಇದ್ದನು. ಯಾವ ನ್ಯೂನತೆಯೂ ಇರಲಿಲ್ಲ. ಇಂತಹ ಕೃಷ್ಣನು ನಮ್ಮನ್ನು ರಕ್ಷಿಸಲಿ.

**ಪ್ರಣತವಿಪ್ರಜನಾಮ ಯತೋಽಕರೋನ್ನನು ಜಲಾಂತರವರ್ತಿನಿಜಾಸ್ಪದಮ್ ।**
**ವಿಮಲಭೀಮರಥೀಪ್ಸಿತದಾಯಕಃ ಸ್ವವಿಜಿತೋಽವಿಜಿತೋಽಪ್ಯಯಮಚ್ಯುತಃ ॥ ೯ ॥**

ಯತಃ=ಯಾವ ಕಾರಣದಿಂದ; ಜಲ=ನೀರಿನ; ಅಂತರ=ಮಧ್ಯದಲ್ಲಿ; ವರ್ತಿ=ಇರುವ; ನಿಜ=ತನ್ನ; ಆಸ್ಪದಮ್=ಮನೆಯನ್ನು; ಪ್ರಣತ=ನಮಿಸಿದ; ವಿಪ್ರ=ಬ್ರಾಹ್ಮಣನ; ನಾಮ= ಹೆಸರುಳ್ಳದ್ದನ್ನಾಗಿ; ಅಕರೋತ್ ನನು=ಮಾಡಿದನಷ್ಟೇ; ವಿಮಲ=ನಿರ್ಮಲಳಾದ; ಭೀಮರಥೀ=ಭೀಮರಥಿಯ; ಈಪ್ಸಿತ=ಇಷ್ಟವನ್ನು; ಕರಃ=ಮಾಡಿದ; ಅಯಂ=ಈ; ಅಚ್ಯುತಃ=ವಿಠಲನು; ಅವಿಜಿತಃ ಅಪಿ=ಸೋಲು ಇಲ್ಲದಿದ್ದರೂ; ಸ್ವ=ತನ್ನವರಿಂದ; ವಿಜಿತಃ=ಸೋತವನು.

ಪ್ರಣತ=ನಮಸ್ಕರಿಸಿದ; ವಿಪ್ರಜನ=ಬ್ರಾಹ್ಮಣಜನರ; ಆಮಯಕಃ=ಉಪದ್ರವದಿಂದ; ನಿಜ=ತನ್ನ; ಆಸ್ಪದಮ್=ಮನೆಯನ್ನು; ಜಲ=ಸಮುದ್ರದ; ಅಂತರ=ಮಧ್ಯದಲ್ಲಿ; ವರ್ತಿ= ಇರತಕ್ಕದ್ದನ್ನು; ಅಕರೋತ್ ನನು=ಮಾಡಿದನಷ್ಟೇ; ವಿಮಲ=ನಿರ್ಮಲನಾದ; ಭೀಮ= ಭೀಮನೆಂಬ; ರಥೀ=ರಥಿಕನ; ಈಪ್ಸಿತ=ಇಷ್ಟದ; ದಾಯಕಃ=ಕೊಡುವ; ಅಯಂ, ಅಚ್ಯುತಃ, ಅವಿಜಿತಃ ಅಪಿ, ಸ್ವವಿಜಿತಃ.

ಈ ಶ್ಲೋಕದಲ್ಲಿ ಪಂಢರಪುರದ ವಿಠಲನನ್ನೂ ಕೃಷ್ಣನನ್ನೂ ವರ್ಣಿಸುತ್ತಾರೆ– ಪುಂಡರೀಕ ಎಂಬ ಬ್ರಾಹ್ಮಣನು ಬಹಳ ವರ್ಷ ಈ ಊರಿನಲ್ಲಿ ತನ್ನ ತಂದೆತಾಯಿಗಳ ಜೊತೆ ವಾಸವಾಗಿದ್ದನು. ಇವನು ಮಾಡಿದ ತಂದೆತಾಯಿಗಳ ಸೇವೆಗೆ ದೇವರು ಇವನಿಗೆ ವಿಠಲನಾಗಿ ಒಲಿದನು. ಈ ವಿಠಲನ ಸೇವೆಯನ್ನೂ ಮಾಡಿದನು. ಈ ವಿಠಲನ ಮಂದಿರವೂ ಭೀಮರಥೀ ತೀರ್ಥದ ಮಧ್ಯದಲ್ಲಿದೆ. ಪುಂಡರೀಕನೆಂಬ ಬ್ರಾಹ್ಮಣನ ಮೇಲಿನ ಕರುಣೆಯಿಂದ ತನ್ನ ಮಂದಿರವನ್ನು ತನ್ನ ಹೆಸರಿನಿಂದ ಪ್ರಸಿದ್ಧಿಗೆ ಬರಿಸಲಿಲ್ಲ. ಬದಲಾಗಿ ಈ ಬ್ರಾಹ್ಮಣನ ಹೆಸರಿನಿಂದ ಪ್ರಸಿದ್ಧಿಗೊಳಿಸಿದನು. ಈ ಭಗವಂತನು ಅಚ್ಯುತನು. ಪಾರತಂತ್ರ್ಯಾದಿ ದೋಷಗಳಿಂದ ರಹಿತನು. ಯಾರಿಗೂ ಸೋಲುವವನಲ್ಲ. ಆದರೆ ತನ್ನ ಭಕ್ತರ ಮುಂದೆ ಸೋಲುತ್ತಾನೆ. ಆದ್ದರಿಂದಲೇ ತನ್ನ ಭಕ್ತಳಾದ ಭೀಮರಥಿಯ ಅಪೇಕ್ಷೆಯಂತೆ ಆಕೆಯ ದಡದಲ್ಲಿ ಬಂದು ನೆಲೆಸಿದನು.

ಕೃಷ್ಣನ ಪಕ್ಷದಲ್ಲಿ– ಕಾಲಯವನನು ಮಧುರಾದಲ್ಲಿ ಇರುವ ಬ್ರಾಹ್ಮಣಾದಿಗಳಿಗೆ ಬಹಳ ಉಪದ್ರವ ಮಾಡುತ್ತಿದ್ದನು. ಈ ಉಪದ್ರವ ಎಂಬುದೇ ಅವರಿಗೆ ಒಂದು ಕಾಯಿಲೆಯಾಗಿ ಪರಿಣಮಿಸಿತ್ತು. ಈ ರೋಗದಿಂದ ತನ್ನ ಜನರನ್ನು ಮೋಚನೆಮಾಡಲು ಸಮುದ್ರದ ಮಧ್ಯದಲ್ಲಿ ಮನೆಯನ್ನು ನಿರ್ಮಿಸಿದನು. ಅಲ್ಲಿಗೆ ತನ್ನ ಜನರನ್ನು ಕಳಿಸಿದನು.

ಮಹಾರಥಿಕನಾದ ಭೀಮನು ಈತನ ಭಕ್ತನು. ವಂಚನೆಯ ಪಗಡೆಯಾಟದ ಸಂದರ್ಭದಲ್ಲಿ ಈತನು ಏನೆಲ್ಲಾ ಪ್ರತಿಜ್ಞೆ ಮಾಡಿದ್ದನೋ ಅದನ್ನೆಲ್ಲಾ ಶ್ರೀಕೃಷ್ಣನು ಯುದ್ಧದ ಸಂದರ್ಭದಲ್ಲಿ ಪೂರೈಸಿದ್ದನು. ಈ ರೀತಿ ಕೃಷ್ಣರೂಪವೂ ಅಭಿಜಿತವಾದರೂ ಸ್ವವಿಜಿತವಾಗಿದೆ.

**ರುಚಿರಕೇಶವಶಂವರಧಾಮ ತೇ ಲಸತಿ ಮಾರಮಣೋಽಸಿ ಸಮಾಕೃತೇ ।**
**ಸಕಲಗೋಕುಲಪಾಲಕದುಷ್ಕೃತಿಂ ಪರಿಹರಾರಿಹರಾಖಿಲವಾಸ ನಃ ॥ ೧೦ ॥**

ರುಚಿರ=ಮನೋಹರನೇ; ಕೇಶವ=ಕೇಶವನೇ; ತೇ=ನಿನ್ನ; ಶಂವರ=ನೀರೆಂಬ; ಧಾಮ=ಮನೆಯು; ಲಸತಿ=ಶೋಭಿಸುತ್ತದೆ; ಸಮ=ಒಂದೇರೀತಿಯ; ಆಕೃತೇ= ಆಕಾರದವನೇ; ಮಾ=ರಮೆಯ; ರಮಣಃ=ಪತಿಯು; ಅಸಿ=ಆಗಿದ್ದಿ; ಸಕಲ=ಕಲೆಗಳಿಂದ ಕೂಡಿದ; ಗೋ=ಮಾತುಗಳ; ಕುಲ=ಸಮೂಹಕ್ಕೆ; ಪಾಲಕ=ರಕ್ಷಕನೇ; ಅರಿ=ಶತ್ರುಗಳನ್ನು; ಹರ= ನಾಶಕನೇ; ಅಖಿಲ=ಎಲ್ಲಾಕಡೆ; ವಾಸ=ಇರುವವನೇ; ನಃ=ನಮ್ಮ; ದುಷ್ಕೃತಿಂ= ಅನಿಷ್ಟಗಳನ್ನು; ಪರಿಹರ=ಪರಿಹರಿಸು.

ರುಚಿತ=ಚಂದದ; ಕೇಶ=ಕೂದಲಿನ; ಮಾರ=ಮನ್ಮಥನ; ಮನಃ=ಮನಕ್ಕೆ; ಅಸಿ=ಖಡ್ಗಕ್ಕೆ; ಸಮ=ಸಮಾನವಾದ; ಆಕೃತೇ=ಸ್ವರೂಪದ ಕೃಷ್ಣನೇ; ತೇ=ನಿನ್ನ; ವಶಂ= ಅಧೀನವಾದ; ವರ=ಉತ್ತಮವಾದ; ಧಾಮ=ಮನೆಯು; ಲಸತಿ=ಶೋಭಿಸುತ್ತಿದೆ; ಸಕಲ= ಎಲ್ಲಾ; ಗೋಕುಲ=ಗೋಕುಲಕ್ಕೆ; ಪ್ರಿಯ=ಇಷ್ಟನೇ ಅರಿಹರ, ಅಖಿಲವಾಸ, ನಃ=ದುಷ್ಕೃತಿಂ, ಪರಿಹರ.

ಈ ಶ್ಲೋಕದಲ್ಲಿ ಕೇಶವಾದ್ಯವತಾರಗಳನ್ನೂ ಕೃಷ್ಣಾವತಾರವನ್ನೂ ವರ್ಣಿಸುತ್ತಾರೆ. ದೇವರದ್ದು ಕೇಶವಾದಿ ೧೨ ರೂಪಗಳ ಒಂದು ಗುಂಪು ಇದೆ. ಮೊದಲಿನ ರೂಪವೇ ಕೇಶವ ಎಂಬ ಹೆಸರಿನದ್ದು. ಈ ರೂಪವು ಬಹಳ ಚಂದ. ಎರಡನೆಯದ್ದು ನಾರಾಯಣ ಎಂಬ ರೂಪ. ನಾರಾ ಅಂದರೆ ನೀರು. ಅಯನ ಅಂದರೆ ಆಶ್ರಯ. ನೀರನ್ನು ಆಶ್ರಯವನ್ನಾಗಿ ಮಾಡಿಕೊಂಡದ್ದು. ಇದನ್ನು ಶಂಬರಧಾಮ ಎಂಬ ಶಬ್ದದಿಂದ ರಾಜರು ತಿಳಿಸಿದ್ದಾರೆ. ಮೂರನೆಯ ರೂಪ ಮಾಧವ ಎಂದು. ರಮಣ ಹಾಗೂ ಧವ ಎಂಬ ಪದಗಳು ಸಮಾನಾರ್ಥಕಗಳು. ಆದ್ದರಿಂದ ರಮಾರಮಣ ಎಂಬ ಪದದಿಂದ ಮಾಧವನ ಸ್ಮರಣೆ. ಎಲ್ಲಾ ಶಾಸ್ತ್ರಗಳೂ ದೇವರನ್ನೇ ಮುಖ್ಯವಾಗಿ ಹೇಳುತ್ತವೆ. ಶಾಸ್ತ್ರಗಳಲ್ಲಿ ಪ್ರಕರಣಗಳು, ವಾಕ್ಯಗಳು, ಪದಗಳು, ಅಕ್ಷರಗಳು, ಸ್ವರಗಳು ಇವೆಲ್ಲಾ ಶಾಸ್ತ್ರಗಳ ಕಲೆಗಳು. ಈ ಕಲೆಗಳೂ ಕೂಡಾ ಮುಖ್ಯವಾಗಿ ದೇವರನ್ನೇ ಪ್ರತಿಪಾದಿಸುತ್ತವೆ. ಗಾ– ಅಂದರೆ ಶಬ್ದಗಳನ್ನು ವಿಂದತೆ ಅಂದರೆ ವಾಚ್ಯತ್ವೇನ ಹೊಂದುತ್ತಾನೆ. ಆದ್ದರಿಂದ ಗೋವಿಂದ ಎಂದು ದೇವರಿಗೆ ಹೆಸರು. ಇದು ನಾಲ್ಕನೆಯ ರೂಪ. ೫ನೆಯ ರೂಪವೇ ವಿಷ್ಣು ಎಂದು. ವಿಷಲ್ಯ= ವ್ಯಾಪ್ತೌ ಎಂದ ಧಾತುವಿನಿಂದ ವಿಷ್ಣು ಎಂಬ ಶಬ್ದವು ಉದಿಸಿದ್ದು. ವಿಷ್ಣು ಅಂದರೆ ಸರ್ವತ್ರ ವ್ಯಾಪಿಸಿದ್ದು ಎಂದರ್ಥ. ಇದರ ಅರ್ಥವನ್ನು ರಾಜರು ಅಖಿಲವಾಸ ಎಂಬ

ಶಬ್ದದಿಂದ ತಿಳಿಸಿದ್ದಾರೆ. ಇಲ್ಲಿ ತಿಳಿಸಿರುವ ಕೇಶವಾದಿ ಐದು ಶಬ್ದಗಳು ಐದು ಅರ್ಥಗಳನ್ನು ಕೊಡುತ್ತವೆ. ಒಂದೊಂದು ಶಬ್ದದಿಂದ ಸಿಗುವ ಅರ್ಥವು ಆ ರೂಪಕ್ಕೆ ಮಾತ್ರ ಸೀಮಿತ ಎಂದು ತಿಳಿಯಬಾರದು. ಈ ಐದು ರೂಪಗಳಿಗೂ ಅಭೇದ ಇದೆ. ಎಲ್ಲಾ ಅರ್ಥಗಳೂ ಎಲ್ಲಾ ರೂಪಗಳಲ್ಲಿಯೂ ಇವೆ. ಇಂತಹ ಶಕ್ತಿಯುಳ್ಳ ದೇವರೇ ನಮ್ಮ ಕಷ್ಟಗಳನ್ನು ಪರಿಹರಿಸು.

ಕೃಷ್ಣರೂಪದ ವರ್ಣನೆ– ನಾರಾಯಣನ ಕಪ್ಪು ಕೂದಲಿನ ಅವತಾರ ಶ್ರೀಕೃಷ್ಣ. ನೋಡಲು ತುಂಬಾ ಚಂದದ ಹುಡುಗ. ತಲೆಯ ಕೂದಲಂತೂ ಇನ್ನೂ ಚಂದ. ಮನ್ಮಥನನ್ನೂ ಮೀರಿಸುವ ಸೌಂದರ್ಯ. ಮನ್ಮಥನಿಗೆ ತಲೆಯಲ್ಲಿ ಒಂದು ವಿಚಾರ ಇತ್ತು– ತನ್ನಷ್ಟು ಚಂದ ಯಾರೂ ಇಲ್ಲ ಎಂದು. ಕೃಷ್ಣರೂಪವನ್ನು ಕಂಡ ಮೇಲೆ ಆತನಿಗೆ ಮನಸ್ಸಿಗೆ ತುಂಬಾ ನೋವಾಯಿತು. ತನ್ನಕ್ಕಿಂತಲೂ ಚಂದದವನು ಇದ್ದಾನಲ್ಲಾ ಎಂದು. ಈ ರೀತಿ ಮನ್ಮಥನ ಮನಸ್ಸಿಗೆ ಕತ್ತಿಯಂತೆ ಇರುವ ರೂಪ ಕೃಷ್ಣನದ್ದು. ಕಂಸಾರಿ ಎಲ್ಲಾ ದುಷ್ಟರನ್ನೂ ಸಂಹರಿಸಿ ಇಡೀ ನಂದಗೋಕುಲವನ್ನೂ ಮಧುರೆಯನ್ನೂ ರಕ್ಷಣೆ ಮಾಡಿದನು. ಇಂತಹ ಕೃಷ್ಣನೇ ನಮ್ಮ ಜೊತೆಗೂ ಸದಾಕಾಲ ಇರು. ನಮ್ಮಲ್ಲಿರುವ ದುಷ್ಟತನವನ್ನು ನಾಶಮಾಡು.

**ಮಧುಮದಕ್ಷಯಮಾಲ್ಯಸುವಿಸ್ತೃತೇ ಕುಜನಮಾನಸಮಾಪ್ತಿದವಿಕ್ರಮ ।**
**ಸುಖದವಾಮನಸೋಮರಸಾರ್ಥಿಷು ಶ್ರಿಯಮುದಾಯ ಮುದಾರ್ಜಯಸೇವನೌ**
**॥ ೧೧ ॥**

ಮಧು=ಮಧುವಿನ; ಮದ=ಅಹಂಕಾರವನ್ನು; ಕ್ಷಯ=ನಾಶಮಾಡಿದವನೇ; ಮಾ= ರಮೆ ಎಂಬ; ಅಲಿ=ಗೆಳತಿಯ; ಅಸು=ಪ್ರಾಣಗಳಿಗೆ; ವಿಸ್ತೃತೇ=ವಿಸ್ತಾರ ಕೊಟ್ಟವನೇ; ಕು=ಭೂಮಿಗೆ; ಜನ=ಜನಲೋಕಕ್ಕೆ; ಮಾನ=ಅಳತೆಗೆ; ಸಮಾಪ್ತಿ=ಕೊನೆಯನ್ನು; ದ=ಕೊಡುವ; ವಿಕ್ರಮ=ಪರಾಕ್ರಮವುಳ್ಳವನೇ; ಸೋಮ=ಸೋಮಲತೆಯ; ರಸ=ರಸವನ್ನು; ಅರ್ಥಿಷು=ಅಪೇಕ್ಷಿಸುವವರಲ್ಲಿ; ಸುಖ=ಸುಖವನ್ನು; ದ=ಕೊಡುವವನೇ; ವಾಮನ= ವಾಮನನೇ; ಉತ್=ಉತ್ತಮವಾದ; ಅಯ=ಅಭೀಷ್ಟಗಳುಳ್ಳವನೇ; ಅವನೌ=ಭೂಮಿಯಲ್ಲಿ; ಶ್ರಿಯಂ=ರಮೆಯನ್ನು; ಮುದಾ=ಸಂತೋಷದಿಂದ; ಆರ್ಜಯಸೇ=ಪಡೆದಿದ್ದಿ.

ಮಧುಮತ್=ಮಕರಂದ ಇರುವ; ಅಕ್ಷಯ=ಬಾಡದ; ಮಾಲ್ಯ=ಮಾಲೆಯಿಂದ; ಸುವಿಸ್ತೃತೇ=ವಿಸ್ತಾರವುಳ್ಳವನೇ; ಕುಜನ=ಕೆಟ್ಟವರ; ಮಾನ=ಅಹಂಕಾರಕ್ಕೆ; ಸಮಾಪ್ತಿ= ಕೊನೆಯನ್ನು; ದ=ಕೊಡುವ; ವಿಕ್ರಮ=ಶಕ್ತಿಯವನೇ; ಅಮರ=ದೇವತೆಗಳ; ಸಾರ್ಥಿಷು= ಸಹಾಯಕರಲ್ಲಿ; ಅಮನಸಃ=ಪ್ರೀತಿ ಇಲ್ಲದವರಿಗೆ; ಸುಖ=ಸುಖಕ್ಕೆ; ದವ=ಬೆಂಕಿ ಯಂತಿರುವವನೇ; ಉತ್=ಉತ್ತಮವಾದ; ಆಯ=ಪ್ರಾಪ್ತಿವುಳ್ಳವನೇ; ಅವನೌ=ಭೂಮಿಯಲ್ಲಿ; ಶ್ರಿಯಂ=ಸಂಪತ್ತನ್ನು; ಮುದಾ=ಸಂತೋಷದಿಂದ; ಆರ್ಜಯಸೇ=ಗಳಿಸುತ್ತಿ.

ಈ ಶ್ಲೋಕದಲ್ಲಿ ಮಧುಸೂದನ, ವಾಮನ, ತ್ರಿವಿಕ್ರಮ, ಶ್ರೀಧರ ರೂಪಗಳನ್ನು ಕೃಷ್ಣರೂಪವನ್ನು ವರ್ಣಿಸುತ್ತಾರೆ.

ಬ್ರಹ್ಮಾಂಡ ಸೃಷ್ಟಿಗಿಂತ ಮೊದಲೇ ಮಧು-ಕೈಟಭರು ಹುಟ್ಟಿದ್ದರು. ದೇವರ ಜೊತೆ ಕಾದಾಡಿದರು. ಸೋತರು. ನೀರಿಲ್ಲದ ಜಾಗದಲ್ಲಿ ನಮ್ಮನ್ನು ಕೊಲ್ಲು ಎಂದು ಅಹಂಕಾರದಿಂದ ಹೇಳಿದರು. ತನ್ನ ತೊಡೆಯ ಮೇಲೆ ಅವರನ್ನು ಇರಿಸಿ ದೇವರು ಸಂಹರಿಸಿದನು. ಈ ರೀತಿ ಮಧುದೈತ್ಯನ ಅಹಂಕಾರವನ್ನು ಇಳಿಸಿದವನು. ಇದರಿಂದ ದೇವರಿಗೆ ಮಧುಸೂದನ ಎಂಬ ಹೆಸರು. ಈ ಲೀಲೆಯ ಪ್ರದರ್ಶನ ಪ್ರಳಯಜಲದಲ್ಲಿ. ಆಗ ದೇವರು ಒಬ್ಬನೇ ಇದ್ದ. ಅನಂತರ ಮಧುಕೈಟಭರು ಹುಟ್ಟಿದರು ಎಂದು ಭಾವಿಸಬಾರದು. ದೇವರ ಜೊತೆಗೆ ರಮೆಯು ಯಾವಾಗಲೂ ಇರುತ್ತಾಳೆ. ಇವಳು ದೇವರಿಗೆ ಗೆಳತಿ. ದೇವರು ಇವಳನ್ನೂ ತನ್ನಂತೆಯೇ ಎಲ್ಲಾ ದೇಶಕಾಲಗಳಲ್ಲಿಯೂ ಇರುವಂತೆ ಮಾಡಿದ್ದಾನೆ.

ದೇವರು ವಾಮನನಾಗಿ ಬಲಿಯ ಮನೆಗೆ ಬಂದ. ಬೇಡಿದ. ಭೂಮಿಯನ್ನೂ ಮೇಲಿನ ಲೋಕಗಳನ್ನೂ ಪಾತಾಳಾದಿಗಳನ್ನೂ ಎರಡು ಹೆಜ್ಜೆಗಳಿಂದ ಅಳೆದನು. ಇಡೀ ಬ್ರಹ್ಮಾಂಡದ ಅಳತೆ ಇಷ್ಟೇ ಎಂದು ತೋರಿಸಿದನು. ಇಷ್ಟು ವಿಲಕ್ಷಣವಾದ ಹೆಜ್ಜೆ ಹಾಗೂ ಪರಾಕ್ರಮವುಳ್ಳವನು. ಈ ಮೂಲಕ ಬಲಿಯ ನೂರನೆಯ ಯಾಗಕ್ಕೆ ಅಡ್ಡಿ ಮಾಡಿದನು. ಇದರಿಂದ ದೇವತೆಗಳಿಗೆ ಸೋಮರಸದ ಆಹುತಿಯು ತಪ್ಪಿತು. ಎಲ್ಲಾ ಯಾಗಗಳಲ್ಲಿಯೂ ದೇವತೆಗಳೇ ತಾನೆ ಸೋಮಪಾನಕ್ಕೆ ಅರ್ಹರು. ಇದರಿಂದ ದೇವತೆಗಳಿಗೆ ಏನೂ ಬೇಸರ ಆಗಿಲ್ಲ. ಕಾರಣ- ಇದಕ್ಕಿಂತ ಹೆಚ್ಚಿನ ಸ್ವರ್ಗಲೋಕ ಅವರಿಗೆ ಉಳಿಯಿತು. ಇಲ್ಲದಿದ್ದರೆ ಬಲಿಯು ಅದನ್ನೇ ಅಪಹರಿಸುತ್ತಿದ್ದ. ಈ ರೀತಿ ವಾಮನ ತ್ರಿವಿಕ್ರಮರೂಪಗಳು ದೇವತೆಗಳಿಗೆ ನೆಮ್ಮದಿಯನ್ನು ಒದಗಿಸಿದವು.

ಈತನಲ್ಲಿ ಎಲ್ಲಾ ರೀತಿಯ ಸಂಪತ್ತುಗಳೂ ಉತ್ತಮವಾಗಿವೆ. ಅಂದರೆ ಪಡೆಯಬೇಕಾದ್ದು ಯಾವುದೂ ಇಲ್ಲ. ಆಪ್ತಕಾಮನು ಈತನು. ಆದರೂ ತಾನು ಹೋದಲ್ಲೆಲ್ಲಾ ರಮೆಯನ್ನು ಧರಿಸಿಕೊಂಡೇ ಇರುತ್ತಾನೆ. ತನ್ನ ಶ್ರೀಧರ ಎಂಬ ರೂಪವನ್ನು ತೋರಿಸುತ್ತಾನೆ.

ಕೃಷ್ಣಾವತಾರದ ವರ್ಣನೆ- ಕೃಷ್ಣನ ಕೊರಳಲ್ಲಿ ಒಂದು ಮಾಲಿಕೆ ಇದೆ. ಅದಕ್ಕೆ ವನಮಾಲೆ ಎಂದು ಹೆಸರು. ಕುತ್ತಿಗೆಯಿಂದ ಕಾಲಿನ ತನಕ ಇದೆ. ಹಸಿಯಾದ ಹೂಗಳು. ಒಂದೂ ಬಾಡಿಲ್ಲ. ಎಲ್ಲದರಲ್ಲಿಯೂ ಮಕರಂದಗಳೂ ತುಂಬಿವೆ. ಹೀಗೆ ಕೃಷ್ಣನು ಅಲಂಕಾರ ಮಾಡಿಕೊಂಡು ಭೂಮಿಯಲ್ಲಿ ಮೆರೆದ ಎಂದಿಷ್ಟೇ ತಿಳಿಯಬಾರದು. ಕೃಷ್ಣನ ಕಾಲದಲ್ಲಿ ಕೆಟ್ಟವರೂ ಇದ್ದರು. ಬಹಳ ಕೊಬ್ಬಿದ್ದರೂ ಕೂಡಾ. ಅವರ ಸೊಕ್ಕನ್ನು ಮುರಿದನು. ತನ್ನ ಪರಾಕ್ರಮದಿಂದಲೂ ಅಲಂಕೃತನಾದನು. ದೇವತೆಗಳೂ, ಋಷಿಗಳೂ

ಪರಸ್ಪರ ಸಹಾಯಕರು. ದೇವತೆಗಳು ಮಳೆ–ಬೆಳೆಗಳನ್ನು ಕೊಟ್ಟರೆ ಋಷಿಗಳು ಆ ಬೆಳೆಗಳಿಂದ ಆಹುತಿಯನ್ನು ದೇವತೆಗಳಿಗೆ ಕೊಡುತ್ತಿದ್ದರು. ಇಂತಹ ಸಾತ್ವಿಕರಿಗೆ ಉಪದ್ರವ ಮಾಡಲೆಂದೇ ಬಹಳ ದೈತ್ಯರು ಭೂಮಿಯಲ್ಲಿ ಹುಟ್ಟಿದ್ದರು. ಇಂತಹ ತಾಮಸರಿಗೆ ಸುಖ ಸಿಗದಂತೆ ಈ ಕೃಷ್ಣನು ಮಾಡುತ್ತಿದ್ದನು. ಇವರ ಸುಖವೆಂಬ ಕಾಡಿಗೆ ಕೃಷ್ಣನು ಬೆಂಕಿಯಂತೆ ಇದ್ದನು. ಕೃಷ್ಣನು ಭೂಮಿಯಲ್ಲಿರುವ ಕೆಟ್ಟರಾಜರನ್ನು ಸಂಹರಿಸಿದನು. ಅವರ ಸಂಪತ್ತನ್ನು ದ್ವಾರಾವತಿಗೆ ಒಯ್ದನು. ತನಗೆ ಕಮ್ಮಿಯಾಗಿದೆ ಎಂಬ ಭಾವನೆಯಿಂದಲ್ಲ. ತಾನು ಪರಿಪೂರ್ಣ. ಆದರೂ ಈ ಪಶ್ಚಿಮ ಸಮುದ್ರಕ್ಕೆ ಇರುವ ರತ್ನಾಕರ ಎಂಬ ಹೆಸರನ್ನು ಅನ್ವರ್ಥಕ ಪಡಿಸುವುದು ಕೃಷ್ಣನ ಉದ್ದೇಶ. ಹೇಗೆಂದರೆ ಕೃಷ್ಣನು ಅವತಾರವನ್ನು ಸಮಾಪ್ತಿಗೊಳಿಸುವಾಗ ಇಡೀ ದ್ವಾರಕೆಯನ್ನು ಸಮುದ್ರವು ಕಬಳಿಸಿತು. ದ್ವಾರಕೆಯ ಸಂಪತ್ತು ಪೂರಾ ಸಮುದ್ರದ ಪಾಲಾಯಿತು.

**ಕರಣಪಾಲನಶೀಲನ ತೇ ಸ್ಥಿತಿಂ ಜಲಜನಾಭ ವದಂತಿ ಕಮಾಶ್ರಿತಾಃ ।**
**ವಿದುರಮೀ ವರದಾಮಧರೋದರ ಪ್ರಿಯಜುಷೋಽಯಜುಷೋಗ್ನಿಬಲೀನಿವ ॥ ೧೨ ॥**

ಕರಣ=ಇಂದ್ರಿಯಗಳ; ಪಾಲನ=ರಕ್ಷಣೆಯ; ಶೀಲ=ಸ್ವಭಾವದವನೇ; ಜಲ=ನೀರಿನಲ್ಲಿ; ಜ=ಹುಟ್ಟಿದ್ದು; ನಾಭ=ಹೊಕ್ಕುಳಲ್ಲಿರುವವನೇ; ಕಂ=ವಾಯುವನ್ನು; ಆಶ್ರಿತಾಃ=ಆಶ್ರಯಿಸಿದವರು; ನತೇ=ಪ್ರಣತನಲ್ಲಿ; ಸ್ಥಿತಿಂ=ಇರುವಿಕೆಯನ್ನು; ವದಂತಿ=ಹೇಳುತ್ತಾರೆ; ವರ=ಉತ್ತಮವಾದ; ದಾಮ=ಹಗ್ಗವನ್ನು; ಧರ=ಧರಿಸಿದ; ಉದರ=ಹೊಟ್ಟೆಯವನೇ; ಪ್ರಿಯ=ಇಷ್ಟವನ್ನು; ಜುಷ=ಮಾಡುವವರು; ಯಜುಷಃ=ಯಜುರ್ವೇದದಿಂದ; ಅಗ್ನಿ=ಅಗ್ನಿಗೆ; ಬಲೀನ್ ಇವ=ಹವಿಸ್ಸಿನಂತೆ; ಅಮೀ=ಇವರು; ವಿದುಃ=ತಿಳಿದಿದ್ದಾರೆ.

ಕ=ಮಾರುತನಿಗಾಗಿ; ರಣ=ಯುದ್ಧದ; ಪಾಲನ=ರಕ್ಷಣೆಯ; ಶೀಲ=ಸ್ವಭಾವದವನೇ; ಭವತ್=ನಿನ್ನ; ಅಂತಿಕಂ=ಸಮೀಪವನ್ನು; ಆಶ್ರಿತಾಃ=ಹೊಂದಿದ; ಅಧರ=ಕೆಳಗಿನದ್ದಕ್ಕೆ; ಉದರ=ಹೊಟ್ಟೆಗೆ; ಪ್ರಿಯ=ಇಷ್ಟವನ್ನು; ಜುಷ=ಮಾಡುವ; ಅಮೀ=ಈ; ಜಲ=ಜಡರಾದ; ಜನಾಃ=ಜನರು; ತೇ=ನಿನ್ನ; ವರದಾಂ=ವರವನ್ನು ಕೊಡುವ; ಸ್ಥಿತಿಂ=ಕ್ರಮವನ್ನು; ಅಯಜುಷಃ=ಯಜುರ್ವೇದವನ್ನು ತಿಳಿಯದವರು; ಅಗ್ನಿ ಬಲೀನ್ ಇವ. ನವಿದುಃ= ತಿಳಿಯಲಿಲ್ಲ.

ಈ ಶ್ಲೋಕದಲ್ಲಿ ಹೃಷೀಕೇಶ, ಪದ್ಮನಾಭ, ದಾಮೋದರ ರೂಪಗಳನ್ನು ಶ್ರೀಕೃಷ್ಣನನ್ನು ವರ್ಣಿಸುತ್ತಾರೆ– ಹೃಷೀಕೇಶ ಅಂದರೆ ಇಂದ್ರಿಯಗಳಿಗೆ ಒಡೆಯ ಎಂದರ್ಥ. ಇಂದ್ರಿಯಗಳು ನಮ್ಮನ್ನು ಹರ್ಷಯಂತಿ ಅಂದರೆ ಸಂತೋಷಗೊಳಿಸುತ್ತವೆ. ಆದ್ದರಿಂದ ಇಂದ್ರಿಯಗಳು ಹೃಷೀಕಗಳು. ಇಂತಹ ಇಂದ್ರಿಯಗಳನ್ನು ಪಾಲನೆಮಾಡುವ ಮೂಲಕ ಅವುಗಳಿಗೆ ದೇವರು ಒಡೆಯನು. ಈಶ ಅಂದರೆ ಒಡೆಯ ಎಂದರ್ಥ. ನಮ್ಮಿಂದ ಯಾವ

ಉಪಕಾರವನ್ನೂ ನಿರೀಕ್ಷಿಸದೆ ರಕ್ಷಿಸುತ್ತಾನೆ. ಇದು ಅವನ ಶೀಲ ಅಂದರೆ ಸ್ವಭಾವ. ಸ್ವಭಾವಕ್ಕೆ ಪ್ರತ್ಯುಪಕಾರದ ಅಪೇಕ್ಷೆ ಇರುವುದಿಲ್ಲ. ಕರಣಪಾಲನ ಶೀಲ ಎಂಬ ಪದವು ಹೃಷೀಕೇಶ ರೂಪವನ್ನು ವರ್ಣಿಸುತ್ತದೆ. ಜಲಜನಾಭ ಎಂಬ ಶಬ್ದದಿಂದ ಪದ್ಮನಾಭ ರೂಪದ ಸಂಬೋಧನೆ. ವರದಾಮೋಧರೋದರ ಎಂಬ ಶಬ್ದವು ದಾಮೋದರ ರೂಪವನ್ನು ತಿಳಿಸುತ್ತದೆ. ಈ ಮೂರು ರೂಪಗಳನ್ನು ಸಂಬೋಧಿಸಿ ಮುನಿಗಳು ಈ ರೀತಿ ಪ್ರಾರ್ಥಿಸುತ್ತಾರೆ. ಹೇ ಭಗವನ್, ನಿನ್ನ ಸನ್ನಿಧಾನ ಇರುವುದು ನಿನ್ನನ್ನು ಸಂಪೂರ್ಣವಾಗಿ ಶರಣು ಹೊಂದಿದವರಲ್ಲಿ. ಶರಣು ಹೊಂದಲು ಬೇಕಾದದ್ದು ಭೇದಚಿಂತನೆ ಹೊರತು ಐಕ್ಯ, ಸಾಮ್ಯ ಚಿಂತನೆಗಳು ಅಲ್ಲ. ಭೇದಚಿಂತನೆಗೆ ಬೇಕಾದದ್ದು ಮಧ್ವಮತದ ತಿಳುವಳಿಕೆ. ಹಾಗೆಯೇ ನಿನಗೆ ಪ್ರಿಯವಾದ ಕರ್ಮಗಳ ಆಚರಣೆ. ಹೀಗೆ ಮಧ್ವಮತವನ್ನು ತಿಳಿಯುವ ಮೂಲಕ 'ಕ' ಅಂದರೆ ವಾಯುದೇವರ ತೃತೀಯಾವತಾರವಾದ ಮಧ್ವರನ್ನು ಆಶ್ರಯಿಸಿ ಸಾತ್ವಿಕಕರ್ಮಿಗಳಾಗಿ ತಮ್ಮಲ್ಲಿ ನಿನ್ನ ಸನ್ನಿಧಾನವನ್ನು ಅನುಭವಿಸಿದರು. ಇನ್ನೊಬ್ಬರಿಗೆ ಉಪದೇಶಿಸಿದರೂ ಕೂಡಾ. ನಾವೂ ಕೂಡಾ ಸಾತ್ವಿಕಕರ್ಮಿಗಳು ಹಾಗೂ ಮಧ್ವಾನು ಯಾಯಿಗಳು. ಆದ್ದರಿಂದ ನಮ್ಮಲ್ಲಿಯೂ ಸನ್ನಿಹಿತನಾಗು ಎಂದು.

ಇದಕ್ಕೆ ಉದಾಹರಣೆ– 'ಯಜುಷಃ ಅಗ್ನಿಬಲೀನ್ ಇವ' ಎಂದು. ಯಜುರ್ವೇದವನ್ನು ಅಭ್ಯಾಸ ಮಾಡಿದವರಿಗೆ ಮಾತ್ರ ಈ ವಿಚಾರ ತಿಳಿಯುತ್ತದೆ. ಯಾವ ಅಗ್ನಿಯಲ್ಲಿ ಯಾವ ರೀತಿಯ ಆಹುತಿಯನ್ನು ಯಾವ ಸಮಯಕ್ಕೆ ಎಷ್ಟು ಪ್ರಮಾಣದಲ್ಲಿ ಯಾರು ಕೊಡಬೇಕು. ನೇರವಾಗಿ ಅಗ್ನಿಗೆ ಅಥವಾ ದೇವತೆಗಳಿಗೆ ಕೊಡುವುದಲ್ಲ. ಅಂತರ್ಯಾಮಿ ವಿವಕ್ಷೆಯಿಂದ ಕೊಡಬೇಕು ಎಂದು. ಈ ರೀತಿಯಾದ ಕರ್ಮವೇ ದೇವರಿಗೆ ಪ್ರಿಯವಾದದ್ದು. ಯಜುರ್ವೇದ ಅಲ್ಲದೆ ಬೇರೆ ವೇದಗಳಿಂದ ತಿಳಿಯುವುದಿಲ್ಲ. ಹಾಗೆಯೇ ಮಧ್ವಮತವನ್ನು ಹೊರತು ಬೇರೆ ಯಾವ ಮತಗಳಿಂದಲೂ ದೇವರಿಗೆ ಶರಣಾಗುವ ತಿಳುವಳಿಕೆ ಬರುವುದಿಲ್ಲ.

ಕೃಷ್ಣಪಕ್ಷದಲ್ಲಿ– ದ್ವಾರಕೆಯಲ್ಲಿ ನೆಲೆಸಿರುವ ಕೃಷ್ಣರೂಪವನ್ನು ಋಷಿಗಳು ಈ ರೀತಿ ಪ್ರಾರ್ಥಿಸುತ್ತಾರೆ– ಹೇ ಕೃಷ್ಣ, ಪ್ರಾಯಶಃ ಜನರು ಸ್ವಾರ್ಥಿಗಳು ಇರುತ್ತಾರೆ. ನಿನ್ನ ಬಳಿಗೆ ಬಂದು ಐಹಿಕವಾದುದನ್ನು ಬೇಡುತ್ತಾರೆ. ಲಗ್ನ–ಸಂತತಿ–ಸಂಪತ್ತು–ಊಟ–ತಿಂಡಿ ಇತ್ಯಾದಿಗಳನ್ನೇ ಆಶಿಸುತ್ತಾರೆ. ಕೇವಲ ತಮ್ಮ ಶಿಶ್ನ–ಉದರಗಳನ್ನು ತುಂಬಿಸುವುದರಲ್ಲೇ ಆಸಕ್ತರಾಗಿರುತ್ತಾರೆ. ಅದಕ್ಕಾಗಿ ನಿನ್ನ ಆರಾಧನೆಯಂತಹ ಕರ್ಮಗಳನ್ನು ಮಾಡುತ್ತಾರೆ. ಯದ್ಯಪಿ ಅವರಿಗೆ ನಿನ್ನ ಶಕ್ತಿ ಏನು ಎಂದು ಗೊತ್ತಿಲ್ಲ. ಯಜುರ್ವೇದವನ್ನು ಓದದವರು ಯಾಗಾದಿಗಳ ಬಗ್ಗೆ ಅವುಗಳ ಫಲಗಳ ಬಗ್ಗೆ ತಿಳುವಳಿಕೆವುಳ್ಳವರು ಆಗುವುದಿಲ್ಲ ಹೇಗೋ ಹಾಗೆ. ನಿನ್ನ ಶಕ್ತಿ ಏನೆಂದರೆ– ಯಾವ ಫಲದ ಆಸೆಯನ್ನೂ ಇಟ್ಟುಕೊಳ್ಳದೆ ಕರ್ಮ ಮಾಡುವವರಿಗೆ ಎಲ್ಲಾ ರೀತಿಯ ಫಲವನ್ನೂ ಕೊಡುವಂಥದ್ದು. ಇದಕ್ಕೆ ಭೀಮಸೇನನು ಉದಾಹರಣೆ. ಅವನು ನಿಷ್ಕಾಮಕರ್ಮಿ. ಅದಕ್ಕಾಗಿ ಅವನಿಗೆ ಎಲ್ಲವನ್ನೂ

ಕೊಟ್ಟಿದ್ದಿ. ವಿಶೇಷವಾಗಿ ಆತನ ಬಲದ ಪ್ರಸಿದ್ಧಿಯನ್ನು ಚೆನ್ನಾಗಿ ಮಾಡಿದಿ. ಜರಾಸಂಧನು ನಿನ್ನ ಜೊತೆಗೆ ಹೋರಾಡಿದನು ಕಂಸನ ಮರಣಾನಂತರ. ಮೊದಲ ಯುದ್ಧದಲ್ಲೇ ಆತನನ್ನು ಸಂಹರಿಸುವ ತಾಕತ್ತು ನಿನಗಿತ್ತು. ಆದರೂ ಭೀಮನಿಂದ ಕೊಲ್ಲಿಸಬೇಕೆಂಬ ಆಸೆಯಿಂದ ಜರಾಸಂಧನನ್ನು ಸೋಲಿಸುವ ಕೆಲಸವನ್ನು ಮಾತ್ರ ಮಾಡಿದಿ. ಹೀಗೆ ೧೮ ಬಾರಿ ನಿನಗೂ ಜರಾಸಂಧನಿಗೂ ಹೋರಾಟ ನಡೆದಿತ್ತು. ಕೊನೆಗೆ ಒಂದು ವಾತಾವರಣ ವನ್ನು ನಿರ್ಮಿಸಿ ಭೀಮನಿಂದ ಕೊಲ್ಲಿಸಿದಿ.

**ಶುಭಸಮುದ್ರಕರಂ ಭಜತಾಂ ಮುದೇ ಪ್ರಿಯಮೃಗಾಜನತಾಖಿಲದೇವತಮ್ ।**
**ವರಯತೇ ಸ್ಥಿರಭೂತಿಮಹೋ ಮುಹುರ್ವಿಭಜತೇ ಭಜತೇತ್ಯರುಚಿಪ್ರದಾ ॥ ೧೩ ॥**

ವಿಭಜತೇ=ಬೇರ್ಪಡಿಸುವವರಿಗೆ; ಅತಿ=ಬಹಳ; ಅರುಚಿ=ಬೇಸರವನ್ನು; ಪ್ರದಾ= ಕೊಡುವ; ಅಖಿಲ=ಪೂರ್ಣತೆಯನ್ನು; ದಾ ಇವ=ಕೊಡುವಂತೆ; ಪ್ರಿಯ=ಇಷ್ಟವಾದ; ಮೃಗ= ಕೃಷ್ಣಮೃಗದ; ಅಜಿನತಾ=ಚರ್ಮವು; ಭಜತಾಂ=ಸೇವಿಸುವವರ; ಮುದೇ= ಸಂತೋಷ ಕ್ಕಾಗಿ; ಶುಭ=ಒಳ್ಳೆಯ; ಸಮುದ್ರ=ಮುದ್ರೆಯಿಂದ ಕೂಡಿದ; ಕರಂ=ಕೈವುಳ್ಳ; ವರ= ಶ್ರೇಷ್ಠರಾದ; ಯತೇಃ=ಸನ್ಯಾಸಿಗೆ; ಸ್ಥಿರ=ದೃಢವಾದ; ಭೂತಿಂ=ಸಂಪತ್ತುಳ್ಳ; ತಂ=ವ್ಯಾಸ ರನ್ನು; ಮುಹುಃ=ಪುನಃಪುನಃ; ಭಜತೇ=ಸೇವಿಸುತ್ತದೆ; ಅಹೋ=ಆಶ್ಚರ್ಯವು.

ಭಜತಾಂ=ಭಕ್ತರಿಗೆ; ಮುದೇ=ಆನಂದಕ್ಕಾಗಿ; ಶುಭ=ಒಳ್ಳೆಯ; ಸಮುದ್ರ=ಸಮುದ್ರ ವನ್ನು; ಕರಂ=ಮಾಡಿದ; ಆಜ=ಯುದ್ಧದಲ್ಲಿ; ನತ=ಬಗ್ಗಿದ; ಅಖಿಲ=ಎಲ್ಲಾ; ದೇವತಂ= ದೇವತೆಗಳುಳ್ಳ; ಪ್ರಿಯಂ=ಇಷ್ಟನನ್ನು; ಸ್ಥಿರ=ಸ್ಥಿರವಾದ; ಭೂತಿ=ಭಸ್ಮವುಳ್ಳವನ; ಮಹಃ=ಮಹತ್ವವನ್ನು; ಭಜತೇ=ಭಜಿಸುವವನಿಗೆ; ಅತಿ=ಬಹಳ; ಅರುಚಿ=ಬೇಸರವನ್ನು; ಪ್ರದಾ=ಕೊಡುವ; ಋಕ್=ಋಕ್‌ಗಳು; ವರಯತೇ=ಸ್ವೀಕರಿಸುತ್ತದೆ; ಸ್ಥಿರಭೂತಿಂ= ನಿತ್ಯವಾದ ಭಸ್ಮದವನನ್ನು; ಮುಹುಃ=ಪುನಃ ಪುನಃ; ವಿಭಜತೇ=ಬೇರ್ಪಡಿಸುತ್ತದೆ.

ಈ ಶ್ಲೋಕದಲ್ಲಿ ಶ್ರೀ ವೇದವ್ಯಾಸರ ಹಾಗೂ ಕೃಷ್ಣನ ವರ್ಣನೆ.

ವೇದವ್ಯಾಸರು ಒಂದು ಕೈಯಲ್ಲಿ ಜ್ಞಾನಮುದ್ರೆಯನ್ನೂ ಇನ್ನೊಂದು ಕೈಯಲ್ಲಿ ಅಭಯಮುದ್ರೆಯನ್ನೂ ಧರಿಸಿದ್ದಾರೆ. ಸಾತ್ವಿಕರಿಗೆ ಈ ಎರಡು ಮುದ್ರೆಗಳ ಅವಶ್ಯಕತೆ ಇದೆ. ಆದ್ದರಿಂದ ಈ ಮುದ್ರೆಗಳಿಂದ ಕೂಡಿದ ವ್ಯಾಸರನ್ನು ಕಂಡಾಗ ಬಹಳ ಆನಂದ ಪಡುತ್ತಾರೆ. ಸನ್ಯಾಸಧರ್ಮಕ್ಕೆ ನಾಂದಿಹಾಕಿದವರೇ ಈ ವ್ಯಾಸರು. ಸನ್ಯಾಸಿಗಳಿಗೂ ಕೃಷ್ಣಾಜಿನಕ್ಕೂ ನಿತ್ಯ ಸಂಬಂಧ. ಈ ವ್ಯಾಸರು ಸದಾ ಕೃಷ್ಣಾಜಿನವನ್ನು ಧರಿಸಿಕೊಂಡೇ ಇರುವವರು. ಇದನ್ನು ಬಿಟ್ಟು ಬೇರೆ ಬಟ್ಟೆಯನ್ನು ಧರಿಸಲು ಇಷ್ಟಪಡುವುದಿಲ್ಲ. ಆದ್ದರಿಂದ ಕೃಷ್ಣಾಜಿನವನ್ನು ಬಿಡುವುದೆಂದರೆ ಇವರಿಗೆ ಬಹಳ ಬೇಸರ. ಯದ್ಯಪಿ ಮುಖ್ಯಪ್ರಾಣನ ಅವತಾರರಾದ ಆಚಾರ್ಯಮಧ್ವರಿಗೆ ಶಾಶ್ವತವಾದ ಜ್ಞಾನವೆಂಬ ಐಶ್ವರ್ಯವನ್ನು ಕೊಟ್ಟವರು.

ಇವರು ಆದಿಪುರುಷರು. ಆಚಾರ್ಯಮಧ್ವರು ಯತಿಕುಲತಿಲಕರು. ಇಷ್ಟು ಶಕ್ತಿ ಇರುವವರು ವ್ಯಾಸರು. ಇವರಿಗೆ ಯಾವ ಅಜಿನದ ಆವಶ್ಯಕತೆಯೂ ಇಲ್ಲ. ಲಕ್ಷ್ಮೀಪತಿಯಾದ್ದರಿಂದ ಸರ್ವಾಭರಣಭೂಷಿತನಾಗಿಯೇ ಇರಬಹುದು. ಆದರೂ ಲೋಕದ ಧರ್ಮದ ಪಾಲನೆಗೋಸ್ಕರ ಕೃಷ್ಣಾಜಿನವನ್ನು ಧರಿಸಿದ್ದಾರೆ. ಇದು ಬಹಳ ಆಶ್ಚರ್ಯ.

ಕೃಷ್ಣಾವತಾರದ ವರ್ಣನೆ– ಲೋಕದಲ್ಲಿ ಕೆಲವರು ಹರಿಹರರಿಗೆ ಐಕ್ಯವನ್ನು ತಿಳಿದಿದ್ದಾರೆ. ಆದರೂ ವೇದಗಳು ಹರನನ್ನೇ ತಿಳಿಸುತ್ತವೆ ಎನ್ನುತ್ತಾರೆ. ಈ ಇಬ್ಬರಿಗೂ ಶ್ರೀ ವಾದಿರಾಜರು ಕೃಷ್ಣನನ್ನು ಈ ಶ್ಲೋಕದಲ್ಲಿ ವರ್ಣಿಸುವ ಮೂಲಕ ಉತ್ತರ ಕೊಡುತ್ತಾರೆ– ಇಂದ್ರನ ಉದ್ಯಾನದ ಪಾರಿಜಾತ ವೃಕ್ಷವನ್ನು ಕೃಷ್ಣನು ಕಿತ್ತಾಗ ಅಸುರಾವೇಶದ ಇಂದ್ರಾದಿ ದೇವತೆಗಳು ಯುದ್ಧಕ್ಕೆ ಬಂದರು. ಜೊತೆಗೆ ರುದ್ರದೇವರೂ ಬಂದಿದ್ದರು. ಆ ಯುದ್ಧದಲ್ಲಿ ಎಲ್ಲಾ ದೇವತೆಗಳೂ ಸೋತರು. ಅಸುರಾವೇಶ ಹೋದಮೇಲೆ ಎಲ್ಲಾ ದೇವತೆಗಳೂ 'ಕ್ಷಮಿಸು'; ಎಂದು ಕೃಷ್ಣನನ್ನು ನಮಿಸಿದರು. ಕೃಷ್ಣನು ಕ್ಷಮಿಸಿದನು. ತನ್ಮೂಲಕ ಎಲ್ಲಾ ದೇವತೆಗಳಿಗೂ ಕೃಷ್ಣನು ಪ್ರಿಯನಾದನು. ಇಂತಹ ಅನೇಕ ಪ್ರಕರಣಗಳಿಂದ ಕೃಷ್ಣನ ಉತ್ತಮತ್ವವು ಪ್ರಕಟವಾಯಿತು. ವೇದಗಳು ದೇವರ ಬಲವು ಅನಂತ, ಆತನನ್ನು ಸೋಲಿಸುವವರು ಈತನಕ ಹುಟ್ಟಿಲ್ಲ. ಇನ್ನು ಹುಟ್ಟುವುದೂ ಇಲ್ಲ. ಇಂತಹ ದೇವರ ಅನುಗ್ರಹದಿಂದ ರುದ್ರ ದೇವರು ತನ್ನ ಪದವಿಯನ್ನು ಪಡೆದರು ಎಂದು ಹೇಳುತ್ತವೆ. ಒಂದುವೇಳೆ ವೇದಗಳು ರುದ್ರನನ್ನೇ ಹೇಳುವುದಾದರೆ ಈ ವೇದದ ಮಾತುಗಳನ್ನು ರುದ್ರದೇವರಿಗೆ ಕೂಡಿಸುವುದು ಹೇಗೆ? ಯಾಕೆಂದರೆ ರುದ್ರದೇವರು ಕೃಷ್ಣನಿಂದ ಸೋತಿದ್ದಾರೆ. ಇದರಿಂದಾಗಿ ರುದ್ರದೇವರ ಬಲಕ್ಕೆ ಅವಧಿಯೂ ಗೊತ್ತಾಯಿತು. ತಥಾ ಚ ಕೃಷ್ಣನು ಗೆದ್ದವ. ರುದ್ರರು ಸೋತವರು ಎಂಬುದಾಗಿ ಇವರಿಬ್ಬರಿಗೆ ಭೇದವೂ ಸಿದ್ಧವಾಯಿತು. ಆದರೆ ಇಂತಹ ಮಾತು ಶೈವರಿಗೆ ರುಚಿಸುವುದಿಲ್ಲ. ಅವರು ವೈಷ್ಣವರ ಮೇಲೆ ಸಿಟ್ಟಾಗುತ್ತಾರೆ. ಈ ಪ್ರಸಂಗದಲ್ಲೇ ಒಂದು ಗಾದೆಯಮಾತು ಆರಂಭವಾದದ್ದು– ಇದ್ದದ್ದನ್ನು ಇದ್ದಹಾಗೆ ಹೇಳಿದರೆ ಬೆಂಕಿಯಂತಹ ಸಿಟ್ಟು ಎಂದು. ಆದರೂ ನೈಜವಿಚಾರವನ್ನು ಹೇಳದೆ ಇರುವಂತಿಲ್ಲ.

**ಭಜಕಭಾವಿವಿರಿಂಚಕೃತೇ ಪ್ರಿಯಪ್ರಣವಪಾಶವೃತಸ್ತ್ವಮಥೇಷ್ಯಸಿ ।**
**ತದವನಿಂ ಶಿವರೂಪ್ಯಮಿತೋಬ್ಧಿಗಃ ಕುಮತಿನಾ ಮತಿನಾಶನದಂಡಧೃತ್ ॥ ೧೪ ॥**

ಪ್ರಿಯ=ಭಕ್ತರಲ್ಲಿ; ಪ್ರಣಯ=ಪ್ರೀತಿ ಉಳ್ಳವನೇ; ಪಾಶ=ಹಗ್ಗದಿಂದ; ವೃತ=ಕೂಡಿದ; ತ್ವಂ=ನೀನು; ಕುಮತಿನಾಂ=ದುಷ್ಟರಿಗೆ; ಅತಿನಾಶನ=ಬಹಳ ನಾಶವನ್ನು ಕೊಡುವ; ದಂಡ=ಕಡೆಗೋಲನ್ನು; ಧೃತ್=ಧರಿಸಿದವನಾಗಿ; ಇತಃ=ದ್ವಾರಕೆಯಿಂದ; ಅಬ್ಧಿಗಃ=ಸಮುದ್ರ ಮಾರ್ಗವಾಗಿ; ಭಜಕ=ಭಕ್ತನಾದ; ಭಾವಿ=ಮುಂದಿನ; ವಿರಿಂಚಕೃತೇ=ಬ್ರಹ್ಮನಿಗಾಗಿ; ತತ್=ಅವನ; ಅವನಿಂ=ಭೂಮಿಯಾದ; ಶಿವರೂಪ್ಯಂ=ಶಿವಳ್ಳಿಯನ್ನು; ಏಷ್ಯಸಿ=ಹೊಂದುತ್ತಿ.

ಕುಮತಿನಾ=ದುಷ್ಟಬುದ್ಧಿಯವರಿಂದ; ಅಮಿತಃ=ತಿಳಿಯಲಸಾಧ್ಯವಾದ; ಅಮತಿ= ಅಜ್ಞಾನವನ್ನು; ನಾಶನ=ನಾಶಮಾಡುವ; ದಂಡ=ಶಿಕ್ಷೆಯನ್ನು; ಧೃತ=ಧರಿಸಿದ; ತ್ವಂ=ನೀನು; ಅಥ=ಅನಂತರ; ಅಬ್ಧಿಗಃ=ಸಮುದ್ರದಲ್ಲಿ ಇರುವವನಾಗಿ; ಭಜಕ=ಸೇವಕನಾದ; ಭಾವಿ= ಭಕ್ತನಾದ; ವಿರಿಂಚಕೃತೇ=ಬ್ರಹ್ಮನಿಗಾಗಿ; ಪ್ರಿಯ=ಭಕ್ತರಲ್ಲಿ; ಪ್ರಣಯ=ಪ್ರೀತಿಯೆಂಬ; ಪಾಶ= ಹಗ್ಗದಿಂದ; ವೃತಃ=ಕೂಡಿದವನಾಗಿ; ತತ್=ಭಕ್ತರ; ಅವನಿಂ=ಭೂಮಿಯನ್ನು; ಏಷ್ಯಸಿ= ಹೊಂದುತ್ತಿ.

ಈ ಶ್ಲೋಕದಲ್ಲಿ ಉಡುಪಿ ಕೃಷ್ಣನನ್ನೂ ಕೃಷ್ಣಾವತಾರವನ್ನೂ ವರ್ಣಿಸುತ್ತಾರೆ– ಉಡುಪಿ ಕೃಷ್ಣನ ಎಡಗೈಯಲ್ಲಿ ಹಗ್ಗವೂ ಬಲಗೈಯಲ್ಲಿ ಕಡೆಗೋಲೂ ಇದೆ. ಕಡಗೋಲು ಹಿಡಿದ ಉದ್ದೇಶ ಈ ರೀತಿ ಇದೆ– ಲೋಕದಲ್ಲಿ ಮಾಯಾವಾದಿಗಳು ದೇವರನ್ನು ಬಹಳವಾಗಿ ನಿಂದಿಸುತ್ತಾರೆ. ಇಂತಹವರನ್ನು ಚೆನ್ನಾಗಿ ನಿಗ್ರಹಿಸಲು ಈ ಕಡೆಗೋಲು. ದ್ವಾರಾವತಿಯಿಂದ ಗೋಪೀಚಂದನದ ಒಳಗೆ ಅವಿತು ಉಡುಪಿಗೆ ಬಂದನು. ಉಡುಪಿಗೆ ಶಿವರೂಪ್ಯ, ಶಿವಬೆಳ್ಳಿ, ಶಿವಳ್ಳಿ ಎಂಬ ಹೆಸರೂ ಇದೆ. ಇದು ಮಧ್ವರ ಕ್ಷೇತ್ರ, ಮಧ್ವರು ಮುಂದಿನ ಕಲ್ಪದಲ್ಲಿ ಬ್ರಹ್ಮನಾಗುವರು. ಭಕ್ತರು ತುಂಬಾ ಅಶಾಂತರಾಗಿದ್ದರು. ಇವರ ಶಾಂತಿಗಾಗಿ ಮಧ್ವರು ಕೃಷ್ಣನನ್ನು ಉಡುಪಿಗೆ ಬರಲು ಪ್ರಾರ್ಥಿಸಿದ್ದರು. ಅವರ ಪ್ರಾರ್ಥನೆ ಮೇರೆಗೆ ಇಲ್ಲಿಗೆ ಬಂದನು. ಬಂದದ್ದು ಸಮುದ್ರಮಾರ್ಗವಾಗಿ.

ಕೃಷ್ಣಾವತಾರದ ವರ್ಣನೆ– ಭಕ್ತರು ಭಗವಂತನನ್ನು ಪ್ರೀತಿ ಎಂಬ ಹಗ್ಗದಿಂದ ಕಟ್ಟಿದ್ದಾರೆ. ಆದ್ದರಿಂದ ಭಕ್ತರು ಪ್ರಾರ್ಥನೆ ಮಾಡಿದಾಗೆಲ್ಲಾ ದೇವರು ಅವತರಿಸುತ್ತಾನೆ. ಮನ್ಮಥನಿಗೂ ಮನ್ಮಥನಾದ ದೇವರು ಕ್ಷೀರಸಾಗರದಲ್ಲಿ ಮಲಗಿರುತ್ತಾನೆ. ಭೂಮಿಯಲ್ಲಿ ದೈತ್ಯರು ಕಂಸ–ಜರಾಸಂಧಾದಿ ರೂಪದಿಂದ ಅವತರಿಸಿ ಸಾತ್ವಿಕರನ್ನು ಪೀಡಿಸುತ್ತಾರೆ. ಆಗ ಎಲ್ಲರೂ ಚತುರ್ಮುಖನನ್ನು ಮುಂದಿಟ್ಟುಕೊಂಡು ಕ್ಷೀರಸಮುದ್ರಕ್ಕೆ ಹೋಗುತ್ತಾರೆ. ದೇವರನ್ನು, ಭೂಮಿಯಲ್ಲಿ ಅವತರಿಸಿ ಸಾತ್ವಿಕರನ್ನು ಪೊರೆಯಲು ದುಷ್ಟರನ್ನು ಶಿಕ್ಷಿಸುವಂತೆ ಪ್ರಾರ್ಥಿಸುತ್ತಾರೆ. ದೇವರು ಕೃಷ್ಣರೂಪದಿಂದ ಅವತರಿಸುತ್ತಾನೆ. ಈ ಕೃಷ್ಣನು ದೇವರು ಎಂಬ ಪರಿಚಯ ಜರಾಸಂಧಾದಿಗಳಿಗೆ ಇರುವುದಿಲ್ಲ. ಅವರಿಗೆ ಮಾತ್ರ ಯಾಕೆ? ಸಾತ್ವಿಕರಿಗೂ ಕೆಲವೊಮ್ಮೆ ಇರುವುದಿಲ್ಲ. ಕೃಷ್ಣನು ಒಬ್ಬ ಸಾಮಾನ್ಯ ಮಾನವ ಎಂದು ತಿಳಿದಿರುತ್ತಾರೆ. ಕೃಷ್ಣನು ಕಂಸಾದಿಗಳನ್ನು ಕೊಲ್ಲುವ ಮೂಲಕ ತಾನು ಮಾನವನಲ್ಲ ಎಂಬುದನ್ನು ಸಾತ್ವಿಕರಿಗೆ ಮಾತ್ರ ತಿಳಿಸುತ್ತಾನೆ. ಈ ರೀತಿಯಾಗಿ ದೇವರು ಬ್ರಹ್ಮನ ಪ್ರತಿಯೊಂದು ದಿನದಲ್ಲಿಯೂ ಕೃಷ್ಣಾವತಾರವನ್ನು ತಾಳುತ್ತಾನೆ.

**ಭುವನವಾಸ್ಯನಿಶಂ ಮನುಸಂಸ್ತುತೋ**
**ವಿಧಿವಿರೋಧಿ ವಿನಾಶಕೃದನ್ವಹಮ್ ।**

ಅನಿಮಿಷಪ್ರಭುರಾಗಮಹರ್ಷದೋ
ನಿಜವಶೋ ಜವಶೋಭಿತಸಾಗರಃ ॥ ೧೫ ॥

ಅನಿಶಂ=ಸದಾ; ಭುವನ=ಜಲದಲ್ಲಿ; ವಾಸಿ=ಇರುವ; ಅನ್ವಹಂ=ಯಾವಾಗಲೂ; ಮನು=ಮನುವಿನಿಂದ; ಸಂಸ್ತುತಃ=ಹೊಗಳಲ್ಪಡುವ; ವಿಧಿ=ಬ್ರಹ್ಮನಿಗೆ; ವಿರೋಧಿ= ವಿರೋಧಿಗಳ; ವಿನಾಶ=ನಾಶವನ್ನು; ಕೃತ್=ಮಾಡುವ; ಆಗಮ=ವೇದಗಳಿಗೆ; ಹರ್ಷ= ಆನಂದವನ್ನು; ದ=ಕೊಡುವ; ಜವ=ವೇಗದಿಂದ; ಶೋಭಿತ=ಶೋಭಿಸುವ; ಸಾಗರಃ= ಸಮುದ್ರವುಳ್ಳ; ಅನಿಮಿಷ=ಮೀನುಗಳಿಗೆ; ಪ್ರಭುಃ=ಒಡೆಯನು; ನಿಜ=ತನ್ನವರ; ವಶಃ=ಅಧೀನನು.

ಅನಿಶಂ=ಸದಾ; ಭುವನ=ಲೋಕದಲ್ಲಿ; ವಾಸೀ=ವಾಸಿಸುವ; ಮನು=ಕೃಷ್ಣಮಂತ್ರದಿಂದ; ಸಂಸ್ತುತಃ=ಹೊಗಳಲ್ಪಡುವ; ಅನ್ವಹಂ=ಯಾವಾಗಲೂ; ವಿಧಿ=ನಿಯಮಗಳಿಗೆ; ವಿರೋಧಿ=ವಿರೋಧಿಗಳ; ವಿನಾಶ=ನಾಶವನ್ನು; ಕೃತ್=ಮಾಡುವ; ಆಗಮ=ಬರುವಿಕೆಯಿಂದ; ಹರ್ಷ=ಆನಂದವನ್ನು; ದ=ಕೊಡುವ; ಜವಶೋಭಿತಸಾಗರಃ ಅನಿಮಿಷ=ದೇವತೆಗಳಿಗೆ; ಪ್ರಭುಃ=ಒಡೆಯನು; ನಿಜ=ತನ್ನವರ; ವಶಃ=ಅಧೀನರು.

ಈ ಶ್ಲೋಕದಲ್ಲಿ ಮತ್ಸ್ಯ–ಕೃಷ್ಣಾವತಾರವನ್ನು ವರ್ಣಿಸುತ್ತಾರೆ. ಬ್ರಹ್ಮನ ಪ್ರತಿಯೊಂದು ದಿನದಲ್ಲಿಯೂ ದೇವರು ಮೀನಾಗಿ ಅವತರಿಸುತ್ತಾನೆ. ಮೀನು ಸದಾ ನೀರಿನಲ್ಲೇ ಇರತಕ್ಕದ್ದು. ಈ ಮೀನನ್ನು ಮೊದಲು ಕಂಡವ ವೈವಸ್ವತಮನು. ಈತನು ಬೊಗಸೆಯಿಂದ ನೀರೆತ್ತುವಾಗ ಆತನ ಕೈಯಲ್ಲಿ ಬಂತು. ಅದನ್ನು ಕೆಳಗಿಳಿಸಲು ಆಶಿಸಿದಾಗ ಅದರ ಆಣತಿಯಂತೆ ಪಾತ್ರೆಯಲ್ಲಿ ಹಾಕಿದ. ಅಲ್ಲಿ ಅದು ಬೆಳೆಯಿತು. ಅಲ್ಲಿಂದ ಬಾವಿಗೆ, ಅಲ್ಲಿಂದ ನದಿಗೆ, ಅಲ್ಲಿಂದ ಸಮುದ್ರಕ್ಕೆ ಹಾಕಿದನು. ಆಗ ಆ ಮೀನಿನ ಬಗ್ಗೆ ಅರಿವು ಮೂಡಿತು. ಅದನ್ನು ಚೆನ್ನಾಗಿ ಹೊಗಳಿದನು. ಬ್ರಹ್ಮನ ಬಳಿ ಇರುವ ವೇದಾಭಿಮಾನಿ ದೇವತೆಗಳನ್ನು ಅಸುರನು ಅಪಹರಿಸಿದನು. ಅಂತಹ ಅಸುರನನ್ನು ಕೊಂದು ವೇದಾಭಿಮಾನಿಗಳಿಗೆ ನೆಮ್ಮದಿಯನ್ನು ಕೊಟ್ಟವನು. ಮೀನುಗಳಿಗೆ ನೀರಿನಲ್ಲಿ ಸಹಜ ಬಲ. ದೇವರ ಅವತಾರಿ ಮೀನಿನ ಬಗ್ಗೆ ಏನು ಹೇಳುವುದು? ಈ ರೀತಿ ಬಹಳ ಬಲಿಷ್ಠವಾದ ಮೀನು ಸಮುದ್ರದಲ್ಲಿ ಬಹಳ ವೇಗವಾಗಿ ಓಡುತ್ತಿತ್ತು. ಇದರಿಂದ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಏಳುತ್ತಿತ್ತು. ಸಮುದ್ರಕ್ಕೆ ಒಂದು ವಿಶೇಷವಾದ ಶೋಭೆ ಬರುತ್ತಿತ್ತು. ಇತರ ಮೀನುಗಳಿಗಿಂತ ಇದು ವಿಲಕ್ಷಣ. ಇಂತಹ ಮೀನು ಭಕ್ತನಾದ ನನ್ನ ವಶನಾಗಲಿ.

ಕೃಷ್ಣಾವತಾರದ ಬಗ್ಗೆ– ಕೃಷ್ಣನು ಬ್ರಹ್ಮಾದಿ ದೇವತೆಗಳಿಗೂ ಒಡೆಯ. ಆದರೂ ತನ್ನ ಭಕ್ತರು ಯಾರು ಕರೆದರೂ ಅಲ್ಲಿಗೆ ಹೋಗಿ ಅವರ ವಿಪತ್ತನ್ನು ಪರಿಹರಿಸಿ ಅವರಿಗೆ ನೆಮ್ಮದಿಯನ್ನು ಕೊಡುವನು. ಪಾಂಡವರು ರಾಜಸೂಯಾದಿ ಯಾಗವನ್ನು

ಮಾಡಲು ತೊಡಗಿದರು. ಅದಕ್ಕೆ ಜರಾಸಂಧಾದಿಗಳು ಅಡ್ಡಿ ಮಾಡಿದರು. ಅಂತವರನ್ನು ಕೃಷ್ಣನು ಚೆನ್ನಾಗಿ ನಿಗ್ರಹಿಸಿದನು. ಭಕ್ತರಿಗೆ ಶೀಘ್ರವಾಗಿ ಪ್ರತಿಕ್ರಯಿಸುತ್ತಾನೆ. ಇದರಿಂದಾಗಿ ಭಜಕರಿಗೆ ಬಹಳ ಆನಂದ. ಈ ಭಕ್ತರು ಕೃಷ್ಣನಿಂದಾಗಿ ಕಷ್ಟಪರಿಹಾರವಾಯಿತು ಎಂದು ಇನ್ನೊಬ್ಬರಿಗೆ ತಿಳಿಸುವಾಗ ಕೃಷ್ಣನನ್ನು 'ಸಮುದ್ರದಲ್ಲಿ ಇರುವವ' ಎಂದು ಪರಿಚಯಿಸುತ್ತಿದ್ದರು. ಇದರಿಂದಾಗಿ ಸಮುದ್ರಕ್ಕೂ ಒಂದು ರೀತಿಯ ಶೋಭೆಯು ಬರುತ್ತಿತ್ತು. ಯಾಕೆಂದರೆ ಕೃಷ್ಣನ ಹೆಸರಿನ ಜೊತೆ ತನ್ನ ಹೆಸರು ಸೇರಿದ್ದರಿಂದ. ಇಂತಹ ಕೃಷ್ಣನು ತನ್ನ ಅವತಾರವನ್ನು ಸಮಾಪ್ತಿಗೊಳಿಸಿ ಮೂಲರೂಪ ಸೇರುವಾಗ ಒಂದಂಶದಿಂದ ಭೂಮಿಯಲ್ಲಿಯೇ ಉಳಿದನು. ಯಾಕೆಂದರೆ ಯಾರು ಪ್ರತಿದಿನ ಕೃಷ್ಣಮಂತ್ರವನ್ನು ಜಪಿಸುತ್ತಾರೋ ಅವರಿಗೆ ಫಲ ಕೊಡುವುದಕ್ಕೋಸ್ಕರ. ನಾವು ಸದಾ ಕೃಷ್ಣಮಂತ್ರವನ್ನು ಜಪಿಸುವ ಮೂಲಕ ಕೃಷ್ಣಭಕ್ತರಾಗೋಣ. ಕೃಷ್ಣನನ್ನು ಭಕ್ತಪರಾಧೀನನನ್ನಾಗಿ ಮಾಡೋಣ.

**ಭುಜಗದಿಕ್ಕರಿಭಾರಜಶೋಕಹೃತ್‌ಸುರಮನೋರಥ ಪೂರಣ ಕಾರಣಃ ।**
**ಸ್ವಮತವಾರಿನಿಧೇರ್ಮಥನೇ ಪಟುರ್ಗಿರಿಧರೋಽರಿಧರೋಽಯಮಿಹಾಗತಃ ॥ ೧೬ ॥**

ಭುಜಗ=ಶೇಷನ; ದಿಕ್=ದಿಕ್ಕುಗಳ; ಕರಿ=ಆನೆಗಳ; ಭಾರ=ಭಾರದಿಂದ; ಜ=ಉಂಟಾದ; ಶೋಕ=ದುಃಖವನ್ನು; ಹೃತ್=ನಾಶಮಾಡುವ; ಸುರ=ದೇವತೆಗಳ; ಮನೋರಥ=ಆಸೆಯ; ಪೂರಣ=ತುಂಬಿಸುವಿಕೆಯಲ್ಲಿ; ಕಾರಣಃ=ಕಾರಣನಾದ; ಸ್ವ=ತನಗೆ; ಮತ=ಸಮ್ಮತವಾದ; ವಾರಿನಿಧೇಃ=ಸಮುದ್ರದ; ಮಥನೇ=ಮಥನದಲ್ಲಿ; ಪಟುಃ=ಸಮರ್ಥನಾದ; ಗಿರಿ=ಬೆಟ್ಟವನ್ನು; ಧರಃ=ಧರಿಸಿದ; ಅರಿ=ಚಕ್ರದ; ಧರಃ=ಧಾರಿಯಾದ; ಅಯಂ=ಈ ಕೂರ್ಮನು; ಇಹ=ಕ್ಷೀರಸಮುದ್ರಕ್ಕೆ; ಆಗತಃ=ಬಂದಿದ್ದಾನೆ. ಎರಡನೇ ಅರ್ಥದಲ್ಲಿ ಪದಭೇದದಲ್ಲಿ ವ್ಯತ್ಯಾಸ ಪ್ರಾಯಶಃ ಇಲ್ಲ. ಸ್ವಮತವಾರಿನಿಧೇಃ ಎಂಬಲ್ಲಿ ಹೊರತಾಗಿ. ಇಲ್ಲಿ ಪದಭೇದ ಈ ರೀತಿ ಇದೆ– ಸು=ಚೆನ್ನಾಗಿ; ಅಮತ=ಅನಭಿಪ್ರೇತರಾದ ಕಂಸಾದಿಗಳೆಂಬ; ವಾರಿನಿಧೇಃ=ಸಮುದ್ರದ ಎಂದು.

ಈ ಶ್ಲೋಕದಲ್ಲಿ ಕೂರ್ಮಾವತಾರದ ವರ್ಣನೆ– ಈ ಭೂಮಿಯನ್ನು ಎಂಟು ಆನೆಗಳೂ ಶೇಷನೂ ಹೊತ್ತಿವೆ. ಗುಡ್ಡಬೆಟ್ಟಗಳಿಂದ ಕೂಡಿದ್ದು ಈ ಭೂಮಿ. ಇಂತಹ ಭೂಮಿಯನ್ನು ಹೊರುವುದರಿಂದ ಆಯಾಸ ಸಹಜ. ಇದರಿಂದ ಅವರಿಗೆ ಬಹಳ ದುಃಖ. ಇದನ್ನು ಪರಿಹರಿಸಲು ದೇವರು ವಾಯುದೇವರಿಗೆ ಕೂರ್ಮರೂಪದಿಂದ ಅವರನ್ನು ಹೊರಲು ಆಜ್ಞಾಪಿಸಿದನು. ಈ ವಾಯುಕೂರ್ಮವನ್ನು ದೇವರು ತಾನು ಕೂರ್ಮರೂಪದಿಂದ ಧರಿಸಿದ್ದಾನೆ. ಈ ರೀತಿಯಿಂದ ಪರಂಪರಯಾ ಶೇಷಾದಿಗಳನ್ನು ಈ ಕೂರ್ಮವು ಹೊತ್ತು ಅವರ ದುಃಖವನ್ನು ಪರಿಹರಿಸಿದ್ದಾನೆ. ದೂರ್ವಾಸರ ಶಾಪದಿಂದ ದೇವತೆಗಳು ಸಂಪತ್ತಿನಿಂದ ಭ್ರಷ್ಟರಾದರು. ದೇವತೆಗಳು ದೇವರಲ್ಲಿ ಮೊರೆಯಿಟ್ಟರು. ಸಮುದ್ರವನ್ನು ಮಥಿಸಿದರೆ ಪುನಃ ಸಂಪತ್ತು ಲಭಿಸುವುದು ಎಂದು ದೇವರು ಆಜ್ಞಾಪಿಸಿದನು.

ದೇವತೆಗಳು ಹಾಗೆಯೇ ಮಾಡಿದರು. ಆದರೆ ಪರ್ವತವು ಮುಳುಗಲು ಆರಂಭಿಸಿತು. ದೇವತೆಗಳು ನಿರಾಶರಾದರು. ಆಗ ದೇವರು ತಾನು ಆಮೆಯಾದನು. ಸಮುದ್ರವನ್ನು ಮಥಿಸುವ ಅಭಿಪ್ರಾಯ ತನಗೂ ಇತ್ತು. ಆದ್ದರಿಂದ ಆ ಬೆಟ್ಟವನ್ನು ಬೆನ್ನಿಂದ ಎತ್ತಿದನು. ತಾನು ಗಿರಿಧರನಾದನು. ದೇವತೆಗಳಿಗೆ ಬಹಳ ಆನಂದವಾಯಿತು. ಬೆಟ್ಟವನ್ನು ಎತ್ತುವ ಮೂಲಕ ದೇವತೆಗಳ ಆಸೆ ಈಡೇರಲು ತಾನೇ ಪ್ರಧಾನ ಕಾರಣನಾದನು. ಸಮರ್ಥವಾಗಿ ಆ ಕೆಲಸವನ್ನು ನಿಭಾಯಿಸಿದನು. ಯಾವ ಅವತಾರವನ್ನು ತಾಳಿದರೂ ದೇವರ ಚಕ್ರಾದಿ ಆಯುಧಗಳು ಆತನ ಜೊತೆಯಲ್ಲಿ ಅದೃಶ್ಯವಾಗಿಯಾದರೂ ಇರುತ್ತವೆ.

ಕೃಷ್ಣಾವತಾರದ ವರ್ಣನೆ– ಭೂಮಿಯಲ್ಲಿ ದೈತ್ಯರು ಕಂಸಾದಿರೂಪದಿಂದ ಹುಟ್ಟಿದ್ದಾರೆ. ತುಂಬಾ ಅನ್ಯಾಯವನ್ನು ಮಾಡುತ್ತಿದ್ದಾರೆ. ಇದರಿಂದ ಭೂಮಿಗೂ ದಿಗ್ಗಜಗಳಿಗೂ ಶೇಷನಿಗೂ ಬಹಳ ಭಾರದ ಅನುಭವವಾಯಿತು. ಬಹಳ ಶ್ರಮಪಟ್ಟರು. ಇವರ ಶ್ರಮದ ಪರಿಹಾರಕ್ಕಾಗಿ ದೇವರು ಕೃಷ್ಣನಾಗಿ ಬಂದನು. ಒಂದು ನಿಮಿತ್ತವನ್ನು ಇಟ್ಟುಕೊಂಡು ಕಂಸಾದಿಗಳನ್ನು ಸಂಹರಿಸಿದನು. ಇವರೆಲ್ಲಾ ದೇವರಿಗೆ ಅಪ್ರಿಯರಾಗಿದ್ದರು. ಕೃಷ್ಣನು ಅವತರಿಸುವಾಗಲೇ ಆಯುಧಧಾರಿಯಾಗಿಯೇ ಕಾಣಿಸಿಕೊಂಡಿದ್ದಾನೆ. ಇದರಿಂದಾಗಿ ದೇವತೆಗಳಿಗೆ ಬಹಳ ಧೈರ್ಯ ಬಂತು. ದೇವರು ಸದ್ಯದಲ್ಲಿಯೇ ದೈತ್ಯರನ್ನು ಸಂಹರಿಸು ತ್ತಾನೆ. ದೇವತೆಗಳ ಮನೋರಥವನ್ನು ಪೂರೈಸುತ್ತಾನೆ ಎಂದು. ದುಷ್ಟನಿಗ್ರಹ ವಿಷಯದಲ್ಲಿ ತಾನು ಸಮರ್ಥ ಎಂದು ಕೃಷ್ಣನು ಏಳುವರ್ಷ ತುಂಬುವ ಸಂದರ್ಭದಲ್ಲಿಯೇ ಗೋವರ್ಧನ ಬೆಟ್ಟವನ್ನು ಎತ್ತುವ ಮೂಲಕ ತೋರಿಸಿದ್ದಾನೆ. ಬೆಟ್ಟಗಳು ಯಾವುದಕ್ಕೂ ಜಗ್ಗುವುದಿಲ್ಲ. ಹಾಗೆಯೇ ಕೃಷ್ಣನು ಯಾರಿಗೂ ಹೆದರುವವನಲ್ಲ. ಇಂತಹ ಕೃಷ್ಣನು ಸಮುದ್ರದ ಮಧ್ಯದಲ್ಲಿ ದ್ವಾರಕೆಯನ್ನು ನಿರ್ಮಿಸಿ ಅಲ್ಲಿ ವಾಸಿಸಿದನು. ಈ ಎಲ್ಲಾ ವಿಶೇಷಣಗಳಿಂದ ತಿಳಿಯು ವುದೇನೆಂದರೆ ಕೃಷ್ಣನು ತನ್ನ ಇಚ್ಛೆಯಿಂದಲೇ ದ್ವಾರಕೆಗೆ ಬಂದನು ಹೊರತು ಯಾರಿಗೂ ಹೆದರಿ ಅಲ್ಲ ಎಂದು.

**ಸ್ವವಶಗೋ ರಿಪುಭೀಷಣಚೇಷ್ಟಿತೋ ವರವರಾಹತಯಾ ದವಕೃದ್ವಿಷಾಮ್ ।**
**ಮಖಸಹಾಯಕೃತಿರ್ಧರಯಾರ್ಚಿತಃ ಕಮಲಯಾಮಲಯಾಯಮಹೋ ವೃತಃ**
**॥ ೧೭ ॥**

ಸ್ವ=ತನ್ನ; ವಶ=ಅಧೀನವಾದ; ಗೋ=ಭೂಮಿಯ; ರಿಪು=ಶತ್ರುವಿಗೆ; ಭೀಷಣ= ಭಯಾನಕವಾದ; ಚೇಷ್ಟಿತ=ಕೆಲಸವುಳ್ಳ; ವರ=ಉತ್ತಮವಾದ; ವರಾಹತಯಾ=ಹಂದಿರೂಪ ದಿಂದ, ದ್ವಿಷಾಂ=ಶತ್ರುಗಳಿಗೆ; ದವ=ಅಗ್ನಿಯನ್ನು; ಕೃತ್=ಮಾಡಿದ; ಮಖ=ಯಾಗಕ್ಕೆ; ಸಹಾಯ=ಸಾಧನಗಳನ್ನು; ಕೃತಿಃ=ಸೃಷ್ಟಿಸಿದ; ಧರಯಾ=ಭೂಮಿಯಿಂದ; ಅರ್ಚಿತಃ= ಪೂಜಿಸಲ್ಪಟ್ಟ; ಅಮಲಯಾ=ನಿರ್ಮಲಳಾದ; ಕಮಲಯಾ=ರಮೆಯಿಂದ; ಅಯಂ=ಇವನು; ವೃತಃ=ಆದೃತನು; ಅಹೋ=ಆಶ್ಚರ್ಯವು.

ಸ್ವ=ತನ್ನ; ವಶ=ಅಧೀನಗಳಾದ; ಗೋ=ಗೋವುಗಳ; ರಿಪು=ಶತ್ರುಗಳಿಗೆ; ಭೀಷಣ= ಭಯಾನಕವಾದ; ಚೇಷ್ಟಿತಃ=ಕೆಲಸವುಳ್ಳ; ದ್ವಿಷಾಂ=ಶತ್ರುಗಳಿಗೆ; ವರ=ಶ್ರೇಷ್ಠರ; ವರ= ವರದಿಂದ; ಅಹತ=ನಾಶವಾಗದ; ಯಾದವ=ಯಾದವರನ್ನು; ಕೃತ್=ಮಾಡಿದ; ಮಖ= ಯಾಗವನ್ನು; ಸಹ=ಸಹಿಸುವವರಿಗೆ; ಆಯ=ಲಾಭವನ್ನು; ಕೃತ್=ಮಾಡಿದ; ಧರಯಾ= ಭೂಮಿಯಿಂದ; ಅರ್ಚಿತಃ=ಪೂಜಿಸಲ್ಪಟ್ಟ; ಅಮಲಯಾ=ನಿರ್ಮಲಳಾದ; ಕಮಲಯಾ= ರುಗ್ಮಿಣಿಯಿಂದ; ಅಯಂ=ಇವನು; ವೃತಃ, ಅಹೋ.

ಈ ಶ್ಲೋಕದಲ್ಲಿ ವರಾಹಾವತಾರ– ಹಿರಣ್ಯಾಕ್ಷನು ಭೂಮಿಯನ್ನು ತನ್ನ ಕಕ್ಷೆಯಿಂದ ತಪ್ಪಿಸಿದನು. ಆಗ ಅಭಿಮಾನಿನಿ ಭೂಮಿಯು ದೇವರನ್ನು ಮೊರೆ ಹೊಂದಿದಳು. ದೇವರು ಹಂದಿರೂಪವನ್ನು ಧರಿಸಿದನು. ತನ್ನ ಎರಡು ಕೋರೆಹಲ್ಲುಗಳನ್ನು ಪರಸ್ಪರ ತಿಕ್ಕಿ ಬೆಂಕಿಯನ್ನು ಉಂಟುಮಾಡಿದನು. ಈ ಬೆಂಕಿಯಿಂದ ಭೂ ಅಪಹಾರಕ್ಕೆ ಸಂಬಂಧಪಟ್ಟ ಅಸುರರನ್ನು ಸಂಹರಿಸಿದನು. ಅಸುರನ ಸ್ಪರ್ಶದಿಂದ ಭೂಮಿಯು ಅಪವಿತ್ರವಾಯಿತು. ಪಾವಿತ್ರ್ಯವನ್ನು ಯಾಗದ ಮೂಲಕ ಸಂಪಾದಿಸಲು ಸಾಧ್ಯ. ಯಾಗಕ್ಕೆ ಆಜ್ಯಾದಿಗಳ ಆವಶ್ಯಕತೆ ಇದೆ. ಇವುಗಳನ್ನು ಹಂದಿಯೇ ತನ್ನ ದೇಹದಿಂದ ಸೃಷ್ಟಿಮಾಡಿತು. ಅನಂತರ ನಿರಂತರವಾಗಿ ಈ ಯಾಗಾದಿಗಳು ನಡೆಯುವಂತೆ ವ್ಯವಸ್ಥೆ ಮಾಡಿತು. ಈ ರೀತಿ ಇವಳು ಶುದ್ಧಳಾದ ಮೇಲೆ ಇವಳಲ್ಲಿ ರಮೆಯ ಭೂರೂಪದ ಸನ್ನಿಧಾನ ವಿಶೇಷ ಬಂತು. ಇಂತಹ ಧರೆಯು ಶ್ರೀಸಹಿತನಾದ ವರಾಹನನ್ನು ಆದರದಿಂದ ಅರ್ಚಿಸಿದಳು. ಆತನ ಅನುಗ್ರಹಪಾತ್ರಳಾದಳು.

ಕೃಷ್ಣಾವತಾರದ ವರ್ಣನೆ– ಕೃಷ್ಣನು ಗೋಕುಲದಲ್ಲಿ ಇರುವಾಗ ಪ್ರತಿದಿನ ಆಕಳುಗಳನ್ನು ಮೇಯಿಸುತ್ತಿದ್ದನು. ಗೋಕುಲದಲ್ಲಿ ಗೋಸಂಪತ್ತು ಸಮೃದ್ಧವಾಗಿತ್ತು. ಕೃಷ್ಣನ ಈ ವೈಭವ ವನ್ನು ಸಹಿಸದ ಕಂಸನು ಕೃಷ್ಣನನ್ನು ಕೊಲ್ಲಲು ನಾನಾ ಅಸುರರನ್ನು ಕಳಿಸಿದನು. ಅವರು ನಾನಾ ವೇಷಧರಿಸಿ ಆಕಳುಗಳನ್ನು ಪೀಡಿಸಲು ಆರಂಭಿಸಿದರು. ಕೃಷ್ಣನು ಆ ಅಸುರರನ್ನು ನಿಶ್ಚಿಂತೆಯಿಂದ ಸಂಹರಿಸಿದನು. ಇದರಿಂದ ಉಳಿದ ಅಸುರರು ಬಹಳ ಹೆದರಿದರು. ಈ ಅಸುರರು ಇಲ್ಲಿಗೆ ಬರುವ ಮೊದಲು ಬ್ರಹ್ಮಾದಿಗಳ ತಪಸ್ಸನ್ನು ಮಾಡಿದರು. ಯಾದವರನ್ನು ನಾಶಮಾಡಲು ಬೇಕಾದ ಶಕ್ತಿಯನ್ನು ವರವನ್ನಾಗಿ ಪಡೆದರು. ಆದರೆ ಕೃಷ್ಣನ ರಕ್ಷಣೆ ಇರುವುದರಿಂದ ಯಾದವರ ಕೂದಲನ್ನು ಅಲುಗಾಡಿಸಲೂ ಈ ದೈತ್ಯರಿಂದ ಆಗಲಿಲ್ಲ. ಹೀಗೇ ಕೃಷ್ಣನು ಲೌಕಿಕವಾಗಿ ಬೆಳೆದನು. ಇಂದ್ರನ ಮೂಲಕ ನರಕಾಸುರನ ಭೇಟಿಯಾದನು. ಈತನು ಹದಿನಾರುಸಹಸ್ರ ನಾರಿಯರನ್ನು ತನ್ನ ಅಧೀನದಲ್ಲಿ ಇಟ್ಟು ಕೊಂಡಿದ್ದ. ಇವರನ್ನು ಬಿಡಿಸಲು ಆತನೊಡನೆ ಹೋರಾಡಿದನು. ವರಾಹರೂಪೀ ಭಗವಾನ್ ಪಂಚಭೂತಗಳಲ್ಲಿ ಕೊನೆಯವಳಾದ ಧರಾಳಲ್ಲಿ ಈ ನರಕನನ್ನು ಮಗನನ್ನಾಗಿ ಪಡೆದಿದ್ದನು. ಇವನನ್ನು ಕೃಷ್ಣನು ಸಂಹರಿಸಿದನು. ಧರಾದೇವಿಯು ತನ್ನ ಮೊಮ್ಮಗನಾದ

ಭಗದತ್ತನನ್ನು ಕೃಷ್ಣನ ಚರಣದಲ್ಲಿಟ್ಟು ಕೃಷ್ಣನಿಗೆ ಶರಣಾದಳು. ಅವಳು ಮಾಡಿದ ಪೂಜೆಯನ್ನು ಕೃಷ್ಣನು ಸ್ವೀಕರಿಸಿದನು.

ಒಮ್ಮೆ ಪಾಂಡವರು ಅಶ್ವಮೇಧಯಾಗವನ್ನು ಮಾಡುವ ಪ್ರಸಂಗ ಒದಗಿಬಂತು. ಈ ಯಾಗವನ್ನು ಮಾಡಲು ತುಂಬಾ ಯೋಗ್ಯತೆ ಬೇಕು. ಅಂತಹ ಯೋಗ್ಯತೆ ಪಾಂಡವರಲ್ಲಿ ಇತ್ತು. ತುಂಬಾ ಸಂಪತ್ತೂ ಬೇಕು. ಇದರ ವ್ಯವಸ್ಥೆಯನ್ನು ಕೃಷ್ಣನೇ ಮಾಡಿದನು. ಪಾಂಡವರು ದಿಗ್ವಿಜಯಕ್ಕೆ ಹೊರಟಾಗ ಸರ್ವತ್ರ ಅವರಿಗೆ ಗೆಲುವು ಬಂತು. ತನ್ಮೂಲಕ ಬಹಳ ಸಂಪತ್ತನ್ನು ಸಂಗ್ರಹಿಸಿದರು. ಇದಕ್ಕೆಲ್ಲಾ ಕೃಷ್ಣನ ಅನುಗ್ರಹವೇ ಕಾರಣ. ಪಾಂಡವರನ್ನು ಇಷ್ಟು ವೈಭವೀಕರಿಸಿದ ಕೃಷ್ಣನು ತಾನೂ ಒಂದು ಶುಭಮುಹೂರ್ತದಲ್ಲಿ ರುಗ್ಮಿಣಿಯನ್ನು ವಿವಾಹವಾಗಿದ್ದನು.

**ಅರಿಹಿರಣ್ಯಕಸಂಕ್ಷಯ ಕಾರಕಂ ನರಮೃಗಾಧಿಪಮದ್ಭುತಚೇಷ್ಟಿತಮ್ ।**
**ಅಘಕೃದಿಂದ್ರಕೃತಾರ್ಚನತೋಷಿತಂ ಭಜ ಮನೋಜ ಮನೋಹರವಿಕ್ರಮಮ್**
**॥ ೧೮ ॥**

ಅರಿ=ಶತ್ರುವಾದ; ಹಿರಣ್ಯಕ=ಹಿರಣ್ಯಕನ; ಸಂಕ್ಷಯ=ನಾಶಕ್ಕೆ; ಕಾರಕಂ=ಕಾರಣನಾದ; ಅದ್ಭುತ=ಆಶ್ಚರ್ಯವಾದ; ಚೇಷ್ಟಿತಂ=ಕೆಲಸವುಳ್ಳ; ಅಘ=ಪಾಪವನ್ನು; ಕೃತ್= ಮಾಡಿದ; ಇಂದ್ರ=ಇಂದ್ರನಿಂದ; ಕೃತ=ಮಾಡಲ್ಪಟ್ಟ; ಅರ್ಚನ=ಪೂಜೆಯಿಂದ; ತೋಷಿತಂ= ಸಂತೋಷಿ ಸಲ್ಪಟ್ಟ; ಅಜ=ಬ್ರಹ್ಮನಿಗೆ; ಮನೋಹರ=ಇಷ್ಟವಾದ; ವಿಕ್ರಮಂ=ಶಕ್ತಿವುಳ್ಳ; ನರಮೃಗ=ನರಸಿಂಹನೆಂಬ; ಅಧಿಪಂ=ಶ್ರೇಷ್ಠನನ್ನು; ಹೇ ಮನಃ=ಎಲೋ ಮನವೇ; ಭಜ=ಸೇವಿಸು.

ಅರಿ=ಶತ್ರುವಿನ; ಹಿರಣ್ಯಕ=ಸಂಪತ್ತಿನ; ಸಂಕ್ಷಯ=ನಾಶಕ್ಕೆ; ಕಾರಕಂ=ಕಾರಣನಾದ; ಅದ್ಭುತ=ವಿಲಕ್ಷಣವಾದ; ಚೇಷ್ಟಿತಂ=ಕೆಲಸವುಳ್ಳ; ಅಜ=ಕಾಮನಂತೆ; ಮನೋಹರ= ಚಂದದ; ವಿಕ್ರಮಂ=ನಡೆಗೆವುಳ್ಳ; ನರಮೃಗಾಧಿಪಂ=ಪುರುಷಸಿಂಹನನ್ನು . ಭಜ.

ಈ ಶ್ಲೋಕದಲ್ಲಿ ನರಸಿಂಹಾವತಾರದ ವರ್ಣನೆ– ಹಿರಣ್ಯಕಶಿಪುವನ್ನು ಕೊಲ್ಲಲು ದೇವರು ನರಸಿಂಹ ಅವತಾರವನ್ನು ತಾಳಿದನು. ಆತನಿಗೆ ಭಯವನ್ನು ಉಂಟುಮಾಡಲು ಭಯಾನಕವಾದ ಗರ್ಜನೆಯನ್ನು ಮಾಡಿದ್ದನು. ಇನ್ನೂ ಅನೇಕ ಕೆಲಸಗಳನ್ನು ಮಾಡಿದ್ದನು. ಬ್ರಹ್ಮನ ಮಾತನ್ನು ಸತ್ಯಮಾಡಲು ದೇವರು ಈ ರೂಪವನ್ನು ತಾಳಿ ಕಶಿಪುವನ್ನು ಸಂಹರಿಸಿದನು. ಒಂದು ಸಂದರ್ಭದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹರಿಸಿದನು. ಇದರಿಂದ ಆತನಿಗೆ ಬ್ರಹ್ಮಹತ್ಯಾದೋಷವು ಬಂತು. ಈ ದೋಷದಿಂದ ಬಿಡುಗಡೆಗಾಗಿ ಒಂದುಸಾವಿರ ವರ್ಷ ಕಾಲ ನರಸಿಂಹಮಂತ್ರವನ್ನು ಜಪಿಸಿದನು. ದೋಷದಿಂದ ಮುಕ್ತನಾದನು. ಈ ರೀತಿಯಾಗಿ ಒಂದೊಂದು ಪರಾಕ್ರಮವೂ ಬ್ರಹ್ಮನಿಗೂ ಆಶ್ಚರ್ಯವನ್ನುಂಟು ಮಾಡುತ್ತವೆ. ಇಂತಹ ಶ್ರೇಷ್ಠನಾದ ನರಸಿಂಹನನ್ನು ಸದಾ ಭಜಿಸಬೇಕು.

ಕೃಷ್ಣಾವತಾರದ ವರ್ಣನೆ– ಕುರುವಂಶದವರು ಪರಸ್ಪರ ಜೂಜಾಡುವಂತೆ ಈ ಕೃಷ್ಣನು ಮಾಡಿದನು. ಇದರಲ್ಲಿ ಪಾಂಡವರು ಸೋತರು. ಕೃಷ್ಣನು ಪಾಂಡವರು ಸೋಲುವಂತೆ ಮಾಡಿದನು ಎಂದು ಮೇಲ್ನೋಟಕ್ಕೆ ತೋರಿತು. ಆದರೆ ಇದು ತಾತ್ಕಾಲಿಕ. ಪಾಂಡವರು ವನವಾಸದಲ್ಲಿರುವಾಗಲೂ ಚೆನ್ನಾಗಿಯೇ ಇದ್ದರು. ಇದೇ ಪಗಡೆಯಾಟ ಯುದ್ಧಕ್ಕೆ ನಾಂದಿಯಾಯಿತು. ಯುದ್ಧದಲ್ಲಿ ದುರ್ಯೋಧನನು ಮಡಿದನು. ಎಲ್ಲವನ್ನೂ ಶಾಶ್ವತವಾಗಿ ಕಳಕೊಂಡನು. ಕೃಷ್ಣನು ಏನು ಮಾಡುತ್ತಾನೆ? ಯಾಕೆ ಮಾಡುತ್ತಾನೆ? ಎಂದು ಆರಂಭದಲ್ಲಿ ಯಾರಿಗೂ ತಿಳಿಯುವುದಿಲ್ಲ. ಕೊನೆಗೆ ತಿಳಿದಾಗ ಎಲ್ಲರಿಗೂ ಆಶ್ಚರ್ಯವಾಗುತ್ತದೆ.

ಕೃಷ್ಣನು ಬಾಲ್ಯದಲ್ಲಿ ನಂದಗೋಕುಲದಲ್ಲಿ ಇದ್ದ. ಅಲ್ಲಿ ಯಾದವರು ಪ್ರತಿವರ್ಷ ಇಂದ್ರನ ಪೂಜೆಯನ್ನು ಮಾಡುತ್ತಿದ್ದರು. ಒಂದು ವರ್ಷ ಕೃಷ್ಣನು ಅದನ್ನು ತಪ್ಪಿಸಿದನು. ಕಾರಣ ಇಂದ್ರನ ಅಹಂಕಾರವನ್ನು ಖಂಡಿಸುವುದು. ಸಿಟ್ಟಾದ ಇಂದ್ರನು ಗೋಕುಲದ ಮೇಲೆ ಬಹಳ ಮಳೆಗೆರೆದನು. ಕೃಷ್ಣನು ಬೆಟ್ಟವನ್ನು ಎತ್ತಿ ತೆಪ್ಪಗಾದನು. ಫಲಿತಾಂಶ– ಕೃಷ್ಣನನ್ನು ವಿರೋಧಿಸಿದ್ದರಿಂದ ಇಂದ್ರನಿಗೆ ಪಾಪ ಬಂತು. ಇದರ ಮಾರ್ಜನೆಗಾಗಿ ಧರೆಗಿಳಿದ. ಆಕಳುಗಳ ಹಾಲಿಂದ ಕೃಷ್ಣನಿಗೆ ಅಭಿಷೇಕಮಾಡಿದ. ಅಚ್ಯುತಾದಿ ನಾಮತ್ರಯಗಳನ್ನು ಉಚ್ಚರಿಸಿದ. ಇದರಿಂದ ಕೃಷ್ಣನು ತುಷ್ಟನಾದನು. ತನ್ನ ಉಡಿಗೆತೊಡಿಗೆ ನಡಿಗೆ ಇತ್ಯಾದಿಗಳಿಂದ ಕೊನೆಯ ತನಕವೂ ಒಂದೇ ರೀತಿ ಇದ್ದ. ಇದನ್ನು ಕಂಡ ಮನ್ಮಥನೂ ನಾಚುತ್ತಿದ್ದ. ಇಂತಹ ಕೃಷ್ಣನನ್ನು ಸದಾ ಭಜಿಸಬೇಕು.

**ಬಲಹೃದಾರ್ತಿಹರೋಽನುಜನಿಃ ಪ್ರಭುರ್ಬಲಿ ಪರಾಜಯಕೃಜ್ಜಯಕೃತ್ ಸತಾಮ್ ।**
**ಅವನಿಜಾತಪಲಾಶಸುದಂಡಧೃಗ್ಭುವನಪಾವನಪಾದ ಸರೋರುಹಃ ॥ ೧೯ ॥**

ಬಲ=ಬಲನನ್ನು; ಹೃತ್=ನಾಶಮಾಡಿದವನ; ಆರ್ತಿ=ದುಃಖವನ್ನು; ಹರಃ=ನಾಶಮಾಡುವ; ಅನುಜನಿಃ=ತಮ್ಮನಾದ; ಬಲಿ=ಬಲಿಗೆ; ಪರಾಜಯ=ಸೋಲನ್ನು; ಕೃತ್=ಮಾಡಿದ; ಸತಾಂ=ಸಜ್ಜನರಿಗೆ; ಜಯ=ಜಯವನ್ನು; ಕೃತ್=ಮಾಡಿದ; ಅವನಿ=ಭೂಮಿಯಲ್ಲಿ; ಜಾತ=ಹುಟ್ಟಿದ; ಪಲಾಶ=ಪಲಾಶದ; ದಂಡ=ದಂಡವನ್ನು; ಧೃತ್=ಧರಿಸಿದ; ಭುವನ=ಲೋಕಕ್ಕೆ; ಪಾವನ=ಪಾವಿತ್ರ್ಯವನ್ನು ಕೊಡುವ; ಪಾದ=ಚರಣವೆಂಬ; ಸರೋರುಹಃ=ಕಮಲವುಳ್ಳ; ಪ್ರಭುಃ=ಸ್ವಾಮಿಯು

ಬಲ=ಬಲರಾಮನ; ಹೃತ್=ಮನದ; ಆರ್ತಿ=ದುಃಖವನ್ನು; ಹರಃ=ನಾಶಿಸುವ; ಅನುಜನಿಃ=ತಮ್ಮನಾದ; ಬಲಿ=ಬಲಿಷ್ಠರಾದ ಕಂಸಾದಿಗಳ; ಪರಾಜಯ=ಸೋಲನ್ನು; ಕೃತ್=ಮಾಡಿದ; ಸತಾಂ=ಸಾತ್ವಿಕರಿಗೆ; ಜಯ=ಜಯವನ್ನು; ಕೃತ್=ಮಾಡಿದ; ಅವನೀ=ಭೂಮಿಯಲ್ಲಿ; ಜಾತ=ಹುಟ್ಟಿದ; ಪಲ=ಮಾಂಸವನ್ನು; ಅಶ=ಉಣ್ಣುವ ಅಸುರರಿಗೆ;

ಸು=ಚೆನ್ನಾಗಿ; ದಂಡ=ಶಿಕ್ಷೆಯನ್ನು ; ಧೃತ್=ಕೊಡುವ; ಭುವನ=ಲೋಕವನ್ನು; ಪ= ರಕ್ಷಿಸುವ ಅರ್ಜುನನಿಗೆ; ಅವನ=ರಕ್ಷಿಸುವ; ಪಾದಸರೋರುಹಃ=ಪ್ರಭುಃ

ಈ ಶ್ಲೋಕದಲ್ಲಿ ವಾಮನಾವತಾರ– ದೇವರು ವಾಮನರೂಪದಿಂದ ಅದಿತಿಕಶ್ಯಪರಲ್ಲಿ ಅವತರಿಸಿದನು– ಇಂದ್ರನಿಗೆ ತಮ್ಮನಾಗಿ. ಈತನಿಗೆ ಉಪೇಂದ್ರ ಎಂಬ ಹೆಸರೂ ಇದೆ. ಇಂದ್ರನು ಬಲನೆಂಬ ಅಸುರನನ್ನು ಸಂಹರಿಸಿದರೂ ತಾನು ಬಲಿ ಎಂಬ ಅಸುರನಿಂದ ಪೀಡಿತನಾದನು. ಬಲಿಯು ೯೯ ಯಾಗಗಳನ್ನು ಮುಗಿಸಿ ನೂರನೇ ಯಾಗಕ್ಕೆ ಸಿದ್ಧನಾಗಿದ್ದನು. ಈ ಯಾಗವು ಸಮಾಪ್ತವಾದರೆ ಇಂದ್ರನು ತನ್ನ ಪದವಿಯನ್ನು ಈತನಿಗೆ ಬಿಟ್ಟುಕೊಡಬೇಕಿತ್ತು. ಇದರಿಂದ ಇಂದ್ರನು ತುಂಬಾ ದುಃಖಿಯಾಗಿದ್ದನು. ದೇವರಲ್ಲಿ ಮೊರೆಯಿಟ್ಟನು. ದೇವರು ವಾಮನನಾಗಿ ಕಾಣಿಸಿಕೊಂಡನು. ಕೈಯಲ್ಲಿ ಪಲಾಶದ ದಂಡವನ್ನು ಧರಿಸಿದನು. ಈ ದಂಡವು ಗೆಲ್ಲನ್ನು ಮುರಿದು ಮಾಡಿದ್ದು ಆಗದು. ನೇರವಾಗಿ ಭೂಮಿಯ ಸಂಪರ್ಕವುಳ್ಳದ್ದು ಆಗಬೇಕು. ಗೆಲ್ಲಿಗೆ ಪರಂಪರಯಾ ಸಂಬಂಧ. ಇದನ್ನು ತಿಳಿಸಲು 'ಅವನಿಜ ಪಲಾಶ' ಎಂದು ರಾಜರು ಹೇಳಿದ್ದಾರೆ. ಇಂತಹ ದಂಡವನ್ನು ಹಿಡಿದುಕೊಂಡು ವಾಮನನು ಬಲಿಯ ಮನೆಗೆ ಬಂದನು. ಬ್ರಹ್ಮಚಾರಿಗಳೇ ಪವಿತ್ರರು. ಭಗವದವತಾರಿಯಾದ ವಾಮನ ಬ್ರಹ್ಮಚಾರಿಯ ಪಾವಿತ್ರ್ಯದ ಬಗ್ಗೆ ಏನು ಹೇಳುವುದು. ಜಗತ್ತನ್ನೇ ಶುದ್ಧಿಗೊಳಿಸುವ ವಾಮನನು ಸದ್ಯ ಅಸುರಾವೇಶಗೊಳಗಾದ ಬಲಿಯನ್ನು ಶುದ್ಧೀಕರಿಸಲು ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟುಕೊಂಡು ಬಲಿಯ ಬಳಿಗೆ ಹೋದನು. ಮೂರು ಹೆಜ್ಜೆ ಭೂಮಿಯನ್ನು ಬೇಡುವ ಮೂಲಕ ಬಲಿಯನ್ನು ನಿಗ್ರಹಿಸಿದನು. ದೇವತೆಗಳಿಗೆ ಅವರ ಸ್ಥಾನಗಳ ಭದ್ರತೆಯನ್ನು ಕಾಪಾಡಿದನು.

ಕೃಷ್ಣಾವತಾರ– ಕೃಷ್ಣನು ಬಲರಾಮನಿಗೆ ತಮ್ಮನಾಗಿ ಅವತರಿಸಿದನು. ಅಣ್ಣನಿಗಿಂತ ತಮ್ಮನೇ ಶಕ್ತನು. ಬಲರಾಮನಿಗೆ ಅನೇಕ ಸಂದರ್ಭಗಳಲ್ಲಿ ಆಪತ್ತುಗಳು ಒದಗಿತ್ತು. ಅವನ್ನೆಲ್ಲಾ ಕೃಷ್ಣನೇ ಪರಿಹರಿಸಿದ್ದು. ಹೇಗೆಂದರೆ– ಒಮ್ಮೆ ಬಲಿಷ್ಠನಾದ ಕಂಸನು ಯಾದವರನ್ನು ಕೊಲ್ಲಲು ಪ್ರಲಂಬಾಸುರನನ್ನು ಕಳಿಸಿದ್ದನು. ಅವನು ಬಲರಾಮನನ್ನು ತನ್ನ ಹೆಗಲಲ್ಲಿ ಇರಿಸಿಕೊಂಡು ಆಕಾಶಕ್ಕೆ ಏರಿದನು. ಬಲರಾಮನು ಭೀತನಾದನು. ಕೃಷ್ಣನನ್ನು ಶರಣೆಂದನು. ಕೃಷ್ಣನು ಬಲರಾಮನಲ್ಲಿರುವ ತನ್ನ ಶುಕ್ಲ ಕೇಶ ರೂಪವನ್ನು ಪ್ರಕಟಗೊಳಿಸಿದನು. ಬಲರಾಮನ ಮೂಲಕ ಪ್ರಲಂಬನನ್ನು ಕೊಂದನು. ಮಹಾಭಾರತ ಯುದ್ಧದ ಸಂದರ್ಭದಲ್ಲಿ ಬಲರಾಮನ ಶಿಷ್ಯನು ದುರ್ಯೋಧನನು ಸಾಯುವುದು ನಿಶ್ಚಯ ಎಂದು ಬಲರಾಮನಿಗೆ ಮನವರಿಕೆ ಆಯಿತು. ಇದರಿಂದ ದುಃಖವೂ ಆಯಿತು. ಆಗ ಕೃಷ್ಣನು ಆತನನ್ನು ತೀರ್ಥಯಾತ್ರೆಗೆ ಕಳಿಸುವ ಮೂಲಕ ಮಾನಸಿಕವಾಗಿ ಸಮಾಧಾನವನ್ನು ಕೊಟ್ಟನು. ಪ್ರಲಂಬನನ್ನು ಕೊಲ್ಲುವ ಮೂಲಕ ಗುರುವಾದ ಬಲರಾಮನನ್ನು ತಪ್ಪಿಸುವ ಮೂಲಕ ಪರಂಪರಯಾ ಬಲಿಷ್ಠರಾದ ಕಂಸಾದಿಗಳಿಗೆ

ಪರಾಜಯವನ್ನು ಕೊಟ್ಟು ದೇವತೆಗಳಿಗೆ ಜಯವನ್ನು ಒದಗಿಸಿದವನು. ಇವರೆಲ್ಲಾ ಮಾಂಸವೇ ಪ್ರಧಾನ ಆಹಾರವಾಗಿ ಉಳ್ಳವರು. ದೈಹಿಕವಾಗಿ ಬಹಳ ಬೆಳೆದವರು. ಇವರನ್ನು ಅನೇಕಸಲ ನೇರವಾಗಿ ಆಕ್ರಮಿಸಿ ಚೆನ್ನಾಗಿ ಶಿಕ್ಷಿಸಿದ್ದಾನೆ ಕೂಡಾ. ಕೊನೆಯ ಒಂದು ಸಂದರ್ಭದಲ್ಲಂತೂ ದುರ್ಯೋಧನನು ಚೆನ್ನಾಗಿ ಶಿಕ್ಷೆಗೆ ಒಳಗಾಗಿದ್ದ. ಅರ್ಜುನ ಹಾಗೂ ದುರ್ಯೋಧನ ಇಬ್ಬರೂ ಯುದ್ಧಸಹಾಯಕ್ಕಾಗಿ ಕೃಷ್ಣನ ಬಳಿಗೆ ಹೋದರು. ಆಗ ಕೃಷ್ಣನು ಮಲಗಿದಂತೆ ನಟಿಸಿದ್ದನು. ದುರ್ಯೋಧನನು ಮೊದಲು ಪ್ರವೇಶಿಸಿ ಕೃಷ್ಣನ ತಲೆಭಾಗದಲ್ಲಿ ಕುಳಿತನು. ಅರ್ಜುನನು ಅನಂತರ ಪ್ರವೇಶಿಸಿ ಪಾದದ ಬಳಿ ನಿಂತನು. ಎಚ್ಚೆತ್ತ ಕೃಷ್ಣನು ಮೊದಲು ಅರ್ಜುನನನ್ನು ಕಂಡನು. ದುರ್ಯೋಧನನು ಮೊದಲು ಬಂದಿದ್ದರೂ ಮೊದಲು ಕೃಷ್ಣನ ದೃಷ್ಟಿಗೆ ಬಿದ್ದದ್ದು ಅರ್ಜುನ. ಅರ್ಜುನನಿಗೆ ಮೊದಲು ಸಹಾಯ. ಅರ್ಜುನನು ಕೃಷ್ಣನನ್ನೇ ವರಿಸಿದನು. ಈ ರೀತಿ ಪಾದದ ಬಳಿ ನಿಂತಿದ್ದಕ್ಕೆ ಕೃಷ್ಣನೆಂಬ ಸಹಾಯ ಸಿಕ್ಕಿತು. ಈ ರೀತಿಯಾಗಿ ತ್ರಿಲೋಕರಕ್ಷಕನಾದ ಇಂದ್ರನ ಅವತಾರನಾದ ಅರ್ಜುನನ ರಕ್ಷಣೆಗೆ ಇರುವ ಪಾದಕಮಲವುಳ್ಳವನು ಕೃಷ್ಣನು.

**ಯುಧಿ ಸಹಸ್ರಕರೋರ್ಜಿತಬಾಣಹೃತ್ ಪರಶುರರ್ಜುನಸತ್‌ಕ್ಷಿತಿದಾಯಕಃ ।**
**ಕುಭರಸಂಹರಣೋಗ್ರರಣಾಗ್ರಣೀರ್ದ್ವಿಜಭರ್ವೋಜಭವೋನ್ನತಿದಾಯಕಃ ॥ ೨೦ ॥**

ಯುಧಿ=ಯುದ್ಧದಲ್ಲಿ; ಸಹಸ್ರ=ಸಾವಿರ; ಕರ=ಕೈವುಳ್ಳವನ; ಊರ್ಜಿತ=ಉತ್ತಮವಾದ; ಬಾಣ=ಬಾಣಗಳನ್ನು; ಹೃತ್=ನಾಶಮಾಡಿದ; ಪರಶುಃ=ಕೊಡಲಿ ಇರುವ; ಅರ್ಜುನ= ಕಾರ್ತವೀರ್ಯಾರ್ಜುನನಿಗೆ; ಸತ್=ಉಚಿತವಾದ; ಕ್ಷಿತಿ=ನಾಶವನ್ನು; ದಾಯಕಃ=ಕೊಟ್ಟಿರುವ; ಕು=ಭೂಮಿಯನ್ನು; ಭರ=ಆಳಿದವರ; ಸಂಹರಣ=ನಾಶಕ್ಕೆ; ಉಗ್ರ=ಕಠಿಣವಾದ; ರಣ=ಯುದ್ಧದಲ್ಲಿ; ಅಗ್ರಣೀಃ=ಶ್ರೇಷ್ಠನಾದ; ಅಜ=ಬ್ರಹ್ಮನು; ಭವ=ರುದ್ರನು ಇವರಿಗೆ; ಉನ್ನತಿ=ಉನ್ನತಿಯನ್ನು; ದಾಯಕಃ=ಕೊಟ್ಟಿರುವ ಪರಶುರಾಮನು; ದ್ವಿಜ=ಬ್ರಾಹ್ಮಣನಿಂದ; ಭವಃ=ಅವತರಿಸಿದವನು.

ಯುಧಿ=ಯುದ್ಧದಲ್ಲಿ; ಸಹಸ್ರಕರ=ಸಾವಿರ ಕೈವುಳ್ಳ; ಊರ್ಜಿತ=ಬಲಿಷ್ಠನಾದ; ಬಾಣ= ಬಾಣಾಸುರನ; ಹೃತ್=ಹೃದಯಕ್ಕೆ; ಪರಶುಃ=ಕೊಡಲಿಯಂತಿರುವ; ಅರ್ಜುನ= ಅರ್ಜುನನಿಗೆ; ಸತ್=ಒಳ್ಳೆಯ; ಕ್ಷಿತಿ=ಭೂಮಿಯನ್ನು; ದಾಯಕಃ=ಕೊಟ್ಟಿರುವ; ಕು= ಭೂಮಿಗೆ; ಭರ=ಭಾರರಾದ ಅಸುರರ; ಸಂಹರಣ=ನಾಶದಲ್ಲಿ; ಉಗ್ರ=ಕ್ರೂರವಾದ; ರಣ=ಯುದ್ಧದಲ್ಲಿ; ಅಗ್ರಣೀಃ=ಮುಂಚೂಣಿಯಲ್ಲಿರುವ; ದ್ವಿಜ=ಬ್ರಾಹ್ಮಣರಿಗೆ; ಭವಃ=ಮಂಗಲನಾದ, ಅಜಭವೋನ್ನತಿದಾಯಕ.

ಪರಶುರಾಮನ ವರ್ಣನೆ– ಕಾರ್ತವೀರ್ಯಾರ್ಜುನ ಎಂಬ ರಾಜನಿದ್ದನು. ಸ್ವಭಾವತಃ ಒಳ್ಳೆಯವ. ವಾತಾವರಣದಿಂದಾಗಿ ಉಪದ್ರವಕಾರಿಯಾಗಿದ್ದ. ದೈವಭಕ್ತನೂ ಆಗಿದ್ದನು. ಯಯಾತಿಯ ಶಾಪದಿಂದ ಯಾದವರಿಗೆ ರಾಜ್ಯ ಇಲ್ಲ. ಆದರೂ ಈತನು

ದೈವಾನುಗ್ರಹದಿಂದ ಚಕ್ರವರ್ತಿಯೇ ಆಗಿದ್ದನು. ಇವನಿಗೆ ಸಾವಿರ ಕೈಗಳು. ಈತನ ಮರಣದ ಸಮಯ ಸಮೀಪಿಸಿತ್ತು. ಆದ್ದರಿಂದಲೇ ಪರಶುರಾಮನ ಭೇಟಿಯಾಯಿತು. ಪರಶುರಾಮನು ಭೂಭಾರರಾದ ರಾಜರ ಸಂಹಾರಯಜ್ಞದಲ್ಲಿ ತೊಡಗಿದ್ದನು. ಈ ಉದ್ದೇಶದಿಂದ ಐದು ಬಾರಿ ಭೂಮಿಯನ್ನು ಸುತ್ತಿದ್ದನು. ಈ ಪ್ರಸಂಗದಲ್ಲಿಯೇ ಈ ಅರ್ಜುನನ ಭೇಟಿಯಾಗಿದ್ದು. ಅರ್ಜುನನಿಗೆ ಅಸುರಾವೇಶವೂ ಆಗಿತ್ತು. ಬಹಳ ಯುದ್ಧ ನಡೆಯಿತು ಇವರಿಬ್ಬರಿಗೆ. ಅರ್ಜುನನ ಅಸ್ತ್ರಶಸ್ತ್ರಗಳನ್ನು ಕತ್ತರಿಸಿ ಬಿಸಾಡಿದ ರಾಮನು ಆತನಿಗೆ ಯೋಗ್ಯವಾದ ಮರಣವನ್ನು ಒದಗಿಸಿದನು. ಯದ್ಯಪಿ ಬ್ರಾಹ್ಮಣಕುಲದಲ್ಲಿ ಜಮದಗ್ನಿಋಷಿಗೆ ಮಗನಾಗಿ ಅವತರಿಸಿದವನು. ಆದರೂ ಮಾಡಿದ್ದು ಕ್ಷತ್ರಿಯರ ಕೆಲಸ. ಈ ಕ್ಷಾತ್ರಕೆಲಸವನ್ನು ಮುಗಿಸಿ ಯಾವುದೋ ಒಂದು ಪರ್ವತದಲ್ಲಿ ತಪಸ್ವಿಯಂತೆ ಕುಳಿತನು. ಬ್ರಹ್ಮನ ಪುತ್ರನಾದ ರುದ್ರನಿಗೆ ದೇವರ ಬಗ್ಗೆ ಉಪದೇಶವನ್ನು ನೀಡಿ ಆತನ ಸ್ಥಾನಮಾನಗಳನ್ನು ಹೆಚ್ಚಿಸಿದನು.

ಕೃಷ್ಣಾವತಾರದ ವರ್ಣನೆ– ದೇವರ ಎಲ್ಲಾ ಅವತಾರಗಳಂತೆ ಕೃಷ್ಣಾವತಾರವೂ ಒಂದು. ಈ ರೂಪವು ಬಲ, ಜ್ಞಾನ ಎರಡೂ ಕಾರ್ಯಗಳಲ್ಲಿಯೂ ನಿರತವಾಗಿತ್ತು. ಭೂಭಾರರಾದ ಎಲ್ಲಾ ಅಸುರರನ್ನೂ ಕೊಂದ ಹಾಗೂ ಕೊಲ್ಲಿಸಿದ. ಈ ಅಸುರರ ಪೈಕಿ ಸಾವಿರ ಕೈಗಳ ಬಾಣಾಸುರನೂ ಒಬ್ಬನು. ಆತನ ಕೈಗಳನ್ನು ಕತ್ತರಿಸಿದ ಕೃಷ್ಣನು ಕತ್ತನ್ನು ಕತ್ತರಿಸಲು ತೊಡಗಿದಾಗ ರುದ್ರದೇವರು ಬೇಡವೆಂದು ಪ್ರಾರ್ಥಿಸಿದರು. ಈ ಬಾಣನು ರುದ್ರನ ಪರಮಭಕ್ತನು. ಹೀಗೆ ಕೃಷ್ಣನು ಬಾಣನನ್ನು ಸೋಲಿಸಿದನು. ಆತನ ಮನವನ್ನು ಕೊಡಲಿಯಂತೆ ಚುಚ್ಚಿದನು. ತಾನೂ ಯದುವಂಶದಲ್ಲಿ ಅವತರಿಸಿದ್ದರಿಂದ ಯಯಾತಿಯ ಶಾಪವನ್ನು ತಾನೂ ಇಚ್ಛೆಯಿಂದ ಸ್ವೀಕರಿಸಿದನು. ಆದ್ದರಿಂದ ಯಾವ ಸಂದರ್ಭದಲ್ಲಿ ರಾಜನಾಗಿ ಮೆರೆಯಲಿಲ್ಲ. ರಾಜರನ್ನು ಸಂಹರಿಸಿ ರಾಜ್ಯವನ್ನು ಅವರ ಬಂಧುಗಳಿಗೇ ವಿತರಿಸಿದನು. ದುರ್ಯೋಧನನನ್ನು ಕೊಂದು ರಾಜ್ಯವನ್ನು ಅರ್ಜುನನಿಗೆ ಒಪ್ಪಿಸಿದನು. ಹಂಸ ಡಿಬಿಕರನ್ನು ಕೊಂದು ದುರ್ವಾಸ ಮೊದಲಾದ ಬ್ರಾಹ್ಮಣರಿಗೆ ಮಂಗಲವನ್ನು ಮಾಡಿದನು. ಈತನ ಒಂದೊಂದು ಕೆಲಸವೂ ಅದ್ಭುತವಾಗಿತ್ತು. ಈ ಕೆಲಸದ ಅಂತ್ಯದಲ್ಲಿ ಬ್ರಹ್ಮರುದ್ರಾದಿ ದೇವತೆಗಳು ಬಂದು ಕೃಷ್ಣನನ್ನು ನಮಸ್ಕರಿಸುತ್ತಿದ್ದರು. ಹೀಗೆ ಬ್ರಹ್ಮಾದಿಗಳಿಗೆ 'ನಮಸ್ಕಾರ ಮಾಡುವಿಕೆ' ಎಂಬ ಕೆಲಸವನ್ನು ಕೊಟ್ಟವನು.

**ಅಹಿಮಕಾಂತಿಮತಃಕಲಯಾ ಕುಲಂ ವ್ಯತನುತಾಧಿಕಭೂಷಿತಮಂಜಸಾ ।**
**ಅಭಯಮನ್ಯದಶಾಸ್ಯಸುಖಂಡನಃ ಕ್ಷಿತಿಸುತಾತಿಸುತಾಪಭಿದಾಕೃತಿಃ ॥ ೨೧ ॥**

ಅಹಿಮ=ಬಿಸಿಯಾದ; ಕಾಂತಿಮತಃ=ಕಿರಣವುಳ್ಳವನ; ಕುಲಂ=ವಂಶವನ್ನು; ಕಲಯಾ=ಅಂಶದಿಂದ; ಅಧಿಕ=ಬಹಳವಾಗಿ; ಭೂಷಿತಂ=ಅಲಂಕೃತವನ್ನಾಗಿ; ಅಂಜಸಾ= ಚೆನ್ನಾಗಿ; ವ್ಯತನುತ=ಮಾಡಿದನು; ಅನ್ಯ=ಶತ್ರುವಾದ; ದಶ=ಹತ್ತು; ಆಸ್ಯ=ಮುಖದವನು;

ಖಂಡನಃ=ನಾಶಕನಾದ; ಕ್ಷಿತಿ=ಭೂಮಿಯ; ಸುತಾ=ಮಗಳ; ಅತಿ=ಬಹಳ; ಸುತಾಪ=ದುಃಖ ವನ್ನು; ಛಿತ್=ನಾಶಮಾಡುವ; ಆಕೃತಿಃ=ಸ್ವರೂಪವುಳ್ಳವನು; ಅಭಯಂ=ಅಭಯವನ್ನು; ವ್ಯತನುತ=ಮಾಡಿದನು; ಕ್ಷಿತಿ=ಭೂಮಿಯ; ಸುತ=ಮಗನಿಗೆ; ಅತಿ=ಬಹಳ; ಸುತಾಪ= ದುಃಖವನ್ನು ಕೊಡುವ; ಛಿದಾ=ಭೇದದ; ಕೃತಿಃ=ಕೆಲಸವುಳ್ಳ; ಅನ್ಯ=ಶತ್ರುಗಳ; ದಶಾ= ಅವಸ್ಥೆಗೆ; ಅಸಿ=ಆಯುಧಗಳಿಗೆ; ಅಸು=ಪ್ರಾಣಗಳಿಗೆ; ಖಂಡನ=ನಾಶಕೊಡುವ; ಕ=ತಲೆಗಳ; ಲಯ=ಮರ್ದನದಿಂದ; ಆಕುಲಂ=ಗಾಬರಿಯಾದ; ಅಕಾಂತಿಂ=ಕಳಾಹೀನ ನಾದ; ಅಹಿಂ=ಸರ್ಪವನ್ನು; ಅತಃ=ಇಲ್ಲಿಂದ; ಅಧಿಕ=ಉತ್ತಮವಾದ; ಭೂ=ಜಾಗದಲ್ಲಿ; ಉಷಿತಂ=ಉಳ್ಳವನನ್ನಾಗಿ; ಅಂಜಸಾ=ಚೆನ್ನಾಗಿ; ಅಭಯಂ=ಭಯರಹಿತನನ್ನಾಗಿ; ವ್ಯತನುತ=ಮಾಡಿದನು.

ರಾಮಾವತಾರದ ವರ್ಣನೆ– ದೇವತೆಗಳ ಪ್ರಾರ್ಥನೆ ಮೇರೆಗೆ ದೇವರು ಸೂರ್ಯವಂಶದಲ್ಲಿ ತಾನು ಅವತರಿಸಿದನು. ಈ ವಂಶದಲ್ಲಿ ಇಕ್ಷ್ವಾಕುವೇ ಮೊದಲಾದ ಅನೇಕ ಪರಾಕ್ರಮಿಗಳು ಆಗಿಹೋಗಿದ್ದರು. ಆದರೆ ಶ್ರೀರಾಮನು ಅವತರಿಸಿದ್ದರಿಂದ ಆ ವಂಶವು ಎಷ್ಟು ಬೆಳಗಿತೋ ಅಷ್ಟು ಬೇರೆ ರಾಜರಿಂದ ಬೆಳಗಲಿಲ್ಲ. ತನ್ನ ರಾಮಾವತಾರ ಕಾಲದಲ್ಲಿ ಅನೇಕ ಕ್ಲೇಶಗಳನ್ನು ಅನುಭವಿಸಿದಂತೆ ನಟಿಸಿದನು. ಪಿತೃವಾಕ್ಯಪರಿಪಾಲನೆಗಾಗಿ ಕಾಡನ್ನು ಸೇರಿದನು. ಅಲ್ಲಿ ಶೂರ್ಪನಖಿಯ ಮೂಲಕ ರಾವಣನ ವಿರೋಧದ ಪ್ರಸಂಗ ಬಂತು. ರಾವಣನು ಕಾಡಿನಲ್ಲಿ ಸೀತೆಯನ್ನು ಅಪಹರಿಸಿದನು ಕೂಡಾ. ಆದರೆ ಅದು ನಿಜವಾದ ಸೀತೆ ಆಗಿರಲಿಲ್ಲ. ಆಕೆಯ ಪ್ರತಿಕೃತಿ ಆಗಿತ್ತು. ಅದರಲ್ಲಿ ಇಂದ್ರನು ಸೇರಿಕೊಂಡಿದ್ದನು. ಅಶೋಕವನದಲ್ಲಿ ರಾವಣನ ಪೀಡೆಯಿಂದ ಈ ಸೀತೆಯು ತುಂಬಾ ತಪಿಸಿದಳು. ರಾಮನು ಲಂಕೆಗೆ ಹೋದನು. ಶತ್ರುವಾದ ರಾವಣನನ್ನು ಕೊಂದನು. ಸೀತೆಯ ದುಃಖವನ್ನು ಪರಿಹರಿಸಿದನು. ಜಗತ್ತಿಗೆ ಅಭಯವನ್ನು ಕೊಟ್ಟನು.

ಕೃಷ್ಣಾವತಾರ– ಈ ಶ್ಲೋಕದಲ್ಲಿ ಕಾಳಿಂಗನ, ನರಕಾಸುರನ ಹಾಗೂ ಇತರ ದೈತ್ಯರ ಮರ್ದನವನ್ನು ತಿಳಿಸುತ್ತಾರೆ. ರಮಣಕ ಎಂಬ ದ್ವೀಪವು ಕಾಳಿಯನ ಜನ್ಮಸ್ಥಳ. ಅಲ್ಲಿ ಗರುಡನು ಕಾಳೀಯನಿಗೆ ಉಪದ್ರವ ಕೊಡುತ್ತಿದ್ದನು. ಅಲ್ಲಿಂದ ಈ ಯಮುನಾಹ್ರದಕ್ಕೆ ಬಂದನು. ಸೌಬರಿಯ ಶಾಪದಿಂದಾಗಿ ಗರುಡನು ಈ ಜಾಗಕ್ಕೆ ಬರುತ್ತಿರಲಿಲ್ಲ. ಆದರೆ ಇಲ್ಲಿ ಕಾಳಿಂಗನು ಇತರ ಪ್ರಾಣಿಗಳಿಗೆ ಉಪದ್ರವ ಮಾಡುತ್ತಿದ್ದನು. ತನ್ನ ವಿಷದಿಂದ ಪ್ರಾಣಿಗಳನ್ನು ಕೊಲ್ಲುತ್ತಿದ್ದನು. ಕೃಷ್ಣನು ಈತನ ಹೆಡೆಗಳನ್ನು ಚೆನ್ನಾಗಿ ಮರ್ದಿಸಿದನು. ಕಾಳಿಂಗನು ಗಾಬರಿಗೊಂಡನು. ಸತ್ವಹೀನನಾದನು. ಮರ್ದಿಸುವ ಮೂಲಕ ತಲೆಯಲ್ಲಿ ದೇವರು ತನ್ನ ಪಾದದ ಚಿಹ್ನೆಯನ್ನು ಮೂಡಿಸಿದನು. ಯಮುನಾ ಮಡುವಿನಿಂದ ಆತನ ಜನ್ಮಸ್ಥಳಕ್ಕೆ ಕಳಿಸಿದನು. ಕೃಷ್ಣನ ಚಿಹ್ನೆಯು ತಲೆಯಲ್ಲಿ ಇರುವುದರಿಂದ ಕಾಳಿಂಗನು ಗರುಡನಿಗೆ ಹೆದರದೆ ತನ್ನ ಸ್ಥಳಕ್ಕೆ ಹೊರಟನು.

ಕೃಷ್ಣನು ತನ್ನ ವರಾಹರೂಪದಿಂದ ಈ ಭೂಮಿದೇವಿಯಲ್ಲಿ ನರಕಾಸುರನನ್ನು ಮಗನಾಗಿ ಪಡೆದನು. ಕೃಷ್ಣರೂಪದಿಂದ ತನ್ನ ಚಕ್ರದಿಂದ ಆತನ ಶಿರವನ್ನು ಕತ್ತರಿಸಿದನು. ಕೃಷ್ಣನ ಈ ಕೆಲಸದಿಂದ ನರಕ ಸಾಯುವ ಸಂದರ್ಭದಲ್ಲಿ ಬಹಳ ಕ್ಲೇಶಪಟ್ಟನು.

ಈ ಶ್ಲೋಕದ ಕೊನೆಯ ಚರಣಕ್ಕೆ ಇನ್ನೊಂದು ಅರ್ಥವನ್ನೂ ಹೇಳಬಹುದು– ದೈತ್ಯರ ಭಾರವನ್ನು ಸಹಿಸದ ಭೂಮಿಯು ತುಂಬಾ ತಪಿಸಿದಳು. ದೇವರನ್ನು ಮೊರೆಹೋದಳು. ದೇವರು ಕೃಷ್ಣನಾಗಿ ಬಂದು ತನ್ನ ಕೆಲಸಗಳಿಂದ ಆಕೆಯ ತಾಪವನ್ನು ಪರಿಹರಿಸಿದನು. ಇನ್ನೊಂದು ಪ್ರಸಂಗದಲ್ಲಿ ಕಾಮನು ರುದ್ರದೇವರ ಕೋಪದಿಂದಾಗಿ ಸುಟ್ಟುಹೋದನು. ಆತನಿಗೆ ಶರೀರವೇ ಇಲ್ಲವಾಯಿತು. ದೇವರಲ್ಲಿ ಮೊರೆಯಿಟ್ಟನು. ದೇವರು ಆತನನ್ನು ಪ್ರದ್ಯುಮ್ನ ಎಂಬ ರೂಪದಿಂದ ಮಗನನ್ನಾಗಿ ಪಡೆದನು ಕೃಷ್ಣಾವತಾರ ದಲ್ಲಿ. ಆತನಿಗೆ ಚಂದದ ದೇಹವನ್ನು ಕೊಟ್ಟು ಆತನ ದುಃಖವನ್ನು ಪರಿಹರಿಸಿದನು. ಎಲ್ಲರೂ ದೇವರ ಮಕ್ಕಳೇ. ಹಾಗಿದ್ದರೂ ದಾಸರ ಹಾಡಿನಂತೆ –"ಸರಸಿಜಾಸನ ಮನೋಜ ಈರ್ವರು ಸುತರು ಸುರತರಂಗಿಣಿ ತನೂಜೆ" ಬ್ರಹ್ಮ ಹಾಗೂ ಮನ್ಮಥರು ಇಬ್ಬರು ಗಂಡುಮಕ್ಕಳು. ಗಂಗೆಯು ಹೆಣ್ಣುಮಗು. ಇವರು ಮೂವರು ನೇರವಾಗಿ ದೇವರಿಂದಲೇ ಹುಟ್ಟಿದವರು ಎಂದರ್ಥ. ಈ ಧಾಟಿಯಲ್ಲಿ ವಾದಿರಾಜರು ಈ ಶ್ಲೋಕದಲ್ಲಿ ಕಾಮನನ್ನು 'ಸುತ' ಎಂಬ ಪದದಿಂದ ಕರೆದಿದ್ದಾರೆ.

ಕೃಷ್ಣಾವತಾರಕ್ಕಿಂತ ಪೂರ್ವದಲ್ಲಿ ಕಂಸಾದಿ ಅಸುರರು ಚತುರಂಗಬಲ ಎಂಬ ಅವಸ್ಥೆಯಿಂದ ಕೂಡಿದ್ದರು. ಸಾತ್ವಿಕರ ಮೇಲೆ ದಾಳಿಮಾಡಲು ಬಹಳ ಆಯುಧಗಳ ಸಂಗ್ರಹವನ್ನೂ ಮಾಡಿದ್ದರು. ಪ್ರಾಣಿಗಳಿಗೆ ಆಶ್ರಯವಾದ ದೇಹವನ್ನು ಚೆನ್ನಾಗಿ ಬೆಳೆಸಿದ್ದರು. ಕೃಷ್ಣನು ಇದೆಲ್ಲವನ್ನೂ ಧ್ವಂಸಮಾಡಿದನು. ಇಲ್ಲಿ ರಾಜರು ಕಂಸಾದಿಗಳನ್ನು ತಿಳಿಸುವಾಗ 'ಅನ್ಯ' ಎಂಬ ಪದವನ್ನು ಬಳಸಿದ್ದಾರೆ. ಅಭಿಪ್ರಾಯ ಹೀಗಿದೆ– ಸ್ವರೂಪದಲ್ಲೇ ಯಾರಿಗೆ ಕೃಷ್ಣನಲ್ಲಿ ಶತ್ರುತ್ವ ಇದೆಯೋ ಅವರಿಗೆ ಮಾತ್ರ ಇಂತಹ ಅವಸ್ಥೆಯನ್ನು ತಂದೊಡ್ಡಿದನು. ವಾತಾವರಣಕ್ಕೆ ಬಲಿಬಿದ್ದು ಶತ್ರುಗಳಾದವರಿಗೆ ಕೃಷ್ಣನು ಕ್ಷಮೆಯನ್ನು ಕರುಣಿಸಿದ್ದಾನೆ ಎಂದು.

**ರುಚಿರಭಾರತಪುಣ್ಯಕಥೋದಯಃ ಶುಕಸುಭಾಷಣತೋಷಣಕಾರಣಃ ।**
**ವಿಮಲಧರ್ಮಶುಭಸ್ಥಿತಿಕೃತ್ ಕ್ಷಿತಾವಯಮಸೌ ಯಮಸೌಹೃದಕೃನ್ನೃಣಾಮ್**
**॥ ೨೨ ॥**

ರುಚಿರ=ಒಳ್ಳೆಯ; ಭಾರತ=ಮಹಾಭಾರತವೆಂಬ; ಪುಣ್ಯ=ಪುಣ್ಯಪ್ರದವಾದ; ಕಥಾ= ಕಥೆಯ; ಉದಯಃ=ಉತ್ಪತ್ತಿವುಳ್ಳ; ಶುಕ=ಶುಕಾಚಾರ್ಯರ; ಸುಭಾಷಣ=ಒಳ್ಳೆಯ ಮಾತೇ; ತೋಷಣ=ಸಂತೋಷಕ್ಕೆ; ಕಾರಣಃ=ಕಾರಣರಾದ; ಕ್ಷಿತೌ=ಭೂಮಿಯಲ್ಲಿ; ವಿಮಲ=

ನಿರ್ಮಲವಾದ; ಧರ್ಮ=ಧರ್ಮಾದಿಗಳ; ಶುಭ=ಒಳ್ಳೆಯ; ಸ್ಥಿತಿ=ಇರುವಿಕೆಯನ್ನು; ಕೃತ್= ಮಾಡಿದ; ಅಸೌ=ಇಂತಹ; ಅಯಂ=ಈ ವ್ಯಾಸರು; ನೃಣಾಂ=ಜನರಿಗೆ; ಯಮ=ಯಮನ; ಸೌಹೃದ=ಗೆಳೆತನವನ್ನು; ಕೃತ್=ಮಾಡಿದವನು.

ರುಚಿರ=ಒಳ್ಳೆಯ; ಭಾರತ=ಭರತವಂಶದವನಿಗೆ; ಪುಣ್ಯ=ಪುಣ್ಯಪ್ರದವಾದ; ಕಥಾ= ಗೀತೆಯ; ಉದಯಃ=ಉಪದೇಶವುಳ್ಳ; ಶುಕ=ಶುಕದಂತೆ; ಸುಭಾಷಣ=ಒಳ್ಳೆಯ ಮಾತು; ತೋಷಣ=ಸಂತೋಷಕ್ಕೆ; ಕಾರಣ=ಕಾರಣವುಳ್ಳ; ಕ್ಷಿತೌ=ಭೂಮಿಯಲ್ಲಿ; ವಿಮಲ= ನಿರ್ಮಲನಾದ; ಧರ್ಮ=ಧರ್ಮರಾಜನಿಗೆ; ಶುಭ=ಒಳ್ಳೆಯ; ಸ್ಥಿತಿ=ಇರುವಿಕೆಯನ್ನು; ಕೃತ್= ಮಾಡಿದ; ಯಮ=ಯಮಳರಿಗೆ; ಸೌಹೃದ=ಒಳ್ಳೆಯದನ್ನು; ಕೃತ್=ಮಾಡಿದ; ಅಸೌ= ಇವನು; ಅಯಂ=ದ್ವಾರಾವತಿಯಲ್ಲಿ ಇರುವವನು.

ಈ ಶ್ಲೋಕದಲ್ಲಿ ಪುನಃ ವ್ಯಾಸರ ವರ್ಣನೆ– ವ್ಯಾಸರು ಭಾಗವತಾದಿ ಪುರಾಣಗಳನ್ನು ರಚಿಸಿದ್ದಾರೆ. ಮಹಾಭಾರತವೆಂಬ ಗ್ರಂಥವನ್ನು ಬರೆದಿದ್ದಾರೆ. ಪಾಂಡವರ ಚರಿತ್ರೆಯನ್ನು ಆರಂಭಿಸಿ ಎಲ್ಲಾ ವಿಷಯಗಳೂ ಅದರಲ್ಲಿವೆ. ಇವುಗಳ ಅಧ್ಯಯನದಿಂದ ಜೀವನದಲ್ಲಿ ಪುಣ್ಯವೂ ಸಂದೇಶವೂ ಲಭಿಸುತ್ತದೆ. ಎಲ್ಲಾ ಗ್ರಂಥಗಳನ್ನೂ ಶುಕಾಚಾರ್ಯರು ಸಾತ್ವಿಕರಿಗೆ ಉಪದೇಶಿಸಿದರು. ವ್ಯಾಸರ ಅಭಿಪ್ರಾಯಕ್ಕೆ ಧಕ್ಕೆ ಬಾರದಂತೆ ನೋಡಿಕೊಂಡರು. ಇದರಿಂದ ವ್ಯಾಸರಿಗೆ ಬಹಳ ಆನಂದವಾಯಿತು. ಬ್ರಾಹ್ಮಣಾದಿ ವರ್ಣದವರೂ ಬ್ರಹ್ಮಚರ್ಯಾದಿ ಆಶ್ರಮದವರೂ ಹೇಗಿರಬೇಕು ಎಂಬುದನ್ನು ತಿಳಿಸಲು ಅನೇಕ ಧರ್ಮಗಳನ್ನು ಭೂಮಿ ಯಲ್ಲಿ ಬಿತ್ತಿದರು. ಸಾತ್ವಿಕರು ಅದರಂತೆ ನಡೆದರು. ಇದರಿಂದ ಮರಣಾನಂತರ ಈ ಸಾತ್ವಿಕರಿಗೆ ಯಮನ ಶಿಕ್ಷೆ ತಪ್ಪಿತು. ಯಮನು ಇವರನ್ನು ಪ್ರೀತಿಯಿಂದ ನೋಡಿಕೊಂಡರು.

ಕೃಷ್ಣಾವತಾರ– ಭಾರತಯುದ್ಧಾತ್ ಪೂರ್ವದಲ್ಲಿ ಅರ್ಜುನನು ಯುದ್ಧದಿಂದ ಹಿಮ್ಮೆಟ್ಟಿದನು. ಆಗ ಕೃಷ್ಣನು ಪುಣ್ಯಪ್ರದವಾದ ಅವರವರ ಕರ್ಮಕ್ಕೆ ಕಾರಣವಾದ ಗೀತೆಯನ್ನು ಉಪದೇಶಿಸಿದನು. ಈ ಗೀತೆಯನ್ನು ಶುಕಾಚಾರ್ಯರು ಭಾಗವತವನ್ನು ಉಪದೇಶಿಸಿದಂತೆ ಕೃಷ್ಣನ ಅಭಿಪ್ರಾಯಕ್ಕೆ ತೊಂದರೆ ಬಾರದಂತೆ ಪ್ರವಚಿಸುವವರಲ್ಲಿ ಕೃಷ್ಣನು ಪ್ರೀತನಾಗುತ್ತಿದ್ದನು. ಹದಿನೆಂಟು ದಿವಸಗಳ ಅನಂತರ ಧರ್ಮಜನನ್ನು ಹಸ್ತಿನಾವತಿಯ ಸಿಂಹಾಸನದಲ್ಲಿ ಕೂಡಿಸಿದನು. ದುರ್ಯೋಧನನಲ್ಲಿ ಇರುವ ಕಾಪಟ್ಯ ಧರ್ಮಜನಲ್ಲಿ ಇರಲಿಲ್ಲ. ಆತನು ಶುದ್ಧನಾಗಿದ್ದನು. ಕೃಷ್ಣನು ಯಾವ ಸಾತ್ವಿಕರಿಗೂ ಬೇಸರವನ್ನು ಮಾಡುತ್ತಿರಲಿಲ್ಲ. ಸಂಧಾನಕ್ಕೆ ಹೋಗುವಾಗ ಎಲ್ಲರ ಅಭಿಪ್ರಾಯವನ್ನು ಕೇಳಿದನು. ಹಾಗೆಯೇ ನಕುಲಸಹದೇವರ ಅಭಿಪ್ರಾಯವನ್ನೂ ಕೇಳಿದ್ದನು. ಯದ್ಯಪಿ ಇವರು ಕೃಷ್ಣನಿಗಿಂತ ಚಿಕ್ಕವರು. ಇದರಿಂದ ಯಮಳರಿಗೂ ಸಂತೋಷ ಆಗಿತ್ತು. ಇಂತಹ ಕೃಷ್ಣನು ದುಷ್ಟಸಂಹಾರ ಆದನಂತರ ದ್ವಾರಾವತಿಯಲ್ಲಿ ಇದ್ದನು.

**ಭುವಿ ತಥಾಗತ ಏಷ ಯಥಾಂಬರಂ ಸ್ವವಿದಿತೋ ನವಮಾಕೃತಿರಾತ್ಮನಃ ।**
**ಸಕಲವಿತ್ ಖಲಸಂಚಯವಂಚಕಃ ಸ್ವಮತಿದೋ ಮತಿದೋಷಹರೋಽಸ್ತು ನಃ**
**॥ ೨೩ ॥**

ಸ್ವವಿತ್=ಸ್ವಪ್ರಕಾಶನಾದ; ಅಂಬರಂ ಯಥಾ=ಆಕಾಶದಂತೆ; ಭುವಿ=ಭೂಮಿಯಲ್ಲಿ; ಇತಃ=ವ್ಯಾಪ್ತನಾದ; ಸಕಲ=ಎಲ್ಲವನ್ನೂ; ವಿತ್=ತಿಳಿದಿರುವ; ಖಲ=ದುಷ್ಟರ; ಸಂಚಯ=ಸಮೂಹಕ್ಕೆ; ವಂಚಕ=ವಂಚಕನಾದ; ಸು=ಚೆನ್ನಾಗಿ; ಅಮತಿ=ವಿಪರೀತಜ್ಞಾನವನ್ನು; ದ=ಕೊಡುವ; ಆತ್ಮನಃ=ದೇವರ; ನವಮ=ಒಂಭತ್ತನೆಯ; ಆಕೃತಿಃ=ಅವತಾರನಾದ; ಏಷಃ=ಈ; ತಥಾಗತಃ=ಬುದ್ಧನು; ನಃ=ನಮ್ಮ; ಮತಿ=ಬುದ್ಧಿಯ; ದೋಷ=ದೋಷವನ್ನು ಹರಃ=ಪರಿಹರಿಸುವವನು; ಅಸ್ತು=ಆಗಲಿ.

ಈ ಶ್ಲೋಕದಲ್ಲಿ ಬುದ್ಧ ಹಾಗೂ ಕೃಷ್ಣನ ವರ್ಣನೆ– ಬುದ್ಧರೂಪವು ದೇವರ ಒಂಭತ್ತನೇ ಅವತಾರ. ಬುದ್ಧನ ಇನ್ನೊಂದು ಹೆಸರು ತಥಾಗತ ಎಂದು. ನಮ್ಮನ್ನು ತಿಳಿದುಕೊಳ್ಳಲು ನಮಗೆ ದೇವರ ಅನುಗ್ರಹ ಇಲ್ಲದಿದ್ದರೆ ಸಾಧ್ಯವಿಲ್ಲ. ದೇವರಿಂದಾಗಿ ನಮ್ಮ ತಿಳುವಳಿಕೆ ನಮಗೆ ಬರುವುದು. ದೇವರಿಗೆ ಹಾಗಲ್ಲ; ಆತನ ತಿಳುವಳಿಕೆ ಆತನಿಗೆ ಬರಲು ಆತನಿಗೆ ಯಾರ ಅನುಗ್ರಹವೂ ಬೇಕಿಲ್ಲ. ಆದ್ದರಿಂದ ಆತನಿಗೆ ಮಾತ್ರ ಸ್ವಪ್ರಕಾಶ ಎಂದು ಹೆಸರು. ಆಕಾಶ ಎಲ್ಲಾ ಕಡೆ ವ್ಯಾಪಿಸಿರುವಂತೆ ಬುದ್ಧರೂಪವೂ ಸರ್ವತ್ರ ವ್ಯಾಪ್ತ. ಪ್ರಪಂಚದಲ್ಲಿ ಬೌದ್ಧರ ಸಂಖ್ಯೆ ಬಹಳ ಇದೆ. ಈ ರೀತಿಯಲ್ಲಿಯೂ ಬುದ್ಧನು ವ್ಯಾಪ್ತನು. ಅಯೋಗ್ಯರಿಗೆ ದೇವರ ಬಗ್ಗೆ ವಿಪರೀತ ತಿಳುವಳಿಕೆ ಬರುವುದಕ್ಕೋಸ್ಕರ ಅನೇಕ ಶಾಸ್ತ್ರಗಳನ್ನು ರಚಿಸಿದನು. ಜೈನಶಾಸ್ತ್ರಗಳನ್ನು ರಚಯಿಸಿದನು. ತ್ರಿಪುರಾಸುರರು ತಮಗೆ ಅಯೋಗ್ಯವಾದ ಹರಿಸರ್ವೋತ್ತಮತ್ವ ದಾರಿಯಲ್ಲಿ ಇದ್ದರು. ದೇವರು ಬುದ್ಧರೂಪದಿಂದ ಚಿಕ್ಕ ಮಗುವಾಗಿ ಅವರನ್ನು ವಂಚಿಸಿ ಆ ದಾರಿಯಿಂದ ಬಿಡಿಸಿದನು. ಅಯೋಗ್ಯರಾದ ಅಸುರರ ಮನದಲ್ಲಿರುವ ಜೀವೇಶಭೇದಜ್ಞಾನವನ್ನು ಬಿಡಿಸಿದಂತೆ ಯೋಗ್ಯರಾದ ಜೀವರ ಮನದಲ್ಲಿರುವ ಐಕ್ಯಜ್ಞಾನವನ್ನು ಬಿಡಿಸಲಿ ಎಂದು ಋಷಿಗಳು ದ್ವಾರಾವತಿಯಲ್ಲಿರುವ ಕೃಷ್ಣನನ್ನು ಪ್ರಾರ್ಥಿಸುತ್ತಾರೆ.

ಕೃಷ್ಣನ ವರ್ಣನೆ– ಕೃಷ್ಣನು ತನ್ನನ್ನು ಸಾಮಾನ್ಯ ಮಾನವರಂತೆ ತೋರಿಸಿಕೊಂಡಿದ್ದಾನೆ. ಹುಟ್ಟುವುದು–ಬೆಳೆಯುವುದು–ಕಳ್ಳತನ–ಯುದ್ಧದಲ್ಲಿ ಗಾಯವಾಗುವುದು ಇವೆಲ್ಲಾ ಮಾನವರ ಧರ್ಮ. ಆಕಾಶಕ್ಕೆ ಹೇಗೆ ಇವೆಲ್ಲವೂ ಇಲ್ಲವೋ ಹಾಗೆಯೇ ದೇವರಿಗೂ ಇಲ್ಲ. ಒಂದೇ ಆಕಾಶ–ಮೇಲೆ–ಕೆಳಗೆ ಸರ್ವತ್ರ ವ್ಯಾಪ್ತವಾದಂತೆ ಕೃಷ್ಣನೂ ಎಲ್ಲಾ ಕಡೆಯೂ ಒಂದೇ ರೂಪದಿಂದ ವ್ಯಾಪಿಸಿದ್ದಾನೆ. ಮೂಲರೂಪದಿಂದ ಸ್ವಲ್ಪ ನ್ಯೂನತೆ ಇಲ್ಲ ಅವತಾರ ರೂಪಗಳಿಗೆ. ಇದನ್ನೆಲ್ಲಾ ದೇವರ ಸಹಜ ಭಕ್ತರು ತಿಳಿದಿದ್ದಾರೆ. ಆರಂಭದ ಹಂತದಲ್ಲಿ ಪಾಂಡವರಿಗೆ ಸೋಲನ್ನು ಕೊಟ್ಟು ದುರ್ಯೋಧನಾದಿಗಳಿಗೆ ಜಯವನ್ನು ಕೊಡುವ

ಮೂಲಕ ಎರಡನೆಯವರನ್ನು ಕೃಷ್ಣನು ವಂಚಿಸಿದನು. ಸಾತ್ವಿಕರಿಗೆ ಎಂದೂ ಅಜ್ಞಾನಾದಿ ದೋಷಗಳು ಬಾರದಂತೆ ನೋಡಿಕೊಂಡ ಕೃಷ್ಣನು ನಮ್ಮ ಅಜ್ಞಾನಾದಿ ದೋಷಗಳನ್ನು ಪರಿಹರಿಸಲಿ. ಈತನು ಸರ್ವಜ್ಞನಾದ್ದರಿಂದ ಯಾರ ಯೋಗ್ಯತೆ ಏನು ಎಂದು ತಿಳಿದಿದೆ.

**ವಿತತವಿಷ್ಣುಯಶೋಜನನಾಂಜಸಾ ಕೃತಯುಗೋನ್ನತಿದಾತೃಕರೋರ್ಜಿತ ।**
**ದ್ವಿಜಸುಹೃತ್ ಕಲಿಕಾನನದೈನ್ಯಹೇತ್ವಸಿ ಧರಾಸಿ ಧರಾಭಯಕಾರಕಃ ॥ ೨೪ ॥**

ವಿತತ=ವ್ಯಾಪ್ತನೇ; ವಿಷ್ಣುಯಶಃ=ವಿಷ್ಣುಯಶ ಎಂಬ ಹೆಸರಿನ ಬ್ರಾಹ್ಮಣನಿಂದ; ಜನನ=ಅವತರಿಸಿದವನೇ; ಅಂಜಸಾ=ಚೆನ್ನಾಗಿ; ಕೃತಯುಗ=ಕೃತಯುಗಕ್ಕೆ; ಉನ್ನತಿ= ಮಹತ್ವವನ್ನು; ದಾತೃ=ಕೊಡುವ; ಕರ=ಕೈಯಿಂದ; ಊರ್ಜಿತ=ಶ್ರೇಷ್ಠನೇ; ದ್ವಿಜ=ಬ್ರಾಹ್ಮಣರ; ಸು=ಒಳ್ಳೆಯ; ಹೃತ್=ಹೃದಯದ; ಕಲಿ=ಕಲಿಯೆಂಬ; ಕಾನನ=ಕಾಡಿಗೆ; ದೈನ್ಯ=ನಾಶಕ್ಕೆ; ಹೇತು=ಕಾರಣವಾದ; ಅಸಿ=ಕತ್ತಿಯನ್ನು; ಧರ=ಧರಿಸಿದವನೇ; ಧರಾ=ಭೂಮಿಗೆ; ಅಭಯ= ಅಭಯವನ್ನು; ಕಾರಕಃ=ಮಾಡಿದವನು; ಅಪಿ=ಆಗಿದ್ದಿ.

ವಿತತ=ವಿಶಾಲವಾದ; ವಿಷ್ಣುಃ=ನಾರಾಯಣನ; ಯಶಃ=ಕೀರ್ತಿಗೆ; ಜನನ=ಕಾರಣನೇ; ಅಂಜಸಾ=ಚೆನ್ನಾಗಿ; ಕೃತ=ಮಾಡಲ್ಪಟ್ಟ; ಯುಗ=ಅಚ್ಚುಮರದಂತೆ; ಉನ್ನತಿ=ಉನ್ನತವಾದ; ದಾತೃ=ದಾನಮಾಡುವ; ಕರ=ಕೈಯಿಂದ; ಊರ್ಜಿತ=ಶ್ರೇಷ್ಠನೇ; ದ್ವಿಜ=ನಕ್ಷತ್ರಗಳಿಗೆ; ಸುಹೃತ್=ಮಿತ್ರನಾದ ಚಂದ್ರನ; ಕಲಿಕಾ=ಕಲೆಯಂತೆ; ಆನನ=ಮುಖದವನೇ; ದೈನ್ಯ= ನಾಶಕ್ಕೆ; ಹೇತು=ಕಾರಣನಾದ; ಅಸಿ=ಖಡ್ಗವನ್ನು; ಧರ=ಧರಿಸಿದವನೇ; ಧರಾಭಯ ಕಾರಕಃ ಅಸಿ.

ಈ ಶ್ಲೋಕದಲ್ಲಿ ಕಲ್ಕಿ–ಕೃಷ್ಣರ ವರ್ಣನೆ– ದೇವರ ಹತ್ತನೆಯ ಅವತಾರ ಕಲ್ಕಿ. ಶಂಬಲ ಎಂಬ ಊರಿನಲ್ಲಿ ವಿಷ್ಣುಯಶ ಎಂಬ ಬ್ರಾಹ್ಮಣನಿದ್ದನು. ಅವನಿಗೆ ಮಗನಾಗಿ ಅವತರಿಸಿದವನು. ತನ್ನ ಪತ್ನಿಯನ್ನೇ ಕುದುರೆಯನ್ನಾಗಿ ಮಾಡಿಕೊಂಡನು. ಕೈಯಲ್ಲಿ ಕತ್ತಿಯನ್ನು ಹಿಡಿದನು. ಮ್ಲೇಂಛರ ಹಾವಳಿ ಬಹಳ ಇತ್ತು. ಕಲಿಯುಗದ ಅಂತ್ಯ ಆರಂಭವಾಗಿತ್ತು. ಕೈಯ ಕತ್ತಿಯಿಂದ ಎಲ್ಲಾ ದುಷ್ಟರನ್ನೂ ಬಡಿದನು. ಕೃತಯುಗಕ್ಕೆ ನಾಂದಿ ಬರೆದನು. ತನ್ನ ಕರಗಳಿಂದಲೇ ಈ ಕೆಲಸವನ್ನು ಮಾಡಿದ್ದರಿಂದ ರಾಜರು ಆತನ ಕೈಗಳನ್ನು ಹೊಗಳಿದ್ದಾರೆ. ಹೊರಗಿನಿಂದ ಮಾತ್ರ ಅಸುರರ ಹಾವಳಿ ಅಲ್ಲ. ಸಾತ್ವಿಕರ ಮನದಲ್ಲಿಯೂ ಕಲಿಯು ತಳವೂರಿದ್ದನು. ಕಾಡಿನಂತೆ ಬಹಳವಾಗಿ ಬೆಳೆದಿದ್ದನು. ಹೊರಗಿನ ದೈತ್ಯರನ್ನು ಬಡಿದಾಗ ಒಳಗಿನ ದೈತ್ಯರು ದುರ್ಬಲರಾದರು. ಹೀಗೆ ಒಳಗಿನ ದೈತ್ಯರನ್ನೂ ಮರ್ದಿಸಿದನು. ಅನಂತರ ಭೂಮಿಯ ಭಾರವನ್ನು ಇಳಿಸಿದನು. ಅವಳಿಗೆ ಶಾಂತಿಯನ್ನು ಒದಗಿಸಿದನು. ಈ ಅಸುರರು ದೇಶದ ಎಲ್ಲಾ ಭಾಗಗಳಲ್ಲಿಯೂ ಹರಡಿದ್ದರು. ಅವರನ್ನು ತಾನೊಬ್ಬನೇ ಎಲ್ಲಾ ಕಡೆ ಸಂಚರಿಸಿ ನಾಶಮಾಡಿದನು.

ಕೃಷ್ಣಾವತಾರದ ವರ್ಣನೆ– ದೇವರ ಮಹಿಮೆಯನ್ನು ದೇವರು ತನ್ನ ಇತರ ಅವತಾರಗಳಿಗಿಂತ ಹೆಚ್ಚಾಗಿ ಕೃಷ್ಣಾವತಾರದಲ್ಲಿ ತೋರಿಸಿದ್ದನು. ಇದರಿಂದಾಗಿ ಜನರಿಗೆ ದೇವರ ಮಹಿಮೆಯ ಪ್ರಚಾರವೇ ಬಹಳವಾಗಿ ಆಯಿತು. ಇದಕ್ಕೆ ಕಾರಣ ಕೃಷ್ಣನೇ. ಗಾಡಿಗಳಿಗೆ ಎರಡು ಚಕ್ರಗಳ ಮಧ್ಯೆ ಅಚ್ಚುಮರ ಇದೆ. ಇದು ಬಹಳ ಉದ್ದ ಇರುತ್ತದೆ. ನೇರವಾಗಿ ಇರುತ್ತದೆ. ಅಂಕುಡೊಂಕಾಗಿ ಇರುವುದಿಲ್ಲ. ಕೃಷ್ಣನದ್ದೂ ಕೂಡಾ ಕೈಗಳು ಎಲ್ಲಾ ದೋಷಗಳಿಂದ ರಹಿತವಾಗಿ ದೀರ್ಘವಾಗಿವೆ. ಕೃಷ್ಣನದ್ದು ಆಜಾನುಬಾಹು ವ್ಯಕ್ತಿತ್ವ ಹಾಗೆಯೇ ಬಹಳ ದಾನಿಯೂ ಆಗಿದ್ದನು. ಇಂತಹ ಕರಗಳಿಂದಾಗಿ ಕೃಷ್ಣನಿಗೆ ಬಹಳ ಕೀರ್ತಿಯು ಬಂದಿತು. ನಕ್ಷತ್ರಗಳ ದರ್ಶನದಿಂದಲೇ ಜನ ಆಕರ್ಷಿತರಾಗುತ್ತಾರೆ. ಇಂತಹ ನಕ್ಷತ್ರಗಳಿಗೆ ಒಡೆಯನಾದ, ಮಿತ್ರನಾದ ಚಂದ್ರನ ದರ್ಶನ ಹೇಳುವುದೇನು? ಇಂತಹ ಚಂದ್ರನ ಕಲೆಯಂತೆ ಕೃಷ್ಣನ ಮುಖವು ಬಹಳ ರಮ್ಯವಾಗಿತ್ತು. ಕಮಲಹೂಗಳಿಗೆ ಈ ಚಂದ್ರನು ತಾಪದಾಯಕನೇ ಆಗಿದ್ದನು. ಹಾಗೆಯೇ ಕೃಷ್ಣನು ದೈತ್ಯಸಮೂಹಕ್ಕೆ ದೀನಾವಸ್ಥೆಯನ್ನು ಒದಗಿಸುವ ಖಡ್ಗಧಾರಿಯಾಗಿದ್ದನು. ತನ್ನ ಭಾರವನ್ನು ಇಳಿಸುವಂತೆ ಭೂಮಿಯು ಗೋರೂಪದಿಂದ ಪ್ರಾರ್ಥಿಸಿದ್ದಳು. ಅವಳ ಅಪೇಕ್ಷೆಯನ್ನು ದೇವರು ಕೃಷ್ಣರೂಪದಿಂದ ಪೂರೈಸಿದನು.

**ಇತ್ಥಂ ಸರಸಸಲ್ಲಾಪೈಃ ಸಂಸ್ತುವಂತಃ ಸತಾಂಪತಿಮ್ ।**
**ಪ್ರತ್ಯಹಂ ತತ್ಪದಾಂಭೋಜಮೀಕ್ಷಮಾಣಾಃ ವಸಂತಿ ತೇ ॥ ೨೫ ॥**

ಇತ್ಥಂ=ಈ ರೀತಿಯಾಗಿ; ಸರಸ=ಸ್ನೇಹದಿಂದ ಕೂಡಿದ; ಸಲ್ಲಾಪೈಃ=ಮಾತುಗಳಿಂದ; ಸತಾಂ=ಸಾತ್ವಿಕರಿಗೆ; ಪತಿಂ=ಒಡೆಯನನ್ನು; ಸಂಸ್ತುವಂತಃ=ಹೊಗಳುವ; ತೇ=ಆ ಮುನಿಗಳು; ಪ್ರತ್ಯಹಂ=ಸದಾ; ತತ್=ಅವನ; ಪದ=ಚರಣವೆಂಬ; ಅಂಭೋಜಂ=ಪದ್ಮ ವನ್ನು; ಈಕ್ಷಮಾಣಾಃ=ನೋಡುತ್ತಾ; ವಸಂತಿ=ವಾಸಿಸುತ್ತಾರೆ.

ಈ ಸರ್ಗದ ಆರಂಭದಿಂದ ಇಲ್ಲಿಯವರೆಗೆ ಮುನಿಗಳು ಕೃಷ್ಣನನ್ನು ಕಂಡು ಹೊಗಳಿದ ಕ್ರಮವನ್ನು ಶ್ರೀರಾಜರು ತಿಳಿಸಿದರು. ದ್ವಾರಕೆಯಲ್ಲಿ ಮುನಿಗಳು ಇದ್ದರು. ಪ್ರತಿದಿನ ಕೃಷ್ಣದರ್ಶನ ಮಾಡುತ್ತಿದ್ದರು. ಹಾಗೆಯೇ ಆತನ ಎಲ್ಲಾ ಅವತಾರಗಳನ್ನು, ತತ್ರಾಪಿ ಪ್ರಸಿದ್ಧವಾದ ದಶಾವತಾರಗಳನ್ನು ಕೃಷ್ಣನಲ್ಲಿ ಕಂಡು ಹೊಗಳುತ್ತಿದ್ದರು. ಹೀಗೆ ಮಾಡುವುದರಿಂದ ಮುನಿಗಳಿಗೆ ದ್ವಾರಕೆಯಲ್ಲಿ ವಾಸಮಾಡುವ ಅಧಿಕಾರ ಇತ್ತು.

**ಇಹಾಖಿಲೈಶ್ವರ್ಯಸುಭೋಗವೃದ್ಧೇಃ**
**ಪರತ್ರ ನಿಶ್ರೇಯಸಸೌಖ್ಯಸಿದ್ಧೇಃ ।**
**ಮಹಃ ಪರಂ ದ್ವಾರಮವಾಪ್ಯ ಪೃಥ್ವ್ಯಾಂ**
**ಅಸೌ ಪುರೀ ದ್ವಾರವತೀ ಬಭೂವ ॥ ೨೬ ॥**

ಇಹ=ಸಂಸಾರದಲ್ಲಿ; ಅಖಿಲ=ಎಲ್ಲಾ; ಐಶ್ವರ್ಯ=ಸಂಪತ್ತಿನ; ಸುಭೋಗ=ಭೋಗದ; ವೃದ್ಧೇಃ=ಅಭಿವೃದ್ಧಿಗೆ; ಪರತ್ರ=ಪರಲೋಕದಲ್ಲಿ; ನಿಶ್ರೇಯಸ=ಮೋಕ್ಷದ; ಸೌಖ್ಯ=ಆನಂದದ; ಸಿದ್ಧೇಃ=ಪ್ರಾಪ್ತಿಗೆ; ದ್ವಾರಂ=ಕಾರಣವಾದ; ಪರಂ=ಉತ್ತಮವಾದ; ಮಹಃ=ತೇಜಸ್ಸನ್ನು; ಪೃಥ್ವ್ಯಾಂ=ಭೂಮಿಯಲ್ಲಿ; ಅಸೌ=ಈ; ಪುರೀ=ಪಟ್ಟಣವು; ಅವಾಪ್ಯ=ಹೊಂದಿ; ದ್ವಾರವತೀ= ದ್ವಾರವತಿಯು; ಬಭೂವ=ಆಯಿತು.

ಈ ಸರ್ಗದ ಕೊನೆಯ ತನಕ ಶ್ರೀರಾಜರು ದ್ವಾರಾವತಿಯನ್ನು ವರ್ಣಿಸುತ್ತಾರೆ. ಎಲ್ಲಾ ಊರುಗಳಿಗೂ ಮನೆಗಳಿಗೂ ಬಾಗಿಲುಗಳು ಇದ್ದೇ ಇರುತ್ತವೆ. ದ್ವಾರಾವತೀ ಅಂದರೆ ಬಾಗಿಲು ಇರುವ ಊರು ಎಂದು ಅರ್ಥ ಬರುತ್ತದೆ. ಹೀಗಿರುವಾಗ ಎಲ್ಲಾ ಊರುಗಳಿಗೆ ಈ ದ್ವಾರಾವತೀ ಎಂಬ ಹೆಸರು ಯಾಕಿಲ್ಲ? ಈ ಊರಿಗೆ ಮಾತ್ರ ಯಾಕೆ? ಎಂಬುದನ್ನು ರಾಜರು ತಿಳಿಸುತ್ತಾರೆ– ಜೀವರು ಸಂಸಾರದಲ್ಲಿರುವಾಗ ಎಲ್ಲಾ ರೀತಿಯ ಸಂಪತ್ತನ್ನೂ ಭೋಗಭಾಗ್ಯಗಳನ್ನೂ ತಮ್ಮ ತಮ್ಮ ಕರ್ಮಾನುಸಾರವಾಗಿ ಪಡೆಯುತ್ತಾರೆ. ಸಂಸಾರವನ್ನು ಕಳಕೊಂಡನಂತರ ಸಾತ್ವಿಕರು ಪರಲೋಕದಲ್ಲಿ ಸ್ವರೂಪಾನಂದರೂಪ ಮೋಕ್ಷವನ್ನು ಪಡೆಯುತ್ತಾರೆ. ಇದಕ್ಕೆಲ್ಲಾ ದ್ವಾರ ಅಂದರೆ ಕಾರಣ ಶ್ರೀಕೃಷ್ಣ. ಅಂತಹ ಕೃಷ್ಣ ಇಲ್ಲಿ ಇದ್ದಾನೆ. ಬೇರೆ ಯಾವ ಊರಿನಲ್ಲಿಯೂ ನಮ್ಮ ಚರ್ಮ ಕಣ್ಣಿಗೆ ಕಾಣುವಂತೆ ಇಲ್ಲ. ಆದ್ದರಿಂದ ಬೇರೆ ಯಾವ ಊರಿಗೂ ಈ ಹೆಸರು ಬಾರದೆ ಈ ಊರಿಗೆ ಮಾತ್ರ ದ್ವಾರಾವತೀ ಎಂಬ ಹೆಸರು ಬಂತು.

**ಯತೋಽಭಿತೋಽಚ್ಛಸ್ಫಟಿಕಾವದಾತಲಸತ್ಕವಾಟಾಂತರಿತಾಽಪಿ ಸೇಯಮ್ ।**
**ಪುರೀ ನೃಣಾಂ ದ್ವಾರವತೀವ ಭಾತಿ ತತೋಽಪಿ ತಾಂ ದ್ವಾರವತೀಂ ವದಂತಿ॥ ೨೭ ॥**

ಯತಃ=ಯಾವ ಕಾರಣದಿಂದ; ಅಭಿತಃ=ಸುತ್ತಲೂ; ಅಚ್ಛ=ನಿರ್ಮಲವಾದ; ಸ್ಫಟಿಕ= ಸ್ಫಟಿಕದಿಂದ; ಅವದಾತ=ಶುಭ್ರವಾದ; ಲಸತ್=ಶೋಭಿಸುವ; ಕವಾಟ=ಬಾಗಿಲುಗಳಿಂದ; ಅಂತರಿತಾ ಅಪಿ=ಮುಚ್ಚಲ್ಪಟ್ಟಿದ್ದರೂ; ಸಾ=ಆ; ಇಯಂ=ಈ; ಪುರೀ=ಊರು; ನೃಣಾಂ= ಜನರಿಗೆ; ದ್ವಾರವತೀ ಇವ=ಬಾಗಿಲು ಇರುವಂತೆ; ಭಾತಿ=ಶೋಭಿಸಿತೋ; ತತಃ ಅಪಿ=ಆ ಕಾರಣದಿಂದಲೂ; ತಾಂ=ಆ ಊರನ್ನು; ದ್ವಾರವತೀಂ=ದ್ವಾರಾವತಿಯನ್ನಾಗಿ; ವದಂತಿ= ಹೇಳುತ್ತಾರೆ.

ಈ ಊರಲ್ಲಿ ಮನೆಗಳ ಬಾಗಿಲುಗಳು ಶುದ್ಧವಾದ ಸ್ಫಟಿಕದ ಹಲಗೆಗಳಿಂದ ಮಾಡಿದ್ದು. ಇಂತಹ ಹಲಗೆಗಳು ಗಾಳಿ ಓಡಾಡಲು ಪ್ರತಿಬಂಧಕ ವಿನಹ ಒಳಗಿದ್ದವರಿಗೆ ಹೊರಗಿನ, ಹೊರಗಿನವರಿಗೆ ಒಳಗಿನ ದರ್ಶನಕ್ಕೆ ಅಡ್ಡಿಯಾಗುವುದಿಲ್ಲ. ಇಂತಹ ಹಲಗೆಗಳ ಬಾಗಿಲುಗಳನ್ನು ಮಾಡಿ ಅದನ್ನು ಹಾಕಿದರೂ ತೆರೆದರೂ ಒಂದೇ. ಹಾಕಿಕೊಂಡಿದ್ದರೂ ತೆರೆದುಕೊಂಡಿದ್ದರ ಪ್ರಯೋಜನವು ಆಗುತ್ತಿತ್ತು. ಆದ್ದರಿಂದ ಸದಾ ತೆರೆದುಕೊಂಡಿರುವ ಬಾಗಿಲು ಎಂಬರ್ಥದಲ್ಲಿ ದ್ವಾರಾವತೀ ಎಂದು ಜನರು ಕರೆಯುತ್ತಿದ್ದರು.

**ಯತಃ ಕವಾಟೇ ವಿವೃತೇಽಪಿ ಸೇಯಂ ಪುರೀ ಕವಾಟಾಂತರಿತೇವ ಭಾತಿ ।**
**ಹರಿನ್ಮಣೀನಾಂ ಪ್ರಭಯಾ ಮಹತ್ಯಾ ಕಥಂ ನು ಸಾ ದ್ವಾರವತೀತಿ ಮನ್ಯೇ ॥ ೨೮ ॥**

ಯತಃ=ಯಾವ ಕಾರಣದಿಂದ; ಕವಾಟೇ=ಬಾಗಿಲು; ವಿವೃತೇ ಅಪಿ=ತೆರೆಯಲ್ಪಟ್ಟರೂ; ಸಾ=ಆ; ಇಯಂ=ಈ; ಪುರೀ=ಊರು; ಹರಿನ್ಮಣೀನಾಂ=ಇಂದ್ರನೀಲಮಣಿಗಳ; ಮಹತ್ಯಾ=ಬಹಳವಾದ; ಪ್ರಭಯಾ=ಕಾಂತಿಯಿಂದ; ಕವಾಟ=ಬಾಗಿಲಿನಿಂದ; ಅಂತರಿತಾ ಇವ=ಮುಚ್ಚಲ್ಪಟ್ಟಂತೆ; ಭಾತಿ=ಶೋಭಿಸುತ್ತದೋ; ಅತಃ=ಆದ್ದರಿಂದ; ಸಾ=ಅದು; ಕಥಂ ನು=ಹೇಗೆ ತಾನೆ; ದ್ವಾರವತೀ=ದ್ವಾರಾವತಿಯು; ಇತಿ=ಎಂದು; ಮನ್ಯೇ=ತಿಳಿಯುತ್ತೇನೆ.

ಹಿಂದಿನ ಶ್ಲೋಕಗಳಲ್ಲಿ ಈ ಊರಿಗೆ ದ್ವಾರಾವತೀ ಎಂಬ ಹೆಸರಿನ ಸಾರ್ಥಕತೆಯನ್ನು ತಿಳಿಸಿದ ರಾಜರು ಈ ಶ್ಲೋಕದಲ್ಲಿ ಇದನ್ನು ದ್ವಾರಾವತೀ ಎಂದು ಹೇಗೆ ಕರೆಯುವುದು ಎಂದು ಉತ್ಪ್ರೇಕ್ಷಿಸುತ್ತಾರೆ. ಯಾಕೆಂದರೆ ಈ ಊರಿನಲ್ಲಿ ಗೋಡೆಗಳು ಇಂದ್ರನೀಲಮಣಿಗಳಿಂದ ಮಾಡಲ್ಪಟ್ಟಿವೆ. ಉತ್ತಮ ಜಾತಿಯ ಮಣಿಗಳಾದ್ದರಿಂದ ಇವುಗಳ ಕಾಂತಿಯು ಬಾಗಿಲುಗಳಲ್ಲಿಯೂ ಹರಡಿವೆ. ದಟ್ಟವಾದ ಕಾಂತಿಗಳಿಂದಾಗಿ ಬಾಗಿಲುಗಳನ್ನು ತೆರೆದಿಟ್ಟರೂ ಒಳ ಹೊರಗೆ ಪರಸ್ಪರ ಕಾಣಿಸುತ್ತಿರಲಿಲ್ಲ. ಇದರಿಂದಾಗಿ ಬಾಗಿಲು ಹಾಕಿದಂತೇ ಕಾಣಿಸುತ್ತಿತ್ತು. ಹೀಗಿರುವಾಗ ಈ ಊರನ್ನು ದ್ವಾರಾವತೀ ಸದಾ ತೆರೆದುಕೊಂಡಿರುವ ಬಾಗಿಲುಳ್ಳದ್ದು ಎಂದು ಹೇಗೆ ಕರೆಯುವುದು?

**ಯದೀಯರತ್ನಾವೃತಹೈಮವಪ್ರ-**
**ಪ್ರಕಾಶಮಭ್ಯೇತ್ಯ ನಿವರ್ತತೇ ಸ್ಮ ।**
**ಸಮುದ್ಯತಾಸೀನ್ ಪ್ರತಿಬಿಂಬರಾಶೀನ್**
**ನಿರೀಕ್ಷ್ಯ ದೀನಾ ಬಹುಶೋಽರಿಸೇನಾ ॥ ೨೯ ॥**

ಬಹುಶಃ=ಬಹಳ; ಅರಿ=ಶತ್ರುಗಳು; ಸೇನಾ=ಸೈನ್ಯವು; ಯದೀಯ=ಯಾವ ದ್ವಾರಕೆಯ; ರತ್ನ=ರತ್ನಗಳಿಂದ; ಆವೃತ=ಕೂಡಿದ; ಹೈಮ=ಬಂಗಾರದ; ವಪ್ರ=ಗೋಡೆಗಳ; ಸಕಾಶಂ=ಸಮೀಪವನ್ನು; ಅಭ್ಯೇತ್ಯ=ಹೊಂದಿ; ಸಮುದ್ಯತ=ಎತ್ತಿದ; ಅಸೀನ್=ಕತ್ತಿವುಳ್ಳ; ಪ್ರತಿಬಿಂಬ=ಪ್ರತಿಬಿಂಬಗಳ; ರಾಶೀನ್=ರಾಶಿಗಳನ್ನು; ನಿರೀಕ್ಷ್ಯ=ನೋಡಿ; ದೀನಾ=ದುಃಖಗೊಂಡು; ನಿವರ್ತತೇ ಸ್ಮ=ಹಿಂದಿರುಗುತ್ತಿತ್ತು.

ಈ ಊರಲ್ಲಿ ಕೆಲವು ಕಡೆ ಬಂಗಾರದ ಗೋಡೆಗಳು ಇದ್ದವು. ಆ ಗೋಡೆಗಳಿಗೆ ಅಲ್ಲಲ್ಲಿ ರತ್ನಗಳ ಹಾಳೆಗಳನ್ನು ಕೂಡಿಸಿದ್ದಾರೆ. ಅವುಗಳು ಕನ್ನಡಿಯಂತೆ ಬಹಳ ಸ್ವಚ್ಛವಾಗಿವೆ. ಅವುಗಳಲ್ಲಿ ಜನರ ಪ್ರತಿಬಿಂಬಗಳು ಚೆನ್ನಾಗಿ ಮೂಡುತ್ತಿತ್ತು. ಶತ್ರುಗಳು ಒಮ್ಮೊಮ್ಮೆ ಶಸ್ತ್ರಧಾರಿಗಳಾಗಿ ಈ ಊರಿನ ಮೇಲೆ ದಂಡೆತ್ತಿ ಬರುತ್ತಿದ್ದರು. ಈ ಊರಿನ ಕೋಟೆಯ ಬಳಿ ಬರುವಾಗ ಇವರ ಪ್ರತಿಬಿಂಬಗಳು ಆ ಗೋಡೆಗಳಲ್ಲಿ ಮೂಡುತ್ತಿದ್ದವು. ಇದನ್ನು

ನೋಡಿದ ಶತ್ರುಗಳು ದ್ವಾರಕೆಯಿಂದಲೂ ಸೈನ್ಯವು ಆಯುಧಸಮೇತವಾಗಿ ದಂಡೆತ್ತಿ ಬರುತ್ತಿವೆ ಎಂದು ಭ್ರಮಿಸಿ ಹಿಂದೆ ಓಡುತ್ತಿದ್ದರು. ಇದೇ ರೀತಿ ಬಹಳ ಸಲ ಆಗುತ್ತಿತ್ತು. ಈ ರೀತಿ ದ್ವಾರಕೆಗೆ ಶತ್ರುಗಳನ್ನು ಹಿಂದೆ ಓಡಿಸುವ ತಾಕತ್ತಿತ್ತು ಎಂದು ರಾಜರು ಉತ್ಪ್ರೇಕ್ಷಿಸುತ್ತಾರೆ.

**ಮುಕ್ತಾವಲೀರಾಜಿತಸರ್ವಗೇಹಾ ನಿತ್ಯಂ ಪ್ರಮೋದಾಶನ ಸತ್‌ಸಮೂಹಾ ।**
**ದುಷ್ಟೈರಗಮ್ಯಾ ದಯಿತಾ ಮುರಾರೇರ್ಮುಕ್ತಿಪ್ರಭಾ ದ್ವಾರವತೀ ಪುರೀ ಸಾ ॥ ೩೦ ॥**

ಮುಕ್ತ=ಮುತ್ತುಗಳ; ಆವಲಿ=ಮಾಲೆಗಳಿಂದ; ರಾಜಿತ=ಶೋಭಿಸುವ; ಸರ್ವ=ಎಲ್ಲಾ; ಗೇಹಾ=ಮನೆಗಳುಳ್ಳ; ನಿತ್ಯಂ=ಯಾವಾಗಲೂ; ಪ್ರಮೋದ=ಆನಂದವೇ; ಅಶನ= ಊಟವಾಗುಳ್ಳ; ಸತ್=ಸಾತ್ವಿಕರ; ಸಮೂಹಾ=ಸಮೂಹವುಳ್ಳ; ದುಷ್ಟೈಃ=ದುಷ್ಟರಿಂದ; ಅಗಮ್ಯಾ=ಹೊಂದಲು ಸಾಧ್ಯವಿಲ್ಲದ; ಮುರಾರೇಃ=ದೇವರಿಗೆ; ದಯಿತಾ=ಪ್ರಿಯವಾದ; ಸಾ=ಆ; ದ್ವಾರವತೀ=ದ್ವಾರಕೆ ಎಂಬ; ಪುರೀ=ಊರು; ಮುಕ್ತಿ ಪ್ರಭಾ=ಮುಕ್ತಿಯಂತೆ ಪ್ರಕಾಶವುಳ್ಳದ್ದು.

ಶ್ರೀರಾಜರು ಈ ದ್ವಾರಕೆಯನ್ನು ಮೋಕ್ಷಕ್ಕೆ ಹೋಲಿಸುತ್ತಾರೆ. ಇಲ್ಲಿ ಶಬ್ದಸಾಮ್ಯ ಅರ್ಥಸಾಮ್ಯಗಳು ರಾಜರಿಗೆ ವಿವಕ್ಷಿತ. ಮುಕ್ತ ಶಬ್ದಕ್ಕೆ ಮುಕ್ತರು ಹಾಗೂ ಮುತ್ತುಗಳು ಎಂಬ ಎರಡರ್ಥಗಳಿವೆ. ದ್ವಾರಾವತಿಯು ಸಂಪತ್ತಿನಿಂದ ತುಳುಕುತ್ತಿದೆ. ಎಲ್ಲಾ ಮನೆಗಳಲ್ಲಿಯೂ ನವರತ್ನಗಳ ಉಪಯೋಗವು ನಾನಾ ರೀತಿಯಲ್ಲಿ ಆಗುತ್ತಿದೆ. ಮುತ್ತುಗಳ ಜಾಲರಿಗಳು ಎಲ್ಲಾ ಮನೆಗಳಲ್ಲಿಯೂ ಇವೆ. ಮೋಕ್ಷದಲ್ಲಿ ಎಲ್ಲಾ ಮನೆಗಳು ಮುಕ್ತರಿಂದ ತುಂಬಿವೆ. ಈ ಎರಡರ್ಥವನ್ನು ಸೇರಿಸಿ ರಾಜರು 'ಮುಕ್ತಾವಲೀ ರಾಜಿತ ಸರ್ವಗೇಹಾ' ಎಂಬ ಪಾದದಿಂದ ಹೇಳಿದ್ದಾರೆ. ದ್ವಾರಾವತಿಯಲ್ಲಿ ಸ್ವತಃ ಕೃಷ್ಣನು ಇದ್ದಾನೆ. ಆದ್ದರಿಂದ ಇಲ್ಲಿ ಎಲ್ಲರೂ ಆನಂದದಿಂದಲೇ ಅಶನ ವಸನಾದಿಗಳನ್ನು ಮಾಡುತ್ತಿದ್ದಾರೆ. ಮೋಕ್ಷದಲ್ಲಿ ಎಲ್ಲರೂ ಸ್ವರೂಪಭೂತವಾದ ಆನಂದವನ್ನೇ ಅನುಭವಿಸುತ್ತಿದ್ದಾರೆ. ಈ ಪಾದದಲ್ಲಿ ದ್ವಾರಾವತಿಯ ಅಭಿಪ್ರಾಯದಲ್ಲಿ ತೃತೀಯ ತತ್ಪುರುಷ. ಮೋಕ್ಷಾಭಿಪ್ರಾಯದಲ್ಲಿ ಷಷ್ಠೀತತ್ಪುರುಷ. ಈ ಎರಡು ಅಭಿಪ್ರಾಯದಿಂದ 'ಪ್ರಮೋದಾಶನಸತ್‌ಸಮೂಹಾ' ಎಂದು ಒಂದೇ ಪದವನ್ನು ಬಳಸಿದ್ದಾರೆ. ದೇವರ ಚಿಹ್ನೆಗಳಾದ ಶಂಖ ಚಕ್ರಾದಿಗಳನ್ನು ಧರಿಸಿದ ದುಷ್ಟರಿಗೆ ಮೋಕ್ಷಪ್ರವೇಶ ಇಲ್ಲ. ದ್ವಾರಾವತಿಯನ್ನೂ ಯಾವ ದುಷ್ಟರೂ ಪ್ರವೇಶಿಸುವುದಿಲ್ಲ. ಎರಡು ಪ್ರದೇಶವೂ ಕೃಷ್ಣನಿಗೆ ಪ್ರಿಯವು.

**ವಿಚಿತ್ರರತ್ನಾವೃತವಪ್ರಸೌಧ ಗೃಹಾಂಗನಾಗೋಪುರವಾಪಿಕೌಘಮ್ ।**
**ಇದಂ ಪರೀರತ್ನಮವಾಪ್ಯ ನೂನಂ ಬಭೂವ ರತ್ನಾಕರಶಬ್ದಿತೋಽಬ್ಧಿಃ ॥ ೩೧ ॥**

ವಿಚಿತ್ರ=ನಾನಾ ರೀತಿಯ; ರತ್ನ=ರತ್ನಗಳಿಂದ; ಆವೃತ=ಕೂಡಿದ; ವಪ್ರ=ಪ್ರಕಾರಗಳು;

ಸೌಧ=ಅರಮನೆಗಳು; ಗೃಹ=ಮನೆಗಳು; ಅಂಗನಾ=ನಾರಿಯರು; ಗೋಪುರ=ಹೆಬ್ಬಾಗಿಲುಗಳು; ವಾಪಿಕಾ=ಬಾವಿಗಳ; ಓಘಂ=ಸಮೂಹವನ್ನು; ಇದಂ=ಈ; ಪುರೀರತ್ನಂ=ಊರೆಂಬ ರತ್ನವನ್ನು; ಅವಾಪ್ಯ=ಹೊಂದಿ; ಅಬ್ಧಿಃ=ಸಮುದ್ರವು; ನೂನಂ=ಖಂಡಿತವಾಗಿಯೂ; ರತ್ನಾಕರ=ರತ್ನಾಕರ ಎಂದು; ಶಬ್ದಿತಃ=ಹೆಸರುಳ್ಳದ್ದು; ಬಭೂವ=ಆಯಿತು.

ಸಮುದ್ರವನ್ನು ರತ್ನಾಕರ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಯಾಕೆಂದರೆ ಅದರಲ್ಲಿ ನಾನಾ ರೀತಿಯ ರತ್ನಗಳು ಇವೆ ಎಂದು. ಆದರೆ ಆ ರತ್ನಗಳು ಯಾವುದೂ ನಮಗೆ ಕಾಣಿಸುವುದಿಲ್ಲ. ಆದ್ದರಿಂದ ನಮಗೆ ಸ್ವಲ್ಪ ಸಂಶಯ ಬರುವುದು. ಈ ಸಂಶಯವನ್ನು ಪರಿಹರಿಸಲು ಶ್ರೀರಾಜರು ನಮಗೆ ಸ್ಪಷ್ಟವಾಗಿ ಕಾಣುವ ರತ್ನಗಳನ್ನು ಸಮುದ್ರದಲ್ಲಿ ತೋರಿಸಿ ರತ್ನಾಕರ ಶಬ್ದದ ಸಾರ್ಥಕತೆಯನ್ನು ತೋರಿಸುತ್ತಾರೆ –ಈ ದ್ವಾರಕಾ ಸಮುದ್ರದಲ್ಲಿದೆ. ಇದೇ ಒಂದು ಅದ್ಭುತವಾದ ರತ್ನ. ಈ ರತ್ನದೊಳಗೆ ಇನ್ನೂ ಅನೇಕ ರತ್ನಗಳಿವೆ. ನವರತ್ನಗಳ ವಿಚಿತ್ರವಾದ ವಿನ್ಯಾಸದಿಂದ ನಿರ್ಮಿಸಿದ ಗೋಡೆಗಳು, ಕೋಟೆಗಳು, ಉಪ್ಪರಿಗೆಯ ಮನೆಗಳು, ಸೌಂದರ್ಯರತ್ನರಾದ ನಾರಿಯರು, ಎಲ್ಲಿಯೂ ಕಾಣಸಿಗದ ಹೆಬ್ಬಾಗಿಲುಗಳು, ಸಮೃದ್ಧವಾದ ಜಲದಿಂದ ಕೂಡಿದ ಬಾವಿಗಳು. ಇಂತಹ ರತ್ನಗಳನ್ನು ನೋಡಿದ ಯಾರಿಗಾದರೂ ಈ ಸಮುದ್ರಕ್ಕೆ ರತ್ನಾಕರ ಎಂಬ ಹೆಸರು ಸಾರ್ಥಕ ಎಂದು ಎಣಿಸದಿರದು.

**ಸಮುದ್ರಮುತ್ಸೃಜ್ಯ ಪುರೀಂ ಪ್ರವಿಷ್ಟಾ ಬಲೇನ ಮುಕ್ತಾವಲಿರಾಶುಗಸ್ಯ ।**
**ಭವಾಬ್ಧಿಮುಲ್ಲಂಘ್ಯ ಮರುದ್ಬಲಾಪ್ತವಿಕುಂಠಮುಕ್ತಾವಲಿವದ್ವಿರೇಜೇ ॥ ೩೨ ॥**

ಆಶುಗಸ್ಯ=ಗಾಳಿಯ; ಬಲೇನ=ಶಕ್ತಿಯಿಂದ; ಸಮುದ್ರಂ=ಸಮುದ್ರವನ್ನು; ಉತ್ಸೃಜ್ಯ=ಬಿಟ್ಟು; ಪುರೀಂ=ದ್ವಾರಕೆಯನ್ನು; ಪ್ರವಿಷ್ಟಾ=ಪ್ರವೇಶಿಸಿದ; ಮುಕ್ತ=ಮುತ್ತುಗಳು; ಆವಲಿ=ಸಮೂಹವು; ಭವ=ಸಂಸಾರವೆಂಬ; ಅಬ್ಧಿಂ=ಸಮುದ್ರವನ್ನು; ಉಲ್ಲಂಘ್ಯ=ದಾಟಿ; ಮರುತ್=ವಾಯುದೇವರ; ಬಲ=ಅನುಗ್ರಹದಿಂದ; ಆಪ್ತ=ಹೊಂದಲ್ಪಟ್ಟ; ವಿಕುಂಠ=ವೈಕುಂಠವುಳ್ಳ; ಮುಕ್ತ=ಮುಕ್ತರ; ಆವಲಿವತ್=ಸಾಲಿನಂತೆ; ವಿರೇಜೇ=ಶೋಭಿಸಿತು.

ಸಮುದ್ರದ ಮೇಲಿಂದ ಗಾಳಿಯು ಬಲವಾಗಿ ಬೀಸುತ್ತಿತ್ತು. ಆ ಗಾಳಿಗೆ ತೆರೆಗಳು ಏಳುವುದು ಸಹಜ. ಈ ತೆರೆಗಳಿಗೆ ಸಿಲುಕಿದ ಮುತ್ತುಗಳು ಸಮುದ್ರದ ತಳದಿಂದ ದ್ವಾರಕೆಯ ಕೃಷ್ಣನ ಊರಿನ ದಡದಲ್ಲಿ ಬೀಳುತ್ತಿತ್ತು. ಈ ದೃಶ್ಯವನ್ನು ಕಂಡ ರಾಜರಿಗೆ ಒಂದು ಆಧ್ಯಾತ್ಮಿಕ ವಿಚಾರ ಹೊಳೆಯಿತು. ಸಂಸಾರಸಮುದ್ರದಲ್ಲಿ ನಾನಾ ರೀತಿಯ ಜೀವರು ಇದ್ದಾರೆ. ಮುಕ್ತಿಯೋಗ್ಯರು ಅದರಲ್ಲಿ ಸೇರಿದ್ದಾರೆ. ಇವರು ತುಂಬಾ ಸಾಧನೆಮಾಡಿ ಗಾಳಿಯ ರೂಪರಾದ ವಾಯುದೇವರ ಅನುಗ್ರಹದಿಂದ ಈ ಸಂಸಾರಸಮುದ್ರವನ್ನು ದಾಟುತ್ತಾರೆ. ದೇವರ ಊರಾದ ವೈಕುಂಠದ ದಡವನ್ನು ಸೇರುತ್ತಾರೆ. ಇದರಿಂದ ದ್ವಾರಾವತಿಯು ವೈಕುಂಠಕ್ಕೆ ಸಮಾನ ಎಂಬುದನ್ನು ರಾಜರು ತಿಳಿಸುತ್ತಾರೆ.

**ತರುಂ ಮದೀಯಂ ನಯತುಚ್ಚಮತ್‌ಸ್ವಃ ಪುರೀಂ ನ ನೇತುಂ ಭವತೇ ಸಮರ್ಥಃ ।**
**ಮರುತ್ವತೇತೀರಿತ ಏವ ನೂನಂ ಪುರೀಂ ಇಮಾಂ ರಮ್ಯತಮಾಂ ಚಕಾರ ॥ ೩೩ ॥**

ಮದೀಯಂ=ನನ್ನ; ಉಚ್ಚಂ=ದೊಡ್ಡದಾದ; ತರುಂ=ಮರವನ್ನು; ನಯತು=ಒಯ್ಯು; ಮತ್=ನನ್ನ; ಸ್ವಃ ಪುರೀಂ=ಸ್ವರ್ಗವೆಂಬ ಊರನ್ನು; ನೇತುಂ=ಒಯ್ಯಲು; ಸಮರ್ಥಃ= ಶಕ್ತನು; ನ ಭವತೇ=ಆಗುವುದಿಲ್ಲ; ಇತಿ=ಎಂದು; ಮರುತ್ವತಾ=ಇಂದ್ರನಿಂದ; ಈರಿತಃ= ಹೇಳಲ್ಪಟ್ಟ ಕೃಷ್ಣನು; ಇಮಾಂ=ಈ; ಪುರೀಂ ಏವ=ಊರನ್ನೇ; ರಮ್ಯತಮಾಂ= ಚಂದವನ್ನಾಗಿ; ಚಕಾರ=ಮಾಡಿದನು.

ಒಂದು ಸಂದರ್ಭದಲ್ಲಿ ಸ್ವರ್ಗಕ್ಕೆ ಹೋದ ಕೃಷ್ಣನು ಸತ್ಯಭಾಮೆಗೋಸ್ಕರ ಇಂದ್ರನ ಉದ್ಯಾನದ ಪಾರಿಜಾತದ ವೃಕ್ಷವನ್ನು ಅಪಹರಿಸಿದನು. ಅದನ್ನು ಉಳಿಸಿಕೊಳ್ಳಲು ಇಂದ್ರನು ತುಂಬಾ ಶ್ರಮಿಸಿದನು. ಆದರೂ ಸಾಧ್ಯವಾಗಲಿಲ್ಲ. ಕೊನೆಗೆ ಇಂದ್ರನು ಕೃಷ್ಣನಿಗೆ ಈ ರೀತಿ ಹೇಳಿದನು– ಕೃಷ್ಣ, ನೀನು ಪಾರಿಜಾತದ ಮರವನ್ನು ಕೊಂಡುಹೋಗು. ಆದರೆ ನನ್ನ ಸ್ವರ್ಗವನ್ನು ಕೊಂಡುಹೋಗಲು ಸಾಧ್ಯವಿಲ್ಲ ತಾನೆ ಎಂದು. ಇದಕ್ಕೆ ಕೃಷ್ಣನು– ಇಂದ್ರ, ನಿನ್ನ ಸ್ವರ್ಗಕ್ಕಿಂತ ಹೆಚ್ಚಿನ ಚಂದದ್ದು ನಮ್ಮ ದ್ವಾರಕೆ. ಆದ್ದರಿಂದ ನಿನ್ನ ಸ್ವರ್ಗದ ಅಪೇಕ್ಷೆ ನನಗಿಲ್ಲ ಎಂದು ಹೇಳಿದನು. ಅದರಂತೆ ಸ್ವರ್ಗಕ್ಕಿಂತ ಸಾವಿರಪಟ್ಟು ಚಂದವನ್ನಾಗಿ ಮಾಡಿದನೂ ಕೂಡಾ.

**ಅಧಿಷ್ಠಿತಾ ಪೋತಮಮೂಂ ಶ್ರಯಂತೇ**
**ಸ್ವಕಾರ್ಯಲಾಭಾಯ ವಣಿಕ್‌ಸಮೂಹಾಃ ।**
**ಸ್ವರೂಪಲಬ್ಧ್ಯೈ ಹರಿಪಾದಪೋತ–**
**ಕೃತಾಶ್ರಯಾಃ ಸಿದ್ಧಜನಾಶ್ಚ ದೂರಾತ್ ॥ ೩೪ ॥**

ವಣಿಕ್=ವ್ಯಾಪಾರಿಗಳು; ಸಮೂಹಾಃ=ಗುಂಪುಗಳು; ಸ್ವ=ತಮ್ಮ; ಕಾರ್ಯ= ಕೆಲಸಗಳ; ಲಾಭಾಯ=ಲಾಭಕ್ಕೋಸ್ಕರ; ಪೋತಂ=ದೋಣಿಯನ್ನು; ಅಧಿಷ್ಠಿತಾಃ=ಆಶ್ರಯಿಸಿ; ಅಮೂಂ=ಈ ಊರನ್ನು; ಶ್ರಯಂತೇ=ಆಶ್ರಯಿಸುತ್ತಾರೆ; ಸಿದ್ಧಜನಾಃ ಚ=ಸಾಧಕರೂ ಕೂಡಾ; ಹರಿ=ದೇವರ; ಪಾದ=ಚರಣವೆಂಬ; ಪೋತ=ದೋಣಿಯನ್ನು; ಕೃತ=ಮಾಡಿದ; ಆಶ್ರಯಾಃ= ಆಶ್ರಯವುಳ್ಳವರಾಗಿ; ಸ್ವರೂಪ=ಸ್ವರೂಪದ; ಲಬ್ಧ್ಯೈ=ಪ್ರಾಪ್ತಿಗೋಸ್ಕರ; ಅಮೂಂ=ಈ ಊರನ್ನು; ಶ್ರಯಂತೇ=ಆಶ್ರಯಿಸುತ್ತಾರೆ.

ಈ ದ್ವಾರಕೆಯು ವ್ಯಾಪಾರಕೇಂದ್ರವೂ ಆಗಿತ್ತು. ಬೇರೆಬೇರೆ ಊರುಗಳಿಂದ ವ್ಯಾಪಾರಿಗಳು ತಮ್ಮ ಮಾಲುಗಳನ್ನು ಹಿಡಿದುಕೊಂಡು ದೋಣಿಗಳ ಮೂಲಕ ಇಲ್ಲಿಗೆ ಬರುತ್ತಿದ್ದರು. ವಸ್ತುಗಳನ್ನು ಇಲ್ಲಿ ಮಾರಾಟ ಮಾಡುತ್ತಿದ್ದರು. ಹಣವನ್ನು ಗಳಿಸಿಕೊಂಡು ಹೋಗುತ್ತಿದ್ದರು. ಇವರು ಹಣದ ಸಾಧಕರು. ಇವರು ಮಾತ್ರ ಬರುತ್ತಿದ್ದದ್ದು ಅಲ್ಲ;

ಮೋಕ್ಷ ಸಾಧಕರೂ ಬರುತ್ತಿದ್ದರು. ಹಣದ ಸಾಧಕರು ದೋಣಿಯಿಂದ ಇಲ್ಲಿಗೆ ಬಂದು ದೋಣಿಯನ್ನು ಬಿಡುತ್ತಿದ್ದರು. ಮೋಕ್ಷಸಾಧಕರು ಕೃಷ್ಣಚರಣವೆಂಬ ದೋಣಿಯಲ್ಲೇ ಇರುತ್ತಿದ್ದರು. ದೋಣಿಯನ್ನು ಬಿಡುವ ಪ್ರಸಂಗ ಬರುತ್ತಿರಲಿಲ್ಲ. ಮೊದಲಿನ ಸಾಧಕರು ತಮ್ಮ ಮಾಲನ್ನು ಮಾರಿ ಜನರಿಂದ ಹಣವನ್ನು ಗಳಿಸುತ್ತಿದ್ದರು. ಇವರು ತಮ್ಮಲ್ಲಿರುವ ಜ್ಞಾನಭಕ್ತ್ಯಾದಿಗಳನ್ನು ಕೃಷ್ಣನಿಗೆ ಅರ್ಪಿಸುತ್ತಿದ್ದರು. ಇದಕ್ಕೆ ಪ್ರತಿಯಾಗಿ ಕೃಷ್ಣನು ತನ್ನಲ್ಲಿದ್ದದ್ದನ್ನು ಏನನ್ನೂ ಇವರಿಗೆ ಕೊಡುತ್ತಿರಲಿಲ್ಲ. ಇವರ ಸ್ವರೂಪದಲ್ಲೇ ಇರುವ ಜ್ಞಾನಭಕ್ತ್ಯಾದಿಗಳು ಇವರಿಗೆ ಸಿಗುವಂತೆ ಮಾಡುತ್ತಿದ್ದನು. ಇಬ್ಬರು ಸಾಧಕರಿಗೆ ಇಷ್ಟು ವ್ಯತ್ಯಾಸವಿದೆ. ಈ ರೀತಿ ಈ ದ್ವಾರಕೆಯು ಎರಡು ರೀತಿಯ ಸಾಧಕರಿಗೂ ಎತ್ತರಕ್ಕೆ ಏರಲು ಕಾರಣವಾಗಿದೆ.

**ಇಮಾಮಧಿಶ್ರಿತ್ಯ ಪುರೀಂ ಪರತ್ರ**
**ವಿಮುಕ್ತಿಮೇವ ವ್ರತಿನೋ ವ್ರಜಂತಿ ।**
**ಪುರಾಽಪಿ ನಾಕಾಧಿಕಲೋಕಭಾಜಾಂ**
**ಕಥಂ ಸ ತೇಷಾಂ ಬಹುಮಾನಪಾತ್ರಮ್** ॥ ೩೫ ॥

ವ್ರತಿನಃ=ಸನ್ಯಾಸಿಗಳು; ಇಮಾಂ=ಈ; ಪುರೀಂ=ಊರನ್ನು; ಅಧಿಶ್ರಿತ್ಯ=ಆಶ್ರಯಿಸಿ; ಪರತ್ರ=ಪರಲೋಕದಲ್ಲಿ; ವಿಮುಕ್ತಿಂ ಏವ=ಮೋಕ್ಷವನ್ನೇ; ವ್ರಜಂತಿ=ಹೊಂದುತ್ತಾರೆ; ಪುರಾ ಅಪಿ=ಮೊದಲೂ ಕೂಡಾ; ನಾಕ=ಸ್ವರ್ಗಕ್ಕಿಂತ; ಅಧಿಕ=ಹೆಚ್ಚಾದ; ಲೋಕ=ಲೋಕವನ್ನು; ಭಾಜಾಂ=ಸೇವಿಸುವ; ತೇಷಾಂ=ಅವರಿಗೆ; ಸಃ=ಅದು; ಕಥಂ=ಹೇಗೆ?; ಬಹುಮಾನ ಪಾತ್ರಂ=ಅಪೇಕ್ಷಿತವಾದದ್ದು.

ದ್ವಾರಕೆಯಲ್ಲಿ ಇರುವ ಪ್ರತಿಯೊಬ್ಬರೂ ಒಂದಲ್ಲ ಒಂದು ರೀತಿಯಿಂದ ಸಾಧನೆ ಮಾಡುವ ಮೂಲಕ ಸನ್ಯಾಸಿಗಳಂತೆ ಇದ್ದಾರೆ. ಇಲ್ಲಿ ಸಾಯುವ ಇವರು ಸ್ವರ್ಗಕ್ಕೆ ಹೋಗದೆ ಮೋಕ್ಷವನ್ನೇ ಸೇರುತ್ತಾರೆ. ಇವರು ಸ್ವರ್ಗವನ್ನು ಬಯಸುವುದೂ ಇಲ್ಲ. ಯಾಕೆಂದರೆ ಸ್ವರ್ಗಕ್ಕಿಂತಲೂ ಉತ್ತಮವಾದ ದ್ವಾರಕೆಯಲ್ಲಿ ಇದ್ದದ್ದರಿಂದ ಇದಕ್ಕಿಂತ ನೀಚವಾದ ಲೋಕವನ್ನು ಯಾಕೆ ಬಯಸುತ್ತಾರೆ? ಉತ್ತಮವಾದ ಮೋಕ್ಷವನ್ನೇ ಬಯಸುತ್ತಾರೆ. ಒಳ್ಳೆಯ ಬಂಗಲೆಯಲ್ಲಿ ವಾಸಿಸುವವನು ಗುಡಿಸಲನ್ನು ಆಶಿಸುವುದಿಲ್ಲ ತಾನೆ? ದ್ವಾರಕೆಯಲ್ಲಿ ವಾಸಿಸುವವರಿಗೆ ಸ್ವರ್ಗಾದಿ ಅನಿತ್ಯ ಫಲಗಳಿಲ್ಲ. ಮೋಕ್ಷವೆಂಬ ನಿತ್ಯಫಲವೇ ಇರುವುದು.

**ಗುಣೇನ ಯಸ್ಯಾಃ ಶ್ರುತಿಸಂಗತೇನ ಸ್ವಕೋಟಿಮಾತ್ರೇಣ ವಿನಮ್ರವಕ್ತ್ರಾ ।**
**ಅವದ್ಯಸಂಭಾದನವೈಖರೀಜ್ಞಾ ಬಭಾರಕಾಶೀಧನುಷೋನುಕಾರಮ್** ॥ ೩೬ ॥

ಶ್ರುತಿ=ವೇದಗಳಲ್ಲಿ; ಸಂಗತೇನ=ಸಂಬದ್ಧವಾದ; ಸ್ವ=ತನ್ನಕ್ಕಿಂತ; ಕೋಟಿಮಾತ್ರೇಣ= ಕೇವಲ ಕೋಟಿ ಸಂಖ್ಯೆಯಿಂದ; ಯಸ್ಯಾಃ=ಯಾವುದರ; ಗುಣೇನ=ಗುಣದಿಂದ; ವಿನಮ್ರ=

ಬಗ್ಗಿದ; ವಕ್ತ್ರಾ=ಮುಖವುಳ್ಳ; ಅವದ್ಯ=ದೋಷಗಳ; ಸಂಛಾದನ=ಮರೆಸುವ; ವೈಖರೀ=ಕ್ರಮವನ್ನು; ಜ್ಞಾ=ತಿಳಿದಿರುವ; ಕಾಶೀ=ಕಾಶಿಯು; ಧನುಷಃ=ಧನುಸ್ಸಿನ; ಅನುಕಾರಂ=ಆಕಾರವನ್ನು; ಬಭಾರ=ಧರಿಸಿತು.

ಕಾಶೀಕ್ಷೇತ್ರವು ಧನುಸ್ಸಿನ ಆಕಾರದಲ್ಲಿ ಎರಡೂ ಕಡೆ ಬಾಗಿಕೊಂಡಿರುವುದು. ಇದು ಯಾಕೆ? ಎಂಬುದನ್ನು ಶ್ರೀರಾಜರು ಚಮತ್ಕಾರವಾಗಿ ವರ್ಣಿಸುವ ಮೂಲಕ ದ್ವಾರಕೆಯ ಮಹತ್ವವನ್ನು ತಿಳಿಸುತ್ತಾರೆ.

ಲೋಕದಲ್ಲಿ ಕೆಲವರಿಗೆ ತಾವು ದೊಡ್ಡವರೆಂಬ ಭಾವನೆಯು ಇರುತ್ತದೆ. ಸಮಾಜವು ತಮ್ಮನ್ನು ಬಹಳ ಗೌರವಿಸುತ್ತದೆ. ಎಲ್ಲರಿಗಿಂತ ಹೆಚ್ಚಾಗಿ ಆದರಿಸುತ್ತದೆ ಎಂದು ತಿಳಿದಿರುತ್ತಾರೆ. ಬೇರೆಯವರ ಬಗ್ಗೆ ಹೆಚ್ಚು ತಿಳಿದಿರುವುದಿಲ್ಲ. ವಸ್ತುತಃ ಬೇರೆಯವರು ಇವರಿಗಿಂತ ಹೆಚ್ಚು ಗುಣಿಗಳಾಗಿರುತ್ತಾರೆ. ಈ ಮೊದಲನೆಯ ವ್ಯಕ್ತಿಗಳಿಗೆ ಇವರನ್ನು ಅಂದರೆ ಎರಡನೆಯ ವ್ಯಕ್ತಿಗಳನ್ನು ಭೇಟಿಯಾಗುವ ಪ್ರಸಂಗ ಒದಗಿಬರುತ್ತದೆ ಎಂದು ಊಹಿಸೋಣ. ಆಗ ಮೊದಲನೆಯವರು ಎರಡನೆಯವರ ಗುಣಗಳನ್ನು ಕೇಳಿ ತಾವು ನಾಚುತ್ತಾರೆ. ಬಿಲ್ಲಿನಂತೆ ಬಾಗುತ್ತಾರೆ. ತಮ್ಮಲ್ಲಿದ್ದ ದೋಷಗಳನ್ನು ಮರೆಮಾಚುತ್ತಾರೆ. ಒಂದು ವಸ್ತುವನ್ನು ಬಿಡಿಸಿದಾಗ ಅದರಲ್ಲಿ ಕಾಣುವ ದೋಷಗಳು ಅದನ್ನು ಮಡಚಿದಾಗ ಕಾಣುವುದಿಲ್ಲ. ಬಿಲ್ಲಿನಂತೆ ಬಾಗುವ ಮೂಲಕ ತಮ್ಮನ್ನು ಮಡಚಿಕೊಳ್ಳುತ್ತಾರೆ.

ಕಾಶಿಯೂ ಇದೇ ಅವಸ್ಥೆಯಲ್ಲಿದೆ. ಕಾಶಿಯು ಬಹಳ ಪವಿತ್ರವಾದ ಕ್ಷೇತ್ರ. ರುದ್ರದೇವರ ವಾಸಸ್ಥಳ. ಜೀವನದಲ್ಲಿ ಒಮ್ಮೆಯಾದರೂ ಕಾಶೀಯಾತ್ರೆ ಮಾಡಬೇಕೆಂದು ಭಾವುಕರ ಅಭಿಪ್ರಾಯ. ಅಷ್ಟು ಉತ್ತಮವಾದ ಕ್ಷೇತ್ರ. ಕಾಶಿಗಿಂತ ಕೋಟಿಪಟ್ಟು ಹೆಚ್ಚಿನ ಕ್ಷೇತ್ರ ದ್ವಾರಕಾ. ರುದ್ರನಿಗಿಂತ ಅನಂತಪಟ್ಟು ಹೆಚ್ಚು ಉತ್ತಮನಾದ ಕೃಷ್ಣನ ವಾಸಸ್ಥಳ. ಆದ್ದರಿಂದ ದ್ವಾರಕೆಯೂ ಕಾಶಿಗಿಂತ ಕೋಟಿಪಟ್ಟು ಉತ್ತಮ. ಈ ವಿಷಯವು ವೇದವೆಂಬ ಪ್ರಮಾಣದಿಂದ ಸಿದ್ಧವಾಗಿದೆ. ಇದನ್ನು ತಿಳಿದ ಕಾಶಿಗೆ ಬಹಳ ಅವಮಾನವಾಯಿತು. ಕಾಶಿಯಲ್ಲಿ ದೋಷವೂ ಉಂಟು; ಗುಣಗಳು ಮಾತ್ರ ಅಲ್ಲ ಎಂಬುದು ಸಿದ್ಧವಾಯಿತು. ತನ್ನಲ್ಲಿರುವ ದೋಷಗಳು ಇತರರಿಗೆ ತಿಳಿಯಬಾರದಂತೆ ಏನು ಮಾಡಬೇಕು ಎಂಬುದೂ ಅದಕ್ಕೆ ಗೊತ್ತು. ಆದ್ದರಿಂದ ತಾನು ಬಿಲ್ಲಿನಂತೆ ಬಾಗುವ ಮೂಲಕ ತನ್ನನ್ನು ಮಡಚಿಕೊಂಡಿತು. ಈ ರೀತಿ ವಾದಿರಾಜರು ದ್ವಾರಕೆಯ ಮಹತ್ವವನ್ನು ಪ್ರಾಮಾಣಿಕವಾಗಿ ವರ್ಣಿಸಿ ಕಾಶಿಯ ಧನುರಾಕಾರದ ಇರುವಿಕೆಯನ್ನು ಆಲಂಕಾರಿಕವಾಗಿ ವರ್ಣಿಸಿದ್ದಾರೆ.

**ಸುಧರ್ಮಪುಂಜಾ ವನಮೂಲಭೂತಮಿಹಾಚ್ಯುತಂ ವೀಕ್ಷ್ಯ ಕೃತಾಧಿವಾಸಮ್ ।**
**ಸಭಾಂ ಸುಧರ್ಮಾಂ ಪ್ರದದೌ ಪುರೀವತ್ ಸ್ವಸಂಸದತ್ಯುಚ್ಚಸಭಾಭಿಯಾಮ್॥ ೩೭ ॥**

ಸು=ಒಳ್ಳೆಯ; ಧರ್ಮ=ಧರ್ಮವುಳ್ಳವರ; ಪುಂಜ=ಸಮೂಹದ; ಅವನ=ರಕ್ಷಣೆಗೆ;

ಮೂಲಭೂತಂ=ಮೂಲಕಾರಣನಾದ; ಇಹ=ದ್ವಾರಕೆಯಲ್ಲಿ; ಕೃತ=ಮಾಡಲ್ಪಟ್ಟ; ಅಧಿವಾಸಂ=ವಾಸವುಳ್ಳ; ಅಚ್ಯುತಂ=ಕೃಷ್ಣನನ್ನು; ನಿರೀಕ್ಷ್ಯ=ನೋಡಿ; ಪುರೀವತ್=ದ್ವಾರಕೆಯಂತೆ; ಸ್ವ=ತನ್ನ; ಸಂಸತ್=ಸಭೆಗಿಂತ; ಅತ್ಯುಚ್ಚ=ಬಹಳ ಉತ್ತಮವಾದ; ಸಭಾ=ಸಭೆಯ; ಭಿಯಾ ಇವ=ಹೆದರಿಕೆಯಿಂದ ಎಂಬಂತೆ; ಸುಧರ್ಮಾಂ=ಸುಧರ್ಮಾ ಎಂಬ; ಸಭಾಂ=ಸಭೆಯನ್ನು; ಪ್ರದದೌ=ಕೊಟ್ಟನು.

ಕೃಷ್ಣನು ದ್ವಾರಕೆಯನ್ನು ಸಮುದ್ರದಲ್ಲಿ ನಿರ್ಮಿಸಿದನು. ಅಲ್ಲಿಗೆ ಬೇಕಾದ್ದನ್ನು ದೇವತೆಗಳು ಒದಗಿಸಿದರು. ಸಭಾಭವನವನ್ನು ಇಂದ್ರನು ಕಳಿಸಿದನು ಎಂದು ಪ್ರಮಾಣಗಳು ಹೇಳುತ್ತಿವೆ. ಈ ಸಭಾಭವನದ ಹೆಸರು 'ಸುಧರ್ಮಾ' ಎಂದು. ಈ ವಿಷಯವನ್ನು ರಾಜರು ಕಾವ್ಯದ ಶೈಲಿಯಲ್ಲಿ ವರ್ಣಿಸುತ್ತಾರೆ.

ಸುಧರ್ಮ ಶಬ್ದಕ್ಕೆ ಯೌಗಿಕವಾಗಿ ಒಳ್ಳೆಯ ಧರ್ಮಾಚರಣೆ ಮಾಡುವವರು ಎಂದರ್ಥ. ರೂಢವಾಗಿ ಇಂದ್ರನ ಒಂದು ಸಭಾಭವನ. ಗೀತೆಯಲ್ಲಿ ಕೃಷ್ಣನು ಧಾರ್ಮಿಕರಿಗೆ ತೊಂದರೆ ಆದರೆ ಅವರ ರಕ್ಷಣೆಗೆ ಅವತರಿಸುತ್ತೇನೆ ಎಂದು ಆದೇಶಿಸಿದ್ದಾನೆ. ಹಾಗೆಯೇ ಮಾಡಿದ್ದಾನೆ. ಹೀಗೆ ಸುಧರ್ಮಗಳ ದೊಡ್ಡ ಗುಂಪೇ ಕೃಷ್ಣನ ಹಿಡಿತದಲ್ಲಿದೆ. ಅಂತಹ ಕೃಷ್ಣ ಸದ್ಯ ಈಗ ದ್ವಾರಕೆಯಲ್ಲಿ ವಾಸವಾಗಿದ್ದಾನೆ. ಇಂದ್ರನು ಆಲೋಚಿಸಿದನು– ಕೃಷ್ಣನು ದ್ವಾರಕೆಯನ್ನು ಸ್ವರ್ಗಕ್ಕಿಂತ ಉತ್ತಮವನ್ನಾಗಿ ಮಾಡಿ ಸಾತ್ವಿಕರಿಗೆ ಸ್ವರ್ಗದ ಅಭಿಲಾಷೆಯನ್ನು ಬಿಡಿಸಿದನು. ಉತ್ತಮವನ್ನಾಗಿ ಮಾಡಲು ಕಾರಣ ನಾನು ಸ್ವರ್ಗಲೋಕವನ್ನು ಅವನಿಗೆ ಕೊಡದಿದ್ದುದು. ಈಗ ನನ್ನ ಸಭಾಭವನವಾದ ಸುಧರ್ಮವನ್ನೂ ಕೊಡದಿದ್ದರೆ ಒಂದು ಸುಧರ್ಮದ ಬದಲು ಸಾವಿರಾರು ಸುಧರ್ಮಗಳನ್ನು ತನ್ನಲ್ಲಿ ತರಿಸಿಕೊಳ್ಳುತ್ತಾನೆ. ಆಗ ಪುನಃ ನನ್ನ ಸುಧರ್ಮವನ್ನು ಕೇಳುವವರೇ ಇಲ್ಲವೆಂದಾಗುತ್ತದೆ. ಈ ದುಃಖದಿಂದ ಪಾರಾಗಲು ನನ್ನ ಸುಧರ್ಮವನ್ನೇ ದ್ವಾರಕೆಗೆ ಕಳಿಸುತ್ತೇನೆ ಎಂದು. ಈ ರೀತಿ ಇಂದ್ರನ ಸುಧರ್ಮಸಭೆಯು ದ್ವಾರಕೆಗೆ ಬಂತು.

**<u>ಸಂದೇಶ</u> : ಸ್ವರ್ಗವನ್ನು ಉದ್ದೇಶಿಸಿ ಆಗುವ ಧಾರ್ಮಿಕರಿಗಿಂತ ವಿಷ್ಣುವನ್ನು ಉದ್ದೇಶಿಸಿ ಆಗುವ ಧಾರ್ಮಿಕರು ಉತ್ತಮರು.**

**ಪುರೀಮಗಮ್ಯಾಂ ಪರಿಖೀಕೃತಾಬ್ಧಿಂ**
**ನಿಶಮ್ಯ ಕೃಷ್ಣಸ್ಯ ನಿರೂಢಚಿಂತಃ ।**
**ಸಮಾಗಧೋಽಭೂತ್ ಇಹಯೋಗ್ಯನಾಮಾ**
**ಕ್ರಮಾಜ್ಜರಾಸಂಹಿತಗಾತ್ರಸೀಮಾ ॥ ೩೮ ॥**

ಪರಿಖೀಕೃತ=ಕೋಟೆಯಾಗಿ ಮಾಡಲ್ಪಟ್ಟ; ಅಬ್ಧಿಂ=ಸಮುದ್ರವುಳ್ಳ; ಕೃಷ್ಣಸ್ಯ=ಕೃಷ್ಣನ; ಪುರೀಂ=ಊರನ್ನು; ಅಗಮ್ಯಾಂ=ಅಪ್ರವೇಶ್ಯವನ್ನಾಗಿ; ನಿಶಮ್ಯ=ನೋಡಿ; ನಿರೂಢ=

ಗಟ್ಟಿಯಾದ; ಚಿಂತಃ=ಚಿಂತೆವುಳ್ಳ; ಸಃ=ಆ; ಮಾಗಧಃ=ಜರಾಸಂಧನು ಇಲ್ಲಿ; ಕ್ರಮಾತ್=ನಿಧಾನವಾಗಿ; ಜರಾ=ಜರೆಯಿಂದ; ಸಂಹಿತ=ಕೂಡಿದ; ಗಾತ್ರ=ಶರೀರದ; ಸೀಮಾ=ಅವಧಿ ಉಳ್ಳವನಾಗಿ; ಯೋಗ್ಯ=ಉಚಿತವಾದ; ನಾಮಾ=ಹೆಸರಿನವನು; ಅಭೂತ್=ಆದನು.

ಈ ಶ್ಲೋಕದಲ್ಲಿ ರಾಜರು ಜರಾಸಂಧನಿಗೆ ಈ ಹೆಸರು ಹೇಗೆ ಬಂತು ಎಂಬುದನ್ನು ತನ್ನ ಶೈಲಿಯಲ್ಲಿ ತಿಳಿಸುತ್ತಾರೆ.

ಕೃಷ್ಣನು ದೇವರ ಅವತಾರ. ದೇವರು ಸಮುದ್ರದಲ್ಲಿ ಇರುವವನು. ಆ ಗುಣವನ್ನು ತನ್ನಲ್ಲಿ ತೋರುವುದಕ್ಕೋಸ್ಕರ ಕೃಷ್ಣನು ಸಮುದ್ರದಲ್ಲಿ ದ್ವಾರಕೆಯನ್ನು ನಿರ್ಮಿಸಿ ಅದರಲ್ಲಿ ಇರತೊಡಗಿದನು. ಕೃಷ್ಣನು ಮಧುರೆಯಲ್ಲಿ ಇರುವಾಗ ಕಂಸನ ವಿಷಯದಲ್ಲಿ ಜರಾಸಂಧನು ೧೮ ಬಾರಿ ಯುದ್ಧವನ್ನು ಮಾಡಿದ್ದನು. ಅಷ್ಟೂ ಬಾರಿಯೂ ಜರಾಸಂಧನು ಸೋತಿದ್ದನು. ಆದರೆ ಯಾದವರು ಮಾತ್ರ ಬಹಳ ಬಳಲಿದ್ದರು. ಇವರ ಆಯಾಸಪರಿಹಾರಕ್ಕಾಗಿಯೂ ಕೃಷ್ಣನು ದ್ವಾರಕೆಯನ್ನು ನಿರ್ಮಿಸಿದ್ದನು. ಇಲ್ಲಿಗೆ ಜರಾಸಂಧನಿಗೆ ಬರಲು ಸಾಧ್ಯವಾಗಲಿಲ್ಲ. ಊರಿನ ಸುತ್ತ ಇರುವ ಎಂತಹ ಕೋಟೆಗಳನ್ನೂ ಭೇದಿಸಿ ಊರಿಗೆ ಲಗ್ಗೆ ಇಡುವ ತಾಕತ್ತು ಜರಾಸಂಧನಿಗಿತ್ತು. ಆದರೆ ಈ ದ್ವಾರಕೆಗೆ ಸಮುದ್ರವೇ ಒಂದು ಕೋಟೆಯಂತಿದೆ. ಇದನ್ನು ಮುರಿಯುವ ವಿಷಯದಲ್ಲಿ ಜರಾಸಂಧನು ಎಷ್ಟು ತಲೆಕೆಡಿಸಿಕೊಂಡರೂ ಉಪಾಯ ಹೊಳೆಯಲಿಲ್ಲ. ಈ ಚಿಂತೆಯಿಂದಲೇ ಜರಾ ಅಂದರೆ ವಾರ್ಧಕ್ಯ ಆತನ ದೇಹದ ಮೇಲೆ ಆಕ್ರಮಿಸಿತು. ಹೀಗೆ ಚಿಂತೆ ಎಂಬ ಜರಾದಿಂದ ಸಂಧಿಮಾಡಿಕೊಂಡದ್ದರಿಂದ ಈತನಿಗೆ ಜರಾಸಂಧ ಎಂಬ ಹೆಸರು ಸಾರ್ಥಕವಾಯಿತು.

ಪುರಾಣಗಳು ಹೇಳುವ ನೈಜ ಕಾರಣ ಈ ರೀತಿ ಇದೆ– ಈತನು ಹುಟ್ಟುವಾಗ ಈತನ ದೇಹವು ಎರಡು ಹೋಳಾಗಿ ಇತ್ತು. ಆಗ ಜರಾ ಎಂಬ ರಾಕ್ಷಸಿಯು ಈ ಎರಡು ಹೋಳುಗಳನ್ನು ಜೋಡಿಸಿದಳು. ಜರಾ ಎಂಬ ರಾಕ್ಷಸಿಯಿಂದ ಸಂಧಿಯಾದ್ದರಿಂದ ಜರಾಸಂಧ ಎಂಬ ಹೆಸರು ಎಂದು.

**ಸಿತಾನುಲೇಪಾಂಬರಮಾಲ್ಯಹಾರಾಃ**
**ಶುಚಿಸ್ಮಿತಾ ವಾರವಧೂರ್ವ್ರಜಂತೀಃ ।**
**ಇಹೋದಿತೇಂದುದ್ಯುತಿತೋತಿರಿಕ್ತಾಃ**
**ನ ಯಾಮಿಕಾ ಲಕ್ಷಯಿತುಂ ಕ್ಷಮಂತೇ** ॥ ೩೯ ॥

ಇಹ=ಇಲ್ಲಿ; ಯಾಮಿಕಾಃ=ರಾತ್ರಿ ಕಾವಲುಗಾರರು; ಸಿತ=ಬಿಳಿಯಾದ; ಅನುಲೇಪ=ಚಂದನವು; ಅಂಬರ=ವಸ್ತ್ರವು; ಮಾಲ್ಯ=ಮಾಲಿಕೆಯು; ಹಾರ=ಹಾರಗಳುಳ್ಳ; ಶುಚಿ=ಶುಭ್ರವಾದ; ಸ್ಮಿತಾಃ=ನಗುವುಳ್ಳ; ವ್ರಜಂತೀಃ=ಹೋಗುವ; ವಾರವಧೂಃ=ವೇಶ್ಯಾಸ್ತ್ರೀಯರನ್ನು; ಉದಿತ=ಉದಯಿಸಿದ; ಇಂದು=ಚಂದ್ರನ; ದ್ಯುತಿತಃ=ಕಾಂತಿಗಿಂತ;

ಅತಿರಿಕ್ತಾಃ=ವ್ಯತ್ಯಸ್ತವನ್ನಾಗಿ; ಲಕ್ಷಯಿತುಂ=ತಿಳಿಯಲು; ನಕ್ಷಮಂತೇ= ಸಮರ್ಥ ರಾಗುವುದಿಲ್ಲ.

ದ್ವಾರಕೆಯಲ್ಲಿ ವೇಶ್ಯಾನಾರಿಯರೂ ಇದ್ದರು. ರಾತ್ರಿಹೊತ್ತು ಅವರು ಉಪಪತಿಗಳ ಬಳಿಗೆ ಹೋಗುತ್ತಿದ್ದರು. ಹೋಗುವಾಗ ಬಿಳಿಯಾದ ಸೀರೆಯನ್ನು ಉಡುತ್ತಿದ್ದರು. ತಲೆಗೆ ತುಂಬಾ ಬಿಳಿ ಹೂವನ್ನು ಮುಡಿದುಕೊಳ್ಳುತ್ತಿದ್ದರು. ಕೊರಳಿಗೆ ಮುತ್ತಿನ ಹಾರಗಳು. ಬಿಳಿಯಾದ ಚಂದನದ ಲೇಪನ. ಮಂದಹಾಸವೂ ಬಿಳಿ ಎಂದು ಕವಿಗಳ ಕಲ್ಪನೆ. ಇಂತಹ ಮಂದಹಾಸ. ಒಟ್ಟಿಗೆ ಎಲ್ಲವೂ ಬಿಳಿಮಯ. ಅದು ಹುಣ್ಣಿಮೆಯ ದಿನವಾದರೆ ಚಂದ್ರನ ಬೆಳದಿಂಗಳು ಬೇರೆ. ಇದೂ ಬಿಳಿ. ಅಲ್ಲಿ ನೆಲವು ಸ್ಫಟಿಕಮಣಿಗಳಿಂದ ಮುಚ್ಚಲ್ಪಟ್ಟಿತ್ತು. ಇದರ ಮೇಲೆ ಚಂದ್ರಕಿರಣಗಳು ಬಿದ್ದಾಗೆ ಅದರ ಸಾಂದ್ರತೆಯಿಂದ ಮತ್ತಷ್ಟು ಬಿಳಿಯಾಗಿ ಕಾಣುತ್ತಿತ್ತು. ಇಂತಹ ಬೆಳದಿಂಗಳಲ್ಲಿ ಈ ನಾರಿಯರು ಹೊರಟುನಿಂತರೆ ಬೆಳದಿಂಗಳು ಯಾವುದು? ನಾರಿಯರು ಯಾರು? ಎಂದು ತಿಳಿಯುವುದು ಬಹಳ ಕಷ್ಟವಾಗುತ್ತಿತ್ತು. ಹೊಸಬರಿಗೆ ಅಲ್ಲ; ಅಲ್ಲಿ ನಿತ್ಯ ದ್ವಾರಪಾಲಕರ ಕೆಲಸಮಾಡುವವರಿಗೂ ಕೂಡಾ.

**ಕಾವ್ಯೋಚಿತ ಶ್ಲೋಕಮಪೇಕ್ಷಮಾಣಾಃ**
**ವಿಚಾರಯಂತೀಹ ಪದೇ ಪದೇऽರ್ಥಾನ್ ।**
**ವಿದ್ವಜ್ಜನಾನಂದಕರಾನ್ ಮನೋಜ್ಞಾ**
**ಬುಧಾ ವದಾನ್ಯಾಶ್ಚ ಪುರೇ ಮುರಾರೇಃ ॥ ೪೦ ॥**

ಮುರಾರೇಃ=ಕೃಷ್ಣನ; ಇಹ=ಈ; ಪುರೇ=ಊರಲ್ಲಿ; ಮನಃ=ಮನಸ್ಸನ್ನು; ಜ್ಞಾಃ=ತಿಳಿದಿರುವ; ಬುಧಾಃ=ಪಂಡಿತರು; ವದಾನ್ಯಾಃ ಚ=ದಾನಿಗಳೂ; ಕಾವ್ಯ=ಕಾವ್ಯಕ್ಕೆ; ಉಚಿತ= ಯೋಗ್ಯವಾದ; ಶ್ಲೋಕಂ=ಶ್ಲೋಕವನ್ನು, ಕೀರ್ತಿಯನ್ನು; ಅಪೇಕ್ಷಮಾಣಾಃ=ಆಶಿಸುವವರಾಗಿ; ಪದೇಪದೇ=ಪ್ರತಿಯೊಂದು ಶಬ್ದದಲ್ಲಿಯೂ, ಹೆಜ್ಜೆಹೆಜ್ಜೆಗೂ; ವಿದ್ವಜ್ಜನ= ತಿಳಿದವರಿಗೆ; ಆನಂದ=ನೆಮ್ಮದಿಯನ್ನು; ಕರಾನ್=ಮಾಡುವ; ಅರ್ಥಾನ್= ಅರ್ಥಗಳನ್ನು; ಚಿಂತಯಂತಿ= ವಿಮರ್ಶಿಸುತ್ತಾರೆ.

ಈ ಶ್ಲೋಕದಲ್ಲಿ ರಾಜರು ದ್ವಾರಕೆಯಲ್ಲಿರುವಾಗ ಜ್ಞಾನಿಗಳನ್ನು ದಾನಿಗಳನ್ನು ಅವರ ಕೆಲಸವನ್ನು ತಿಳಿಸುತ್ತಾರೆ. ಒಂದೊಂದು ಶಬ್ದಕ್ಕೂ ಎರಡೆರಡು ಅರ್ಥಗಳನ್ನು ಹೇಳುವ ಮೂಲಕ ಚಮತ್ಕಾರವನ್ನು ಮೆರೆಯುತ್ತಾರೆ– ದ್ವಾರಕೆಯಲ್ಲಿ ವಿದ್ವಾಂಸರು ಸುಮ್ಮನೆ ಕುಳಿತಿಲ್ಲ. ಯಾವುದಾದರೂ ಒಂದು ವಿಷಯದ ಬಗ್ಗೆ ಶ್ಲೋಕಗಳನ್ನು ರಚಿಸುವ ಮೂಲಕ ಕವಿತೆಯನ್ನು ಬರೆಯುತ್ತಾರೆ. ಅನಂತರ ಪ್ರತಿಯಾಗಿ ಶ್ಲೋಕದ ಪ್ರತಿಯೊಂದು ಪದದ ಅರ್ಥವನ್ನು ವಿವರಿಸುತ್ತಾರೆ. ಈ ಅರ್ಥದ ವಿವರಣೆ ಪಾಮರರಿಗೂ

ಮನಮುಟ್ಟುವಂತಿತ್ತು. ಪಂಡಿತವರ್ಗವು ಈ ಅರ್ಥಗಳ ಪ್ರಾಮಾಣಿಕತನಕ್ಕೆ ತಮ್ಮ ಮುದ್ರೆಯನ್ನು ಒತ್ತುತ್ತಿತ್ತು.

ಹಾಗೆಯೇ ದಾನಿಗಳೂ ಕೂಡಾ. ಜನರ ಮನಸ್ಸನ್ನು ಅರಿತು ದಾನಮಾಡುತ್ತಾರೆ. ಯಾರಿಗೆ ಯಾವುದರ ಆವಶ್ಯಕತೆ ಇದೆ; ಯಾವುದರಿಂದ ಹಿತವಾಗುತ್ತದೆ. ಇದನ್ನೆಲ್ಲಾ ದಾನಿಗಳು ತಿಳಿದು ಯಾಚಕರಿಗೆ ದಾನಮಾಡುತ್ತಿದ್ದರು. ಹೆಜ್ಜೆಹೆಜ್ಜೆಗೂ ವಿಚಾರ ಮಾಡುತ್ತಿದ್ದರು. ದಾನ ಮಾಡಿದರೆ ಹೇಗೆ ಸಾರ್ಥಕವಾದೀತು ಎಂದು. ಈ ರೀತಿ ದಾನಮಾಡುವವರನ್ನು ಕಂಡ ವಿದ್ವಾಂಸರು ಬಹಳ ಸಂತೋಷಪಡುತ್ತಿದ್ದರು. ಈ ದಾನಿಗಳ ಮೇಲೆ ಸಂಸ್ಕೃತದಲ್ಲಿ ಶ್ಲೋಕಗಳನ್ನು ರಚಿಸುತ್ತಿದ್ದರು. ಅದರಲ್ಲಿ ಇವರ ಗುಣಗಳನ್ನು ಹೊಗಳುತ್ತಿದ್ದರು. ಈ ರೀತಿ ಜ್ಞಾನದ ದಾನಿಗಳು ವಸ್ತುಗಳ ದಾನಿಗಳು ಇಬ್ಬರೂ ಅಲ್ಲಿ ಇದ್ದರು.

**ಯದಂಘ್ರಿತೀರ್ಥೇನ ಯದೀಯನಾಮ್ನೋ ಬಲೇನ ಕಾಶೀಪ್ರಥಿತಾ ಕಿಲಾಸೀತ್ ।**
**ಮುರದ್ವಿಷಸ್ತಸ್ಯ ನಿವಾಸಭೂತಾ ಪುರೀ ತ್ರಿಲೋಕ್ಯಾಮಿಯಮದ್ವಿತೀಯಾ ॥ ೪೧ ॥**

ಯತ್=ಯಾರ; ಅಂಘ್ರಿ=ಪಾದದ; ತೀರ್ಥೇನ=ಜಲದಿಂದ; ಯದೀಯ=ಯತ್ ಸಂಬಂಧಿಯಾದ; ನಾಮ್ನಃ=ಹೆಸರಿನ; ಬಲೇನ=ಬಲದಿಂದ; ಕಾಶೀ=ಕಾಶಿಯು; ಪ್ರಥಿತಾ= ಪ್ರಸಿದ್ಧವಾದದ್ದು; ಆಸೀತ್‌ಕಿಲ=ಆಯಿತಷ್ಟೇ; ಮುರ=ಮುರನ; ದ್ವಿಷಃ=ಶತ್ರುವಾದ; ತಸ್ಯ= ಅವನ; ನಿವಾಸಭೂತಾ=ವಾಸಸ್ಥಳವಾದ; ಇಯಂ=ಈ; ಪುರೀ=ಪಟ್ಟಣವು; ತ್ರಿಲೋಕ್ಯಾಂ= ಮೂರು ಲೋಕಗಳಲ್ಲಿ; ಅದ್ವಿತೀಯಾ=ಅಸದೃಶವು.

ಜನ್ಮ ಸಾರ್ಥಕವಾಗಬೇಕಾದರೆ ಒಮ್ಮೆಯಾದರೂ ಕಾಶೀಯಾತ್ರೆ ಮಾಡಬೇಕು. ಗಂಗಾಸ್ನಾನ ಮಾಡಬೇಕು ಎಂದು ಶಾಸ್ತ್ರದ ಮಾತು. ನಾನು ಕಾಶಿಗೆ ಹೋಗುತ್ತೇನೆ. ಅಲ್ಲೇ ವಾಸುಮಾಡುತ್ತೇನೆ ಎಂದು ಸಂಕಲ್ಪಿಸಿದರೂ ಕಾಶಿಗೆ ಹೋದ ಫಲ ಬರುತ್ತದೆ ಎಂದು ಪುರಾಣಗಳು ಹೇಳುತ್ತವೆ. ಅಲ್ಲಿ ಮರಣ ಸಂಭವಿಸಿದರೆ ಮೋಕ್ಷವೇ ಆಗುತ್ತದೆ ಎನ್ನುವ ಮಾತು ಪ್ರಾಮಾಣಿಕ. ಕಾಶಿಗೆ ಇಷ್ಟೆಲ್ಲಾ ಮಹತ್ವ ಬರಲು ಕಾರಣ ಏನು? ಎಂದು ವಿಚಾರ ಮಾಡಿದಾಗ ಇಷ್ಟು ತಿಳಿಯುತ್ತದೆ– ಕೃಷ್ಣನ ಪಾದದಿಂದ ಹರಿದ ಗಂಗೆಯು ಕಾಶಿಯಲ್ಲಿ ಇದ್ದಾಳೆ. ಕಾಶಿಯಲ್ಲಿ ಸಾಯುವವರ ಕಿವಿಯಲ್ಲಿ ರುದ್ರದೇವರು ರಾಮಮಂತ್ರವನ್ನು ಜಪಿಸುತ್ತಾರೆ. ಸಾಯುವಾಗ ದೇವರ ಸ್ಮರಣೆ ಬಂದರೆ ಮೋಕ್ಷವೇ. ರಾಮ–ಕೃಷ್ಣರಿಗೆ ಐಕ್ಯವಿದೆ. ಈ ರೀತಿ ಗಂಗೆಯಿಂದ ಹಾಗೂ ನಾಮಸ್ಮರಣೆಯಿಂದ ಕಾಶಿಗೆ ಮಹತ್ವ ಬಂದದ್ದು. ಅಂತಹ ಕೃಷ್ಣನೇ ಸ್ವಯಂ ದ್ವಾರಕೆಯಲ್ಲಿದ್ದಾನೆ. ಮುರನೆಂಬ ಅಸುರನನ್ನು ಸಂಹರಿಸುವ ಮೂಲಕ ಸಾತ್ವಿಕರಿಗೆ ಬರುವ ಉಪದ್ರವವನ್ನು ಪರಿಹರಿಸಿದನು. ಈ ರೀತಿ ಕಾಶಿಗಿಂತಲೂ ದ್ವಾರಕೆಯು ಉತ್ತಮ ಎಂದು ಏನು ಹೇಳತಕ್ಕದ್ದು. ಇದಕ್ಕಿಂತ ಉತ್ತಮವಾದ ಊರು ಇನ್ನೊಂದಿಲ್ಲ. ಆದ್ದರಿಂದ ಇದು ಅಸದೃಶವಾದ ಊರು.

**ಚಲದ್ಭ್ರುವಶ್ಚಂಚಲನೇತ್ರಪಾತೈರ್ಜನಾನ್ ಸಮಾನಾನ್ ವಶಯಂತಿ ತಸ್ಯಾಮ್ ।**
**ಸ್ಮರೋಚ್ಚಲತ್ಕಾರ್ಮುಕ ಲಗ್ನನೀಲೋತ್ಪಲೇಷು ಘಾತೈರಿವ ವಾರವಧ್ವಃ ॥ ೪೨ ॥**

ತಸ್ಯಾಂ=ಅಲ್ಲಿ; ವಾರವಧ್ವಃ=ವೇಶ್ಯಾನಾರಿಯರು; ಸ್ಮರ=ಕಾಮನ; ಉಚ್ಚಲತ್=ಅಲುಗಾಡುವ; ಕಾರ್ಮುಕ=ಬಿಲ್ಲಿನಲ್ಲಿ; ಲಗ್ನ=ಇರುವ; ನೀಲೋತ್ಪಲ=ನೈದಿಲೆ ಎಂಬ; ಇಷು=ಬಾಣಗಳ; ಘಾತೈಃ ಇವ=ಹೊಡೆತಗಳಂತೆ; ಚಲತ್=ಅಲುಗಾಡುವ; ಭ್ರುವಃ= ಹುಬ್ಬುಳ್ಳ; ಚಂಚಲ=ಅಲುಗಾಡುವ; ನೇತ್ರ=ಕಣ್ಣುಗಳ; ಪಾತೈಃ=ನೋಟಗಳಿಂದ; ಸಮಾನಾತ್=ಅಭಿಮಾನಿಗಳನ್ನು; ವಶಯಂತಿ=ವಶೀಕರಿಸುತ್ತಾರೆ.

ದ್ವಾರಕೆಯಲ್ಲಿ ವೇಶ್ಯಾನಾರಿಯರೂ ಇದ್ದರು. ಇವರು ತಮ್ಮ ಹುಬ್ಬುಗಳ ಹಾರಿಸುವಿಕೆಯಿಂದ ಹಾಗೂ ಚಂಚಲವಾದ ಕಣ್ಣುಗಳ ನೋಟದಿಂದ ಎಂತಹ ಹುಡುಗರನ್ನಾದರೂ ಅಂದರೆ ನಾವು ಯಾವ ಹೆಣ್ಣಿನ ನೋಟಕ್ಕೂ ಮರುಳಾಗುವವರಲ್ಲ ಎಂಬ ಬಿಗುಮಾನದಿಂದ ಕೂಡಿದವರನ್ನೂ ತಮ್ಮ ವಶವಾಗುವಂತೆ ಮಾಡುತ್ತಿದ್ದರು. ಇದಕ್ಕೆ ರಾಜರು ಮನ್ಮಥನ ಉದಾಹರಣೆಯನ್ನು ಕೊಡುತ್ತಾರೆ. ಮನ್ಮಥನು ಎಂತಹ ಇಂದ್ರಿಯನಿಗ್ರಹಿಗಳನ್ನೂ ದಾರಿತಪ್ಪಿಸುತ್ತಾನೆ. ತನ್ನ ಧನುಸ್ಸನ್ನು ಅಲುಗಾಡಿಸುತ್ತಾ ನೈದಿಲೆಯನ್ನು ಬಾಣವನ್ನಾಗಿ ಮಾಡಿ ಎಲ್ಲರ ಮನಸ್ಸಿಗೂ ಹೊಡೆಯುತ್ತಾನೆ ಹೇಗೋ ಹಾಗೆ ಎಂದು. ಧನುಸ್ಸಿನಂತೆ ಹುಬ್ಬುಗಳೂ ಬಾಗಿಕೊಂಡಿರುತ್ತವೆ. ನೈದಿಲೆಯಂತೆ ಕಣ್ಣ ಗುಡ್ಡೆಗಳು ಕಪ್ಪಾಗಿವೆ. ಆದ್ದರಿಂದ ಹುಬ್ಬುಗಳಿಗೆ ಧನುಸ್ಸಿನ, ಕಣ್ಣುಗಳಿಗೆ ನೈದಿಲೆಯ ಹೋಲಿಕೆಯನ್ನು ರಾಜರು ಕೊಟ್ಟಿದ್ದಾರೆ.

**ಸ್ವಗೋಪುರೌಘೈರಿಯಮುನ್ಮಯೂಖೈಃ ದಿವಂ ವ್ಯತೀಯಾಯ ನ ತದ್ವಿಚಿತ್ರಮ್ ।**
**ಮುಕುಂದಮಂತರ್ಹೃದಿ ಧಾರಯಂತ್ಯಾ ವಿಚಿತ್ರತೀರ್ಥಾನಿ ಸಂಸ್ಪೃಶಂತ್ಯಾಃ ॥ ೪೩ ॥**

ಇಯಂ=ಇದು; ಉತ್=ಉನ್ಮುಖವಾದ; ಮಯೂಖೈಃ=ಕಾಂತಿವುಳ್ಳ; ಸ್ವ=ತನ್ನ; ಗೋಪುರ=ಗೋಪುರಗಳ; ಓಘೈಃ=ಸಮೂಹಗಳಿಂದ; ದಿವಂ=ಸ್ವರ್ಗವನ್ನು; ವ್ಯತೀಯಾಯ=ಅತಿಕ್ರಮಿಸಿತು; ಮುಕುಂದಂ=ದೇವರನ್ನು; ಹೃದಿ=ಮನದಲ್ಲಿ; ಅಂತಃ=ಒಳಗೆ; ಧಾರಯಂತ್ಯಾಃ=ಧರಿಸಿರುವ; ವಿಚಿತ್ರ=ನಾನಾ; ತೀರ್ಥಾನಿ=ತೀರ್ಥಗಳನ್ನು; ಸಂಸ್ಪೃಶಂತ್ಯಾಃ=ಸ್ಪರ್ಶಿಸುವ ಈ ಊರಿಗೆ; ತತ್=ಅದು; ನ ವಿಚಿತ್ರಂ=ಆಶ್ಚರ್ಯವಲ್ಲ.

ದ್ವಾರಕೆಯ ಗೋಪುರಗಳು ರತ್ನಖಚಿತಗಳು. ಬಹಳ ಎತ್ತರಗಳು. ಆ ರತ್ನಗಳಿಂದ ಪ್ರಕಾಶವು ಹೊರಡುತ್ತಿತ್ತು. ಸ್ವರ್ಗವನ್ನೂ ದಾಟಿ ಮೇಲಕ್ಕೆ ಹೋಗುತ್ತಿತ್ತು. ಈ ರೀತಿ ದ್ವಾರಕೆಯು ತನ್ನ ಕಿರಣಗಳ ಮೂಲಕ ಸ್ವರ್ಗವನ್ನು ದಾಟಿ ಮೇಲಕ್ಕೆ ಹೋಗಿತ್ತು. ರಾಜರು ಹೇಳುತ್ತಾರೆ– ಇದು ಆಶ್ಚರ್ಯವಲ್ಲ ಎಂದು. ಯಾಕೆಂದರೆ ಈ ದ್ವಾರಕೆಯು ನಾನಾ ತೀರ್ಥಗಳ ಸಂಬಂಧವುಳ್ಳದ್ದಾಗಿದೆ. ಹಾಗಯೇ ತನ್ನಲ್ಲಿ ಒಳಗೆ ಕೃಷ್ಣನನ್ನು

ಸೇರಿಸಿಕೊಂಡಿದೆ. ತೀರ್ಥಯಾತ್ರಾದಿ ಕರ್ಮಗಳನ್ನು ಆಚರಿಸುತ್ತಾ ಶಾಸ್ತ್ರಗಳನ್ನು ಅಭ್ಯಸಿಸಿ ಅದರಿಂದ ದೇವರನ್ನು ಸರಿಯಾಗಿ ತಿಳಿದು ತನ್ನ ಹೃದಯಮಧ್ಯದಲ್ಲಿ ಧ್ಯಾನಿಸುವವರು ಸ್ವರ್ಗವನ್ನು ದಾಟಿ ಮೇಲಿನ ಲೋಕಗಳಿಗೆ ಹೋಗುವುದು ಸ್ವಾಭಾವಿಕ. ಕೇವಲ ಕರ್ಮ ಮಾಡುವವರು ಸ್ವರ್ಗ ತನಕವೇ ಹೋಗುವುದು. ಆದ್ದರಿಂದ ದ್ವಾರಕೆಯು ಸ್ವರ್ಗವನ್ನು ದಾಟಿ ಹೋಗುವುದು ಶಾಸ್ತ್ರೀಯವೇ ಆಗಿದೆ. ಅಂದರೆ ದ್ವಾರಕೆಯು ಸ್ವರ್ಗಕ್ಕಿಂತಲೂ ಉತ್ತಮ ಎಂದು ಅಭಿಪ್ರಾಯ.

**ಪುಷ್ಪೀಕೃತ್ಯ ಶರಾಸನಂ ರತಿಪತೇಃ ಪಂಚತ್ವಭಾಜಃ ಶರಾನ್**
**ತತ್ಸೇನಾಮಬಲಾಂ ವಿಧಾಯ ಸಚಿವಂ ತೂಷ್ಣೀಂ ವಸಂತಂ ಕ್ವಚಿತ್ ।**
**ತನ್ಮಿತ್ರಂ ಕ್ಷಯಭಾಜನಂ ತದನುಗಾನ್ ಮಾಧುರ್ಯಧುರ್ಯಾನ್ ಗಿರಾऽ-**
**ನಂಗೀಕೃತ್ಯ ಚ ತಂ ಜನೋऽತ್ರ ಚರತಿ ಬ್ರಹ್ಮಾಸ್ತ್ರವಾನ್ ಪ್ರತ್ಯಹಮ್ ॥ ೪೪ ॥**

ಅತ್ರ=ಇಲ್ಲಿ; ಜನಃ=ಜನರು; ರತಿ=ರತಿಯ; ಪತೇಃ=ಪತಿಯ; ಶರಾಸನಂ=ಬಿಲ್ಲನ್ನು; ಪುಷ್ಪೀಕೃತ್ಯ=ಹೂವನ್ನಾಗಿಸಿ; ಶರಾನ್=ಬಾಣಗಳನ್ನು; ಪಂಚತ್ವ=ಪಂಚತ್ವವನ್ನು; ಭಾಜಃ= ಹೊಂದಿದ್ದನ್ನಾಗಿ; ತತ್=ಅವನ; ಸೇನಾಂ=ಸೈನ್ಯವನ್ನು; ಅಬಲಾಂ=ಅಬಲೆಯನ್ನಾಗಿ; ಸಚಿವಂ=ಮಂತ್ರಿಯಾದ; ವಸಂತಂ=ವಸಂತವನ್ನು; ಕ್ವಚಿತ್=ಒಂದು ಕಡೆ; ತೂಷ್ಣೀಂ= ಸುಮ್ಮನೆ; ತತ್=ಅವನ; ಮಿತ್ರಂ=ಗೆಳೆಯನನ್ನು; ಕ್ಷಯ=ಕ್ಷಯವನ್ನು; ಭಾಜನಂ= ಹೊಂದಿದವನನ್ನು; ತತ್=ಅವನ; ಅನುಗಾನ್=ಅನುಚರರನ್ನು; ಗಿರಾ=ಮಾತಿನಿಂದ; ಮಾಧುರ್ಯ=ಇಂಪಲ್ಲಿ; ಧುರ್ಯಾನ್=ಶ್ರೇಷ್ಠರನ್ನು; ವಿಧಾಯ=ಮಾಡಿ; ತಂ ಚ= ಅವನನ್ನಾದರೂ; ಅನಂಗೀಕೃತ್ಯ=ಶರೀರ ಇಲ್ಲದವನನ್ನಾಗಿ ಮಾಡಿ; ಬ್ರಹ್ಮ=ಕೃಷ್ಣನೆಂಬ; ಅಸ್ತ್ರವಾನ್=ಅಸ್ತ್ರವುಳ್ಳದ್ದಾಗಿ; ಪ್ರತ್ಯಹಂ=ಯಾವಾಗಲೂ; ಚರತಿ=ಸಂಚರಿಸುತ್ತಾರೆ.

ಈ ದ್ವಾರಕೆಯಲ್ಲಿ ವಿರಕ್ತಜನರು ಬಹಳ ಧೈರ್ಯದಿಂದ ಸಂಚರಿಸುತ್ತಾರೆ. ಶತ್ರುಗಳನ್ನು ಚೆನ್ನಾಗಿ ನಿಗ್ರಹ ಮಾಡುತ್ತಾರೆ. ಇವರ ಕೈಯಲ್ಲಿ ಬ್ರಹ್ಮಾಸ್ತ್ರ ಇದೆ. ಮಹಾಭಾರತಾದಿ ಯುದ್ಧಗಳಲ್ಲಿ ಬ್ರಹ್ಮಾಸ್ತ್ರ ಅಂದರೆ ಬಾಣವನ್ನು ಹಿಡಿದುಕೊಂಡು ಗಾಯತ್ರೀಮಂತ್ರವನ್ನು ಜಪಿಸುವುದು. ಈ ವಿರಕ್ತರು ಕ್ಷತ್ರಿಯರಲ್ಲ. ಇವರಿಗೆ ಬಾಣದ ಅಗತ್ಯವಿಲ್ಲ. ಆದರೂ ಬ್ರಹ್ಮಾಸ್ತ್ರ ಇದೆ. ಅಂದರೆ ಬ್ರಹ್ಮ ಪರಬ್ರಹ್ಮ ಕೃಷ್ಣನೇ ಇವರಿಗೆ ಅಸ್ತ್ರ. ಇವರಿಗೆ ಕಾಮನೇ ಶತ್ರು, ಪರಿವಾರಸಹಿತನಾದ ಇವನನ್ನು ಚೆನ್ನಾಗಿ ಸೋಲಿಸಿದರು. ಹೇಗೆಂದರೆ– ಈ ಕಾಮನಿಗೆ 'ಪುಷ್ಪಧನ್ವಾ' ಪುಷ್ಪವೇ ಧನುಸ್ಸಾಗಿವುಳ್ಳವನು ಎಂದು ಹೆಸರು ಇದೆ. ಯುದ್ಧಮಾಡಲು ಧನುಸ್ಸು ದೃಢವಾಗಿರಬೇಕು. ಈ ವಿರಕ್ತರು ಈತನ ಧನುಸ್ಸನ್ನು ಪುಷ್ಪವನ್ನಾಗಿಸಿದರು. ಯುದ್ಧಾದಿ ಕೆಲಸಗಳು ಪುಷ್ಪಾದಿಗಳಿಂದ ಆಗುವುದಿಲ್ಲ. ಆ ಸಂದರ್ಭದಲ್ಲಿ ಪುಷ್ಪಗಳು ಅಪ್ರಯೋಜಕಗಳು. ಕಾಮನ ಪುಷ್ಪಗಳೆಂಬ ಧನುಸ್ಸು ಇವರಲ್ಲಿ ಫಲಕಾರಿಯಾಗಲಿಲ್ಲ. ಬಿಲ್ಲಿಗೆ ಬಾಣಗಳನ್ನು ಜೋಡಿಸಿ ಇವರಿಗೆ ಹೊಡೆದರೆ ಆ ಬಾಣಗಳಿಗೆ

ಪಂಚತ್ವ ಬಂತು. ಪಂಚತ್ವ ಶಬ್ದಕ್ಕೆ ಐದು ಹಾಗೂ ಸಾವು ಎಂಬ ಎರಡು ಅರ್ಥಗಳಿವೆ. ಅರವಿಂದ, ಅಶೋಕ, ಮಾವಿನಹೂ, ಮಲ್ಲಿಗೆ, ನೈದಿಲೆ ಇವು ಐದು ಕಾಮನ ಬಾಣಗಳು. ಆತನಿಗೆ ಪಂಚಬಾಣ ಎಂದು ಇನ್ನೊಂದು ಹೆಸರು. ಇನ್ನೊಂದು ಅರ್ಥ ಮರಣ ಎಂದು. ಈತನು ಒಂದೊಂದು ಬಾಣವನ್ನು ಪ್ರಯೋಗಿಸಿದಾಗ ಆ ವಿರಕ್ತನು ಅಲುಗಾಡಲಿಲ್ಲ. ಕುಪಿತನಾದ ಕಾಮನು ಐದು ಬಾಣಗಳನ್ನು ಪ್ರಯೋಗಿಸಿದನು. ಇದರಿಂದ ಜನರಿಗೆ ಏನೂ ಆಗಲಿಲ್ಲ. ಬಾಣಗಳಿಗೆ ಪಂಚತ್ವ ಬಂತು. ವ್ಯರ್ಥವಾದವು ಎಂದರ್ಥ. ಈತನ ಸೈನಿಕರು ನಾರಿಯರು. ಇವರಿಗೆ ಇನ್ನೊಂದು ಹೆಸರು ಅಬಲೆಯರು ಎಂದು. ಸೈನಿಕರನ್ನು ಬಲಹೀನರನ್ನಾಗಿ ಮಾಡಿದರು. ಸೇನಾನೀ ವಸಂತಮಾಸ. ವಸಂತ ಎನ್ನುವುದಕ್ಕೆ ಇರುವವನು ಎಂದೂ ಅರ್ಥ. ಕೆಲಸಕ್ಕೆ ಬಾರದ ರೀತಿಯಲ್ಲಿ ಒಂದು ಕಡೆ ಇರುವವನನ್ನಾಗಿ ಮಾಡಿದರು. ಈ ಕಾಮನಿಗೆ ಸಹಾಯಕನು ಚಂದ್ರನು. ಈತನಿಗೆ ಅಮಾವಾಸ್ಯೆಯ ಪಕ್ಷ ದಲ್ಲಿ ಕ್ಷಯ. ಕ್ಷಯ ಒಂದು ರೋಗವೂ ಹೌದು. ಮಿತ್ರನು ರೋಗಿಯಾದರೆ ಏನು ಸಹಾಯ ಮಾಡಿಯಾನು? ಆತನ ಅನುಚರರು ಕೋಗಿಲೆ, ಗಿಳಿ ಮುಂತಾದ ಪಕ್ಷಿಗಳು. ಅನುಚರರು ತಮ್ಮ ಜೋರಾದ ಮಾತುಗಳಿಂದ ಶತ್ರುಗಳನ್ನು ಓಡಿಸುತ್ತಾರೆ. ಆದರೆ ಈ ಅನುಚರರನ್ನು ಈ ವಿರಕ್ತರು ಮೆತ್ತಗೆ ಮಾತಾಡುವಂತೆ ಮಾಡಿದರು. ಈ ರೀತಿ ಇವೆಲ್ಲವೂ ಅಪ್ರಯೋಜಕಗಳಾದವು. ಇವನ್ನೆಲ್ಲಾ ಬದಿಗಿಟ್ಟು ಸ್ವಯಂ ಕಾಮನೇ ಯುದ್ಧಕ್ಕೆ ಬರಲಿ ಅಂದರೆ ಆತನಿಗೆ ದೇಹವೇ ಇಲ್ಲ. ಆತನಿಗೆ ಅನಂಗ ಎಂದು ಹೆಸರು. ದೇಹವೇ ಇಲ್ಲದಿರೆ ಯುದ್ಧ ಹೇಗೆ? ಈ ರೀತಿ ಕಾಮನೆಂಬ ಶತ್ರುವಿನ ಭಯವಿಲ್ಲ. ಕಾರಣ ಇವರಲ್ಲಿ ಬ್ರಹ್ಮಾಸ್ತ್ರ ಇದೆ.

ಇದೇ ಶ್ಲೋಕವನ್ನು ಇನ್ನೊಂದು ಮುಖದಿಂದ ನೋಡಿದಾಗ ಕಾಮನೆಂಬ ರಾಜನಿಗೆ ಸಂಬಂಧಿಸಿದ ಎಲ್ಲವನ್ನೂ ಒದಗಿಸಿದರೂ ಕಾಮನಿಗೆ ಇವರನ್ನು ಸೋಲಿಸಲು ಆಗಲಿಲ್ಲ ಎಂದೂ ತೋರುತ್ತದೆ.

**ಸಂದೇಶ : ದೇವರ ಧ್ಯಾನಿಗಳಿಗೆ ಯಾರಿಂದಲೂ ಎತ್ತಲೂ ಭಯವಿಲ್ಲ.**

**ಸ್ಮರಸ್ಯ ಭಾರ್ಯಾಮಪಹೃತ್ಯ ವಿಷ್ಣೋಃ**
**ಸ್ನುಷಾಂ ತದಂಘ್ರ್ಯಬ್ಜಯುಗೇ ನಿಧಾಯ ।**
**ಜಯಂ ಸ್ವಕೀಯಂ ಭುವಿ ದರ್ಶಯಂತ–**
**ಶ್ಚರಂತಿ ತಸ್ಯಾಂ ಪರಿಪಂಥಿಶೂನ್ಯಾಃ ॥ ೪೫ ॥**

ತಸ್ಯಾಂ=ಅಲ್ಲಿ; ಪರಿಪಂಥಿ=ಅಡೆತಡೆಗಳಿಂದ; ಶೂನ್ಯಾಃ=ರಹಿತರು; ವಿಷ್ಣೋಃ=ಕೃಷ್ಣನ; ಸ್ನುಷಾಂ=ಸೊಸೆಯಾದ; ಸ್ಮರಸ್ಯ=ಕಾಮನ; ಭಾರ್ಯಾಂ=ಪತ್ನಿಯನ್ನು; ಅಪಹೃತ್ಯ= ಅಪಹರಿಸಿ; ತತ್=ಅವನ; ಅಂಘ್ರಿ=ಪಾದಗಳೆಂಬ; ಅಬ್ಜ=ಕಮಲಗಳ; ಯುಗೇ=ಎರಡರಲ್ಲಿ;

ನಿಧಾಯ=ಇಟ್ಟು; ಜಯಂ=ಜಯವನ್ನು; ಸ್ವಕೀಯಂ=ತಮ್ಮದ್ದನ್ನಾಗಿ; ಭುವಿ=ಭೂಮಿಯಲ್ಲಿ; ದರ್ಶಯಂತಃ=ತಿಳಿಸುವವರಾಗಿ; ಚರಂತಿ=ಸಂಚರಿಸುತ್ತಾರೆ.

ಯುದ್ಧದಲ್ಲಿ ಸೋತ ರಾಜನ ಪತ್ನಿಯನ್ನು ಅಪಹರಿಸುತ್ತಾರೆ. ಕಾಮನು ಈ ವಿರಕ್ತರಿಂದ ಸೋತಿದ್ದಾನೆ. ಆತನ ಪತ್ನಿ ರತಿ. ಕಾಮನ ಮನೆ ವಿಷಯಪದಾರ್ಥಗಳು. ಅಲ್ಲಿ ರತಿ ಇತ್ತು. ಅದನ್ನು ಅಲ್ಲಿಂದ ಅಪಹರಿಸಿದರು. ಆ ರತಿಯನ್ನು ತಮ್ಮಲ್ಲಿ ಇಟ್ಟುಕೊಳ್ಳಲಿಲ್ಲ. ಬದಲಾಗಿ ದೇವರ ಪಾದಬುಡದಲ್ಲಿ ಹಾಕಿದರು. ಕಾಮನು ದೇವರಾದ ಕೃಷ್ಣನ ಮಗ. ಆದ್ದರಿಂದ ಈಕೆ ಕೃಷ್ಣನ ಸೊಸೆ. ತಮಗೆ ಯೋಗ್ಯಳಲ್ಲವೆಂದು ತಿಳಿದು ಹಾಗೆ ಮಾಡಿದರು. ರಾಜನ ಸೇವಕರು ಶತ್ರುಗಳನ್ನು ಸೋಲಿಸಿ ಅವರ ಪತ್ನಿಯರನ್ನು ಯಜಮಾನನ ಪಾದಬುಡಕ್ಕೆ ಹಾಕುವಂತೆ.

ರತಿ ಶಬ್ದಕ್ಕೆ ಆಸಕ್ತಿ ಎಂಬ ಅರ್ಥ ಇದೆ. ಕಾಮ ಇದ್ದಲ್ಲಿ ಆಸಕ್ತಿ ಇರುತ್ತದೆ. ಸಾಮಾನ್ಯರಿಗೆ ವಿಷಯಗಳಲ್ಲಿ ಆಸಕ್ತಿ ಇರುತ್ತದೆ. ಈ ಯೋಗಿಗಳಿಗೆ ವಿಷಯಗಳಲ್ಲಿ ಆಸಕ್ತಿ ಇರುವುದಿಲ್ಲ. ಕಾರಣ ಲೌಕಿಕ ಕಾಮವನ್ನು ಗೆದ್ದದ್ದು. ಹಾಗಾದರೆ ಆಸಕ್ತಿಯೇ ಇಲ್ಲವಾ ಅಂದರೆ ದೇವರ ಪಾದದಲ್ಲಿ ಆಸಕ್ತಿ ಇತ್ತು. ಅವರು ತಮ್ಮಲ್ಲಿಯೂ ಆಸಕ್ತರಾಗಿ ಇರಲಿಲ್ಲ. ತಮ್ಮನ್ನೂ ಕೂಡಾ ಪ್ರೀತಿಸುತ್ತಿರಲಿಲ್ಲ. ಕಾಮನನ್ನು ಓಡಿಸಿ ರತಿಯನ್ನು ದೇವರ ಪಾದದಲ್ಲಿ ಇಟ್ಟರು. ಅಂದರೆ ನಿಷ್ಕಾಮನೆಯಿಂದ ಸರ್ವತ್ರ ವಿಜಯಿಗಳಾಗಿ ಮೆರೆದರು.

**ಮಾರಂ ದರ್ಪಕರಂ ಪ್ರತರ್ಕ್ಯ ಸುಹೃದಂ ಮತ್ವಾ ಜಗನ್ಮೋಹನಂ**
**ಸೇನಾಂ ಚ ಪ್ರಮದಾಂ ಶರಾಂಶ್ಚ ವಿಷಮಾನ್ ತಸ್ಯಾನುಗಾನ್ ವ್ಯೋಮಗಾನ್ ।**
**ಕೋದಂಡಂ ಸುಮನಃಸಮೂಹವಿನುತಂ ತೈಃ ಪೂರಿತಂ ಸಾರಥಿಂ**
**ಸೇನಾಂ ತಾಮವಲಂಬ್ಯ ತಸ್ಯ ವಶಗಾಸ್ತಸ್ಯಾಂ ರಮಂತೇಽಪರೇ ॥ ೪೬ ॥**

ತಸ್ಯಾಂ=ಅಲ್ಲಿ; ಅಪರೇ=ಬೇರೆಯವರು; ಮಾರಂ=ಕಾಮನನ್ನು; ದರ್ಪ=ನಾಶವನ್ನು; ಕರಂ=ಮಾಡುವವನನ್ನಾಗಿ; ಪ್ರತರ್ಕ್ಯ=ತಿಳಿದು; ಸುಹೃದಂ=ಗೆಳೆಯನನ್ನು; ಜಗನ್ಮೋಹನಂ =ಜಗನ್ಮೋಹಕನನ್ನಾಗಿ; ಮತ್ವಾ=ತಿಳಿದು; ಸೇನಾಂ=ಸೈನಿಕರನ್ನು; ಪ್ರಮದಾಂ=ತುಂಬಾ ಬಲಿಷ್ಠರನ್ನಾಗಿ; ಶರಾನ್ ಚ=ಬಾಣಗಳನ್ನಾದರೂ; ವಿಷಮಾನ್= ವಿಷಮಗಳನ್ನಾಗಿ; ತಸ್ಯ= ಅವನ; ಅನುಗಾನ್=ಸೇವಕರನ್ನು; ವ್ಯೋಮ=ಆಕಾಶದಲ್ಲಿ; ಗಾನ್=ಹೋಗುವವರನ್ನಾಗಿ; ಕೋದಂಡಂ=ಧನುಸ್ಸನ್ನು; ಸುಮನ=ಪುಷ್ಪಗಳ; ಸಮೂಹ=ಗುಂಪಿನಿಂದ; ವಿನುತಂ= ಹೊಗಳಲ್ಪಟ್ಟದ್ದನ್ನು; ತೈ=ಅವುಗಳಿಂದ; ಸಾರಥಿಂ=ಸಾರಥಿಯನ್ನು; ಪೂರಿತಂ= ತುಂಬಿದ್ದನ್ನು; ತಾಂ=ಆ; ಸೇನಾಂ=ಸೈನ್ಯವನ್ನು; ಅವಲಂಬ್ಯ=ಆಶ್ರಯಿಸಿ; ತಸ್ಯ=ಅವನ; ವಶಗಾಃ= ಅಧೀನರಾಗಿ; ರಮಂತೇ=ಸುಖಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ ಶ್ರೀರಾಜರು ಯೋಗಿಗಳು ಕಾಮನನ್ನು ಗೆದ್ದ ಪ್ರಕಾರವನ್ನು

ತಿಳಿಸಿದರು– ಕಾಮ ಒಬ್ಬನೇ ಬಂದರೂ ಎಲ್ಲರೂ ಅವನಿಗೆ ಸೋಲುವ ಸಂದರ್ಭವೇ ಹೆಚ್ಚು. ಹೀಗಿರುವಾಗ ಇಲ್ಲಿ ಯೋಗಿಗಳು ಪರಿವಾರಸಹಿತನಾದ ಕಾಮನನ್ನು ಧೈರ್ಯದಿಂದ ಗೆದ್ದಿದ್ದಾರೆ ಎಂದು. ಈ ಶ್ಲೋಕದಲ್ಲಿ ಪರಿವಾರಸಹಿತನಾದ ಕಾಮನಿಗೆ ಭೀರುಗಳು ಹೇಗೆ ಶರಣಾದರು ಎಂದು ತಿಳಿಸುವರು– ಕಾಮನಿಗೂ ಆತನ ಪರಿವಾರಕ್ಕೂ ಇರುವ ನಾಮಾಂತರಗಳ ಮೂಲಕ.

ಕಾಮನಿಗೆ ದರ್ಪಕರ ಎಂದು ಹೆಸರಿದೆ. ಇನ್ನೊಬ್ಬರನ್ನು ಸದೆಬಡಿಯುವವನು ಎಂದರ್ಥ. ಈ ಹೆಸರನ್ನು ಕೇಳಿಯೇ ಕೆಲವರು ಹೆದರಿದರು. ಈ ಕಾಮನಿಗೆ ಎದುರಾಗಿ ಹೋದರೆ ನಮ್ಮನ್ನು ಪೂರ್ಣವಾಗಿ ಬಡಿಯುತ್ತಾನೆ ಎಂದು ಭಾವಿಸಿದರು. ಈತನ ಮಿತ್ರ ಚಂದ್ರ. ಈತನು ಜಗತ್ತನ್ನೇ ಮೋಹಗೊಳಿಸುವವ. ಕಾಮನನ್ನು ಎದುರಿಸಿದರೆ ಈ ಚಂದ್ರನು ನಮ್ಮನ್ನು ದಿಙ್ಮೂಢರನ್ನಾಗಿ ಮಾಡುತ್ತಾನೆ. ಏನು ಮಾಡಬೇಕೆಂದೇ ತೋಚದಂತೆ ಮಾಡುತ್ತಾನೆ. ಈತನ ಸೈನಿಕರು ನಾರಿಯರು. ಇವರಿಗೆ ಪ್ರಮದಾ ಎಂದು ಹೆಸರು. ಬಹಳ ಮದವುಳ್ಳವರು ಎಂದರ್ಥ. ಆನೆಗಳಿಗೆ ಮದ ಬಂದಾಗ ಅವುಗಳ ಎದುರಿಗೆ ಯಾರೂ ಇರುವುದಿಲ್ಲ. ಈ ಪ್ರಮದೆಯರ ಜೊತೆಗೆ ದರ್ಪಕರನನ್ನು ಎದುರಿಸಲು ತಮ್ಮಿಂದ ಸಾಧ್ಯವಿಲ್ಲ ಎಂದು ಚಿಂತಿತರಾದರು. ಕಾಮನ ಬಾಣಗಳ ಸಂಖ್ಯೆ ಐದು. ಐದು ಎನ್ನುವುದು ವಿಷಮಸಂಖ್ಯೆ. ವಿಷಮ ಅಂದರೆ ಅನನುಕೂಲ ಎಂದು ಅರ್ಥ. ಇವನ ಬಾಣಗಳು ತಮಗೆ ಪ್ರತಿಕೂಲವನ್ನಾಗಿ ತಿಳಿದು ಹೆದರಿದರು. ಈತನ ಸೇವಕರು ಕೋಗಿಲೆ, ಗಿಳಿ ಇತ್ಯಾದಿಗಳು. ಇವುಗಳನ್ನಾದರೂ ಎದುರಿಸಿ ಬಡಿಯೋಣ ಎಂದರೆ ಇವುಗಳೆಲ್ಲಾ ಕೈಗೆ ಸಿಗುವುದೇ ಇಲ್ಲ. ಇವೆಲ್ಲಾ ಆಕಾಶಗಾಮಿಗಳು. ಕಾಮನನ್ನು ಎದುರು ಹಾಕಿಕೊಂಡರೆ ಇವೆಲ್ಲಾ ಆಕಾಶದಿಂದಲೇ ನಮ್ಮಲ್ಲಿ ಯುದ್ಧಕ್ಕೆ ತೊಡಗುವರು ಎಂಬ ಭಯವೂ ಇವರಲ್ಲಿ ಸೇರಿತು. ಈತನ ಧನುಸ್ಸು ಹೂಗಳು. ಈತನಿಗೆ ಆದ್ದರಿಂದಲೇ ಪುಷ್ಪಧನ್ವಾ ಎಂಬ ಹೆಸರು. ಹೂಗಳೆಂದರೆ ಎಲ್ಲರೂ ಆದರಿಸುವವರೆ. ಅದನ್ನು ಕೇಳಲು ಅಥವಾ ಮುರಿಯಲು ಮನಸ್ಸು ಬರುವುದಿಲ್ಲ. ಸದ್ಯ ಈ ಕಾಮನು ಇಂತಹ ಧನುಸ್ಸನ್ನು ಹಿಡಿದುಕೊಂಡು ಬಂದರೆ ಅದನ್ನು ಮುರಿಯಲು ಈ ಕೆಲವರಿಗೆ ಮನಸ್ಸು ಬರುವುದಿಲ್ಲ. ಬದಲಾಗಿ ಅದನ್ನು ಹೊಗಳುತ್ತಾರೆ. ಎದುರಾಳಿಯ ಆಯುಧವನ್ನು ಮುರಿಯದಿದ್ದರೆ ಆತನು ಆ ಆಯುಧದಿಂದ ಶತ್ರುಗಳನ್ನು ಬಡಿಯುತ್ತಾನೆ. ಅಥವಾ ಸುಮನಃ –ಅಂದರೆ ದೇವತೆಗಳು. ಅವರು ಗುಂಪುಗುಂಪಾಗಿ ಬಂದು ಈತನ ಬಿಲ್ಲನ್ನು ಪ್ರಶಂಸಿಸುತ್ತಾರೆ. ದೇವತೆಗಳ ಪ್ರಶಂಸೆಗೆ ಯೋಗ್ಯವಾದ ಬಿಲ್ಲನ್ನು ಮುರಿಯಲು ಇವರಿಗೆ ಧೈರ್ಯ ಸಾಲಲಿಲ್ಲ. ಈತನ ಸಾರಥಿ ವಸಂತಋತು. ಈ ಋತುವೆಂದರೆ ಪುಷ್ಪಮಯ. ಎಲ್ಲಾ ರೀತಿಯ ಹೂಗಳೂ ಈ ಸಮಯದಲ್ಲಿ ಅರಳುತ್ತವೆ. ಆದ್ದರಿಂದ ಸಾರಥಿಯನ್ನು ಹೊಡೆಯುವಂತಿಲ್ಲ. ಯಾವ ರೀತಿಯಿಂದ ವಿಚಾರಿಸಿದರೂ ಕಾಮನ ಜೊತೆ ಹೋರಾಟ

ಸಾಧ್ಯವಿಲ್ಲ ಎಂದು ತಿಳಿದು ಕೆಲವರು ಆತನ ಸೈನ್ಯವನ್ನೇ ಸೇರಿದರು. ಅಂದರೆ ಕಾಮಾಧೀನರಾಗಿ ನಾರಿಯರ ಜೊತೆ ಸೇರಿದರು ಎಂದು ಅರ್ಥ.

**ತಚ್ಛಾಸ್ತ್ರಶ್ರವಣೋತ್ಸವೇನ ಕತಿಚಿತ್ ಸಂಕೀರ್ತ್ಯ ಸಂಸ್ಮೃತ್ಯ ತಂ**
**ತತ್ ಪಾದಾಬ್ಜನಿಷೇವಯಾ ಚ ಸುಧಿಯಸ್ತಸ್ಯಾರ್ಚಯಾ ಕೇಚನ ।**
**ಸಖ್ಯೇನಾಪ್ಯಪರೇ ಪ್ರಣಮ್ಯ ಬಹುಶಃ ಕೇಚಿಚ್ಚ ದಾಸಾಸ್ತವೇ–**
**ತ್ಯಾತ್ಮಾನಂ ಚ ನಿವೇದ್ಯ ಮೋಕ್ಷನಿರತಾಃ ಸಂತ್ಯತ್ರ ಕೃಷ್ಣಾರ್ಚಕಾಃ ॥ ೪೭ ॥**

ಕತಿಚಿತ್=ಕೆಲವರು; ತತ್=ಕೃಷ್ಣನ; ಶಾಸ್ತ್ರ=ಶಾಸ್ತ್ರದ; ಶ್ರವಣ=ಶ್ರವಣವೆಂಬ; ಉತ್ಸವೇನ=ಉತ್ಸವದಿಂದ; ಸಂಕೀರ್ತ್ಯ=ಕೀರ್ತನೆಯಿಂದ; ತಂ=ಕೃಷ್ಣನನ್ನು; ಸಂಸ್ಮೃತ್ಯ=ಸ್ಮರಣೆಯಿಂದ; ಕೇಚನ=ಕೆಲವು; ಸುಧಿಯಃ=ಜ್ಞಾನಿಗಳು; ತತ್=ಅವನ; ಪಾದ=ಚರಣವೆಂಬ; ಅಬ್ಜ=ಕಮಲದ; ನಿಷೇವಯಾ=ಸೇವೆಯಿಂದ; ತಸ್ಯ=ಅವನ; ಅರ್ಚಯಾ=ಅರ್ಚನೆಯಿಂದ; ಅಪರೇ ಅಪಿ=ಕೆಲವರಾದರೂ; ಸಖ್ಯೇನ=ಗೆಳೆತನದಿಂದ; ಬಹುಶಃ=ಬಹಳ; ಪ್ರಣಮ್ಯ=ನಮಸ್ಕರಿಸಿ; ಕೇಚಿತ್ ಚ=ಕೆಲವರು; ತವ=ನಿನ್ನ; ದಾಸಾಃ=ಸೇವಕರು; ಇತಿ=ಎಂದು; ಆತ್ಮಾನಂ=ತಮ್ಮನ್ನು; ನಿವೇದ್ಯ=ಅರ್ಪಿಸಿ; ಮೋಕ್ಷ=ಮೋಕ್ಷದಲ್ಲಿ; ನಿರತಾಃ=ಆಸಕ್ತರಾಗಿ; ಕೃಷ್ಣ=ಕೃಷ್ಣನ; ಅರ್ಚಕಾಃ=ಅರ್ಚಕರಾಗಿ; ಅತ್ರ=ಇಲ್ಲಿ; ಸಂತಿ=ಇದ್ದಾರೆ.

ದ್ವಾರಕೆಯಲ್ಲಿ ಜನರು ನವವಿಧಭಕ್ತಿಯಿಂದ ಕೃಷ್ಣನನ್ನು ಪೂಜಿಸುತ್ತಿದ್ದರು ಎಂಬುದನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಕೆಲವು ಮನೆಗಳಲ್ಲಿ ಸದಾ ಕೃಷ್ಣ ಚರಿತ್ರೆಯನ್ನು ತಿಳಿಸುವ ಭಾಗವತಾದಿ ಪುರಾಣಗಳ ಪ್ರವಚನ ನಡೆಯುತ್ತಿತ್ತು. ಅದನ್ನು ಕೆಲವರು ಶ್ರವಣಮಾಡಿ ಕೃಷ್ಣನಿಗೆ ಅರ್ಪಿಸುತ್ತಿದ್ದರು. ಇದು ನವವಿಧಭಕ್ತಿಗಳಲ್ಲಿ ಒಂದು. ಈ ಮೂಲಕ ಕೃಷ್ಣನನ್ನು ಅರ್ಚಿಸುತ್ತಿದ್ದರು. ಪ್ರವಚನಕಾರರು ಪ್ರವಚನದನಂತರ ಅದನ್ನು ಕೃಷ್ಣಾರ್ಪಣ ಗೈಯುತ್ತಿದ್ದರು. ಇದು 'ಕೀರ್ತನ' ಎಂಬ ಎರಡನೆಯ ರೀತಿಯ ಭಕ್ತಿ. ಅನಂತರ ಈ ಹೇಳಿದವರು ಕೇಳಿದವರು ತಮ್ಮ ತಮ್ಮ ಏಕಾಂಗ ಜಾಗದಲ್ಲಿ ಮನನಮಾಡುತ್ತಿದ್ದರು. ಇದು 'ಸ್ಮರಣ'ರೂಪ ಭಕ್ತಿ. ಅನಂತರದ ಭಕ್ತಿ 'ಪಾದಸೇವನಂ' ಎಂಬುದು. ಪಾದ ಎಂದರೆ ಸ್ವರೂಪ ಎಂದರ್ಥ. ಶ್ರವಣ, ಕೀರ್ತನ, ಮನನದ ಅನಂತರ ಕೃಷ್ಣಸ್ವರೂಪದ ದರ್ಶನವನ್ನು ಕೃಷ್ಣನ ಮನೆಗೆ ಹೋಗಿ ಮಾಡುತ್ತಿದ್ದರು. ಇದು ನಾಲ್ಕನೆಯ ರೀತಿಯ ಭಕ್ತಿ. ದರ್ಶನಮಾತ್ರ ಪೂರೈಸುವವರು ಕೆಲವರು. ಕೆಲವರು ದರ್ಶನದನಂತರ ಫಲತಾಂಬೂಲಾದಿಗಳನ್ನು ನೈವೇದ್ಯಮಾಡುವ ಮೂಲಕ ಅರ್ಚಿಸುತ್ತಿದ್ದರು. ಇದು 'ಅರ್ಚನೆ' ಎಂಬ ಐದನೆಯ ಭಕ್ತಿ. 'ಸಖ್ಯ' ಎಂಬುದು ಆರನೆಯದ್ದು. ಸಖ್ಯ ಅಂದರೆ ನಮ್ಮ ಬಗ್ಗೆ ಸದಾ ಯಾರು ಆನಂದದಿಂದ ಕೂಡಿರುವನೋ ಅವನು ನಮಗೆ ಸಖ. ಭಕ್ತರನ್ನು ಕಂಡರೆ ದೇವರಿಗೆ ಸದಾ ಆನಂದ. ಆದ್ದರಿಂದ ಭಕ್ತರಿಗೆ ದೇವರು ಸಖ. ಕೆಲವು ಭಕ್ತರು ಸಖಿತ್ವೇನ ಅಂದರೆ ನಮ್ಮನ್ನು ಕಂಡು ಸದಾ ಆನಂದಿಸುವವನೇ ಎಂದು ಉಪಾಸನೆ ಮಾಡುತ್ತಿದ್ದರು. ಇದು ಗೆಳತನರೂಪಭಕ್ತಿ.

ಇನ್ನು ಕೆಲವರು ದೇವರ ಸರ್ವೋತ್ತಮತ್ವವನ್ನು ತಿಳಿದು ಆತನ ಮುಂದೆ ಸದಾ ನಮ್ರೀ ಭಾವದಿಂದ ಇರುತ್ತಿದ್ದರು. ಇದನ್ನು 'ವಂದನೆ' ಎಂಬ ಶಬ್ದದಿಂದ ಕರೆಯುತ್ತಾರೆ. ಎಂಟನೆಯ ಭಕ್ತಿಯ ಹೆಸರು 'ದಾಸ್ಯ' ಎಂದು. ದಾಸರು ಅವನು– ಯಾರು ಯಜಮಾನನ ಪ್ರೀತಿಯನ್ನು ಆಶಿಸಿ ಆತನು ಹೇಳಿದ್ದನ್ನು ಸ್ವಲ್ಪವೂ ತಪ್ಪದೇ ಮಾಡುವವನು. ಶಾಸ್ತ್ರದ ಮಾತೆಂದರೆ ದೇವರ ಮಾತು. ದ್ವಾರಕೆಯಲ್ಲಿ ಕೆಲವರು ಶಾಸ್ತ್ರದಲ್ಲಿ ಹೇಳಿದ ಕ್ರಮದಂತೆಯೇ ಜೀವಿಸುತ್ತಿದ್ದರು. ದೇವರ ಪ್ರೀತಿಯನ್ನು ಆಶಿಸುತ್ತಿದ್ದರು. ಅಂದರೆ ನಿಷ್ಕಾಮಕರ್ಮವನ್ನು ಮಾಡುತ್ತಿದ್ದರು. ಕೊನೆಯದ್ದು 'ಆತ್ಮನಿವೇದನೆ'. ತನ್ನನ್ನೇ ಅರ್ಪಿಸುವುದು. ಅಥವಾ ಆತ್ಮನಿ–ವೇದನೆ. ಅಂದರೆ ತನ್ನಲ್ಲಿ ತನ್ನ ಬಿಂಬರೂಪವನ್ನು ನೋಡುವುದು– ಆಂದರೆ ಅಪರೋಕ್ಷಜ್ಞಾನ. ಈ ರೀತಿ ಮೋಕ್ಷಾರ್ಥಿಗಳಾಗಿ ಕೆಲವರು ಕೃಷ್ಣನನ್ನು ಇಲ್ಲಿ ಪೂಜಿಸುತ್ತಿದ್ದರು.

**ಅಂಗೀಕಾರಗಿರಾಂ ಶ್ರುತಾವಭಿರತಾಃ ಸಂಕೀರ್ತ್ಯ ತಾ ಮಾನಿನೀ–**
**ಸ್ತತ್ಪಾದೌ ಪರಿಗೃಹ್ಯ ವಂದನಮಹೋ ಕೃತ್ವಾ ತ್ವದೀಯಾ ವಯಮ್ ।**
**ತ್ವದ್ದಾಸಾ ವಯಮಿತ್ಯುದೀರ್ಯ ಮನಸಾಽತೀತಾಂ ಸ್ಮರಂತೇ ರತಿಂ**
**ನೀವೀಮೋಕ್ಷಫಲಾಯ ಸಖ್ಯಕುಶಲಾಃ ಕೇಚಿಚ್ಚ ರಾಮಾರ್ಚಕಾಃ ॥ ೪೮ ॥**

ಕೇಚಿತ್ ಚ=ಕೆಲವರಾದರೂ; ಅಂಗೀಕಾರ=ಒಪ್ಪಿಗೆಯ; ಗಿರಾಂ=ಮಾತುಗಳ; ಶ್ರುತೌ=ಶ್ರವಣದಲ್ಲಿ; ಅಭಿರತಾಃ=ಆಸಕ್ತರಾಗಿ; ತಾ=ಆ; ಮಾನಿನೀಃ=ನಾರಿಯರನ್ನು; ಸಂಕೀರ್ತ್ಯ=ಹೊಗಳಿ; ತತ್=ಅವರ; ಪಾದೌ=ಕಾಲುಗಳನ್ನು; ಪರಿಗೃಹ್ಯ=ಹಿಡಿದು; ವಂದನಂ=ನಮನವನ್ನು; ಕೃತ್ವಾ=ಮಾಡಿ; ತ್ವದೀಯಾಃ=ನಿನ್ನವರು; ತ್ವತ್=ನಿನ್ನ; ದಾಸಾಃ= ದಾಸರು; ವಯಂ=ನಾವು; ಇತಿ=ಎಂದು; ಉದೀರ್ಯ=ಹೇಳಿ; ಸಖ್ಯ=ಗೆಳೆತನದಲ್ಲಿ; ಕುಶಲಾಃ=ಕುಶಲರಾಗಿ; ರಾಮಾ=ನಾರಿಯರ; ಅರ್ಚಕಾಃ=ಅರ್ಚಕರಾಗಿ; ನೀವೀ=ಸೀರೆಯ ಮೋಕ್ಷ ಬಿಡಿಸುವಿಕೆಯೆಂಬ; ಫಲಾಯ=ಫಲಕ್ಕೋಸ್ಕರ; ಅತೀತಾಂ=ಹಿಂದಿನ; ರತಿಂ=ಕ್ರೀಡೆಯನ್ನು; ಮನಸಾ=ಮನದಿಂದ; ಸ್ಮರಂತೇ=ಸ್ಮರಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ ನವವಿಧಭಕ್ತಿಯಿಂದ ಕೃಷ್ಣನನ್ನು ಅರ್ಚಿಸುವವರನ್ನು ರಾಜರು ಹೇಳಿದರು. ಈ ಶ್ಲೋಕದಲ್ಲಿ ನವವಿಧದಿಂದ ರಾಮಾರನ್ನು ಅಂದರೆ ನಾರಿಯರನ್ನು ಒಲಿಸುವ ಕಾಮುಕರನ್ನು ಹಾಸ್ಯಮುಖದಿಂದ ವರ್ಣಿಸುತ್ತಾರೆ.

ನಾರಿಯರ ಜೊತೆ ರಮಿಸಬೇಕಾದರೆ ಮೊದಲು ಅವರ ಒಪ್ಪಿಗೆ ಬೇಕು. ಅವರಿಂದ ಬರುವ ಒಪ್ಪಿಗೆಯ ಮಾತಿನ ಶ್ರವಣದಲ್ಲಿ ತುಂಬಾ ಕಾತರರಾಗಿರುತ್ತಾರೆ. ಇವರಿಂದ ಶ್ರವಣವೆಂಬ ಮೊದಲಿನ ಹಂತವನ್ನು ತಿಳಿಸಿದಂತಾಯಿತು. ಕೆಲವೊಮ್ಮೆ ನಾರಿಯರು ಸಿಟ್ಟಾಗುವುದೂ ಇದೆ. ಅವರು ಮಾನಿನಿಯರು ತಾನೆ.. ಆಗ ಅವರ ಸಿಟ್ಟನ್ನು ಕಡಿಮೆಮಾಡಲು ಅವರ ಕಾಲು ಹಿಡಿಯುತ್ತಾರೆ. ನಮಸ್ಕಾರ ಮಾಡುತ್ತಾರೆ. ನಿನ್ನವರು ನಾವು, ನಿನ್ನ ಸೇವಕರು ಎಂದು ಹೇಳುತ್ತಾರೆ. ಹಾಗೆಯೇ ಚೆನ್ನಾಗಿ ಹೊಗಳುತ್ತಾರೆ. ಅವರ ಗೆಳೆತನವನ್ನು

ಸಂಪಾದಿಸಲು ಪ್ರಯತ್ನಿಸುತ್ತಾರೆ. ಹಿಂದಿನ ದಿನದ ರತಿಕ್ರೀಡೆಯನ್ನು ಸ್ಮರಿಸುತ್ತಾರೆ. ಆಗ ನಾರಿಯರು ಇವರ ಅಧೀನರಾಗುತ್ತಾರೆ. ಕೃಷ್ಣನ ಭಕ್ತರು ಸಂಸಾರಬಂಧನದಿಂದ ಬಿಡುಗಡೆಗಾಗಿ ಒಂಭತ್ತು ರೀತಿಯಿಂದ ಕೃಷ್ಣನನ್ನು ಒಲಿಸಿಕೊಂಡರೆ ಇವರು ಈ ಒಂಭತ್ತು ರೀತಿಗಳಿಂದ ರಾಮೆಯರನ್ನು ಅಂದರೆ ನಾರಿಯರನ್ನು ಒಲಿಸಿಕೊಳ್ಳುತ್ತಾರೆ. ಇದರ ಉದ್ದೇಶ ನಾರಿಯರು ಉಟ್ಟ ಸೀರೆಗಳ ಬಿಡುಗಡೆಗಾಗಿ. ಹೀಗೆ 'ಕೃಷ್ಣಾರ್ಚಕರು' ಹಾಗೂ 'ರಾಮಾರ್ಚಕರು' ಎಂಬ ಎರಡು ವರ್ಗದ ಜನರೂ ದ್ವಾರಕೆಯಲ್ಲಿ ಇದ್ದರು.

**ಪ್ರಾಕಾರಾದ್ಬಹಿರತ್ರ ವಾರಿಧಿರಯಂ ಪ್ರಾಪ್ಯಾಂಬುದೈರರ್ಪಿತಂ**
**ಸ್ವಾತೌ ವಾರಿ ತತಶ್ಚಿರೇಣ ಹೃದಯೇ ಮುಕ್ತಾಮಯೋ ಜಾಯತೇ ।**
**ಅಂತರ್ಹಸ್ತತಟೇಷು ವಿಪ್ರಜಲಧಿಃ ಕೃಷ್ಣಾಬ್ಧವೃಷ್ಟಂ ಸದಾ**
**ವಿತ್ತಾಂಬು ಪ್ರತಿಪದ್ಯ ತತ್‌ಕ್ಷಣಮಹೋ ಮುಕ್ತಾಮಯೋ ಜಾಯತೇ ॥ ೪೯ ॥**

ಅತ್ರ=ದ್ವಾರಕೆಯಲ್ಲಿ; ಪ್ರಾಕಾರಾತ್=ಗೋಡೆಗಿಂತ; ಬಹಿಃ=ಹೊರಗೆ; ಅಯಂ=ಈ; ವಾರಿಧಿಃ=ಸಮುದ್ರವು; ಸ್ವಾತೌ=ಸ್ವಾತೀನಕ್ಷತ್ರದಲ್ಲಿ; ಅಂಬುದೈಃ=ಮೋಡಗಳಿಂದ; ಅರ್ಪಿತಂ= ಕೊಡಲ್ಪಟ್ಟ; ವಾರಿ=ನೀರನ್ನು; ಪ್ರಾಪ್ಯ=ಹೊಂದಿ; ತತಃ=ಅನಂತರ; ಚಿರೇಣ=ಬಹಳ ಕಾಲದನಂತರ; ಹೃದಯೇ=ಒಳಗೆ; ಮುಕ್ತಾಮಯಃ=ಮುತ್ತು; ಜಾಯತೇ= ಆಗುತ್ತದೆ; ಅಂತಃ=ಒಳಗೆ; ವಿಪ್ರ=ಬ್ರಾಹ್ಮಣರೆಂಬ; ಜಲಧಿಃ=ಸಮುದ್ರವು; ಕೃಷ್ಣ=ಕೃಷ್ಣನೆಂಬ; ಅಬ್ದ= ಮೋಡದಿಂದ; ವೃಷ್ಟಂ=ಕೊಡಲ್ಪಟ್ಟ; ಹಸ್ತ=ಕೈಗಳ; ತಟೇಷು= ಬೊಗಸೆಗಳಲ್ಲಿ; ವಿತ್ತ= ಹಣವೆಂಬ; ಅಂಬು=ನೀರನ್ನು; ಪ್ರಾಪ್ಯ=ಹೊಂದಿ; ತತ್‌ಕ್ಷಣಂ=ಕೂಡಲೇ; ಮುಕ್ತ= ಕಳಕೊಂಡ; ಆಮಯಃ=ರೋಗವುಳ್ಳದ್ದು; ಅಹೋ= ಆಶ್ಚರ್ಯವು.

ರಾಜರು ದ್ವಾರಕೆಯ ವೈಭವವನ್ನು ಇನ್ನೊಂದು ರೀತಿಯಿಂದ ವರ್ಣಿಸುತ್ತಾರೆ. ಮುತ್ತುಗಳ ಉತ್ಪತ್ತಿ ನಾನಾ ರೀತಿಯಿಂದ ಆಗುತ್ತದೆ. ಅದರಲ್ಲಿ ಒಂದು ಸಮುದ್ರ, ಸ್ವಾತೀನಕ್ಷತ್ರದ ಮಳೆಯು ಸಮುದ್ರದಲ್ಲಿರುವ ಮುತ್ತಿನ ಚಿಪ್ಪುಗಳ ಮೇಲೆ ಬಿದ್ದರೆ ಕ್ರಮೇಣ ಅದರ ಬಹಳ ಸಮಯದನಂತರ ಅದು ಮುತ್ತಾಗುತ್ತದೆ. ಇದು ದ್ವಾರಕೆಯಲ್ಲಿ. ಸಮುದ್ರದ ಮಧ್ಯದಲ್ಲಿ ದ್ವಾರಕೆ ಇದೆ ತಾನೆ. ಇಡೀ ದ್ವಾರಕೆಗೆ ಒಂದು ದೊಡ್ಡ ಪಾಗಾರ ಇದೆ. ಪಾಗಾರದ ಹೊರಗೆ ಸಮುದ್ರ. ಸಮುದ್ರದ ಬದಿಯಲ್ಲಿ ಚಿಪ್ಪುಗಳು. ಈ ಚಿಪ್ಪುಗಳಿಗೆ ಸ್ವಾತೀನಕ್ಷತ್ರದ ಮಳೆಯು ಬೀಳುತ್ತದೆ. ಈ ಚಿಪ್ಪುಗಳು ಸಮುದ್ರದ ಕೈಗಳಂತಿವೆ. ಕೂಡಲೇ ಮುತ್ತು ಆಗುವುದಿಲ್ಲ. ಬಹಳ ಸಮಯ ತಗಲುತ್ತದೆ. ಪಾಗಾರದ ಒಳಗೆ ಬ್ರಾಹ್ಮಣರೆಂಬ ಸಮುದ್ರವು ಇದೆ. ಇವರು ಕೃಷ್ಣನನ್ನು ಸಂಪತ್ತಿಗಾಗಿ ಬೇಡುತ್ತಾರೆ. ಕೃಷ್ಣನು ಇವರಿಗೆ ಬಹಳ ಸಂಪತ್ತನ್ನು ಇವರ ಕೈಗಳಿಗೆ ಸುರಿಯುತ್ತಾನೆ. ಕೂಡಲೇ ಈ ವಿಪ್ರರು ದಾರಿದ್ರ್ಯವೆಂಬ ಆಮಯದಿಂದ ಅಂದರೆ ಕಾಯಿಲೆಯಿಂದ ಬಿಡುಗಡೆ ಹೊಂದುತ್ತಾರೆ.

ಇನ್ನು ಕೆಲವರು ದೇವರ ಸರ್ವೋತ್ತಮತ್ವವನ್ನು ತಿಳಿದು ಆತನ ಮುಂದೆ ಸದಾ ನಮ್ರೀ ಭಾವದಿಂದ ಇರುತ್ತಿದ್ದರು. ಇದನ್ನು 'ವಂದನೆ' ಎಂಬ ಶಬ್ದದಿಂದ ಕರೆಯುತ್ತಾರೆ. ಎಂಟನೆಯ ಭಕ್ತಿಯ ಹೆಸರು 'ದಾಸ್ಯ' ಎಂದು. ದಾಸರು ಅವನು– ಯಾರು ಯಜಮಾನನ ಪ್ರೀತಿಯನ್ನು ಆಶಿಸಿ ಆತನು ಹೇಳಿದ್ದನ್ನು ಸ್ವಲ್ಪವೂ ತಪ್ಪದೇ ಮಾಡುವವನು. ಶಾಸ್ತ್ರದ ಮಾತೆಂದರೆ ದೇವರ ಮಾತು. ದ್ವಾರಕೆಯಲ್ಲಿ ಕೆಲವರು ಶಾಸ್ತ್ರದಲ್ಲಿ ಹೇಳಿದ ಕ್ರಮದಂತೆಯೇ ಜೀವಿಸುತ್ತಿದ್ದರು. ದೇವರ ಪ್ರೀತಿಯನ್ನು ಆಶಿಸುತ್ತಿದ್ದರು. ಅಂದರೆ ನಿಷ್ಕಾಮಕರ್ಮವನ್ನು ಮಾಡುತ್ತಿದ್ದರು. ಕೊನೆಯದ್ದು 'ಆತ್ಮನಿವೇದನೆ'. ತನ್ನನ್ನೇ ಅರ್ಪಿಸುವುದು. ಅಥವಾ ಆತ್ಮನಿ–ವೇದನೆ. ಅಂದರೆ ತನ್ನಲ್ಲಿ ತನ್ನ ಬಿಂಬರೂಪವನ್ನು ನೋಡುವುದು– ಅಂದರೆ ಅಪರೋಕ್ಷಜ್ಞಾನ. ಈ ರೀತಿ ಮೋಕ್ಷಾರ್ಥಿಗಳಾಗಿ ಕೆಲವರು ಕೃಷ್ಣನನ್ನು ಇಲ್ಲಿ ಪೂಜಿಸುತ್ತಿದ್ದರು.

**ಅಂಗೀಕಾರಗಿರಾಂ ಶ್ರುತಾವಭಿರತಾಃ ಸಂಕೀರ್ತ್ಯ ತಾ ಮಾನಿನೀ–**
**ಸ್ತತ್ಪಾದೌ ಪರಿಗೃಹ್ಯ ವಂದನಮಹೋ ಕೃತ್ವಾ ತ್ವದೀಯಾ ವಯಮ್ ।**
**ತ್ವದ್ದಾಸಾ ವಯಮಿತ್ಯುದೀರ್ಯ ಮನಸಾಽತೀತಾಂ ಸ್ಮರಂತೇ ರತಿಂ**
**ನೀವೀಮೋಕ್ಷಫಲಾಯ ಸಖ್ಯಕುಶಲಾಃ ಕೇಚಿಚ್ಚ ರಾಮಾರ್ಚಕಾಃ ॥ ೪೮ ॥**

ಕೇಚಿತ್ ಚ=ಕೆಲವರಾದರೂ; ಅಂಗೀಕಾರ=ಒಪ್ಪಿಗೆಯ; ಗಿರಾಂ=ಮಾತುಗಳ; ಶ್ರುತೌ=ಶ್ರವಣದಲ್ಲಿ; ಅಭಿರತಾಃ=ಆಸಕ್ತರಾಗಿ; ತಾ=ಆ; ಮಾನಿನೀಃ=ನಾರಿಯರನ್ನು; ಸಂಕೀರ್ತ್ಯ=ಹೊಗಳಿ; ತತ್=ಅವರ; ಪಾದೌ=ಕಾಲುಗಳನ್ನು; ಪರಿಗೃಹ್ಯ=ಹಿಡಿದು; ವಂದನಂ=ನಮನವನ್ನು; ಕೃತ್ವಾ=ಮಾಡಿ; ತ್ವದೀಯಾಃ=ನಿನ್ನವರು; ತ್ವತ್=ನಿನ್ನ; ದಾಸಾಃ= ದಾಸರು; ವಯಂ=ನಾವು; ಇತಿ=ಎಂದು; ಉದೀರ್ಯ=ಹೇಳಿ; ಸಖ್ಯ=ಗೆಳೆತನದಲ್ಲಿ; ಕುಶಲಾಃ=ಕುಶಲರಾಗಿ; ರಾಮಾ=ನಾರಿಯರ; ಅರ್ಚಕಾಃ=ಅರ್ಚಕರಾಗಿ; ನೀವೀ=ಸೀರೆಯ ಮೋಕ್ಷ ಬಿಡಿಸುವಿಕೆಯೆಂಬ; ಫಲಾಯ=ಫಲಕ್ಕೋಸ್ಕರ; ಅತೀತಾಂ=ಹಿಂದಿನ; ರತಿಂ=ಕ್ರೀಡೆಯನ್ನು; ಮನಸಾ=ಮನದಿಂದ; ಸ್ಮರಂತೇ=ಸ್ಮರಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ ನವವಿಧಭಕ್ತಿಯಿಂದ ಕೃಷ್ಣನನ್ನು ಅರ್ಚಿಸುವವರನ್ನು ರಾಜರು ಹೇಳಿದರು. ಈ ಶ್ಲೋಕದಲ್ಲಿ ನವವಿಧದಿಂದ ರಾಮಾರನ್ನು ಅಂದರೆ ನಾರಿಯರನ್ನು ಒಲಿಸುವ ಕಾಮುಕರನ್ನು ಹಾಸ್ಯಮುಖದಿಂದ ವರ್ಣಿಸುತ್ತಾರೆ.

ನಾರಿಯರ ಜೊತೆ ರಮಿಸಬೇಕಾದರೆ ಮೊದಲು ಅವರ ಒಪ್ಪಿಗೆ ಬೇಕು. ಅವರಿಂದ ಬರುವ ಒಪ್ಪಿಗೆಯ ಮಾತಿನ ಶ್ರವಣದಲ್ಲಿ ತುಂಬಾ ಕಾತರರಾಗಿರುತ್ತಾರೆ. ಇವರಿಂದ ಶ್ರವಣವೆಂಬ ಮೊದಲಿನ ಹಂತವನ್ನು ತಿಳಿಸಿದಂತಾಯಿತು. ಕೆಲವೊಮ್ಮೆ ನಾರಿಯರು ಸಿಟ್ಟಾಗುವುದೂ ಇದೆ. ಅವರು ಮಾನಿನಿಯರು ತಾನೆ.. ಆಗ ಅವರ ಸಿಟ್ಟನ್ನು ಕಡಿಮೆಮಾಡಲು ಅವರ ಕಾಲು ಹಿಡಿಯುತ್ತಾರೆ. ನಮಸ್ಕಾರ ಮಾಡುತ್ತಾರೆ. ನಿನ್ನವರು ನಾವು, ನಿನ್ನ ಸೇವಕರು ಎಂದು ಹೇಳುತ್ತಾರೆ. ಹಾಗೆಯೇ ಚೆನ್ನಾಗಿ ಹೊಗಳುತ್ತಾರೆ. ಅವರ ಗೆಳೆತನವನ್ನು

ಸಂಪಾದಿಸಲು ಪ್ರಯತ್ನಿಸುತ್ತಾರೆ. ಹಿಂದಿನ ದಿನದ ರತಿಕ್ರೀಡೆಯನ್ನು ಸ್ಮರಿಸುತ್ತಾರೆ. ಆಗ ನಾರಿಯರು ಇವರ ಅಧೀನರಾಗುತ್ತಾರೆ. ಕೃಷ್ಣನ ಭಕ್ತರು ಸಂಸಾರಬಂಧನದಿಂದ ಬಿಡುಗಡೆಗಾಗಿ ಒಂಭತ್ತು ರೀತಿಯಿಂದ ಕೃಷ್ಣನನ್ನು ಒಲಿಸಿಕೊಂಡರೆ ಇವರು ಈ ಒಂಭತ್ತು ರೀತಿಗಳಿಂದ ರಾಮೆಯರನ್ನು ಅಂದರೆ ನಾರಿಯರನ್ನು ಒಲಿಸಿಕೊಳ್ಳುತ್ತಾರೆ. ಇದರ ಉದ್ದೇಶ ನಾರಿಯರು ಉಟ್ಟ ಸೀರೆಗಳ ಬಿಡುಗಡೆಗಾಗಿ. ಹೀಗೆ 'ಕೃಷ್ಣಾರ್ಚಕರು' ಹಾಗೂ 'ರಾಮಾರ್ಚಕರು' ಎಂಬ ಎರಡು ವರ್ಗದ ಜನರೂ ದ್ವಾರಕೆಯಲ್ಲಿ ಇದ್ದರು.

**ಪ್ರಾಕಾರಾದ್ಬಹಿರತ್ರ ವಾರಿಧಿರಯಂ ಪ್ರಾಪ್ಯಾಂಬುದೈರರ್ಪಿತಂ**
**ಸ್ವಾತೌ ವಾರಿ ತತಶ್ಚಿರೇಣ ಹೃದಯೇ ಮುಕ್ತಾಮಯೋ ಜಾಯತೇ ।**
**ಅಂತರ್ಹಸ್ತತಟೇಷು ವಿಪ್ರಜಲಧಿಃ ಕೃಷ್ಣಾಬ್ದವೃಷ್ಟಿಂ ಸದಾ**
**ವಿತ್ತಾಂಬು ಪ್ರತಿಪದ್ಯ ತತ್‌ಕ್ಷಣಮಹೋ ಮುಕ್ತಾಮಯೋ ಜಾಯತೇ ॥ ೪೯ ॥**

ಅತ್ರ=ದ್ವಾರಕೆಯಲ್ಲಿ; ಪ್ರಾಕಾರಾತ್=ಗೋಡೆಗಿಂತ; ಬಹಿಃ=ಹೊರಗೆ; ಅಯಂ=ಈ; ವಾರಿಧಿಃ=ಸಮುದ್ರವು; ಸ್ವಾತೌ=ಸ್ವಾತೀನಕ್ಷತ್ರದಲ್ಲಿ; ಅಂಬುದೈಃ=ಮೋಡಗಳಿಂದ; ಅರ್ಪಿತಂ= ಕೊಡಲ್ಪಟ್ಟ; ವಾರಿ=ನೀರನ್ನು; ಪ್ರಾಪ್ಯ=ಹೊಂದಿ; ತತಃ=ಅನಂತರ; ಚಿರೇಣ=ಬಹಳ ಕಾಲದನಂತರ; ಹೃದಯೇ=ಒಳಗೆ; ಮುಕ್ತಾಮಯಃ=ಮುತ್ತು; ಜಾಯತೇ= ಆಗುತ್ತದೆ; ಅಂತಃ=ಒಳಗೆ; ವಿಪ್ರ=ಬ್ರಾಹ್ಮಣರೆಂಬ; ಜಲಧಿಃ=ಸಮುದ್ರವು; ಕೃಷ್ಣ=ಕೃಷ್ಣನೆಂಬ; ಅಬ್ದ= ಮೋಡದಿಂದ; ವೃಷ್ಟಂ=ಕೊಡಲ್ಪಟ್ಟ; ಹಸ್ತ=ಕೈಗಳ; ತಟೇಷು= ಬೊಗಸೆಗಳಲ್ಲಿ; ವಿತ್ತ= ಹಣವೆಂಬ; ಅಂಬು=ನೀರನ್ನು; ಪ್ರಾಪ್ಯ=ಹೊಂದಿ; ತತ್‌ಕ್ಷಣಂ=ಕೂಡಲೇ; ಮುಕ್ತ= ಕಳಕೊಂಡ; ಆಮಯಃ=ರೋಗವುಳ್ಳದ್ದು; ಅಹೋ= ಆಶ್ಚರ್ಯವು.

ರಾಜರು ದ್ವಾರಕೆಯ ವೈಭವವನ್ನು ಇನ್ನೊಂದು ರೀತಿಯಿಂದ ವರ್ಣಿಸುತ್ತಾರೆ. ಮುತ್ತುಗಳ ಉತ್ಪತ್ತಿ ನಾನಾ ರೀತಿಯಿಂದ ಆಗುತ್ತದೆ. ಅದರಲ್ಲಿ ಒಂದು ಸಮುದ್ರ, ಸ್ವಾತೀನಕ್ಷತ್ರದ ಮಳೆಯು ಸಮುದ್ರದಲ್ಲಿರುವ ಮುತ್ತಿನ ಚಿಪ್ಪುಗಳ ಮೇಲೆ ಬಿದ್ದರೆ ಕ್ರಮೇಣ ಅದರ ಬಹಳ ಸಮಯದನಂತರ ಅದು ಮುತ್ತಾಗುತ್ತದೆ. ಇದು ದ್ವಾರಕೆಯಲ್ಲಿ. ಸಮುದ್ರದ ಮಧ್ಯದಲ್ಲಿ ದ್ವಾರಕೆ ಇದೆ ತಾನೆ. ಇಡೀ ದ್ವಾರಕೆಗೆ ಒಂದು ದೊಡ್ಡ ಪಾಗಾರ ಇದೆ. ಪಾಗಾರದ ಹೊರಗೆ ಸಮುದ್ರ, ಸಮುದ್ರದ ಬದಿಯಲ್ಲಿ ಚಿಪ್ಪುಗಳು. ಈ ಚಿಪ್ಪುಗಳಿಗೆ ಸ್ವಾತೀನಕ್ಷತ್ರದ ಮಳೆಯು ಬೀಳುತ್ತದೆ. ಈ ಚಿಪ್ಪುಗಳು ಸಮುದ್ರದ ಕೈಗಳಂತಿವೆ. ಕೂಡಲೇ ಮುತ್ತು ಆಗುವುದಿಲ್ಲ. ಬಹಳ ಸಮಯ ತಗಲುತ್ತದೆ. ಪಾಗಾರದ ಒಳಗೆ ಬ್ರಾಹ್ಮಣರೆಂಬ ಸಮುದ್ರವು ಇದೆ. ಇವರು ಕೃಷ್ಣನನ್ನು ಸಂಪತ್ತಿಗಾಗಿ ಬೇಡುತ್ತಾರೆ. ಕೃಷ್ಣನು ಇವರಿಗೆ ಬಹಳ ಸಂಪತ್ತನ್ನು ಇವರ ಕೈಗಳಿಗೆ ಸುರಿಯುತ್ತಾನೆ. ಕೂಡಲೇ ಈ ವಿಪ್ರರು ದಾರಿದ್ರ್ಯವೆಂಬ ಆಯಯದಿಂದ ಅಂದರೆ ಕಾಯಿಲೆಯಿಂದ ಬಿಡುಗಡೆ ಹೊಂದುತ್ತಾರೆ.

ಪಾಗಾರದ ಹೊರಗೆ ಜಡವಾದ ಮೋಡವು ನೀರನ್ನು ಚಿಪ್ಪುಗಳೆಂಬ ಕೈಗಳಲ್ಲಿ ಸ್ವಾತೀಮಳೆಯನ್ನು ಸುರಿಸಿದಾಗ ಸಮುದ್ರವು ಬಹಳ ವರ್ಷಗಳನಂತರ ಮುಕ್ತಾಮಯ ಅಂದರೆ ಮುತ್ತಿನ ರೂಪವನ್ನು ತಾಳುತ್ತದೆ. ಆದರೆ ಒಳಗೆ ಕೃಷ್ಣನೆಂಬ ಮೋಡವು, ಕೈಗಳ ಬೊಗಸೆಗಳಲ್ಲಿ ಸಂಪತ್ತೆಂಬ ಮಳೆಯನ್ನು ಸುರಿಸಿದಾಗ ಬ್ರಾಹ್ಮಣಸಮೂಹವೆಂಬ ಸಮುದ್ರವು ಕೂಡಲೇ ಮುಕ್ತಾಮಯ, ಅಂದರೆ ದಾರಿದ್ರ್ಯವೆಂಬ ಕಾಯಿಲೆಯಿಂದ ದೂರವಾಯಿತು. ಇಲ್ಲಿ 'ಮುಕ್ತಾಮಯ' ಎಂಬ ಶಬ್ದದ ಸ್ವಾರಸ್ಯ ಚೆನ್ನಾಗಿದೆ.

**<u>ಸಂದೇಶ</u> :ದೇವರಿಂದ ಸಿಗುವ ಪ್ರತಿಯೊಂದು ವಸ್ತುವೂ ಮೋಕ್ಷಕ್ಕೆ ಕಾರಣ.**

**ಆಶಾಸಕ್ತಜನಾಶುಗೇನ ಜವಿನೋಪಾಂತೇ ರಜೋ ಜೃಂಭಯನ್**
**ತೇನೈವೋಗ್ರತಮಃ ಸೃಜನ್ ಶುಭದೃಶಾಮಪ್ಯಾಂಧ್ಯಮಾಪಾದಯನ್ ।**
**ಅಂತಸ್ತಂಭಿತಸತ್ವವೃತ್ತಿರನಿಶಂ ಸಂಸಾರವಾರಾಶಿವತ್**
**ಪ್ರತ್ಯೂಹೀ ಭವತಿ ತ್ರಿಧಾಮನಗರ ಪ್ರಾಪ್ತೌ ಜಲೌಘಾಶ್ರಯಃ ॥ ೫೦ ॥**

ಜವಿನಾ=ವೇಗವುಳ್ಳ; ಆಶಾ=ದಿಕ್ಕುಗಳಲ್ಲಿ; ಆಸಕ್ತ=ಇರುವ; ಜನ=ಜನರುಳ್ಳ; ಆಶುಗೇನ=ಗಾಳಿಯಿಂದ; ಉಪಾಂತೇ=ತೀರದಲ್ಲಿ; ರಜಃ=ಧೂಳನ್ನು; ಜೃಂಭಯನ್= ಎಬ್ಬಿಸುತ್ತಾ; ತೇನ ಏವ=ಆದ್ದರಿಂದಲೇ; ಉಗ್ರ=ಬಹಳವಾದ; ತಮಃ=ಕತ್ತಲೆಯನ್ನು; ಸೃಜನ್=ಉಂಟುಮಾಡುತ್ತಾ; ಶುಭ=ಒಳ್ಳೆಯ; ದೃಶಾಂ ಅಪಿ=ಕಣ್ಣುಳ್ಳವರಿಗೂ; ಆಂಧ್ಯಂ= ಕುರುಡುತನವನ್ನು; ಆಪಾದಯನ್=ಉಂಟುಮಾಡುತ್ತಾ; ಅಂತಃ=ಒಳಗೆ; ಸ್ತಂಭಿತ= ತಡೆಹಿಡಿದ; ಸತ್ವ=ಸತ್ವಗಳ; ವೃತ್ತಿಃ=ಕೆಲಸವುಳ್ಳ; ಜಲ=ನೀರುಗಳ; ಓಘ=ಸಮೂಹಕ್ಕೆ; ಆಶ್ರಯಃ=ಆಶ್ರಯವು; ಸಂಸಾರ=ಸಂಸಾರವೆಂಬ; ವಾ=ನೀರಿನ; ರಾಶಿವತ್=ರಾಶಿಯಂತೆ; ತ್ರಿಧಾಮ=ತ್ರಿಧಾಮನ; ನಗರ=ಊರಿಗೆ; ಪ್ರಾಪ್ತೌ=ಬರುವಿಕೆಯಲ್ಲಿ; ಪ್ರತ್ಯೂಹೀಭವತಿ= ತಡೆಯೊಡ್ಡುತ್ತಿದೆ.

ಈ ಉಪ್ಪುನೀರಿನ ಸಮುದ್ರವು ಸಂಸಾರವೆಂಬ ಸಮುದ್ರದಂತೆ ಇದೆ. ಮೊದಲು ಉಪ್ಪುನೀರಿನ ಸಮುದ್ರ ಹೇಗಿದೆ ಎಂಬುದನ್ನು ನೋಡೋಣ. ಸಮುದ್ರದ ಮೇಲಿಂದ ಬಲವಾದ ಗಾಳಿಯು ಒಮ್ಮೊಮ್ಮೆ ಬೀಸುತ್ತದೆ. ಇದು ಬಿರುಗಾಳಿಯಾಗಿರುತ್ತದೆ. ಇದು ಜನರನ್ನು ಎಳೆದುಕೊಂಡು ಹೋಗುತ್ತದೆ. ದಿಕ್ಕಾಪಾಲರನ್ನಾಗಿ ಮಾಡುತ್ತದೆ. ಈ ಗಾಳಿಯಿಂದಾಗಿ ದಡದಲ್ಲಿರುವ ಮರಳುಗಳು ಹಾರುತ್ತವೆ. ಮರಳುಗಳ ದಟ್ಟಣೆಯಿಂದ ಸೂರ್ಯನ ಕಿರಣಗಳೂ ಭೂಮಿಗೆ ಬೀಳದೆ ಕತ್ತಲೆ ಆವರಿಸುತ್ತದೆ. ಕಣ್ಣು ಚೆನ್ನಾಗಿ ಇರುವವರಿಗೂ ಏನೂ ಕಾಣಿಸದಂತೆ ಆಗುತ್ತದೆ. ಈ ಗಾಳಿಯಿಂದ ನೀರೂ ಅಲ್ಲೋಲಕಲ್ಲೋಲವಾಗುತ್ತದೆ. ಇದರಿಂದ ಗಾಬರಿಗೊಂಡ ಮೀನು ಮೊದಲಾದ ಜಂತುಗಳು ಸ್ತಬ್ಧವಾಗುತ್ತದೆ. ಇದನ್ನೆಲ್ಲಾ ನೋಡಿದ ಈ ದಡದ ಜನರು ಸಮುದ್ರವನ್ನು

ದಾಟಿ ದ್ವಾರಕೆಗೆ ಹೋಗಲು ಅಸಮರ್ಥರಾಗುತ್ತಾರೆ. ಈ ರೀತಿ ಉಪ್ಪುನೀರಿನ ಸಮುದ್ರವು ಜನರಿಗೆ ಕೃಷ್ಣನ ಮನೆಯಿಂದ ದ್ವಾರಕೆಗೆ ಹೋಗಲು ವಿಘ್ನವನ್ನುಂಟುಮಾಡುತ್ತದೆ.

ಸಂಸಾರಸಮುದ್ರವೂ ಇದೇ ಕೆಲಸವನ್ನು ಮಾಡುತ್ತದೆ. ಸಮುದ್ರವು ಜಲಕ್ಕೆ ಆಶ್ರಯ. ಸಂಸಾರವು ಮೂರ್ಖರಿಗೂ ಆಶ್ರಯ. ಇವರು ಹಣಕ್ಕಾಗಿ ಎಷ್ಟು ದೂರ ಬೇಕಾದರೂ ವೇಗದಿಂದ ಹೋಗುತ್ತಾರೆ. ಅಲ್ಲಿ ತಮ್ಮ ಬೇಡಿಕೆಯನ್ನು ಇಟ್ಟು ರಜೋಗುಣವನ್ನು ಪ್ರದರ್ಶಿಸುತ್ತಾರೆ. ಅಕಸ್ಮಾತ್ ದಾನಿಯು ಹಣವನ್ನು ಕಡಿಮೆ ಕೊಟ್ಟರೆ ಅವನ ಮೇಲೆ ಸಿಟ್ಟಾಗುತ್ತಾರೆ. ಇದು ತಮೋಗುಣದ ಕೆಲಸ. ಸಮುದ್ರದ ಬಳಿಯ ಗಾಳಿಯು ರಜೋಗಳನ್ನು ಅಂದರೆ ಧೂಳುಗಳನ್ನು ಎಂಬಂತೆ ಈ ಜನರು ಆಸೆ ಎಂಬ ವೇಗವುಳ್ಳವರಾಗಿ ಬೇಡುವಿಕೆ ಎಂಬ ರಜೋಗುಣವನ್ನು ಪ್ರದರ್ಶಿಸುತ್ತಾರೆ. ಗಾಳಿಯ ಕತ್ತಲೆಯನ್ನು ಮಾಡುವಂತೆ ಇವರು ಕೋಪವನ್ನು ತೋರಿಸುತ್ತಾರೆ ಎಂಬಂಥ ಸ್ವಚ್ಛ ಕಣ್ಣಿದ್ದರೂ ಈ ಧೂಳಿನ ಗಾಳಿಯಿಂದಾಗಿ ಒಮ್ಮೆ ಜನ ಪೇಚಾಡುತ್ತಾರೆ. ಸಂಸಾರವೂ ಕೂಡಾ ಎಂತಹ ಜ್ಞಾನಿಗಳನ್ನೂ ಒಮ್ಮೊಮ್ಮೆ ದಾರಿ ತಪ್ಪಿಸುತ್ತದೆ. ಇಂತಹ ಸಂಸಾರವು ಜನರನ್ನು ದೇವರ ಮನೆಗೆ ಅಂದರೆ ವೈಕುಂಠಕ್ಕೆ ಪ್ರವೇಶಕ್ಕೆ ತಡೆಯುವಂತೆ ಈ ಸಮುದ್ರವು ಜನರನ್ನು ದ್ವಾರಾವತಿಗೆ ಬರುವುದನ್ನು ತಡೆಯುವಲ್ಲಿ ಯಶಸ್ವಿಯಾಗಿದೆ.

**ಉತ್ತುಂಗೋರ್ಮಿಕರಾನುಷಕ್ತವಿಲಸಚ್ಚಕ್ರಾಂಕಶಂಖಃ ಸ್ಫುರ-**
**ದ್ರತ್ನೌಘಾವೃತಗಾತ್ರವಾಸ್ಯ ನಿಮಿಷಃ ಫೇನಾನುಲೇಪೋಜ್ವಲಃ ।**
**ಸ್ವಾಸಕ್ತೈರ್ಜಲಸಂಚಯೈರಪಿ ಮಹಾಪಾಪಾನಿ ನಿರ್ಮೂಲಯನ್**
**ವಾರ್ಧಿ ಕೃಷ್ಣ ಇವಾವತೀಹ ಪರಿತೋ ಯೋಗೀಂದ್ರಜಿಹ್ವೋತ್ಸವ ॥ ೫೧ ॥**

ಉತ್ತುಂಗ=ಎತ್ತರಗಳಾದ; ಊರ್ಮಿ=ತೆರೆಗಳೆಂಬ; ಕರ=ಕೈಗಳಲ್ಲಿ; ಅನುಷಕ್ತ= ಸಂಬದ್ಧವಾದ; ವಿಲಸತ್=ಶೋಭಿಸುವ; ಚಕ್ರ=ಚಕ್ರದ; ಅಂಕ=ಚಿಹ್ನೆಯು; ಶಂಖ= ಶಂಖವುಳ್ಳ; ಸ್ಫುರತ್=ಶೋಭಿಸುವ; ರತ್ನ=ರತ್ನಗಳು; ಓಘ=ಸಮೂಹದಿಂದ; ಆವೃತ= ಕೂಡಿದ; ಗಾತ್ರ=ಶರೀರದಲ್ಲಿ; ವಾಸಿ=ವಾಸಿಸುವ; ಅನಿಮಿಷ=ಮೀನುಗಳುಳ್ಳ, ದೇವತೆಗಳುಳ್ಳ; ಫೇನ=ನೊರೆಗಳೆಂಬ; ಅನುಲೇಪ=ಚಂದನದಿಂದ; ಉಜ್ವಲಃ=ಶೋಭಿಸುವ; ಸ್ವ=ತನ್ನಲ್ಲಿ; ಆಸಕ್ತೈಃ=ಆಸಕ್ತಗಳಾದ; ಜಲ=ನೀರುಗಳ; ಸಂಚಯೈಃ ಅಪಿ=ಸಮೂಹಗಳಿಂದಲೂ; ಮಹಾ=ಬಹಳ; ಪಾಪಾನಿ=ಪಾಪಗಳನ್ನು; ನಿರ್ಮೂಲಯನ್= ನಾಶ ಮಾಡುತ್ತಾ; ಯೋಗೀಂದ್ರ=ಹೊಗಳುವವರ; ಜಿಹ್ವಾ=ನಾಲಿಗೆಗೆ; ಉತ್ಸವಃ=ಉತ್ಸವದಂತಿರುವ; ವಾರ್ಧಿಃ=ಸಮುದ್ರವು; ಕೃಷ್ಣ ಇವ=ಕೃಷ್ಣನಂತೆ; ಇಹ=ಇಲ್ಲಿ; ಪರಿತಃ=ಸುತ್ತಲೂ; ಅವತಿ=ರಕ್ಷಿಸುತ್ತದೆ.

ಕೃಷ್ಣನಂತೆ ಸಮುದ್ರವೂ ದ್ವಾರಕೆಯನ್ನು ರಕ್ಷಿಸುತ್ತಿದೆ ಎಂದು ವಾದಿರಾಜರು ಈ

ಶ್ಲೋಕದಲ್ಲಿ ಹೇಳುತ್ತಾರೆ. ಮೊದಲು ಕೃಷ್ಣನನ್ನು ವರ್ಣಿಸುತ್ತಾರೆ– ಎತ್ತರವಾದ ಭುಜಗಳು ಕೃಷ್ಣನದ್ದು. ಅವುಗಳಲ್ಲಿ ಚಕ್ರಶಂಖಗಳು. ಮೈತುಂಬಾ ಆಭರಣಗಳು. ಈ ಮೈಯು ಎಲ್ಲಾ ದೇವತೆಗಳ ವಾಸಸ್ಥಾನ. ದೇವತೆಗಳು ದೇವರ ಒಂದೊಂದು ಭಾಗವನ್ನು ಆಶ್ರಯಿಸಿದ್ದಾರೆ. ದೇವರ ರೂಪಗಳಲ್ಲಿ ಭೇದವಿಲ್ಲ. ಆದ್ದರಿಂದ ಕೃಷ್ಣನ ದೇಹದಲ್ಲಿಯೂ ದೇವತೆಗಳಿದ್ದಾರೆ. ಕೃಷ್ಣನು ಮೈತುಂಬಾ ಚಂದನವನ್ನು ಹಚ್ಚಿಕೊಂಡಿದ್ದಾನೆ. ಈ ಚಂದನವು ಸಮುದ್ರದ ನೊರೆಯಂತೆ ಶುಭ್ರವಾಗಿದೆ. ಜನರ ಪಾಪವನ್ನು ಪರಿಹರಿಸುವ ಶಕ್ತಿ ಕೃಷ್ಣನಿಗೆ ಮಾತ್ರ ಇರುವುದಲ್ಲ. ಶಾಸ್ತ್ರದ ಅಧ್ಯಯನವನ್ನು ಮಾಡದೆ ಕೇವಲ ಕೃಷ್ಣನನ್ನು ಪ್ರೀತಿಸುವವರಿಗೂ ಈ ಶಕ್ತಿ ಇದೆ. ಇವರಿಗೆ ಈ ಶಕ್ತಿ ಬಂದದ್ದು ಕೃಷ್ಣನಿಂದಲೇ. ಇದು ಕೃಷ್ಣನ ಚಿತ್ರಣ. ಸಮುದ್ರವೂ ಇದೇ ರೀತಿ ಇದೆ. ಸಮುದ್ರದಲ್ಲಿ ಭಾರೀ ಗಾತ್ರದ ತೆರೆಗಳು ಏಳುತ್ತವೆ. ಇವುಗಳು ಸಮುದ್ರದ ಕೈಗಳಂತಿವೆ. ಕೈಗಳ ಕೆಲಸ ದಾನ ಆದಾನ. ನಾವು ಸಮುದ್ರದ ದಡದಲ್ಲಿ ಏನಾದರೂ ಹಾಕಿದರೆ ಅದನ್ನು ತೆರೆಗಳು ಸಮುದ್ರದ ಒಳಗೆ ಒಯ್ಯುತ್ತವೆ. ಒಳಗಿರುವ ಚಕ್ರಾಂಕಿತಗಳನ್ನೂ ಶಂಖಗಳನ್ನೂ ದಡಕ್ಕೆ ತಂದುಹಾಕುತ್ತವೆ. ದ್ವಾರಕೆಯಲ್ಲಿ ಗೋಮತೀ ಸಮುದ್ರ ಸಂಗಮ ಸ್ಥಳದಲ್ಲಿ ಚಕ್ರಾಂಕಿತವು ಸಿಗುತ್ತದೆ. ಸಮುದ್ರದಲ್ಲಿ ನಾನಾ ಬಗೆಯ ರತ್ನಗಳಿವೆ. ಆದ್ದರಿಂದ ಇದಕ್ಕೆ ರತ್ನಾಕರ ಎಂದು ಹೆಸರು. ಇಂತಹ ಸಮುದ್ರದಲ್ಲಿ ಮೀನೇ ಮೊದಲಾದ ಅನೇಕ ಜಂತುಗಳು ವಾಸಿಸುತ್ತವೆ. ದೇವತೆಗಳಂತೆ ಮೀನುಗಳಿಗೂ ಅನಿಮಿಷಗಳೆಂದು ಹೆಸರಿದೆ. ಕೃಷ್ಣನ ಮೈಯಲ್ಲಿ ನೊರೆಯಂತಿರುವ ಚಂದನ ಇದೆ. ಸಮುದ್ರದಲ್ಲಿ ನೊರೆಯೇ ಚಂದನ. ಸಮುದ್ರಸ್ನಾನದಿಂದ ಪಾಪಪರಿಹಾರವಾಗುತ್ತದೆ. ಇದರಿಂದ ಮಾತ್ರವಲ್ಲ, ಈ ಸಮುದ್ರಕ್ಕೆ ಸೇರುವ ಗಂಗಾದಿ ನದಿಗಳಿಗೂ ಕೃಷ್ಣನನ್ನು ಕೇವಲವಾಗಿ ಪ್ರೀತಿಸುವವರಿಗೆ ಇರುವಂತೆ ಶಕ್ತಿ ಇದೆ. ಕೃಷ್ಣನನ್ನು ಹೊಗಳುವುದೆಂದರೆ ಯೋಗಿಗಳ ನಾಲಿಗೆಗೆ ಎಲ್ಲಿಲ್ಲದ ಉತ್ಸಾಹ. ಯೋಗಿಗಳು ಬಾಯಿತುಂಬ ಕೃಷ್ಣನನ್ನು ಹೊಗಳುತ್ತಾರೆ. ಸಮುದ್ರ ಅಂದರೆ ವರುಣ. ಈತನು ನಾಲಿಗೆಗೆ ಅಭಿಮಾನಿ. ತಿನಿಸುಗಳ ರುಚಿಯನ್ನು ನಾಲಿಗೆಗೆ ಕೊಟ್ಟು ನಮ್ಮ ಜೀವನದಲ್ಲಿ ಶಕ್ತಿ ಉತ್ಸಾಹಗಳನ್ನು ಕೊಡುವವನು ವರುಣನು. ಇದಕ್ಕಾಗಿ ಎಲ್ಲರೂ ಆತನನ್ನು ತುಂಬಾ ಹೊಗಳಬೇಕು. ಈ ರೀತಿ ಕೃಷ್ಣನಿಗೂ ಸಮುದ್ರಕ್ಕೂ ಹೋಲಿಕೆ ಇದೆ.

**ಸಚ್ಚಕ್ರಾ ಕರಪುಷ್ಪರಮ್ಯಕಟಕಾ ಭೋಗೀಂದ್ರ ಭೋಗಾಸ್ಪದಾ**
**ನೇತ್ರಸ್ಥಾನಗತೇಂದ್ವಿನಾ ಕನಕಸದ್ವಪ್ರಾತಿಪೀತಾಂಬರಾ ।**
**ಭಾತಿ ಸ್ವೋದರವಾಸಿಹಂಸಗಮನಾ ಸೇಯಂ ಸುಧರ್ಮಾವಹಾ**
**ವಿಷ್ಣೋರಾಕೃತಿವತ್ಸಮುದ್ರಹೃದಯೇ ಲಕ್ಷ್ಮೀಧರಾಲಿಂಗಿತಾ ॥ ೫೨ ॥**

ಸತ್=ಸಜ್ಜನರ; ಚಕ್ರಾ=ಸಮೂಹವುಳ್ಳ; ಸತ್=ಒಳ್ಳೆಯ; ಚಕ್ರಾ=ಚಕ್ರವುಳ್ಳ; ಕರ= ತೆರಿಗೆಯಿಂದ; ಪುಷ್ಟ=ರಕ್ಷಿಸಲ್ಪಟ್ಟ; ರಮ್ಯ=ಚಂದದ; ಕಟಕಾ=ಸೈನ್ಯವುಳ್ಳ; ಕರ=ಕೈಯಿಂದ;

ಪುಷ್ಟ=ಬೆಳಗಿಸಲ್ಪಟ್ಟ; ರಮ್ಯ=ಚಂದದ; ಕಟಕಾ=ಬಳೆವುಳ್ಳ; ಭೋಗೀಂದ್ರ=ರಸಿಕಶ್ರೇಷ್ಠರಿಗೆ; ಭೋಗ=ಸುಖಕ್ಕೆ; ಆಸ್ಪದಾ=ಆಶ್ರಯವಾದ; ಭೋಗಿ=ಸರ್ಪಗಳಿಗೆ; ಇಂದ್ರ=ಒಡೆಯನ; ಭೋಗ=ದೇಹವೇ; ಆಸ್ಪದಾ=ಆಶ್ರಯವಾಗಿವುಳ್ಳ; ನೇತ್ರ=ಕಣ್ಣಿನ; ಸ್ಥಾನ=ಜಾಗದಲ್ಲಿ; ಗತ=ಇರುವ; ಇಂದು=ಚಂದ್ರನು; ಇನೌ=ಸೂರ್ಯನುಳ್ಳ; ಕನಕ=ಚಿನ್ನದ; ಸತ್=ಒಳ್ಳೆಯ; ವಪು=ಕೋಗಿಲೆಯಿಂದ; ಅತಿಪೀತ=ಚೆನ್ನಾಗಿ ಹಳದಿಯಾದ; ಅಂಬರಾ=ಆಕಾಶವುಳ್ಳ; ಕನಕ=ಚಿನ್ನದ; ಸತ್=ಒಳ್ಳೆಯ; ವಪು=ಕೋಟೆಯಂತೆ; ಅತಿಪೀತ=ಬಹಳ ಹಳದಿಯಾದ; ಅಂಬರಾ=ಬಟ್ಟೆವುಳ್ಳ; ಸ್ವ=ತನ್ನ; ಉದರ=ಮಧ್ಯದಲ್ಲಿ; ವಾಸಿ=ಇರುವ ಕಮಲದಲ್ಲಿರುವ; ಹಂಸ=ಹಂಸದಿಂದ; ಗಮನ=ನಡೆಗೆಯವನುಳ್ಳ; ಸುಧರ್ಮ=ಸುಧರ್ಮಸಭೆಯನ್ನು; ಆವಹಾ=ಹೊತ್ತಿರುವ; ಸುಧರ್ಮ=ಒಳ್ಳೆಯ ಧರ್ಮಗಳನ್ನು; ಆವಹಾ=ಧರಿಸಿರುವ; ಲಕ್ಷ್ಮೀಧರ=ರಮೆಯನ್ನು; ಧರಿಸಿದ ಕೃಷ್ಣನಿಂದ; ಆಲಿಂಗಿತಾ=ಆದೃತವಾದ; ಲಕ್ಷ್ಮೀ=ರಮೆಯು; ಧರಾ=ಭೂಮಿಯು ಇವರಿಂದ; ಆಲಿಂಗಿತಾ=ಆಶ್ರಯಿಸಲ್ಪಟ್ಟ; ಸಾ=ಆ; ಇಯಂ=ಈ ಪಟ್ಟಣವು; ವಿಷ್ಣೋಃ=ದೇವರ; ಆಕೃತಿವತ್=ಪ್ರತಿಮೆಯಂತೆ; ಸಮುದ್ರ=ಸಮುದ್ರದ; ಹೃದಯೇ=ಮಧ್ಯದಲ್ಲಿ; ಭಾತಿ=ಶೋಭಿಸುತ್ತಿದೆ.

ಈ ಶ್ಲೋಕದಲ್ಲಿ ದ್ವಾರಕೆಯನ್ನು ಕೃಷ್ಣನಿಗೆ ಹೋಲಿಸುತ್ತಾರೆ. ಅರ್ಥವ್ಯತ್ಯಾಸವಿದ್ದರೂ ಎರಡು ಕಡೆಗೂ ಶಬ್ದಸಾಮ್ಯ ಇದೆ. ಮೊದಲು ಈ ಶ್ಲೋಕದಲ್ಲಿರುವ ಶಬ್ದಗಳನ್ನು ದ್ವಾರಕೆಯ ಪರವಾಗಿ ನೋಡೋಣ. ಕೃಷ್ಣನ ಊರು ಈ ದ್ವಾರಕೆ. ಆದ್ದರಿಂದ ಇಲ್ಲಿ ಸಜ್ಜನರ ಗಡಣವೇ ತುಂಬಿದೆ. ಬಲಿಷ್ಠವಾದ ಸೈನ್ಯವಿದೆ. ಈ ಸೈನ್ಯದ ಪೋಷಣೆಗೆ ಬೊಕ್ಕಸದಿಂದ ಒಂದು ಪೈಸೆಯೂ ವ್ಯಯವಾಗುತ್ತಿಲ್ಲ. ಬದಲಾಗಿ ಹೊರಗಿನ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಆ ರಾಜರನ್ನು ಸೋಲಿಸಿ ಅಲ್ಲಿಂದ ತಂದ ಸಂಪತ್ತಿನಿಂದ ಸಲಹುತ್ತಿದ್ದರು. ಇಲ್ಲಿ ಯಾವ ಭೋಗಕ್ಕೂ ಕೊರತೆಯಿಲ್ಲ. ಎಷ್ಟೇ ದೊಡ್ಡ ರಸಿಕನಿರಲಿ. ಆತನಿಗೆ ಜೀರ್ಣಿಸಿಕೊಳ್ಳಲು ಸಾಧ್ಯವಾಗದಷ್ಟು ವಿಲಾಸಸಾಧನಗಳಿವೆ. ಗಗನಚುಂಬಿಯಾದ ಕಟ್ಟಡಗಳು. ಈ ಕಟ್ಟಡಗಳು ಎಷ್ಟು ಎತ್ತರವಾಗಿತ್ತೆಂದರೆ ಸೂರ್ಯಚಂದ್ರರು ಒಂದು ಕಿಟಕಿಯಿಂದ ಒಳಬಂದು ಪಶ್ಚಿಮದ ಕಿಟಕಿಯಿಂದ ಹೊರಹೋಗಿ ಸಮುದ್ರವನ್ನು ಸೇರುತ್ತಿದ್ದರು. ಕಣ್ಣುಗಳು ತಲೆಗಿಂತ ಸ್ವಲ್ಪ ಕೆಳಗಿರುವುದು ಸಹಜ. ಅದರಂತೆ ಈ ರವಿಶಶಿಗಳು ಕಟ್ಟಡಗಳ ಶಿಖರಭಾಗಕ್ಕಿಂತ ಸ್ವಲ್ಪ ಕೆಳಗಿರುವುದರಿಂದ ಈ ಮನೆಗಳ ಕಣ್ಣುಗಳಂತಿವೆ. ಈ ದ್ವಾರಕೆಯ ಸುತ್ತ ಇರುವ ಗೋಡೆಗಳಿಗೆ ಬಂಗಾರದ ಹೊದಿಕೆಗಳಿವೆ. ಅವುಗಳ ಹಳದಿಪ್ರಭೆಯು ಆಕಾಶದತ್ತ ಹರಡಿದೆ. ಇದರಿಂದಾಗಿ ಆಕಾಶವು ಹಳದಿಬಣ್ಣಕ್ಕೆ ತಿರುಗಿದೆ. ಈ ದ್ವಾರಕೆಯ ಒಳಗೆ ಬಹಳ ನಾರಿಯರು ಇದ್ದಾರೆ. ಇವರ ನಡಿಗೆಯು ಹಂಸದಂತೆ ಬಹಳ ನಾಜೂಕಾದದ್ದು. ಇಂದ್ರನು ತನ್ನ ಊರಿನಿಂದ ಕಳಿಸಿದ ಸುಧರ್ಮಾ ಸಭೆಯು ಇಲ್ಲಿದೆ. ಲಕ್ಷ್ಮೀಧರನು ಶ್ರೀಕೃಷ್ಣನು. ಅವನಿಂದ ಸದಾ ಆಶ್ರಯಿಸಲ್ಪಟ್ಟದ್ದು. ಇದೇ ಪದಗಳನ್ನು ಬಳಸಿ ರಾಜರು ಈ ಶ್ಲೋಕವನ್ನು ನಾರಾಯಣ ಪರವಾಗಿಯೂ

ಕೂಡಿಸುತ್ತಾರೆ. ನಾರಾಯಣನಿಗೆ ಚಕ್ರಧಾರಿತ್ವವು ಒಂದು ಧರ್ಮ. ಆತನ ಕೈಯಲ್ಲಿ ಯಾವಾಗಲೂ ಒಂದು ಒಳ್ಳೆಯ ಚಕ್ರಾಯುಧವು ಇದೆ. ಕರ ಶಬ್ದಕ್ಕೆ ಕೈ ಎಂದೂ ಕಟಕ ಶಬ್ದಕ್ಕೆ ಬಳೆ ಎಂದೂ ಅರ್ಥ ಇದೆ. ಇವೆರಡೂ ಉಪಲಕ್ಷಣಗಳು. ಸಮಗ್ರ ದೇಹ ಹಾಗೂ ಎಲ್ಲಾ ಆಭರಣಗಳನ್ನು ಇಟ್ಟುಕೊಳ್ಳಬೇಕು. ಆಭರಣಗಳಿಂದ ಈತನ ದೇಹಕ್ಕೆ ಶೋಭೆ ಅಲ್ಲ. ಈತನ ದೇಹದ ಕಾಂತಿಯಿಂದ ಆಭರಣಗಳು ಚೆನ್ನಾಗಿ ಹೊಳೆಯುತ್ತಿದ್ದವು. ದ್ವಾರಕೆಯಲ್ಲಿ ಸೂರ್ಯಚಂದ್ರರು ಕಣ್ಣುಗಳಂತೆ ಇದ್ದರು. ನಾರಾಯಣನ ದೇಹದಲ್ಲಿರುವ ಕಣ್ಣುಗಳಲ್ಲಿ ಸೂರ್ಯಚಂದ್ರರು ಇದ್ದಾರೆ. ನಾರಾಯಣನ ದೇಹದ ಒಂದೊಂದು ಭಾಗವನ್ನು ಒಬ್ಬೊಬ್ಬ ದೇವತೆ ಆಶ್ರಯಿಸಿದ್ದಾರೆ. ನಾರಾಯಣನು ಪೀತಾಂಬರಧಾರಿ. ದ್ವಾರಕೆಯನ್ನು ಬಂಗಾರದ ಗೋಡೆಯು ಆವರಿಸಿದಂತೆ ನಾರಾಯನನ್ನು ಪೀತಾಂಬರವು ಆವರಿಸಿದೆ. ಈತನ ಉದರದಲ್ಲಿ ಒಂದು ಕಮಲ ಇದೆ. ಅದು ನಾಭಿಯ ಮೂಲಕ ಹೊರಬಂದಿದೆ. ಅದರಲ್ಲಿ ಬ್ರಹ್ಮನು ಕಾಣಿಸಿದ್ದಾನೆ. ಈತನ ವಾಹನ ಹಂಸಪಕ್ಷಿಯು. ತಥಾ ಚ ಹಂಸಪಕ್ಷಿಯಿಂದ ಗಮನ ಮಾಡುವವನು ಈತನ ಉದರದಲ್ಲಿ ವಾಸಮಾಡಿ ಕೊಂಡಿದ್ದಾನೆ. ನಿತ್ಯನೈಮಿತ್ತಿಕ ಧರ್ಮಗಳೇ ಸುಧರ್ಮಗಳೆಂದರೆ, ಇವುಗಳನ್ನು ಸದಾ ಪಾಲಿಸುವವನು ನಾರಾಯಣನು. ಶ್ರೀ ಹಾಗೂ ಭೂ ಇವರು ನಾರಾಯಣನ ಪತ್ನಿಯರು. ಇವರು ಸದಾ ನಾರಾಯಣನನ್ನು ಆಲಿಂಗಿಸಿಕೊಂಡು ಇರುವವರು.

**ಯೇ ಪುರಾರಿರಿಪುಣಾನಯೇ ಪುರಾ ಸಂಗತಾಮ್ರನಯನಾಃ ಸ್ಮ ಸಂಗತಾಃ ।**
**ಕಾಂತಯಾ ಸಹ ವರಾಲಕಾಂತಯಾ ತೇಽಪಿ ರೇಚಕಭೃತೋತ್ರ ತೇಪಿರೇ ॥ ೫೩ ॥**

ಯೇ=ಯಾರು; ಪುರಾ=ಮೊದಲು; ಸಂಗ=ಸಂಪರ್ಕದಿಂದ; ತಾಮ್ರ=ಕೆಂಪಾದ; ನಯನಾಃ=ಕಣ್ಣುಳ್ಳವರಾಗಿ; ಪುರಾರಿ=ರುದ್ರನ; ರಿಪು=ಶತ್ರುವಿನಿಂದ; ಅನಯೇ=ಅನ್ಯಾಯ ದಲ್ಲಿ; ಸಂಗತಾಃ=ಆಸಕ್ತರೋ; ತೇऽಪಿ=ಅವರೂ ಕೂಡಾ; ರೇಚಕ=ರೇಚಕವನ್ನು; ಭೃತಃ=ಧರಿಸಿ; ವರ=ಉತ್ತಮವಾದ; ಅಲಕ=ತಲೆಕೂದಲುಗಳ; ಅಂತಯಾ=ಕೊನೆವುಳ್ಳ; ಕಾಂತಯಾ=ಪತ್ನಿಯಿಂದ; ಸಹ=ಕೂಡಿಕೊಂಡು; ಅತ್ರ=ಇಲ್ಲಿ; ತೇಪಿರೇ=ಜಪಿಸಿದರು.

ದ್ವಾರಕೆಯಲ್ಲಿ ಕೆಲವರು ನವವಿಧಭಕ್ತಿಯಿಂದ ಪತ್ನಿಯರ ಜೊತೆ ರಮಿಸುತ್ತಿದ್ದರು ಎಂದು ರಾಜರು ಹಿಂದಿನ ಶ್ಲೋಕಗಳಲ್ಲಿ ಹೇಳಿದ್ದರು. ಸದಾ ಇದೇ ಕೆಲಸವನ್ನು ಮಾಡುತ್ತಿಲ್ಲ. ಇಂತಹ ಜನ ಅಲ್ಲಿ ಇರಲೇ ಇಲ್ಲ. ಕೆಲವೊಮ್ಮೆ ಜನ್ಮಾಂತರದ ಪ್ರಾರಬ್ಧವಶಾತ್ ಮದವೇರಿದವರಾಗುತ್ತಾರೆ. ಇದರಿಂದಾಗಿ ಕಣ್ಣು ಕೆಂಪಾಗುತ್ತದೆ. ಕಾಮನ ಬಾಣಕ್ಕೆ ತುತ್ತಾಗುತ್ತಾರೆ. ಕೆಳಮಟ್ಟದ ಕೆಲಸಕ್ಕೆ ತೊಡಗುತ್ತಾರೆ. ಆ ಕರ್ಮ ಮುಗಿಯಿತೆಂದರೆ ಈ ಕೆಟ್ಟ ಕೆಲಸವೂ ಮುಗಿಯಿತು ಎಂದರ್ಥ. ಅನಂತರ ಪ್ರಾಣಾಯಾಮಪೂರ್ವಕ ದೇವರ ಧ್ಯಾನದಲ್ಲಿ ತೊಡಗುತ್ತಾರೆ. ಇದು ಅಭಾವವೈರಾಗ್ಯವಲ್ಲ. ಪಕ್ಕದಲ್ಲಿ ಪತ್ನಿ ಇರುತ್ತಾಳೆ. ಆಕೆ

ಮುದುಕಿಯೂ ಅಲ್ಲ. ನೀಳವಾದ ಕಪ್ಪಾದ ತಲೆಕೂದಲುಗಳಿಂದ ಬಹಳ ಚಂದ ಕಾಣುವವಳೇ.

**<u>ಸಂದೇಶ</u> :ಪ್ರಾರಭ್ಧಕರ್ಮವನ್ನು ನಾವು ಅನುಭವಿಸಲೇಬೇಕು ಎಂದು ದೇವರ ಸಂಕಲ್ಪ.**

**ಚರಂತಿ ತಸ್ಯಾಂ ಬಹುಮಾನಯುಕ್ತಾ ಬುಧಾ ವಿದಗ್ಧಾ ಬಹುಮಾನಯುಕ್ತಾಃ ।**
**ಗಜಾಶ್ಚ ಮತ್ತಾ ಬಹುಶಸ್ತರಂಗಾಃ ಬಹಿಶ್ಚ ಸಿಂಧೋರ್ಬಹುಶಸ್ತರಂಗಾಃ ॥ ೫೪ ॥**

ತಸ್ಯಾಂ=ಅಲ್ಲಿ; ಬಹು=ಬಹಳ; ಮಾನ=ಪ್ರಮಾಣಗಳಿಂದ; ಯುಕ್ತಾಃ=ಕೂಡಿದ; ಬುಧಾಃ=ಜ್ಞಾನಿಗಳು; ಬಹು=ಬಹಳ; ಮಾನ=ಅಭಿಮಾನದಿಂದ; ಯುಕ್ತಾಃ=ಕೂಡಿದವರಾಗಿ; ಚರಂತಿ=ಸಂಚರಿಸುತ್ತಾರೆ; ವಿದಗ್ಧಾಃ=ವಿಲಾಸಿಗಳು; ಗಜಾಃ ಚ=ಆನೆಗಳೂ; ಬಹು=ಬಹಳ; ಶಸ್ತ=ಯೋಗ್ಯವಾದ; ರಂಗಾಃ=ರಂಜನದ್ರವ್ಯವುಳ್ಳವರಾಗಿ; ಬಹಿಃ ಚ=ದ್ವಾರಕೆಯ ಹೊರಗಾದರೂ; ಸಿಂಧೋಃ=ಸಮುದ್ರದ; ಬಹುಶಃ=ಬಹಳ; ತರಂಗಾಃ=ತೆರೆಗಳು; ಚರಂತಿ=ಚಲಿಸುತ್ತಿವೆ.

ದ್ವಾರಕೆಯಲ್ಲಿ ಇರುವ ಜನರಿಗೆ ತಿಳಿಯಾದ ತಿಳುವಳಿಕೆ ಇತ್ತು. ಉತ್ತಮ ವಿದ್ವಾಂಸರಾಗಿದ್ದರು. ದೇವರ ಬಗ್ಗೆಯೇ ಆಗಲಿ ತಾವು ತಿಳಿದ ವಿಷಯದಲ್ಲಿ ನಿರವಕಾಶ ಪ್ರಮಾಣವನ್ನು ಒದಗಿಸುತ್ತಿದ್ದರು. ದಾಖಲೆ ಸಹಿತವಾಗಿ ವಿಷಯವನ್ನು ಮಂಡಿಸಿ ಜನರಿಗೆ ಮನವರಿಕೆ ಮಾಡುತ್ತಿದ್ದರು. ತಾವು ತಲೆ ಎತ್ತಿ ಬಹಳ ಅಭಿಮಾನದಿಂದ ತಿರುಗಾಡುತ್ತಿದ್ದರು. ವಿಲಾಸಿಗಳೂ ತಿರುಗಾಡುತ್ತಿದ್ದರು. ಬೆಟ್ಟದಲ್ಲಿ ಬೆಳೆಯುವ ಒಂದು ರೀತಿಯ ಕೆಂಪುಬಣ್ಣದ ಧಾತು ವಿಶೇಷ. ಅದನ್ನು ಬಳಿದುಕೊಳ್ಳುತ್ತಿದ್ದರು. ವಿಲಾಸಿಗಳೆಂದಮೇಲೆ ತಲೆಗೆ ಸ್ವಲ್ಪ ಪಿತ್ತ ಏರಿರುತ್ತದೆ. ಆಗ ನಡೆದಾಡುವ ಠೀವಿ ಬೇರೆಯೇ ಇರುತ್ತದೆ. ಆನೆಗಳ ಸಂಚಾರವೂ ಕಮ್ಮಿ ಇರಲಿಲ್ಲ. ಇದನ್ನೆಲ್ಲಾ ನೋಡಿ ಸ್ವಲ್ಪ ಬೇಸರದಂತೆ ಆಗಿ ದ್ವಾರಕೆಯಿಂದ ಹೊರಬಂದರೆ ಹೊರಗೆ ಸಮುದ್ರದ ಅಲೆಗಳ ನಿರಂತರ ಸಂಚಾರ. ಈ ರೀತಿ ಎಲ್ಲಾ ಕಡೆಯೂ ಚಟುವಟಿಕೆಯೇ ತೋರುತ್ತಿತ್ತು. ಎಲ್ಲಿಯೂ ಜಾಡ್ಯಕ್ಕೆ ಆಸ್ಪದವೇ ಇರಲಿಲ್ಲ.

**ಅಂಗನಾಲಮಲಕಾವಲಿಭೃಂಗಂ ಮಂದಹಾಸಮಧುಮನ್ಮಥಬಾಣಂ ।**
**ಅಂಗನಾಲಮಮಲಂ ಮುಖಪದ್ಮಂ ಬಿಭ್ರತೀ ವಶಯಿತುಂ ಜಗದಸ್ಯಾಮ್ ॥ ೫೫ ॥**

ಅಸ್ಯಾಂ=ಇಲ್ಲಿ; ಅಂಗ=ದೇಹವೆಂಬ; ನಾಲಂ=ದಂಟುಳ್ಳ; ಅಲಕಾ=ತಲೆಕೂದಲುಗಳ; ಆವಲಿ=ಸಮೂಹವೆಂಬ; ಭೃಂಗಂ=ಭ್ರಮರವುಳ್ಳ; ಮಂದಹಾಸ=ನಗುವೆಂಬ; ಮಧು= ಮಕರಂದವುಳ್ಳ; ಮನ್ಮಥ=ಕಾಮನ; ಬಾಣಂ=ಬಾಣವಾದ; ಅಮಲಂ=ನಿರ್ಮಲವಾದ; ಮುಖಪದ್ಮಂ=ಮುಖಕಮಲವನ್ನು; ಬಿಭ್ರತೀ=ಧರಿಸಿರುವ; ಅಂಗನಾ=ನಾರಿಯು; ಜಗತ್=ಜಗತ್ತನ್ನು; ವಶಯಿತುಂ=ವಶೀಕರಿಸಲು; ಅಲಂ=ಸಮರ್ಥಳು.

'ನ ಹಿ ದೃಷ್ಟಾಂತೇ ಸರ್ವಸಾಮ್ಯಂ' ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ನೂರಕ್ಕೆ ನೂರು ಹೋಲಿಕೆ ಬೇಕಾಗಿಲ್ಲ ಎಂಬುದು ಹಿರಿಯರ ಮಾತು. ಉದಾ: ಮುಖವನ್ನು ಕಮಲದಂತೆ ಇದೆ ಎಂದು ಹೇಳುವಾಗ ದಂಟು ಎಲ್ಲಿದೆ ಎಂದು ಕೇಳಬಾರದು. ಆದರೆ ಈ ನಿಯಮವು ದ್ವಾರಕೆಗೆ ಲಗಾವ್ ಆಗುವುದಿಲ್ಲ. ಇಲ್ಲಿಯ ನಾರಿಯರ ಮುಖಕ್ಕೆ ಕಮಲದ ಹೋಲಿಕೆ ಕೊಡಬಹುದು. ದಂಟು ಎಲ್ಲಿ? ಎಂಬ ಪ್ರಶ್ನೆಗೆ ಅವರ ನೀಳವಾದ ದೇಹವು ಎಂದು ಉತ್ತರ. ಕಮಲಗಳ ಮೇಲೆ ದುಂಬಿಗಳು ಹಾರುತ್ತಿರುತ್ತವೆ. ಇವರ ಮುಖದ ಮೇಲ್ಭಾಗದಲ್ಲಿ ಮುಂಗುರುಳುಗಳು ಬಹಳ ಇವೆ. ಗಾಳಿಗೆ ಅವುಗಳು ಅತ್ತಿತ್ತ ಹಾರುವಾಗ ದುಂಬಿಗಳಂತೆ ಭಾಸವಾಗುತ್ತಿತ್ತು. ಮುಗುಳ್ನಗು ಮಕರಂದದ ಸ್ಥಾನದಲ್ಲಿದೆ. ಮಕರಂದದ ಆಸ್ವಾದನೆಯಿಂದ ಉತ್ಸಾಹ ಚಿಮ್ಮುವಂತೆ ನಗುವೂ ಕೂಡಾ ದ್ರಷ್ಟೃಗಳಿಗೆ ಆನಂದದಾಯಕ. ಕಾಮನ ಐದು ಬಾಣಗಳಲ್ಲಿ ಕಮಲವೂ ಒಂದು. ಕಮಲದ ದರ್ಶನದಿಂದ ಮನವು ವ್ಯಗ್ರವಾಗುವಂತೆ ಇವರ ಮುಖಕಮಲವೂ ಹಾಗೆಯೇ ವ್ಯಗ್ರತೆಯನ್ನು ಕೊಡುತ್ತದೆ. ಈ ರೀತಿ ಎಲ್ಲಾ ವಿಧದಿಂದಲೂ ಕಮಲಕ್ಕೆ ಹೋಲುವ ಸ್ವಚ್ಛವಾದ ಈ ಮುಖಕಮಲದಿಂದ ಈ ನಾರಿಯರು ಯಾರನ್ನು ಬೇಕಾದರೂ ತಮ್ಮ ಹಿಡಿತಕ್ಕೆ ತಂದಾರು. ದ್ವಾರಕೆಯಲ್ಲಿ ಇರುವ ನಾರಿಯರು ಬಹಳ ಚಂದ ಎಂದು ಅಭಿಪ್ರಾಯ.

**ನ ಮುನಯೋಽನುಯಯುರ್ಮನಸಾ ಚ ಯಂ**
**ತಮಪಿ ಲಬ್ಧುಂ ಇಮಾಮಿ ಸಸಾ ಚಯಮ್ ।**
**ದಧದುಪೈತಿ ಜನಃ ಸಹಜಾಯಯಾ**
**ವಿಘಟಿತಾ ಪ್ರಕೃತಿಃ ಸಹ ಜಾಯಯಾ** ॥ ೫೬ ॥

ಮುನಯಃ ಅಪಿ=ಋಷಿಗಳೂ ಕೂಡಾ; ಯಂ=ಯಾರನ್ನು; ಮನಸಾ ಚ=ಮನಸ್ಸಿನಿಂದಲೂ; ನ ಅನುಯಯುಃ=ಅನುಸರಿಸಲಿಲ್ಲವೋ; ತಂ=ಅವನನ್ನು; ಲಬ್ಧುಂ=ಹೊಂದಲು; ಜನಃ=ಜನರು; ಜಾಯಯಾ=ಪತ್ನಿಯಿಂದ; ಸಹ=ಕೂಡಿಕೊಂಡು; ಅನಸಾ=ಬಂಡಿಯಿಂದ; ಚಯಂ=ಗುಂಪನ್ನು; ದಧತ್=ಹೊತ್ತುಕೊಂಡು; ಯಯಾ=ಯಾವುದರಿಂದ; ಸಹಜಾ=ಸ್ವಾಭಾವಿಕವಾದ; ಪ್ರಕೃತಿಃ=ಪ್ರಕೃತಿಯು; ವಿಘಟಿತಾ=ನಾಶಮಾಡಲ್ಪಟ್ಟಿತೋ; ಇಮಾಂ=ಇದನ್ನು; ಉಪೈತಿ=ಹೊಂದಿದರು.

ಕೃಷ್ಣನನ್ನು ನೋಡಬೇಕೆಂದು ಜನರಿಗೆ ಬಹಳ ಆಸೆ ಆಗುತ್ತಿತ್ತು. ಹಾಗೆಯೇ ಸ್ವಲ್ಪ ಸಮಯ ಅಲ್ಲೇ ಇರಬೇಕೆಂದು ಕೂಡಾ. ಅದಕ್ಕಾಗಿ ಒಂದು ಬಂಡಿಯನ್ನು ಸಿದ್ಧಮಾಡುತ್ತಿದ್ದರು. ಅದರಲ್ಲಿ ಪತ್ನೀಪುತ್ರಾದಿಯಾಗಿ ಅಗತ್ಯ ವಸ್ತುಗಳನ್ನು ತುಂಬಿಸುತ್ತಿದ್ದರು. ಒಬ್ಬೊಬ್ಬರೇ ಹೊರಡಲು ದಾರಿಯಲ್ಲಿ ಕಳ್ಳಕಾಕರ ಭಯ. ಇದರ ಪರಿಹಾರಕ್ಕಾಗಿ ಗುಂಪಾಗಿ ಹೋಗುತ್ತಿದ್ದರು. ಕೃಷ್ಣ ದರ್ಶನ ಅಷ್ಟು ಸುಲಭದ ಮಾತಲ್ಲ. ಸಾಮಾನ್ಯವಾಗಿ ಒಂದು ಮಾತಿದೆ. ವೈದಿಕರಿಗೆ ಎಲ್ಲಿಯೂ ಅಡೆತಡೆಗಳಿಲ್ಲ ಎಂದು. ಆದ್ದರಿಂದ ಋಷಿ

ಮುನಿಗಳು ಯಾವ ರೀತಿಯ ತಡೆಯೂ ಇಲ್ಲದೆ ಕಾಲ್ನಡಿಗೆಯಿಂದಲೇ ದೇವರನ್ನು ಕಾಣಲು ದ್ವಾರಕೆಗೆ ಹೋಗುತ್ತಾರೆ ಎಂಬ ಭಾವನೆ ಸಹಜವಾಗಿ ಬರುತ್ತದೆ. ಆದರೆ ಹೀಗೆ ಆಗಬೇಕಾದರೆ ಕೃಷ್ಣನ ಚಿತ್ತಕ್ಕೆ ಬಂದಿರಬೇಕು. ಇಲ್ಲದಿದ್ದರೆ ಇದೇ ಮುನಿಗಳು ಧ್ಯಾನಕ್ಕೆ ಕೂತಾಗಲೂ ತೋರದೇ ಇರುತ್ತಾನೆ. ಎರಡು ರೀತಿಯಾದ ಮಾಯೆ ಇರುತ್ತದೆ. ಒಂದು ಜೀವನಿಗೆ ಆಚ್ಛಾದಕವಾದದ್ದು. ಇದು ಜೀವನಿಗೆ ಆತನ ಪರಿಚಯ ಆಗದಂತೆ ಮಾಡುತ್ತದೆ. ಇನ್ನೊಂದು ಪರಮಾಚ್ಛಾದಕ. ಇದು ಜೀವನಿಗೆ ದೇವರ ಪರಿಚಯ ಆಗದಂತೆ ಮಾಡುತ್ತದೆ. ಇವೆರಡೂ ಅನಾದಿಕಾಲದಿಂದ ಜೀವನ ಜೊತೆಗಿದೆ. ಈ ದ್ವಾರಕೆಯು ಎರಡನೆಯ ಮಾಯೆಯನ್ನು ತೊಲಗಿಸುತ್ತದೆ. ಜನರಿಗೆ ಕೃಷ್ಣದರ್ಶನಕ್ಕೆ ಅನುವುಮಾಡಿಕೊಡುತ್ತದೆ.

**ಪರಮಾಪ ರಮಾ ಯಸ್ಯಾಂ ಆಶ್ರಮಂ ಮಾಶ್ರಮಂ ದಿವಿ ।**
**ನಿವಸನ್ನಿವ ಸಂವೇತ್ತಿ ಸರ್ವದಾ ಸರ್ವದಾನತಃ ॥ ೫೭ ॥**

ಯಸ್ಯಾಂ=ಎಲ್ಲಿ; ರಮಾ=ಲಕ್ಷ್ಮಿಯು; ಪರಂ=ಉತ್ತಮವಾದ; ಆಶ್ರಮಂ=ಜಾಗವನ್ನು; ಆಪ=ಹೊಂದಿದಳು; ಯಸ್ಯಾಂ=ಎಲ್ಲಿ; ನಿವಸನ್=ವಾಸಿಸುವವನು; ಸರ್ವದಾ= ಯಾವಾಗಲೂ; ಸರ್ವ=ಎಲ್ಲಾ ರೀತಿಯ; ದಾನತಃ=ದಾನದಿಂದ; ದಿವಿ ಇವ=ಸ್ವರ್ಗದಂತೆ; ಶ್ರಮಂ=ಆಯಾಸವನ್ನು; ಮಾ ಸಂವೇತ್ತಿ=ಹೊಂದುವುದಿಲ್ಲ.

ಕೈಕಾಲು ಕಳಕೊಂಡ ವ್ಯಕ್ತಿಯು ಒಂದೇ ಕಡೆ ಇರುತ್ತಾನೆ. ಹಾಗೆಯೇ ಲಕ್ಷ್ಮಿಯೂ ಈ ದ್ವಾರಕೆಯಲ್ಲಿಯೇ ಚೆನ್ನಾಗಿ ನೆಲೆಸಿದ್ದಾಳೆ. ಅತ್ತಿತ್ತ ಅಗಲದೆ ಭಗವಂತನ ಮನೆಯಲ್ಲಿ ಇದ್ದಾಳೆ. ಇಲ್ಲಿ ಎಲ್ಲರೂ ಯಾವಾಗಲೂ ಏನಾದರೊಂದನ್ನು ದಾನ ಮಾಡುವವರೇ. ಆದ್ದರಿಂದ ಇಲ್ಲಿಯ ಜನ ಸ್ವರ್ಗದವರಂತೆ ಸದಾ ಶ್ರೀಮಂತಿಕೆಯಿಂದ ಸುಖಿಗಳಾಗಿಯೇ ಇದ್ದಾರೆ.

**ನಿವಾರಯಂತೀಹ ಭಟಾ ಯಥೇಶೋ**
**ನವೀನಮಾರ್ಗೇ ವಿಶತಃ ಕೃತಾಂತೇ ।**
**ನ ಚೇತ್ ಕ್ಷಿಪಂತೀಹ ವೃಕಾ ಇವಾರ್ತಾ**
**ನವೀನಮಾರ್ಗೇ ವಿಶತಃ ಕೃತಾಂತೇ ॥ ೫೮ ॥**

ಇಹ=ಇಲ್ಲಿ; ಭಟಾಃ=ಸೈನಿಕರು; ನವೀನ=ಹೊಸ; ಮಾರ್ಗೇ=ದಾರಿಯಲ್ಲಿ; ವಿಶತಃ= ಪ್ರವೇಶಿಸುವವರನ್ನು; ಕೃತ=ಕೃತಯುಗದ; ಅಂತೇ=ಕೊನೆಯಲ್ಲಿ; ಈಶಃ ಯಥಾ= ರುದ್ರನಂತೆ; ನಿವಾರಯಂತಿ=ತಡೆಯುತ್ತಾರೆ; ನ ಚೇತ್=ಇಲ್ಲದಿದ್ದರೆ; ಅಮಾರ್ಗೇ= ಬೇರೆ ದಾರಿಯಲ್ಲಿ; ಆಶತಃ=ಪ್ರವೇಶಿಸುವ; ಆರ್ತಾನ್=ದುಃಖಗೊಂಡ; ಅವೀನ್=ಕುರಿಗಳನ್ನು; ವೃಕಾ ಇವ=ತೋಳಗಳಂತೆ; ಕೃತಾಂತೇ=ಯಮನಲ್ಲಿ; ಕ್ಷಿಪಂತಿ=ಬಿಸಾಡುತ್ತಾರೆ.

ಸಾತ್ವಿಕರ ಧರ್ಮಾಚರಣೆ, ಇವರಿಗೆ ತೊಂದರೆ ಆದಾಗ ದೇವರು ಮಾಡುವ ರಕ್ಷಣೆ, ದೇವರ ಬಲ ಇದನ್ನೆಲ್ಲಾ ಅಸುರರು ನೋಡಿದರು. ತಾವು ದೇವರಿಂದ ಬಹಳ ಹೊಡೆತವನ್ನು ತಿಂದಿದ್ದಾರೆ ಕೂಡಾ. ಈ ಹೊಡೆತಗಳಿಂದ ತಪ್ಪಿಸಿಕೊಂಡು ಚೆನ್ನಾಗಿ ಬದುಕಲು ದೈತ್ಯರೂ ಕೂಡಾ ಸಾತ್ವಿಕ ಮಾರ್ಗವನ್ನು ಅನುಸರಿಸಲು ತೊಡಗಿದರು. ಇದು ಇವರಿಗೆ ಹೊಸ ಮಾರ್ಗ. ಅಯೋಗ್ಯವೂ ಕೂಡ. ಈ ಮಾರ್ಗದಿಂದ ಇವರನ್ನು ತಪ್ಪಿಸುವ ಕೆಲಸವನ್ನು ದೇವರು ರುದ್ರದೇವರಿಗೆ ವಹಿಸಿದರು. ರುದ್ರದೇವರು ಮೋಹಕವಾದ ಪಾಶುಪತಾದಿ ಗ್ರಂಥಗಳನ್ನು ರಚಿಸಿದರು. ದೈತ್ಯರಿಗೆ ಉಪದೇಶಿಸಿದರು. ಸಾತ್ವಿಕರ ಮಾರ್ಗದಲ್ಲಿ ನಡಿಗೆಯನ್ನು ತಡೆದರು. ಆದರೂ ಬಲಾತ್ಕಾರವಾಗಿ ಮುಂದುವರಿದರೆ ಅವರನ್ನು ರುದ್ರದೇವರು ಸಂಹರಿಸಿ ಯಮಲೋಕಕ್ಕೆ ಅಟ್ಟಿದರು. ಇದಕ್ಕೆ ಒಂದು ಉದಾಹರಣೆಯನ್ನು ಈ ರೀತಿ ಹೇಳಬಹುದು: ಒಮ್ಮೊಮ್ಮೆ ಕುರಿಗಳು ದಾರಿತಪ್ಪಿ ದಟ್ಟವಾದ ಕಾಡನ್ನು ಸೇರುತ್ತವೆ. ತನ್ನ ಗುಂಪಿನಿಂದ ದೂರವಾದ್ದರಿಂದ ಬಹಳ ಅರಚುತ್ತದೆ. ಇದನ್ನು ಕೇಳಿಸಿಕೊಂಡ ತೋಳಗಳು ಅವುಗಳನ್ನು ಅಟ್ಟಿಸಿ ಸಂಹಾರ ಮಾಡುವಂತೆ.

**ತನೋತಿ ಸಾ ಕೋಪಿನಿ ಶಾಂತಭಾವಂ**
**ಮನಸ್ಸು ಯಃ ಕೋಪಿ ನಿಶಾಂತಭಾವಮ್ ।**
**ಖಗಾಶ್ಚ ಯಸ್ಯಾಂ ಕಲಶಾಲಿಕಂಠಾ**
**ಗೃಹಾಶ್ಚ ಭಾಸ್ವತ್‌ಕಲಶಾಲಿಕಂಠಾಃ** ॥ ೫೯ ॥

ಸಾ=ಅದು: ಕೋಪಿನಿ=ಕೋಪಿಸುವವನಲ್ಲಿ: ಶಾಂತಭಾವಂ=ಶಾಂತಿಯನ್ನು: ತನೋತಿ=ಉಂಟುಮಾಡುತ್ತದೆ: ಯಃ ಕಃ ಅಪಿ=ಆತನು ಯಾರೇ ಆಗಲಿ: ಮನಸ್ಸು=ಮನಸ್ಸುಗಳಲ್ಲಿ: ನಿಶಾಂತ=ಬೆಳಗಿನ: ಭಾವಂ=ಸ್ವಭಾವವನ್ನು: ತನೋತಿ=ಉಂಟುಮಾಡುತ್ತದೆ: ಯಸ್ಯಾಂ=ಎಲ್ಲಿ: ಕಲ=ಚಂದದ ಧ್ವನಿಗಳಿಂದ: ಶಾಲಿ=ಶೋಭಿಸುವ: ಕಂಠಾಃ=ಕುತ್ತಿಗೆವುಳ್ಳ: ಖಗಾಃ=ಪಕ್ಷಿಗಳು: ಭಾಸ್ವತ್=ಶೋಭಿಸುವ: ಕಲಶ=ಕಲಶಗಳ: ಆಲಿ=ಸಮೂಹವುಳ್ಳ: ಕಂಠಾಃ=ಪ್ರದೇಶವುಳ್ಳ: ಗೃಹಾಃ ಚ=ಮನೆಗಳೂ: ಸಂತಿ=ಇವೆ.

ಜನ್ಮಾಂತರದ ಪ್ರಾರಬ್ಧವಶಾತ್ ಈ ದ್ವಾರಕೆಯಲ್ಲಿ ಇರುವವರಿಗೂ ಒಮ್ಮೊಮ್ಮೆ ಮನಸ್ಸು ವ್ಯಗ್ರವಾಗುತ್ತದೆ. ಆಗ ಅವರು ಒಮ್ಮೆ ದ್ವಾರಕೆಗೆ ಒಂದು ಪ್ರದಕ್ಷಿಣೆ ಬರುತ್ತಾರೆ. ಅಥವಾ ಇಂತಹ ವ್ಯಕ್ತಿಗಳು ಹೊರಗಿನಿಂದ ಇಲ್ಲಿಗೆ ಬರುತ್ತಾರೆ. ಆಗ ಅವರ ಮನಸ್ಸು ಶಾಂತವಾಗುತ್ತದೆ. ಇಲ್ಲಿ ವರ್ಣಗಳು ಮಾತ್ರ ಅಲ್ಲ, ವರ್ಣ ಬಾಹಿರರಾದ ಚಂಡಾಲರೂ ಇದ್ದಾರೆ. ಆದರೂ ಹರಿಭಕ್ತರು. ಆದ್ದರಿಂದ ಅಶಾಂತರ ಮನಕ್ಕೆ ಮಾತುಗಳ ಮೂಲಕ ಶಾಂತಿಯನ್ನು ಒದಗಿಸುತ್ತಾರೆ. ಈ ದ್ವಾರಕೆಯಲ್ಲಿ ಎಲ್ಲಿ ನೋಡಿದರಲ್ಲಿ ಗಿಳಿಗಳು ಕೋಗಿಲೆಗಳು. ಅವುಗಳು ಬಹಳ ಇಂಪಾಗಿ ಕೂಗುತ್ತಲೆ ಇರುತ್ತವೆ. ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಸಾಧ್ಯವಾಗದಿದ್ದರೂ ಕೇಳಲು ಬಹು ಇಂಪಾಗುತ್ತಿತ್ತು. ಎಲ್ಲಾ

ಮನೆಗಳಲ್ಲಿಯೂ ಮಾಡಿನ ಕೆಳಗಡೆ ಉಪ್ಪರಿಗೆಯಲ್ಲಿ ಕಡೆಕಟ್ಟು ಇರುತ್ತಿತ್ತು. ಅಲ್ಲಿ ಸುತ್ತಲೂ ದಂಡೆ. ಅದರಲ್ಲಿ ಪೂರ್ಣಕುಂಭಗಳು ಅಲಂಕಾರಕ್ಕಾಗಿ ಇರುತ್ತಿತ್ತು.

**ಭಿತ್ತಿಸ್ಥರತ್ನಫಲಿತಪ್ರತಿರೂಪಚಿತ್ರಚಿತ್ರಾಃ**
**ಸುಶೋಭಿ ನವರತ್ನರುಚಾದಧಾನಾಃ ।**
**ರಂಗಾನುಷಂಗರಮಣೀಯಮಿವ ಪ್ರದೇಶಂ**
**ಯಸ್ಯಾಂ ವಿಭಾಂತಿ ಮುರಜಿಲ್ಲಲನಾನಿವಾಸಾಃ ॥ ೬೦ ॥**

ಯಸ್ಯಾಂ=ಎಲ್ಲಿ; ಭಿತ್ತಿ=ಗೋಡೆಗಳಲ್ಲಿ; ಸ್ಥ=ಇರುವ; ರತ್ನ=ರತ್ನಗಳಲ್ಲಿ; ಫಲಿತ=ಶೋಭಿಸುವ; ಪ್ರತಿರೂಪ=ಪ್ರತಿಬಿಂಬಗಳೆಂಬ; ಚಿತ್ರ=ಚಿತ್ರಗಳಿಂದ; ಚಿತ್ರಾಃ=ವಿಚಿತ್ರಗಳಾದ; ಮುರಜಿತ್=ಮುರನನ್ನು ಗೆದ್ದವನ; ಲಲನಾ=ಪತ್ನಿಯರ; ನಿವಾಸಾಃ=ಮನೆಗಳು; ಸುಶೋಭಿ=ಚೆನ್ನಾಗಿ ಶೋಭಿಸುವ; ನವರತ್ನ=ನವರತ್ನಗಳ; ರುಚಾ=ಕಾಂತಿಯಿಂದ; ರಂಗ=ಬಣ್ಣಗಳ; ಅನುಷಂಗ=ಸಂಬಂಧದಿಂದ; ರಮಣೀಯ=ಚಂದದ; ಪ್ರದೇಶಂ=ಸ್ಥಳವನ್ನು; ದಧಾನಾಃ ಇವ=ಧರಿಸಿದವುಗಳಂತೆ; ವಿಭಾಂತಿ=ಶೋಭಿಸುತ್ತವೆ.

ಈ ದ್ವಾರಕೆಯ ಗೋಡೆಗಳಲ್ಲಿ ರತ್ನಗಳ ದೊಡ್ಡದೊಡ್ಡ ಹಲಗೆಗಳು ಇವೆ. ಇವುಗಳು ಕನ್ನಡಿಯಂತೆ ಇವೆ. ಇಂತಹ ಗೋಡೆಗಳಲ್ಲಿ ಬೇರೆ ಚಿತ್ರಗಳನ್ನು ಬರೆಯುವ ಅಗತ್ಯ ಇಲ್ಲ. ಮನೆಗಳ ಒಳಭಾಗಗಳು ಇವುಗಳಲ್ಲಿ ಪ್ರತಿಫಲಿಸುತ್ತವೆ. ಇವುಗಳೇ ಭಿತ್ತಿಚಿತ್ರಗಳು. ಇವುಗಳಿಗೆ ಪದ್ಮರಾಗಾದಿ ನವರತ್ನಗಳ ಕಾಂತಿಯು ಸೇರಿಕೊಂಡಿದೆ. ಇದನ್ನು ನೋಡಿದಾಗ ಬೇರೆಬೇರೆ ಬಣ್ಣಗಳಿಂದ ಕೂಡಿದ ಒಂದೊಂದು ಊರನ್ನೇ ಈ ಗೋಡೆಗಳು ಹೊತ್ತುಕೊಂಡಂತೆ ತೋರುತ್ತಿತ್ತು. ಊರು ಎಂದಮೇಲೆ ಮರಗಿಡಗಳದ್ದು ಒಂದು ಬಣ್ಣ. ಉಸುಕಿನದ್ದು ಇನ್ನೊಂದು ಬಣ್ಣ. ನೀರಿನ ಬಣ್ಣವೇ ಬೇರೆ. ಹೀಗೆ ನಾನಾ ವರ್ಣಗಳಿಂದ ಕೂಡಿರುತ್ತದೆ.

**ಸೌಹಾರ್ದನೃತ್ಯದುರುಕೇಕಿ ನಿಕಾಯ ಶೋಭಿ**
**ಸೌಧೇಷು ಯತ್ರ ರುಚಿರಾಚಲಶೃಂಗಬುದ್ಧ್ಯಾ ।**
**ಸಂಸಕ್ತಮಭ್ರನಿಚಯಂ ಪರಿತಃ ಪತಂತ್ಯಃ**
**ಸ್ವಸ್ಪರ್ಧಿಗಾತ್ರಮಜಯನ್ಮರುತಾಪತಾಕಾಃ ॥ ೬೧ ॥**

ಯತ್ರ=ಎಲ್ಲಿ; ಪತಾಕಾಃ=ಪತಾಕೆಗಳು; ಸೌಹಾರ್ದ=ಸ್ನೇಹದಿಂದ; ನೃತ್ಯತ್=ನರ್ತಿಸುವ; ಉರು=ಉತ್ತಮವಾದ; ಕೇಕಿ=ನವಿಲುಗಳ; ನಿಕಾಯ=ಗುಂಪಿನಿಂದ; ಶೋಭಿ=ಶೋಭಿಸುವ. ಸೌಧೇಷು=ಮನೆಗಳಲ್ಲಿ; ರುಚಿರ=ಚಂದದ; ಅಚಲ=ಬೆಟ್ಟಗಳ; ಶೃಂಗ=ಶಿಖರಗಳ; ಬುದ್ಧ್ಯಾ=ಬುದ್ಧಿಯಿಂದ; ಸಂಸಕ್ತಂ=ಸಂಬದ್ಧವಾದ; ಸ್ವ=ತನ್ನಿಂದ; ಸ್ಪರ್ಧಿ=ಸ್ಪರ್ಧಿಗಳಾದ; ಪತಂತ್ಯಃ=ನಡೆಯುತ್ತಿರಲು; ಗಾತ್ರಂ=ಸ್ವರೂಪವುಳ್ಳ; ಅಭ್ರ=ಮೋಡಗಳ; ನಿಚಯಂ=ಸಮೂಹವನ್ನು; ಮರುತಾ=ಗಾಳಿಯಿಂದ; ಅಜಯನ್=ಗೆದ್ದವು.

ಸಾತ್ವಿಕರ ಧರ್ಮಾಚರಣೆ, ಇವರಿಗೆ ತೊಂದರೆ ಆದಾಗ ದೇವರು ಮಾಡುವ ರಕ್ಷಣೆ, ದೇವರ ಬಲ ಇದನ್ನೆಲ್ಲಾ ಅಸುರರು ನೋಡಿದರು. ತಾವು ದೇವರಿಂದ ಬಹಳ ಹೊಡೆತವನ್ನು ತಿಂದಿದ್ದಾರೆ ಕೂಡಾ. ಈ ಹೊಡೆತಗಳಿಂದ ತಪ್ಪಿಸಿಕೊಂಡು ಚೆನ್ನಾಗಿ ಬದುಕಲು ದೈತ್ಯರೂ ಕೂಡಾ ಸಾತ್ವಿಕ ಮಾರ್ಗವನ್ನು ಅನುಸರಿಸಲು ತೊಡಗಿದರು. ಇದು ಇವರಿಗೆ ಹೊಸ ಮಾರ್ಗ. ಅಯೋಗ್ಯವೂ ಕೂಡ. ಈ ಮಾರ್ಗದಿಂದ ಇವರನ್ನು ತಪ್ಪಿಸುವ ಕೆಲಸವನ್ನು ದೇವರು ರುದ್ರದೇವರಿಗೆ ವಹಿಸಿದರು. ರುದ್ರದೇವರು ಮೋಹಕವಾದ ಪಾಶುಪತಾದಿ ಗ್ರಂಥಗಳನ್ನು ರಚಿಸಿದರು. ದೈತ್ಯರಿಗೆ ಉಪದೇಶಿಸಿದರು. ಸಾತ್ವಿಕರ ಮಾರ್ಗದಲ್ಲಿ ನಡಿಗೆಯನ್ನು ತಡೆದರು. ಆದರೂ ಬಲಾತ್ಕಾರವಾಗಿ ಮುಂದುವರಿದರೆ ಅವರನ್ನು ರುದ್ರದೇವರು ಸಂಹರಿಸಿ ಯಮಲೋಕಕ್ಕೆ ಅಟ್ಟಿದರು. ಇದಕ್ಕೆ ಒಂದು ಉದಾಹರಣೆಯನ್ನು ಈ ರೀತಿ ಹೇಳಬಹುದು: ಒಮ್ಮೊಮ್ಮೆ ಕುರಿಗಳು ದಾರಿತಪ್ಪಿ ದಟ್ಟವಾದ ಕಾಡನ್ನು ಸೇರುತ್ತವೆ. ತನ್ನ ಗುಂಪಿನಿಂದ ದೂರವಾದ್ದರಿಂದ ಬಹಳ ಅರಚುತ್ತದೆ. ಇದನ್ನು ಕೇಳಿಸಿಕೊಂಡ ತೋಳಗಳು ಅವುಗಳನ್ನು ಅಟ್ಟಿಸಿ ಸಂಹಾರ ಮಾಡುವಂತೆ.

**ತನೋತಿ ಸಾ ಕೋಪಿನಿ ಶಾಂತಭಾವಂ**
**ಮನಸ್ಸು ಯಃ ಕೋಪಿ ನಿಶಾಂತಭಾವಮ್ ।**
**ಖಗಾಶ್ಚ ಯಸ್ಯಾಂ ಕಲಶಾಲಿಕಂಠಾ**
**ಗೃಹಾಶ್ಚ ಭಾಸ್ವತ್‌ಕಲಶಾಲಿಕಂಠಾಃ** ॥ ೫೯ ॥

ಸಾ=ಅದು; ಕೋಪಿನಿ=ಕೋಪಿಸುವವನಲ್ಲಿ; ಶಾಂತಭಾವಂ=ಶಾಂತಿಯನ್ನು; ತನೋತಿ=ಉಂಟುಮಾಡುತ್ತದೆ; ಯಃ ಕಃ ಅಪಿ=ಆತನು ಯಾರೇ ಆಗಲಿ; ಮನಸ್ಸು=ಮನಸ್ಸುಗಳಲ್ಲಿ; ನಿಶಾಂತ=ಬೆಳಗಿನ; ಭಾವಂ=ಸ್ವಭಾವವನ್ನು; ತನೋತಿ=ಉಂಟುಮಾಡುತ್ತದೆ; ಯಸ್ಯಾಂ=ಎಲ್ಲಿ; ಕಲ=ಚಂದದ ಧ್ವನಿಗಳಿಂದ; ಶಾಲಿ=ಶೋಭಿಸುವ; ಕಂಠಾಃ=ಕುತ್ತಿಗೆವುಳ್ಳ; ಖಗಾಃ=ಪಕ್ಷಿಗಳು; ಭಾಸ್ವತ್=ಶೋಭಿಸುವ; ಕಲಶ=ಕಲಶಗಳ; ಆಲಿ=ಸಮೂಹವುಳ್ಳ; ಕಂಠಾಃ=ಪ್ರದೇಶವುಳ್ಳ; ಗೃಹಾಃ ಚ=ಮನೆಗಳೂ; ಸಂತಿ=ಇವೆ.

ಜನ್ಮಾಂತರದ ಪ್ರಾರಬ್ಧವಶಾತ್ ಈ ದ್ವಾರಕೆಯಲ್ಲಿ ಇರುವವರಿಗೂ ಒಮ್ಮೊಮ್ಮೆ ಮನಸ್ಸು ವ್ಯಗ್ರವಾಗುತ್ತದೆ. ಆಗ ಅವರು ಒಮ್ಮೆ ದ್ವಾರಕೆಗೆ ಒಂದು ಪ್ರದಕ್ಷಿಣೆ ಬರುತ್ತಾರೆ. ಅಥವಾ ಇಂತಹ ವ್ಯಕ್ತಿಗಳು ಹೊರಗಿನಿಂದ ಇಲ್ಲಿಗೆ ಬರುತ್ತಾರೆ. ಆಗ ಅವರ ಮನಸ್ಸು ಶಾಂತವಾಗುತ್ತದೆ. ಇಲ್ಲಿ ವರ್ಣಗಳು ಮಾತ್ರ ಅಲ್ಲ, ವರ್ಣ ಬಾಹಿರರಾದ ಚಂಡಾಲರೂ ಇದ್ದಾರೆ. ಆದರೂ ಹರಿಭಕ್ತರು. ಆದ್ದರಿಂದ ಅಶಾಂತರ ಮನಕ್ಕೆ ಮಾತುಗಳ ಮೂಲಕ ಶಾಂತಿಯನ್ನು ಒದಗಿಸುತ್ತಾರೆ. ಈ ದ್ವಾರಕೆಯಲ್ಲಿ ಎಲ್ಲಿ ನೋಡಿದರಲ್ಲಿ ಗಿಳಿಗಳು ಕೋಗಿಲೆಗಳು. ಅವುಗಳು ಬಹಳ ಇಂಪಾಗಿ ಕೂಗುತ್ತಲೆ ಇರುತ್ತವೆ. ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಸಾಧ್ಯವಾಗದಿದ್ದರೂ ಕೇಳಲು ಬಹು ಇಂಪಾಗುತ್ತಿತ್ತು. ಎಲ್ಲಾ

ಮನೆಗಳಲ್ಲಿಯೂ ಮಾಡಿನ ಕೆಳಗಡೆ ಉಪ್ಪರಿಗೆಯಲ್ಲಿ ಕಡೆಕಟ್ಟು ಇರುತ್ತಿತ್ತು. ಅಲ್ಲಿ ಸುತ್ತಲೂ ದಂಡೆ. ಅದರಲ್ಲಿ ಪೂರ್ಣಕುಂಭಗಳು ಅಲಂಕಾರಕ್ಕಾಗಿ ಇರುತ್ತಿತ್ತು.

**ಭಿತ್ತಿಸ್ಥರತ್ನಫಲಿತಪ್ರತಿರೂಪಚಿತ್ರಚಿತ್ರಾಃ**
**ಸುಶೋಭಿ ನವರತ್ನರುಚಾದಧಾನಾಃ ।**
**ರಂಗಾನುಷಂಗರಮಣೀಯಮಿವ ಪ್ರದೇಶಂ**
**ಯಸ್ಯಾಂ ವಿಭಾಂತಿ ಮುರಜಿಲ್ಲಲನಾನಿವಾಸಾಃ ॥ ೬೦ ॥**

ಯಸ್ಯಾಂ=ಎಲ್ಲಿ; ಭಿತ್ತಿ=ಗೋಡೆಗಳಲ್ಲಿ; ಸ್ಥ=ಇರುವ; ರತ್ನ=ರತ್ನಗಳಲ್ಲಿ; ಫಲಿತ=ಶೋಭಿಸುವ; ಪ್ರತಿರೂಪ=ಪ್ರತಿಬಿಂಬಗಳೆಂಬ; ಚಿತ್ರ=ಚಿತ್ರಗಳಿಂದ; ಚಿತ್ರಾಃ=ವಿಚಿತ್ರಗಳಾದ; ಮುರಜಿತ್=ಮುರನನ್ನು ಗೆದ್ದವನ; ಲಲನಾ=ಪತ್ನಿಯರ; ನಿವಾಸಾಃ=ಮನೆಗಳು; ಸುಶೋಭಿ=ಚೆನ್ನಾಗಿ ಶೋಭಿಸುವ; ನವರತ್ನ=ನವರತ್ನಗಳ; ರುಚಾ=ಕಾಂತಿಯಿಂದ; ರಂಗ=ಬಣ್ಣಗಳ; ಅನುಷಂಗ=ಸಂಬಂಧದಿಂದ; ರಮಣೀಯ=ಚಂದದ; ಪ್ರದೇಶಂ=ಸ್ಥಳವನ್ನು; ದಧಾನಾಃ ಇವ=ಧರಿಸಿದವುಗಳಂತೆ; ವಿಭಾಂತಿ=ಶೋಭಿಸುತ್ತವೆ.

ಈ ದ್ವಾರಕೆಯ ಗೋಡೆಗಳಲ್ಲಿ ರತ್ನಗಳ ದೊಡ್ಡದೊಡ್ಡ ಹಲಗೆಗಳು ಇವೆ. ಇವುಗಳು ಕನ್ನಡಿಯಂತೆ ಇವೆ. ಇಂತಹ ಗೋಡೆಗಳಲ್ಲಿ ಬೇರೆ ಚಿತ್ರಗಳನ್ನು ಬರೆಯುವ ಅಗತ್ಯ ಇಲ್ಲ. ಮನೆಗಳ ಒಳಭಾಗಗಳು ಇವುಗಳಲ್ಲಿ ಪ್ರತಿಫಲಿಸುತ್ತವೆ. ಇವುಗಳೇ ಭಿತ್ತಿಚಿತ್ರಗಳು. ಇವುಗಳಿಗೆ ಪದ್ಮರಾಗಾದಿ ನವರತ್ನಗಳ ಕಾಂತಿಯು ಸೇರಿಕೊಂಡಿದೆ. ಇದನ್ನು ನೋಡಿದಾಗ ಬೇರೆಬೇರೆ ಬಣ್ಣಗಳಿಂದ ಕೂಡಿದ ಒಂದೊಂದು ಊರನ್ನೇ ಈ ಗೋಡೆಗಳು ಹೊತ್ತುಕೊಂಡಂತೆ ತೋರುತ್ತಿತ್ತು. ಊರು ಎಂದಮೇಲೆ ಮರಗಿಡಗಳದ್ದು ಒಂದು ಬಣ್ಣ. ಉಸುಕಿನದ್ದು ಇನ್ನೊಂದು ಬಣ್ಣ. ನೀರಿನ ಬಣ್ಣವೇ ಬೇರೆ. ಹೀಗೆ ನಾನಾ ವರ್ಣಗಳಿಂದ ಕೂಡಿರುತ್ತದೆ.

**ಸೌಹಾರ್ದನೃತ್ಯದುರುಕೇಕಿ ನಿಕಾಯ ಶೋಭಿ**
**ಸೌಧೇಷು ಯತ್ರ ರುಚಿರಾಚಲಶೃಂಗಬುದ್ಧ್ಯಾ ।**
**ಸಂಸಕ್ತಮಭ್ರನಿಚಯಂ ಪರಿತಃ ಪತಂತ್ಯಃ**
**ಸ್ವಸ್ಪರ್ಧಿಗಾತ್ರಮಜಯನ್ಮರುತಾಪತಾಕಾಃ ॥ ೬೧ ॥**

ಯತ್ರ=ಎಲ್ಲಿ; ಪತಾಕಾಃ=ಪತಾಕೆಗಳು; ಸೌಹಾರ್ದ=ಸ್ನೇಹದಿಂದ; ನೃತ್ಯತ್=ನರ್ತಿಸುವ; ಉರು=ಉತ್ತಮವಾದ; ಕೇಕಿ=ನವಿಲುಗಳ; ನಿಕಾಯ=ಗುಂಪಿನಿಂದ; ಶೋಭಿ=ಶೋಭಿಸುವ. ಸೌಧೇಷು=ಮನೆಗಳಲ್ಲಿ; ರುಚಿರ=ಚಂದದ; ಅಚಲ=ಬೆಟ್ಟಗಳ; ಶೃಂಗ=ಶಿಖರಗಳ; ಬುದ್ಧ್ಯಾ=ಬುದ್ಧಿಯಿಂದ; ಸಂಸಕ್ತಂ=ಸಂಬದ್ಧವಾದ; ಸ್ವ=ತನ್ನಿಂದ; ಸ್ಪರ್ಧಿ=ಸ್ಪರ್ಧಿಗಳಾದ; ಪತಂತ್ಯಃ=ನಡೆಯುತ್ತಿರಲು; ಗಾತ್ರಂ=ಸ್ವರೂಪವುಳ್ಳ; ಅಭ್ರ=ಮೋಡಗಳ; ನಿಚಯಂ=ಸಮೂಹವನ್ನು; ಮರುತಾ=ಗಾಳಿಯಿಂದ; ಅಜಯನ್=ಗೆದ್ದವು.

ದ್ವಾರಕೆಯಲ್ಲಿ ಬಹಳ ಎತ್ತರವಾದ ಮನೆಗಳು. ಇವುಗಳ ಶಿಖರಗಳಲ್ಲಿ ನವಿಲುಗಳಿವೆ. ಆಕಾಶದಲ್ಲಿ ಮೋಡಗಳಿರುವಾಗ ಇವುಗಳನ್ನು ಕಂಡು ನಲಿಯುತ್ತವೆ ರೆಕ್ಕೆಗಳನ್ನು ಬಿಡಿಸಿ. ಇಂತಹ ನವಿಲುಗಳು ಎತ್ತರದಲ್ಲಿ ಇರುವುದರಿಂದ ಪರ್ವತಗಳ ಶಿಖರಗಳಂತೆ ತೋರುತ್ತವೆ. ಪರ್ವತಗಳ ಶಿಖರಗಳು ಎತ್ತರವಾಗಿ ಮರಗಳ ಸಮೂಹದಿಂದ ಹಸುರಾಗಿವೆ. ನವಿಲುಗಳ ರೆಕ್ಕೆಗಳೂ ಹಸುರುತಾನೆ? ಈ ದೃಶ್ಯವನ್ನು ಕಂಡ ಮೋಡಗಳು ಅಲ್ಲೇ ಮಾಡುಗಳಲ್ಲಿ ನೆಲೆಸಿದವು. ಯದ್ಯಪಿ ಮಾಡುಗಳು ನವಿಲುಗಳ ವಾಸಸ್ಥಳ. ಈ ಮೋಡಗಳನ್ನು ಓಡಿಸಬೇಕೆಂದು ನವಿಲುಗಳಿಗೆ ತೋರಿತು. ಆಗ ಇವುಗಳ ಸಹಾಯಕ್ಕೆ ಬಂದದ್ದು ಅಲ್ಲಿ ಹಾರುತ್ತಿರುವ ಧ್ವಜಗಳು. ಈ ಧ್ವಜಗಳು ಹಾರಾಡುವಾಗ ಗಾಳಿಯು ಉಂಟಾಗುತ್ತದೆ. ಈ ಗಾಳಿಯಿಂದ ಮೋಡಗಳು ಅಲ್ಲಿಂದ ಚದುರುತ್ತವೆ. ಈ ರೀತಿ ಅಲ್ಲಿ ಮೋಡಕವಿದ ವಾತಾವರಣವೇ ಇರುತ್ತಿರಲಿಲ್ಲ.

**ಯಸ್ಯಾಂ ಸುವರ್ಣವರವೇಷ್ಟನಭಾಜಿತೇಜಃ**
**ಪ್ರದ್ಯೋತಿತಾಂಬರ ಹರಿನ್ಮಣಿವಿದ್ರುಮಾದ್ಯೈಃ ।**
**ರತ್ನೈರ್ನವೈರ್ನವವಿಧೈಃ ಖಚಿತೇ ಸಹಂತೇ**
**ಪ್ರಾಸಾದಮೂರ್ಧ್ನಿ ನ ಬುಧಾಃ ಕಪಿಶೀರ್ಷನಾಮ ॥ ೬೨ ॥**

ಯಸ್ಯಾಂ=ಎಲ್ಲಿ; ಸುವರ್ಣ=ಚಿನ್ನದ; ವರ=ಶ್ರೇಷ್ಠದಿಂದ; ವೇಷ್ಟನ=ಆವರಣವನ್ನು; ಭಾಜಿ=ಹೊಂದಿರುವ; ತೇಜಃ=ಪ್ರಕಾಶದಿಂದ; ಪ್ರದ್ಯೋತಿತ=ಶೋಭಿಸುವ; ಅಂಬರ= ಆಕಾಶವುಳ್ಳ; ಹರಿನ್ಮಣಿ=ಇಂದ್ರನೀಲಮಣಿ; ವಿದ್ರುಮ=ಹವಳ; ಆದ್ಯೈಃ=ಮೊದಲುಳ್ಳ; ನವ್ಯೈಃ= ಹೊಸದಾದ; ನವವಿಧೈಃ=ಒಂಭತ್ತು ರೀತಿಯ; ರತ್ನೈಃ=ರತ್ನಗಳಿಂದ; ಖಚಿತೇ= ಕೂಡಿದ; ಪ್ರಾಸಾದ=ಉಪ್ಪರಿಗೆಯ; ಮೂರ್ಧ್ನಿ=ತಲೆಯಲ್ಲಿ; ಕಪಿಶೀರ್ಷ=ಕಪಿಶೀರ್ಷ ಎಂಬ; ನಾಮ= ಹೆಸರನ್ನು; ನ ಸಹಂತೇ=ಸಹಿಸುವುದಿಲ್ಲ.

ದ್ವಾರಕೆಯ ಪ್ರತಿಯೊಂದು ಮನೆಯ ಮಾಡು ಉತ್ತಮ ಚಿನ್ನದಿಂದ ತಯಾರಿಸಿದ್ದು. ಈ ಚಿನ್ನದ ಹೊದಿಕೆ ನವರತ್ನಗಳಿಂದ ಖಚಿತವಾಗಿದೆ. ಹಳೆಯ ನವರತ್ನಗಳಲ್ಲ. ಹೊಸದರಲ್ಲಿ ಬಹಳ ಪ್ರಕಾಶ ಹೊರಡುತ್ತದೆ. ಹಳತು ಮಬ್ಬಾಗಿರುತ್ತದೆ. ಈ ನವರತ್ನಗಳಲ್ಲಿ ಹವಳಗಳು ಇಂದ್ರನೀಲಮಣಿಗಳು ಜಾಸ್ತಿ. ಇವುಗಳ ಪ್ರಕಾಶ ಆಕಾಶ ಪೂರ್ಣ ಹರಡಿದೆ. ಇಷ್ಟೆಲ್ಲಾ ಉತ್ತಮವಾದ ವಸ್ತುಗಳಿಂದ ನಿರ್ಮಿತವಾದ ಮಾಡಿಗೆ ಸಂಸ್ಕೃತದಲ್ಲಿ ಕಪಿಶೀರ್ಷ ಎಂಬ ನೀಚ ನಾಮ ಇದೆ. ಶೀರ್ಷ ಅಂದರೆ ತಲೆ. ಒಟ್ಟಿಗೆ ಕಪಿತಲೆ ಎಂಬ ಹೆಸರಾಯಿತು. ಈ ಹೆಸರು ಯಾಕೆ ಬಂತೋ? ಯಾರಿಗೂ ಗೊತ್ತಿಲ್ಲ. ಇದು ಕಟುಕನಿಗೆ ಕರುಣಾಕರ ಎಂದು ಹೆಸರನ್ನು ಇಟ್ಟಂತಾಯಿತು. ಆದ್ದರಿಂದಲೇ ಪಂಡಿತರು ಈ ಹೆಸರನ್ನು ಹೇಳಲು ತುಂಬಾ ಬೇಸರಿಸುತ್ತಾರೆ. ಸುವರ್ಣಶೀರ್ಷ ಎಂಬ ಹೆಸರು ಸಾರ್ಥಕವಾಗುತ್ತಿತ್ತು.

**ನಯತಿ ನ ಯತಿರನ್ಯದ್ಭೋಜ್ಯ ಮಾತ್ರಾನ್ನಮಾತ್ರಾತ್**
**ಚರತಿ ಚ ರತಿಭರ್ತ್ರಾ ಪ್ರೇರಿತೋ ನೈವ ಭೋಗ್ಯೇ ।**
**ಜನಿಮಜನಿಮತಜ್ಞ ಸಂತರತ್ಯೇವ ಚಾಂತೇ**
**ಯಮಭಯಮಭಯಾಪ್ತ್ಯಾ ಸ್ವಸ್ಥವೃತ್ತಿರ್ನವೇತ್ತಿ ॥ ೬೩ ॥**

ಯತಿಃ=ಸಂನ್ಯಾಸಿಯು; ಭೋಜ್ಯಮಾತ್ರಾತ್=ಊಟಕ್ಕೆ ಬೇಕಾದಷ್ಟೇ; ಅನ್ನಮಾತ್ರಾತ್=ಅನ್ನಕ್ಕಿಂತ; ಅನ್ಯತ್=ಬೇರೆಯನ್ನು; ನ ನಯತಿ=ಬೇಡುತ್ತಿರಲಿಲ್ಲ; ರತಿ= ರತಿಯ; ಭರ್ತ್ರಾ=ಪತಿಯಿಂದ; ಪ್ರೇರಿತಃ=ಪ್ರೇರಿತನಾಗಿ; ಭೋಗ್ಯೇ=ಭೋಗದಲ್ಲಿ; ನ ಏವ ಚರತಿ=ಪ್ರವೃತ್ತನಾಗುತ್ತಿರಲಿಲ್ಲ; ಅಜನಿ=ಬ್ರಹ್ಮನ ಮಿತಮಿತವಿಚಾರವನ್ನು; ಜ್ಞಃ= ತಿಳಿದವನಾಗಿ; ಅಂತೇ ಚ=ಕೊನೆಯಲ್ಲಾದರೂ; ಜನಿಂ=ಜನನವನ್ನು; ಸಂತರತಿ ಏವ= ಖಂಡಿತಾ ದಾಟುತ್ತಾನೆ; ಅಭಯ=ದೇವರ; ಆಪ್ತ್ಯಾ=ಪ್ರಾಪ್ತಿಯಿಂದ; ಸ್ವಸ್ಥ=ದೃಢವಾದ; ವೃತ್ತಿಃ=ಇರುವವನಾಗಿ; ಯಮ=ಯಮನ; ಭಯಂ=ಭಯವನ್ನು; ನ ವೇತ್ತಿ= ತಿಳಿಯುವುದಿಲ್ಲ.

ಇಲ್ಲಿ ಸಂನ್ಯಾಸಿಗಳೂ ಇದ್ದಾರೆ. ಅವರಿಗೆ ಭಿಕ್ಷುಗಳೆಂದು ಹೆಸರು. ಭಿಕ್ಷಾಟನೆಯಿಂದಲೇ ಬದುಕುವವರು. ಹೊಟ್ಟೆಗೆ ಹಸಿವೆ ನೀಗಲು ಎಷ್ಟು ಬೇಕೋ ಅಷ್ಟೇ ಪಡೆಯುವವರು. ದಾನಿಗಳು ಜಾಸ್ತಿ ಕೊಟ್ಟರೂ ವಿನಯದಿಂದಲೇ ತಿರಸ್ಕರಿಸುತ್ತಾರೆ. ಅನ್ನ ಹೊರತು ಬೇರೆ ಏನನ್ನೂ ಆಶಿಸುತ್ತಿರಲಿಲ್ಲ. ತರುಣ ಸಂನ್ಯಾಸಿಗಳೂ ಇದ್ದರು. ಈ ಅವಸ್ಥೆಯಲ್ಲಿ ಕಾಮನ ಉಪದ್ರವ ಆಗುವುದು ಸಹಜ. ಮನಸ್ಸು ಎಷ್ಟೇ ವ್ಯಗ್ರವಾದರೂ ತಾವು ನೀಚಕಾರ್ಯಗಳಲ್ಲಿ ಪ್ರವೃತ್ತರಾಗುತ್ತಿರಲಿಲ್ಲ. ಭಿಕ್ಷಾಟನೆ ದೇವರ ಪೂಜೆ ಇದಾದನಂತರ ಮಧ್ವಶಾಸ್ತ್ರವನ್ನು ಚೆನ್ನಾಗಿ ಅಧ್ಯಯನ ಮಾಡಿ ಒಳ್ಳೆಯ ಜ್ಞಾನಿಗಳಾಗುತ್ತಿದ್ದರು. ಈ ಮತಪ್ರವರ್ತಕರಾದ ವಾಯುದೇವರಿಗೆ ಜನನಾದಿ ಪ್ರಯುಕ್ತವಾದ ಯಾವ ದುಃಖವೂ ಇಲ್ಲ. ಆದ್ದರಿಂದ ಈ ಮಾತನ್ನು ತಿಳಿದ ಯತಿಗಳೂ ಸಂಸಾರದ ದುಃಖವನ್ನು ಕಳಕೊಳ್ಳುತ್ತಾರೆ. ಮೋಕ್ಷ ಅಂದರೆ ಎರಡು ದಳ. ದುಃಖನಿವೃತ್ತಿ, ಸುಖಪ್ರಾಪ್ತಿ. ಮಧ್ವಶಾಸ್ತ್ರದ ಅಧ್ಯಯನದಿಂದ ದುಃಖದ ನಿವೃತ್ತಿಯಾಗುತ್ತದೆ. ಸುಖದ ಲಾಭ ಆಗುವುದು ನಮ್ಮ ಹೃದಯದಲ್ಲಿರುವ ದೇವರ ದರ್ಶನದಿಂದ. ಯೋಗ್ಯ ಗುರುವಿನಿಂದ ದೇವರನ್ನು ತಿಳಿದನಂತರ ಅದನ್ನು ಮನನ ಮಾಡುತ್ತಾರೆ. ಅನಂತರ ಧ್ಯಾನಾಸಕ್ತರಾಗುತ್ತಾರೆ. ಆಗ ದೇವರಿಗೆ ತೋರುತ್ತದೆ– ಇವನಿಗೆ ದರ್ಶನ ಕೊಡೋಣ ಎಂದು. ಇದು ದೇವರಿಂದ ಸಿಕ್ಕಿದ ಅಭಯ. ದೇವರಿಂದಲೇ ಅಭಯ ಬಂದಮೇಲೆ ಯಮನ ಭಯವೆಲ್ಲಿ. ದೇವರ ಸನ್ನಿಧಾನದಲ್ಲಿಯೆ ಇರುತ್ತಾನೆ. ಸುಖವನ್ನು ಅನುಭವಿಸುತ್ತಾನೆ. ವೇದವ್ಯಾಸರು ಬ್ರಹ್ಮಸೂತ್ರದಲ್ಲಿ 'ನ ಚ ಪುನರಾವರ್ತತೆ' ಎಂದು ಹೇಳಿದಂತೆ ತಿರುಗಿ ಸಂಸಾರಕ್ಕೆ ಬರುವುದಿಲ್ಲ.

ನ ವಹತಿ ಹೃದಿ ತೋಷಂ ವೈರಿವಧ್ವಾಃ ಕಪೋಲೆ
ನವಹತಿಮವಲೋಕ್ಯ ಶ್ವಾಸವಿಶ್ರಾಂತ ವಾಕ್ಯಾ ।
ಸಮುದಿತರವಿದೃಷ್ಟಿ ವ್ರೀಡವಿಭ್ರಾಂತನೇತ್ರಾ
ಸಮುದಿತರವರಾಂಗೀಭಾವಮಾವಿಷ್ಕರೋತಿ ॥ ೬೪ ॥

ವೈರಿ=ಶತ್ರುವಾದ; ವಧ್ವಾಃ=ನಾರಿಯ; ಕಪೋಲೆ=ಕೆನ್ನೆಯಲ್ಲಿ; ನವ=ಹೊಸ; ಹತಿಂ=ಗಾಯವನ್ನು; ಅವಲೋಕ್ಯ=ನೋಡಿ; ಶ್ವಾಸ=ಶ್ವಾಸದಲ್ಲಿ; ವಿಶ್ರಾಂತ=ನಿಂತ; ವಾಕ್ಯಾ=ಮಾತುಳ್ಳವಳಾಗಿ; ಹೃದಿ=ಮನದಲ್ಲಿ; ತೋಷಂ=ಸಂತೋಷವನ್ನು; ನ ವಹತಿ=ಹೊಂದಲಿಲ್ಲ; ಸಮ್=ಚೆನ್ನಾಗಿ; ಉದಿತ=ಉದಿಸಿದ; ರವಿ=ಸೂರ್ಯನ; ದೃಷ್ಟಿ=ದರ್ಶನದಿಂದ; ವ್ರೀಡ=ನಾಚಿಕೆಯಿಂದ; ವಿಭ್ರಾಂತ=ಗಾಬರಿಗೊಂಡ; ನೇತ್ರಾ=ಕಣ್ಣಿನವಳಾಗಿ; ಸಮುತ್=ಆನಂದದಿಂದ ಕೂಡಿದ; ಇತರ=ಬೇರೆ; ವರಾಂಗೀ=ಗೋಪಿಯು; ಭಾಂ=ಅಭಿಪ್ರಾಯವನ್ನು; ಆವಿಷ್ಕರೋತಿ=ಪ್ರಕಟಿಸುತ್ತಾಳೆ.

ಒಂದ ದಿನ ಬೆಳಿಗ್ಗೆ ಕೃಷ್ಣನ ಇಬ್ಬರು ಸವತಿಯರು ಪರಸ್ಪರ ಎದುರಾದರು. ಒಬ್ಬಳ ಕೆನ್ನೆಯಲ್ಲಿ ಕೃಷ್ಣನ ದಂತಕ್ಷತಿ ಇತ್ತು. ಇದನ್ನು ನೋಡಿದ ಇನ್ನೊಬ್ಬಳಿಗೆ ಸಿಟ್ಟುಬಂತು. ಶ್ವಾಸವನ್ನು ಹೊರಗೆ ಬಿಡುತ್ತಾ ಮತ್ಸರದಿಂದ ಏನು ಮಾತಾಡದೆ ಇವಳನ್ನೇ ದುರುಗುಟ್ಟಿ ನೋಡುತ್ತಾ ನಿಂತಳು. ಇನ್ನೊಬ್ಬಳಿಗೆ ತುಂಬಾ ಸಂತೋಷವಾಗಿದೆ. ಆದರೆ ನಾಚಿಕೆಯೂ ಆಗಿದೆ. ಈಗ ಬೆಳಗಾಗಿದೆ. ನನ್ನ ಮುಖವನ್ನು ನೋಡಿದ ಜನರು ನಾನು ರಾತ್ರಿ ಕೃಷ್ಣನ ಜೊತೆಗಿದ್ದದ್ದನ್ನು ತಿಳಿಯುತ್ತಾರೆ ಎಂದು. ಆದ್ದರಿಂದ ಆಚೆ ಈಚೆ ನೋಡುತ್ತಾ ಇದ್ದಾಳೆ. ಕೆನ್ನೆಯಲ್ಲಿ ಆದ ಗಾಯವನ್ನು ಮರೆಮಾಚಲು ಪ್ರಯತ್ನಿಸುತ್ತಾ ಇದ್ದಾಳೆ. ಇದರಿಂದಾಗಿ ಮೊದಲನೆಯವಳು ಮತ್ತಷ್ಟು ರೇಗಿದ್ದಾಳೆ.

ಇದು ಸವತಿಮಾತ್ಸರ್ಯ. ಲೌಕಿಕ ವಿಷಯದಲ್ಲಿ ಈ ರೀತಿಯ ಆಸೆ ಕೂಡದು. ಒಬ್ಬಳಿಗೆ ಲೌಕಿಕವಾದ ಒಂದು ವಸ್ತುವು ಸಿಕ್ಕಿದರೆ ಮತ್ತೊಬ್ಬಳು ತನಗೆ ಸಿಗಲಿಲ್ಲ ಎಂದು ತಪಿಸಬಾರದು. ಯಾಕೆಂದರೆ ಲೌಕಿಕ ವಿಷಯಗಳು ನಮ್ಮನ್ನು ಮತ್ತಷ್ಟು ದುಃಖಿಗಳನ್ನಾಗಿ ಮಾಡುತ್ತವೆ. ದೇವರ ವಿಷಯದಲ್ಲಿ ಈ ರೀತಿ ಬೇಕು. ಒಬ್ಬಳಿಗೆ ದೇವರು ಸಿಕ್ಕಿದರೆ ನನಗೂ ಬೇಕು ಎಂದು ಆಸೆ ಪಡುವುದು; ಸಿಗದಿದ್ದಾಗ ಬೇಸರಿಸುವುದು ಸರಿ. ಯಾಕೆಂದರೆ ದೇವರು ನಮ್ಮ ದುಃಖವನ್ನು ಹೋಗಲಾಡಿಸಿ ಸುಖವನ್ನು ಕೊಡುವವನು.

ವಿಹಾಯ ಸಾಲೋಕ್ಯಮುದಾರಮಂತೇ ವಿಹಾಯಸಾಲೋಕ್ಯ ಮುದಾರಮಂತೇ ।
ಮಹೀಶಕನ್ಯಾ ಸಕಲಾರ್ಥರೂಪ ಮಹೀಶಕನ್ಯಾ ಸಕಲಾರ್ಥರೂಪಮ್ ॥ ೬೫ ॥

ಅಹಿ=ಶೇಷನು; ಈಶ=ರುದ್ರನು; ಕ=ಬ್ರಹ್ಮನು ಇವರ; ನ್ಯಾಸ=ತ್ಯಾಗಪೂರ್ವಕವಾದ;

ಕಲಾ=ವಿದ್ಯೆಗೆ; ಅರ್ಥರೂಪಂ=ವಿಷಯನಾದ; ಮಹೀ=ಭೂಮಿಗೆ; ಈಶ=ಒಡೆಯರ; ಕನ್ಯಾ=ನಾರಿಯರಿಗೆ; ಸಕಲ=ಎಲ್ಲಾ; ಅರ್ಥ=ವಿಷಯಗಳನ್ನು; ರೂಪಂ=ಕೊಡುವ ಕೃಷ್ಣನನ್ನು; ವಿಹಾಯಸಾ=ಗಗನದಿಂದ; ಆಲೋಕ್ಯ=ನೋಡಿ; ಅಂತೇ=ಕೊನೆಗೆ; ಉದಾರಂ =ಉತ್ತಮವಾದ; ಸಾಲೋಕ್ಯಂ=ಮೋಕ್ಷವನ್ನು; ವಿಹಾಯ=ಬಿಟ್ಟು; ಮುದಾ= ಸಂತೋಷ ದಿಂದ; ರಮಂತೇ=ಸುಖಿಸುತ್ತಾರೆ.

ದ್ವಾರಕೆಯಲ್ಲಿ ಕೆಲವು ಸಾತ್ವಿಕರು ತುಂಬಾ ಸಾಧನೆಯನ್ನು ಮಾಡಿ ಮೋಕ್ಷಕ್ಕೆ ಹೋಗಲು ಸಿದ್ಧರಾಗಿದ್ದಾರೆ. ಮೋಕ್ಷ ಅಂದರೆ ದೇವರ ಲೋಕ. ದೇವರ ಲೋಕಕ್ಕೆ ಸಮಾನವಾದ ಲೋಕ. ಆದ್ದರಿಂದ ಇದಕ್ಕೆ ಸಾಲೋಕ್ಯ ಎಂದು ಹೆಸರು. ದೇವರು ಇವರನ್ನು ಇಂತಹ ಲೋಕಕ್ಕೆ ಕರೆಯುತ್ತಾರೆ. ಆದರೆ ಇವರು ಆ ಲೋಕವನ್ನು ತಿರಸ್ಕರಿಸುತ್ತಾರೆ. ನಮಗೆ ಆ ಲೋಕ ಬೇಡ. ನಾವು ಇಲ್ಲಿಯೇ ಇರುತ್ತೇವೆ. ಎತ್ತರದ ಆಕಾಶದಲ್ಲಿ ಇದ್ದುಕೊಂಡು ಕೃಷ್ಣರೂಪವನ್ನೇ ನೋಡಿಕೊಂಡು ಸಂತೋಷದಿಂದ ಇರುತ್ತೇವೆ ಎಂದು ಹೇಳುತ್ತಾರೆ. ಯದ್ಯಪಿ ಈ ಕೃಷ್ಣರೂಪವನ್ನು ನೋಡುವುದೂ ಅಷ್ಟು ಸುಲಭ ಇಲ್ಲ. ಬ್ರಹ್ಮ, ಶೇಷ, ರುದ್ರ ಮೊದಲಾದ ದೇವತೆಗಳು ಇವನನ್ನು ಕಾಣಬೇಕಾದರೆ ತುಂಬಾ ಶ್ರಮ ಪಡುತ್ತಾರೆ. ತಾವು ದೇವರಿಗಾಗಿ ಸರ್ವಸ್ವವನ್ನು ತ್ಯಾಗ ಮಾಡುತ್ತಾರೆ. ಆಮೇಲೆ ಜ್ಞಾನವನ್ನು ಸಂಪಾದಿಸುತ್ತಾರೆ. ಅಂತಹ ತಿಳುವಳಿಕೆಗೆ ವಿಷಯವಾಗುತ್ತದೆ ಈ ರೂಪ. ಅಲ್ಲಿಯೂ ಕೂಡಾ ಅವರವರ ಯೋಗ್ಯತೆಗೆ ಅನುಸಾರವಾಗಿ. ದ್ವಾರಕೆಯಲ್ಲಿ ಹಾಗಲ. ಏನೂ ಶ್ರಮಪಡಬೇಕಾಗಿಲ್ಲ. ಇಷ್ಟೇ ಅಲ್ಲ. ತಮ್ಮ ಯೋಗ್ಯತೆಗೆ ಮೀರಿ ಪ್ರಾಯಶಃ ಕಾಣುತ್ತಾರೆ. ಮೋಕ್ಷದಲ್ಲಿಯಾದರೂ ತಮ್ಮ ಬಿಂಬರೂಪವನ್ನು ಮಾತ್ರ ನೋಡುತ್ತಾರೆ. ಇಲ್ಲಿ ಹದಿನಾರು ಸಾವಿರದ ನೂರು ರೂಪಗಳಿಂದ ಇರುವ ಕೃಷ್ಣನನ್ನು ಕಾಣುತ್ತಾರೆ. ನರಕಾಸುರನ ಮನೆಯಲ್ಲಿ ಹದಿನಾರು ಸಾವಿರದ ನೂರು ಕನ್ಯೆಯರಿದ್ದರು. ಇವರೆಲ್ಲ ರಾಜಪುತ್ರಿಯರು. ನರಕನನ್ನು ಕೊಂದ ಕೃಷ್ಣನು ಇವರನ್ನು ತನ್ನ ಮನೆಗೆ ಕರೆತಂದಿದ್ದನು. ಅವರನ್ನು ಅನಂತರ ಮದುವೆಯಾದನು. ಅವರಿಗೆ ಸುಖ ಉಣಿಸಲು ಅಷ್ಟು ರೂಪಗಳಿಂದ ಅವರ ಮನೆಗಳಲ್ಲಿ ಇದ್ದನು. ಇಷ್ಟೂ ರೂಪಗಳನ್ನು ಈ ಸಿದ್ಧರು ಇಲ್ಲಿ ಏಕಕಾಲದಲ್ಲಿ ಕಾಣುತ್ತಿದ್ದರು. ಕಾಣಲು ಯೋಗ್ಯತೆ ಇತ್ತೋ ಇಲ್ಲವೋ ಎನ್ನುವುದು ಬೇರೆ ವಿಚಾರ. ಆದರೂ ಕೃಷ್ಣನ ಸಾಮರ್ಥ್ಯದಿಂದಾಗಿ ಕಂಡರು. ಹೀಗಿರಲು ಅಂತಹ ಸಾಮಾನ್ಯ ಮೋಕ್ಷವನ್ನು ಯಾರು ಆಶಿಸುತ್ತಾರೆ? ಎಂದು ರಾಜರು ದ್ವಾರಕೆಯನ್ನು ಅತಿಶಯವಾಗಿ ವರ್ಣಿಸುತ್ತಾರೆ.

**ಮದಭ್ರಮತ್ತಾರವಿಶಂಕಿನೇತ್ರ ಮದಭ್ರಮತ್ತಾರವಿಶಂಕಿನೇತ್ರ ।**
**ಪ್ರಾಯೋಜಯದ್ಯಾನಗಧೀರ ಚಿತ್ತಂ ಪ್ರಾಯೋಜಯದ್ಯಾನಗಧೀರಚಿತ್ತಮ್ ॥ ೬೬ ॥**

ಅತ್ರ=ಇಲ್ಲಿ; ಅದಭ್ರ=ಬಹಳವಾಗಿ; ಮತ್ತಾ=ಮತ್ತಳಾದ; ಅಚಿತ್=ಜ್ಞಾನ ಇಲ್ಲದ; ಯಾ=

ಯಾರು; ರವಿ=ಸೂರ್ಯನ; ಶಂಕಿನೇ=ಸಂಶಯವುಳ್ಳವನಿಗೆ; ಮದ=ಮದದಿಂದ; ಭ್ರಮಾತ್=ತಿರುಗುವ; ತಾರ=ಕಣ್ಣುಗುಡ್ಡೆಯುಳ್ಳ; ವಿಶಂಕಿ=ಸಂಶಯಿಸುವ; ನೇತ್ರಂ= ಕಣ್ಣನ್ನು; ಪ್ರಾಯೋಜಯೇತ್=ಪ್ರಯೋಗಿಸಿದಳು; ಯಾನ=ವಿಮಾನದಿಂದ; ಗ= ಹೋಗುವವರ; ಧೀಃ=ಮನಸ್ಸುಳ್ಳ ನಾರಿಯು; ನಗ=ಬೆಟ್ಟದಂತೆ; ಧೀರ=ಗಟ್ಟಿಯಾದ; ಚಿತ್ತಂ= ಮನವುಳ್ಳ; ತಂ=ಅವನನ್ನು; ಅಜಯತ್=ಗೆದ್ದಳು.

ದ್ವಾರಕೆಯಲ್ಲಿ ಇರುವ ನಾರಿಯರು ಬಹಳ ಸುಂದರಿಯರು. ಇವರ ಸೌಂದರ್ಯಕ್ಕೆ ದೇವತೆಗಳೂ ಮಾರುಹೋಗುತ್ತಿದ್ದರು. ಅಂದರೆ ದೇವತೆಗಳು ತಮ್ಮ ವಾಹನಗಳನ್ನೇರಿ ವಿಹಾರಕ್ಕೆಂದು ಹೋಗುವುದುಂಟು. ಹಾಗೆಯೇ ಹೋಗುತ್ತಾ ಒಮ್ಮೊಮ್ಮೆ ದ್ವಾರಕೆಯ ಮೇಲ್ಭಾಗದ ಆಕಾಶದಲ್ಲಿಯೂ ಸಂಚರಿಸುತ್ತಾರೆ. ಅದೇ ಸಮಯದಲ್ಲಿ ಈ ದ್ವಾರಕೆಯ ನಾರಿಯರು ಕೆಲಸದ ನಿಮಿತ್ತ ಮನೆಯ ಹೊರಗೆ ಬಂದಿದ್ದರೆ ಈ ದೇವತೆಗಳು ಇವರನ್ನು ಏಕಾಗ್ರತೆಯಿಂದ ನೋಡುತ್ತಿದ್ದರು. ಅಷ್ಟು ಸೌಂದರ್ಯ ಇವರಲ್ಲಿ. ಇಂತಹ ನಾರಿಯರು ಒಮ್ಮೊಮ್ಮೆ ಮದಜನಕವಾದ ಪಾನೀಯವನ್ನು ಶಾಸ್ತ್ರೀಯವಾಗಿ ಪಾನಮಾಡು ತ್ತಿದ್ದರು. ಇದರಿಂದ ಮದವೇರಿ ಕಾರ್ಯಾಕಾರ್ಯ ವಿವೇಚನೆಯನ್ನು ಕಳೆದುಕೊಳ್ಳುತ್ತಿದ್ದರು. ಇವರು ಇದೇ ಅವಸ್ಥೆಯಲ್ಲಿ ಅಲ್ಲಿ ಸಂಚರಿಸುತ್ತಿದ್ದರು. ಪುರುಷರ ಕಣ್ಣಿಗೆ ಬೀಳುತ್ತಿದ್ದರು. ಇವರಾದರೂ ಬಹಳ ಇಂದ್ರಿಯನಿಗ್ರಹವುಳ್ಳವರು. ಇವರ ಮನಸ್ಸು ಬೆಟ್ಟದಷ್ಟು ಗಟ್ಟಿ. ಯಾವ ಸ್ತ್ರೀಗೂ ಮರುಳಾಗುವವರು ಅಲ್ಲ. ಹಗಲಿಗೆ ಈ ರೀತಿ ಮಾಡಿದರೆ ಜನರು ನೋಡಿಯಾರು ಎಂಬ ಭಯವೂ ಅವರಲ್ಲಿತ್ತು. ಆದರೆ ಈ ನಾರಿಯರು ಮದದಿಂದಾಗಿ ತಮ್ಮ ಚಂಚಲವಾದ ಕಣ್ಣುಗಳನ್ನು ಇವರ ಮೇಲೆ ಪ್ರಯೋಗಿಸಿ ತಮ್ಮ ವಶಕ್ಕೆ ತೆಗೆದುಕೊಂಡರು.

**ಸರಸಾ ವಿಲಸದ್ಧಾರ ಸರಸಾರಶಿರೋಧರಾಃ ।**
**ನಯನೈರ್ವಶಯಂತ್ಯಸ್ಯಾಂ ನಯನೈ ಪುಣ್ಯಜಿಷ್ಣುಭಿಃ ॥ ೬೭ ॥**

ಸರಸಾಃ=ರಸದಿಂದ ಕೂಡಿದ; ವಿಲಸತ್=ಶೋಭಿಸುವ; ಹಾರ=ಮುತ್ತಿನ; ಸರ=ಹಾರಗಳಿಂದ; ಸಾರ=ಚಂದದ; ಶಿರೋಧರಾಃ=ಕುತ್ತಿಗೆವುಳ್ಳ ನಾರಿಯರು; ನಯ= ನೀತಿಯಿಂದ; ನೈಪುಣ್ಯ=ಕುಶಲತೆಯಿಂದ; ಜಿಷ್ಣುಭಿಃ=ಜಯಶೀಲಗಳಾದ; ನಯನೈಃ= ಕಣ್ಣುಗಳಿಂದ; ಅಸ್ಯಾಂ=ಇಲ್ಲಿ; ವಶಯಂತಿ=ಗೆಲ್ಲುತ್ತಾರೆ.

ಈ ನಾರಿಯರು ನರರನ್ನು ಗೆಲ್ಲುವ ಕಾರಣವನ್ನು ತಿಳಿಸುತ್ತಾರೆ– ಈ ನಾರಿಯರು ಶೃಂಗಾರರಸದಿಂದ ಕೂಡಿದ್ದಾರೆ. ಕಂಠದಲ್ಲಿ ಉತ್ತಮ ಜಾತಿಯ ಮುತ್ತಿನ ಸರಗಳು ಬಹಳ ಇವೆ. ತುಂಬಾ ನಯದಿಂದ ಕೂಡಿದವರು. ಎಲ್ಲಿಯೂ ದರ್ಪದ ಪ್ರದರ್ಶನವೇ ಇಲ್ಲ. ಪುರುಷರನ್ನು ಹೇಗೆ ವಶೀಕರಿಸಬೇಕು ಎಂಬುದನ್ನು ಚೆನ್ನಾಗಿ ತಿಳಿದವರು.

ಇವೆಲ್ಲಾ ಅವರ ಕಣ್ಣುಗಳಿಂದಲೇ ವ್ಯಕ್ತವಾಗುತ್ತದೆ. ಇದರಿಂದಾಗಿ ಪುರುಷರು ಬಹಳ ಸುಲಭದಲ್ಲಿ ಇವರ ವಶವಾಗುತ್ತಿದ್ದರು.

**ಸೇಯಂ ಪುರೀ ವಿತನುತೇ ವಿಷಯೋಪಭೋಕ್ತುಃ**
**ಪ್ರಾಯಃ ಫಲೇನ ಸಮತಾಂ ವಿಷಯೋಜ್ಝಿತಸ್ಯ ।**
**ಯತ್ ಕೃಷ್ಣ ಸಂಗತ ವಧೂಷು ಲಲಾಮಲೇಪೈಃ**
**ತದ್ಧ್ಯಾನಧೂತದುರಿತೇಷು ಚ ತಸ್ಯ ಸಾಮ್ಯಮ್ ॥ ೬೮ ॥**

ಸಾ=ಆ; ಇಯಂ=ಈ; ಪುರೀ=ಪಟ್ಟಣವು; ವಿಷಯ=ವಿಷಯಗಳನ್ನು; ಉಪಭೋಕ್ತುಃ= ಭೋಗಿಸುವವನಿಗೆ; ವಿಷಯ=ವಿಷಯಗಳಿಂದ; ಉಜ್ಝಿತಸ್ಯ=ರಹಿತನಿಗೆ; ಪ್ರಾಯಃ=ಹೆಚ್ಚಾಗಿ; ಫಲೇನ=ಫಲದಿಂದ; ಸಮತಾಂ=ಸಾಮ್ಯವನ್ನು; ವಿತನುತೇ=ಉಂಟುಮಾಡುತ್ತದೆ. ಯತ್=ಯಾವ ಕಾರಣದಿಂದ; ಕೃಷ್ಣ=ಕೃಷ್ಣನಿಂದ; ಸಂಗತ=ಸಂಬದ್ಧರಾದ; ವಧೂಷು= ನಾರಿಯರಲ್ಲಿ; ಲಲಾಮ=ನಾಮಗಳು; ಲೇಪೈಃ=ಹಚ್ಚುವಿಕೆಯಿಂದ; ತತ್= ಕೃಷ್ಣನ; ಧ್ಯಾನ= ಧ್ಯಾನದಿಂದ; ಧೂತ=ನಾಶವಾದ; ದುರತೇಷು=ಪಾಪವುಳ್ಳವರಲ್ಲಿ; ತಸ್ಯ= ಅವನ; ಸಾಮ್ಯಂ ಚ=ಹೋಲಿಕೆಯನ್ನೂ; ವಿತನುತೇ=ಉಂಟುಮಾಡುತ್ತದೆ.

ಕೃಷ್ಣನ ಊರಲ್ಲಿ ರಾಗಿಗಳಿಗೂ ವಿರಾಗಿಗಳಿಗೂ ಒಂದೇ ರೀತಿಯಾದ ಫಲದಂತೆ ತೋರುತ್ತದೆ. ಯದ್ಯಪಿ ಇದು ವಿರುದ್ಧದಂತೆ ತೋರುತ್ತದೆ. ರಾಜರು ಇದನ್ನು ಚಮತ್ಕಾರ ದಿಂದ ಕೂಡಿಸುತ್ತಾರೆ. ರಾಗಿಗಳಾದ ನಾರಿಯರು ಕೃಷ್ಣನ ಜೊತೆ ವಿಹರಿಸುತ್ತಿದ್ದರು. ಈ ಕಾಲದಲ್ಲಿ ಕೃಷ್ಣನು ಅವರನ್ನು ಬಲವಾಗಿ ಆಲಿಂಗಿಸುತ್ತಿದ್ದನು. ಆಗ ಕೃಷ್ಣನ ಮೈಯಲ್ಲಿದ್ದ ತಿಲಕ, ಚಂದನ ಇವೆಲ್ಲಾ ಅವರ ಮೈಗೆ ಅಂಟುತ್ತಿತ್ತು. ಕೆಲವರದ್ದು ಮೈಬಣ್ಣವೂ ಕಪ್ಪಾಗಿತ್ತು. ಆದ್ದರಿಂದ ಕೃಷ್ಣನಂತೆ ತೋರುತ್ತಿದ್ದರು. ಇನ್ನು ವಿರಕ್ತರ ವಿಚಾರ– ಇವರು ಸದಾ ಕೃಷ್ಣ ಧ್ಯಾನದಲ್ಲೇ ಇರುತ್ತಿದ್ದರು. ಇದರಿಂದ ಸಕಲ ಪ್ರಾರಬ್ಧವನ್ನೂ ಕಳೆದುಕೊಳ್ಳುತ್ತಿದ್ದರು. ಅನಂತರ ದೇಹೋತ್ಕ್ರಮಣ ಮಾಡುತ್ತಿದ್ದರು. ಮೋಕ್ಷದಲ್ಲಿ ದೇವರ ಸಾಧ್ಯವಾದಷ್ಟು ದೇವರ ಸಾಮ್ಯವನ್ನು ಹೊಂದುತ್ತಿದ್ದರು. ಈ ವಿಷಯದಲ್ಲಿ 'ಪರಮಂ ಸಾಮ್ಯಂ ಉಪೈತಿ' ಎಂಬ ಶ್ರುತಿಯು ಸಾಕ್ಷಿ.

**<u>ಸಂದೇಶ</u> : ದ್ವಾರಕೆಯ ವಿಲಾಸಿಗಳು ಬೇರೆ ಊರಿನ ವಿಲಾಸಿಗಳಂತೆ ನಿಕೃಷ್ಟರಲ್ಲ. ದ್ವಾರಕೆಯು ಮೋಕ್ಷಕ್ಕೆ ಸಮಾನವಾದ್ದರಿಂದ ಇಲ್ಲಿಯ ವಿಲಾಸಿಗಳು ಮುಕ್ತ ವಿಲಾಸಿಗಳಿಗೆ ಸದೃಶರು.**

**ದಂತಕ್ಷತಂ ವೀಕ್ಷ್ಯ ನವಂ ನವೋಷ್ಠೇ**
**ಚಿಂತಾದುರಂತಾ ಸಮಭೂತ್ಸಪತ್ನ್ಯಾಃ ।**
**ಅನ್ಯಾ ತದಾಚ್ಛಾದನಯುಕ್ತಿಶೂನ್ಯಾ**
**ತನ್ವೀ ಮುಹುರ್ದರ್ಶಯತೀಹ ದೈನ್ಯಮ್ ॥ ೬೯ ॥**

ಇಹ=ಇಲ್ಲಿ; ನವ=ನೂತನಳ; ಓಷ್ಠೇ=ತುಟಿಯಲ್ಲಿ; ನವಂ=ಹೊಸ; ದಂತ=ಹಲ್ಲಿನ; ಕ್ಷತಂ=ಗಾಯವನ್ನು; ವೀಕ್ಷ್ಯ=ನೋಡಿ; ಸಪತ್ನ್ಯಾಂ=ಸವತಿಯರಿಗೆ; ದುರಂತಾ=ಕೊನೆಯಿಲ್ಲದ; ಚಿಂತಾ=ಚಿಂತೆಯು; ಸಮಭೂತ್=ಆಯಿತು; ತತ್=ಅದನ್ನು; ಆಚ್ಛಾದನ=ಮರೆಮಾಚುವುದರಲ್ಲಿ; ಯುಕ್ತಿ=ಉಪಾಯದಿಂದ; ಶೂನ್ಯ=ರಹಿತಳಾದ; ಅನ್ಯಾ=ಇನ್ನೊಬ್ಬಳು; ತನ್ವೀ=ತರುಣಿಯು; ಮುಹುಃ=ಪುನಃ; ದೈನ್ಯಂ=ದುಃಖವನ್ನು; ದರ್ಶಯತಿ=ತೋರಿಸುತ್ತಾಳೆ.

ಇನ್ನೊಂದು ರೀತಿಯಿಂದ ಹೋಲಿಕೆಯನ್ನು ಕೊಡುತ್ತಾರೆ– ಒಬ್ಬಳು ಕೃಷ್ಣನ ಜೊತೆ ವಿಹರಿಸಿ ಮನೆಯಿಂದ ಹೊರಗೆ ಬಂದಳು. ವಿಹಾರಕಾಲದಲ್ಲಿ ಕೃಷ್ಣನು ಅವಳನ್ನು ಚುಂಬಿಸಿದ್ದನು. ಆಗ ಅವಳ ತುಟಿಯಲ್ಲಿ ಗಾಯವಾಗಿತ್ತು. ಇದನ್ನು ಸವತಿಯು ಕಂಡಳು. ಇವಳು ಕೃಷ್ಣನ ಜೊತೆ ವಿಹರಿಸಿಲ್ಲವಾದ್ದರಿಂದ ವಿರಾಗಿಣಿಯು. ಈಕೆಗೆ ಮನಸ್ಸಿಗೆ ತುಂಬಾ ದುಃಖವಾಯಿತು. ತನಗೆ ಕೃಷ್ಣನ ಜೊತೆ ವಿಹಾರ ಸಿಗದೆ ಇನ್ನೊಬ್ಬಳಿಗೆ ಸಿಕ್ಕಿತಲ್ಲಾ ಎಂದು. ವಿಹರಿಸಿದವಳಿಗೂ ದುಃಖವಾಯಿತು– ತುಟಿಯಲ್ಲಿ ಆದ ಗಾಯವನ್ನು ಮರೆಮಾಚುವುದು ಹೇಗೆ ಎಂದು ತಿಳಿಯದೆ. ತುಟಿಯಲ್ಲಿ ಆದ ಗಾಯವನ್ನು ಜನರು ನೋಡಿದರೆ ಪರಿಹಾಸ ಮಾಡುತ್ತಾರೆ ಎಂದು ನಾಚಿಕೆ. ಸವತಿಯರು ಕಂಡರೆ ಮತ್ಸರಿಸುತ್ತಾರೆ ಎಂದು ಭಯ. ಈ ಮೊದಲೂ ವಿಹರಿಸಿದ್ದಳು. ಆಗ ಕೃಷ್ಣನು ಕೆನ್ನೆಗಳಲ್ಲಿ ಗಾಯ ಮಾಡಿದ್ದನು. ತಲೆಗೆ ಹೊದಿಕೆ ಹಾಕುವ ಮೂಲಕ ಮುಖದ ಗಾಯವನ್ನು ಮರೆಮಾಚಿದ್ದಳು. ಆದರೆ ಈಗ ಮರೆಮಾಚಲು ಉಪಾಯ ತೋರದೆ ತುಂಬಾ ದುಃಖಿಯಾದಳು. ಅಂತೂ ಇಬ್ಬರೂ ರಾಗಿಣಿಯೂ ವಿರಾಗಿಣಿಯೂ ದುಃಖಿಗಳೇ ಆದರು. ಇದೇ ಸಾಮ್ಯ.

<u>ಸಂದೇಶ</u> : **ಸಂಸಾರದಲ್ಲಿ ನಾವೆಲ್ಲರೂ ದುಃಖದಿಂದ ಸಮಾನರು. ಸುಖವುಳ್ಳವರು ಯಾರೂ ಇಲ್ಲ. ಆದ್ದರಿಂದ ಸುಖದಿಂದ ಸಾಮ್ಯ ಹೇಳಲು ಸಾಧ್ಯವಿಲ್ಲ.**

**ವಾಚಾಯಃ ಕೀರ್ತಿತೋಽಲಂ ದಿವಿಜವರಸಭಾರಾಧಿತಾನಾಂ ಮುನೀನಾಂ**
**ಜನ್ಮಾಂತಾದ್ಯೇನಸಾಂ ರಚಯತಿ ವಿಹತಿಂ ಚಿತ್‌ಫಲಂ ಸುಪ್ರಗೀತಃ ।**
**ರುಗ್ವೇದೀ ಪ್ರೌಢಸದ್ವಾಗ್ಮಿಷು ವಿವಿಧಸುವಾಣೀವಿಲಾಸೈಃ ಪ್ರತರ್ಕ್ಯಃ**
**ಶಸ್ತೋಽಸ್ತ್ಯಾದೌ ತಥಾಂತೇ ವಿಮಲಯತಿತತೇರ್ಜಲ್ಪಶುದ್ಧೌ ಸಹಾಯಃ ॥ ೭೦ ॥**

ಯಃ=ಯಾರು; ದವಿಜ=ದೇವತೆಗಳು; ವರ=ಶ್ರೇಷ್ಠವಾದ; ಸಭಾ=ಸಭೆಯಿಂದ; ಆರಾಧಿತಾನಾಂ=ಪೂಜ್ಯರಾದ; ಮುನೀನಾಂ=ಋಷಿಗಳ; ವಾಚಾ=ಮಾತಿನಿಂದ; ಅಲಂ=ಚೆನ್ನಾಗಿ; ಕೀರ್ತಿತಃ=ಹೇಳಲ್ಪಟ್ಟನೋ; ಯಃ=ಯಾರು; ಸು=ಚೆನ್ನಾಗಿ; ಪ್ರಗೀತಃ=

ಹೇಳಲ್ಪಟ್ಟವನಾಗಿ; ಚಿತ್=ಜ್ಞಾನವೆಂಬ; ಫಲಂ=ಫಲವನ್ನು; ಜನ್ಮ=ಹುಟ್ಟಿಗೆ; ಅಂತ=ನಾಶಕ್ಕೆ; ಆದಿ=ಕಾರಣನಾದ; ಏನಸಾಂ=ಪಾಪಗಳ; ವಿಹತಿಂ=ನಾಶವನ್ನು; ರಚಯತಿ=ಮಾಡುತ್ತಾನೋ; ಯಃ=ಯಾರೂ; ರುಕ್=ಕಾಯಿಲೆಯನ್ನು; ಭೇದೀ=ನಾಶಮಾಡುವನೋ; ಪ್ರೌಢ=ಗಂಭೀರವಾದ; ಸತ್=ಒಳ್ಳೆಯ; ವಾಗ್ಮಿಷು=ಮಾತುಗಾರರಲ್ಲಿ; ವಿವಿಧ=ನಾನಾ; ಸುವಾಣೀ=ಒಳ್ಳೆಯ ಮಾತುಗಳ; ವಿಲಾಸ್ಯೈಃ=ವಿಲಾಸಗಳಿಂದ; ಪ್ರತರ್ಕ್ಯ=ಚಿಂತ್ಯನೋ; ಆದೌ=ಸ್ಥಿತಿಯಲ್ಲಿ; ಅಂತೇ=ನಾಶದಲ್ಲಿ; ವಿಮಲ=ನಿರ್ಮಲರಾದ; ಯತಿ=ಯತಿಗಳ; ತತೇಃ=ಸಮೂಹಕ್ಕೆ; ಜಲ್ಪ=ಮಾತುಗಳ; ಶುದ್ಧೌ=ಶುದ್ಧಿಯಲ್ಲಿ; ಸಹಾಯಃ=ಸಹಾಯನೋ; ಸಃ=ಅಂತಹ; ಶಸ್ತಃ=ಯೋಗಿಯಾದ ಕೃಷ್ಣನು; ಅತ್ರ=ಇಲ್ಲಿ; ಅಸ್ತಿ=ಇದ್ದಾನೆ.

ಈ ತನಕ ದ್ವಾರಕೆಯನ್ನು ವರ್ಣಿಸಿದ್ದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ– ದೇವರು ಕೃಷ್ಣರೂಪದಿಂದ ಇಲ್ಲಿ ನೆಲೆಸಿದ್ದಾನೆ. ನಾರದಾದಿಮುನಿಗಳು ಈ ಕೃಷ್ಣನನ್ನು ಬಾಯಿತುಂಬಾ ಹೊಗಳುತ್ತಾರೆ. ನಾರದಾದಿಗಳು ಸಾಮಾನ್ಯರಲ್ಲ. ಇವರು ಸ್ವರ್ಗದಲ್ಲಿ ದೇವತೆಗಳ ಸಭೆಗಳಿಗೆ ಆಗಾಗ ಹೋಗುತ್ತಿರುತ್ತಾರೆ. ಆಗ ಇಂದ್ರಾದಿ ದೇವತೆಗಳು ಎದ್ದುನಿಂತು ಇವರಿಗೆ ಗೌರವವನ್ನು ಕೊಡುತ್ತಿದ್ದರು. ಯದ್ಯಪಿ ಇಂದ್ರಾದಿ ಕೆಲವು ದೇವತೆಗಳು ಇವರಿಗಿಂತ ದೊಡ್ಡವರಾದರೂ ಕೂಡಾ. ನಮ್ಮ ಜೀವನದಲ್ಲಿ ಪ್ರತಿಯೊಂದು ದಿನವೂ ಅನೇಕ ಕರ್ಮಗಳನ್ನು ಮಾಡುತ್ತೇವೆ. ಒಂದೊಂದು ದಿನದ ಕರ್ಮಗಳೂ ಅನೇಕ ಜನನ ಮರಣಗಳಿಗೆ ಕಾರಣಗಳಾಗುತ್ತವೆ. ಜನನಮರಣ ಹಾಗೂ ಇವುಗಳ ಮಧ್ಯಕಾಲದಲ್ಲಿಯೂ ನಾನಾ ರೀತಿಯ ದುಃಖಗಳನ್ನು ಅನುಭವಿಸುತ್ತೇವೆ. ಇದಕ್ಕೆಲ್ಲಾ ಈ ಕರ್ಮಗಳೇ ಕಾರಣ. ಇಂತಹ ಕರ್ಮಗಳು ನಾಶವಾಗಬೇಕು. ಇದಕ್ಕೆ ದೇವರ ಅಪರೋಕ್ಷಜ್ಞಾನವಾಗಬೇಕು. ಇದಕ್ಕೆ ಶಾಸ್ತ್ರೀಯವಾಗಿ ಶ್ರವಣ, ಮನನ, ಧ್ಯಾನಾದಿಗಳನ್ನು ಮಾಡಬೇಕು. ಇದರಿಂದ ಪ್ರೀತನಾದ ದೇವರು ತನ್ನ ದರ್ಶನವನ್ನು ಕೊಟ್ಟು ಕರ್ಮಗಳನ್ನು ನಾಶಮಾಡುತ್ತಾನೆ. ಕೊನೆಗೆ ಸಂಸಾರವೆಂಬ ಲಿಂಗದೇಹವನ್ನು ಭೇದಿಸುತ್ತಾನೆ. ಸ್ವರೂಪಾನಂದವನ್ನು ಪ್ರಕಟಿಸುತ್ತಾನೆ. ಈ ಉದ್ದೇಶದಿಂದಲೇ ಒಳ್ಳೆಯ ಜ್ಞಾನಿಗಲು ಒಂದೆಡೆ ಸೇರುತ್ತಾರೆ. ಇವರು ಆಳವಾದ ಜ್ಞಾನವುಳ್ಳವರು. ಉತ್ತಮ ಮಾತುಗಾರರೂ ಕೂಡಾ. ದುರಾಗ್ರಹಾದಿಗಳಿಗೆ ಅವಕಾಶ ಇಲ್ಲದಂತೆ, ಅಡ್ಡದಾರಿ ಹಿಡಿಯದಂತೆ ಎಚ್ಚರಿಕೆ ವಹಿಸಿ ದೇವರ ಬಗ್ಗೆ ವಿಚಾರವಿನಿಮಯವನ್ನು ಮಾಡುತ್ತಾರೆ. ಇದನ್ನು ಆಚಾರ್ಯಮಧ್ವರು ದ್ವಾದಶಸ್ತೋತ್ರದಲ್ಲಿ 'ತನ್ನ ಕಿಂ ನೇತಿ ವಿದ್ವತ್ಸು ಮಿಮಾಂಸಿತಂ । ಪ್ರೀಣಯಾಮೋ ವಾಸುದೇವಂ' ಎಂದು ಹೇಳಿದ್ದಾರೆ. ಜ್ಞಾನಿಗಳು ಸನ್ಯಾಸಿಗಳಾಗಿದ್ದರೆ ವಿಶೇಷವಾಗಿ ದೇವರ ಬಗ್ಗೆ ಪಾಠಪ್ರವಚನಗಳನ್ನು ಮಾಡುತ್ತಾರೆ. ಇವರಿಗೆ ಪಾವಿತ್ರ್ಯ ಬರುವುದೇ ಈ ದೇವರ ವಿಷಯದಿಂದ. ಇತರರ ಹೆಣಗಳು ಮೈಲಿಗೆಯಾದರೂ ಸನ್ಯಾಸಿಗಳ ಹೆಣ

ಪವಿತ್ರ; ಕಾರಣ– ಅಂತ್ಯಕಾಲದಲ್ಲಿ ಇವರ ಬಾಯಿಂದ ಹರಿನಾಮದ ಉಚ್ಚಾರಣೆ. ಇಂತಹ ದೇವರು ಇಲ್ಲಿ ದ್ವಾರಕೆಯಲ್ಲಿ ಇದ್ದಾನೆ. ಆದ್ದರಿಂದ ದ್ವಾರಕೆಯನ್ನು ರಾಜರು ಪರಿಪರಿಯಾಗಿ ವರ್ಣಿಸಿದ್ದಾರೆ. ಇನ್ನೂ ವರ್ಣಿಸುವ ಶಕ್ತಿ ರಾಜರಿಗಿತ್ತು. ಆದರೆ ಶಿಷ್ಯವೃಂದಕ್ಕೆ ಅರ್ಥೈಸಿಕೊಳ್ಳುವ ಶಕ್ತಿ ಇಲ್ಲ. ಆದ್ದರಿಂದ ಇಷ್ಟಕ್ಕೆ ಉಪಸಂಹರಿಸಿದರು.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸರ್ಗಃ ಸಪ್ತದಶೋ ಮುದಾಮಯಮಭೂತ್ ಸ್ವರ್ಗೀಶ್ವರಾಣಾಂ ಕುಲೇ ॥ ೭೧ ॥**

**॥ ಇತಿ ಸಪ್ತದಶಃ ಸರ್ಗಃ ॥**

## ॥ ಅಥ ಅಷ್ಟಾದಶಃ ಸರ್ಗಃ ॥

**ರಕ್ತಾತ್ಮೀಯತಲತ್ವಿಷಾ ಪ್ರವಿಲಸತ್ ಸ್ವೀಯೋರ್ಧ್ವ ಭಾಗಶ್ರಿಯಾ**
**ಸ್ವಚ್ಛೇಂದುಚ್ಛವಿ ವೃತ್ತಸನ್ನಖರುಚಾ ಸ್ವಾಸಕ್ತಭೂಷಾವತೀಃ ।**
**ಯಚ್ಛಂತ್ಯದ್ಭುತರತ್ನಬಂಧನಮಹಃ ಶ್ರೀರುಗ್ಮಿಣೀಕೃಷ್ಣಯೋಃ**
**ದಂಪತ್ಯೋಃ ಪದಪಂಕಜಾನಿ ಭಜತಾಂ ಸಂಪತ್‌ಕರಾಣಿ ಧ್ರುವಮ್ ॥ ೧ ॥**

ಶಕ್ತ=ಕೆಂಪಾದ; ಆತ್ಮೀಯ=ತನ್ನ; ತಲ=ಪಾದತಲದ; ತ್ವಿಷಾ=ಕಾಂತಿಯಿಂದ; ಪ್ರವಿಲಸತ್=ಶೋಭಿಸುವ; ಸ್ವೀಯ=ತನ್ನ; ಊರ್ಧ್ವ=ಮೇಲಿನ; ಭಾಗ=ಭಾಗದ; ಶ್ರಿಯಾ=ಕಾಂತಿಯಿಂದ; ಸ್ವಚ್ಛ=ಸ್ವಚ್ಛವಾದ; ಇಂದು=ಚಂದ್ರನ; ಛವಿ=ಕಾಂತಿಯಂತೆ; ವೃತ್ತ=ಉರುಟಾದ; ಸತ್=ಒಳ್ಳೆಯ; ನಖ=ಉಗುರಿನ; ರುಚಾ=ಕಾಂತಿಯಿಂದ; ಸ್ವ=ತನ್ನಲ್ಲಿ; ಆಸಕ್ತ=ಇರುವ; ಭೂಷಾ=ಆಭರಣಗಳ; ಆವತೀಃ=ಸಮೂಹಕ್ಕೆ; ಅದ್ಭುತ=ಆಶ್ಚರ್ಯವಾದ; ರತ್ನ=ರತ್ನಗಳ; ಬಂಧನ=ಬಂಧನದ; ಮಹಃ=ಕಾಂತಿಯನ್ನು; ಯಚ್ಛಂತಿ=ಕೊಡುವ; ದಂಪತ್ಯೋಃ=ದಂಪತಿಗಳಾದ; ಶ್ರೀ=ಕಾಂತಿವುಳ್ಳ; ರುಗ್ಮಿಣೀ=ರುಗ್ಮಿಣಿಯ; ಕೃಷ್ಣಯೋಃ= ಕೃಷ್ಣನ; ಪದ=ಚರಣವೆಂಬ; ಪಂಕಜಾನಿ=ಕಮಲಗಳು; ಭಜತಾಂ=ಭಕ್ತರಿಗೆ; ಧ್ರುವಂ= ನಿಶ್ಚಯವಾಗಿಯೂ; ಸಂಪತ್=ಸಂಪತ್ತನ್ನು; ಕರಾಣಿ=ಕೊಡುವವುಗಳು.

ಈ ಸರ್ಗದಲ್ಲಿ ಶ್ರೀರುಗ್ಮೀಶರ ಆಪಾದಮಸ್ತಕದ ವರ್ಣನೆ ಇದೆ– ರಾಜರು ಆರೋಹಣ ಕ್ರಮದಲ್ಲಿ ವರ್ಣಿಸುತ್ತಾರೆ. ಮೊದಲು ದೇವರ ಹಾಗೂ ದೇವಿಯ ಪಾದಗಳ ವರ್ಣನೆ, ಈ ದಂಪತಿಗಳ ಪಾದಗಳ ತಳಭಾಗವು ಕೆಂಪಿದೆ. ಅಲ್ಲಿಂದ ಕೆಂಪಾದ ಕಾಂತಿಯು ಹೊರಡುತ್ತದೆ. ಪಾದಗಳ ಮೇಲ್ಭಾಗವು ನೀಲಬಣ್ಣವುಳ್ಳದ್ದು. ಅಲ್ಲಿಂದ ನೀಲವಾದ ಕಾಂತಿಯು. ಉಗುರುಗಳು ಬೋರಲು ಹಾಕಿದ ಅರ್ಧಚಂದ್ರನಂತಿದೆ. ಬಿಳಿಯಾಗಿದೆ. ಚಂದ್ರನ ಬೆಳದಿಂಗಳಿನಂತೆ ಅಲ್ಲಿಂದ ಹೊರಟ ಕಾಂತಿಯು ಪದ್ಮರಾಗಮಣಿ, ಇಂದ್ರನೀಲ ಮಣಿ ಹಾಗೂ ಮುತ್ತುಗಳು ಇವುಗಳಿಂದ ಹೊರಟ ಕಾಂತಿಗಳು ಮಿಶ್ರವಾದಂತೆ ತೋರುತ್ತಿತ್ತು. ಈ ಕಾಂತಿಗಳಿಂದ ಇವರ ಪಾದಗಳಲ್ಲಿರುವ ಗೆಜ್ಜೆಯೇ ಮೊದಲಾದ ಆಭರಣಗಳಿಗೆ ಒಂದು ವಿಶೇಷವಾದ ಶೋಭೆ ಬಂದಿತ್ತು. ಜಡಗಳಾದ ಗೆಜ್ಜೆಗಳಿಗೆ ಇಂತಹ ಶೋಭೆ ಬಂದಿದೆ ಎಂದಮೇಲೆ ಚೇತನರಾದ ಭಕ್ತರು ಇವರ ಪಾದಗಳನ್ನು ಆಶ್ರಯಿಸಿದರೆ ವಿಲಕ್ಷಣವಾದ ಸಂಪತ್ತು ಬರುವುದರಲ್ಲಿ ಆಶ್ಚರ್ಯವಿಲ್ಲ.

**ಲಕ್ಷ್ಮೀಸ್ತನಸ್ಫುರಿತಕುಂಕುಮಪಂಕಸಂಗೇ**
**ಭಕ್ತ್ಯಾ ಸ್ಮರನ್ಮುನಿಮನಃ ಸರಸೀನಿರೂಢೇ ।**

ಉತ್ತುಂಗರಮ್ಯನಖಮೌಕ್ತಿಕಪುಂಜಶೋಭೇ
ರಕ್ತಾಂಗುಲೀಪರಿಲಸದ್ದಲಪಂಕ್ತಿಕಾಂತೇ ॥ ೨ ॥

ಪ್ರೀತ್ಯಾ ಕ್ವಣದ್ವದನಹಂಸಕದಂಬಜೃಂಭೀ
ಮುಕ್ತಾಫಲೋಲ್ಲಸಿತಕಿಂಕಿಣಿಮುಖ್ಯಭೂಷೇ ।
ತದ್ವಕ್ತ್ರಜಾತಕವಿಗೀತಮನೋಜ್ಞರೇಖಾ
ಕಲ್ಪಧ್ವಜಾಂಕುಶಯವಾಶನಿಲಕ್ಷ್ಮ ಲಕ್ಷ್ಯೇ ॥ ೩ ॥

ಉನ್ಮೀಲತೇ ವಿಮಲಬೋಧದಿನೇಶಭಾಸಾ
ಸಮ್ಮಾನನೀಯಗುಣಭಾಜಿ ಕಲಂಕಿದೂಕಿ ।
ಸೌರಭ್ಯಲುಬ್ಧಪವನೀನ ಸದಾ ಪರೀತೇ
ಕಾರುಣ್ಯಮಾನ್ಯ ಮಕರಂದ ಮಹಾಪ್ರವಾಹೇ ॥ ೪ ॥

ನಿತ್ಯಾನುಷಕ್ತನಿಜಭೃತ್ಯವಿಲೋಚನಾಖ್ಯ
ಮತ್ತಾನುರಕ್ತಮಧುಪೈಃ ಸತತಂ ಗೃಹೀತೇ ।
ಸತ್ ಕರ್ಣಿಕೋಜ್ವಲತಲತ್ವಿಷಿ ಸಂತತಂ
ಸ್ಯಾತ್ ಕೃಷ್ಣಾಂಘ್ರಿಚಾರುಕಮಲೇ ಮಮ ಚಿತ್ತಭೃಂಗಃ ॥ ೫ ॥

ಲಕ್ಷ್ಮೀ=ರಮೆಯ; ಸ್ತನ=ಸ್ತನಗಳಲ್ಲಿ; ಸ್ಫುರಿತ=ಶೋಭಿಸುವ; ಕುಂಕುಮ=ಕುಂಕುಮವೆಂಬ; ಪಂಕ=ಕೆಸರಿನ; ಸಂಗೇ=ಸಂಪರ್ಕವುಳ್ಳ; ಭಕ್ತ್ಯಾ=ಭಕ್ತಿಯಿಂದ; ಸ್ಮರತ್=ಸ್ಮರಿಸುವ; ಮುನಿ=ಋಷಿಗಳ; ಮನಃ=ಮನವೆಂಬ; ಸರಸೀ=ಸರೋವರದಲ್ಲಿ; ನಿರೂಢೇ=ಇರುವ; ಉತ್ತುಂಗ=ಎತ್ತರದ; ರಮ್ಯ=ಚಂದದ; ನಖ=ಉಗುರೆಂಬ; ಮೌಕ್ತಿಕ=ಮುತ್ತುಗಳ; ಪುಂಜ=ಸಮೂಹದಿಂದ; ಶೋಭೇ=ಶೋಭಿಸುವ; ರಕ್ತ=ಕೆಂಪಾದ; ಅಂಗುಲೀ=ಬೆರಳುಗಳೆಂಬ; ಪರಿಲಸತ್=ಶೋಭಿಸುವ; ದಲ=ಎಸಳುಗಳ; ಪಂಕ್ತಿ=ಸಮೂಹದಿಂದ; ಕಾಂತೇ=ಶೋಭಿಸುವ.

ಪ್ರೀತ್ಯಾ=ಪ್ರೀತಿಯಿಂದ; ಕ್ವಣತ್=ಶಬ್ದಮಾಡುವ; ವದನ=ಮುಖವುಳ್ಳ; ಹಂಸ=ಹಂಸಗಳ; ಕದಂಬ=ಸಮೂಹದಂತೆ; ಜೃಂಭಿ=ಶೋಭಿಸುವ; ಮುಕ್ತಾಫಲ=ಮುತ್ತುಗಳಿಂದ; ಉಲ್ಲಸಿತ=ಶೋಭಿಸುವ; ಕಿಂಕಿಣಿ=ಚಿಕ್ಕ ಮಣಿಗಳೇ ಮೊದಲಾದ; ಭೂಷೇ=ಆಭರಣವುಳ್ಳ; ತತ್=ಹಂಸಗಳ; ವಕ್ತ್ರ=ಮುಖದಿಂದ; ಜಾತ=ಉಂಟಾದ; ಕವಿ=ಜ್ಞಾನಿಗಳಿಂದ; ಗೀತ=ಹೇಳಲ್ಪಟ್ಟ; ಮನೋಜ್ಞ=ಚಂದದ; ರೇಖಾಕಲ್ಪ=ಗೆರೆಗಳಂತಿರುವ; ಧ್ವಜ=ಧ್ವಜವು; ಅಂಕುಶ=ಅಂಕುಶವು; ಯವ=ಜವೆಗೋಧಿ; ಅಶನಿ=ವಜ್ರಾಯುಧಗಳ; ಲಕ್ಷ್ಯ=ಚಿಹ್ನೆಗಳಿಂದ; ಲಕ್ಷ್ಯೇ=ಚಂದದ.

ವಿಮಲ=ಶುದ್ಧವಾದ; ಬೋಧ=ಜ್ಞಾನವೆಂಬ; ದಿನೇಶ=ಸೂರ್ಯನ; ಭಾಸಾ=ಬೆಳಕಿನಿಂದ; ಉನ್ಮೀಲಿತೇ=ಅರಳುವ; ಸತ್=ಸಜ್ಜನರಿಗೆ; ಮಾನನೀಯ=ಪೂಜ್ಯವಾದ; ಗುಣ=ಗುಣಗಳನ್ನು; ಭಾಜ=ಹೊಂದಿರುವ; ಕಲಂಕಿ=ದೋಷಿಗಳಿಗೆ; ದೂರೇ=ದೂರವಾದ; ಸೌರಭ್ಯ=ಪರಿಮಳದಲ್ಲಿ; ಲುಬ್ಧ=ಆಸಕ್ತನಾದ; ಪವನೇನ=ಗಾಳಿಯಿಂದ; ಸದಾ=ಯಾವಾಗಲೂ; ಪರೀತೇ=ಕೂಡಿದ; ಕಾರುಣ್ಯ=ದಯೆಯೆಂಬ; ಮಾನ್ಯ=ಒಳ್ಳೆಯ; ಮಕರಂದ=ಮಕರಂದದ; ಮಹಾ=ದೊಡ್ಡ; ಪ್ರವಾಹೇ=ಪ್ರವಾಹವುಳ್ಳ.

ನಿತ್ಯ=ಸದಾ; ಅನುಷಕ್ತ=ಸಂಬದ್ಧವಾದ; ನಿಜ=ತನ್ನ; ಭೃತ್ಯ=ಸೇವಕರ; ವಿಲೋಚನ=ಕಣ್ಣುಗಳೆಂಬ; ಆಖ್ಯಾ=ಹೆಸರುಳ್ಳ; ಮತ್ತ=ಮದಭರಿತಗಳಾದ; ಅನುರಕ್ತ=ಆಸಕ್ತಗಳಾದ; ಮಧುಪೈಃ=ಭ್ರಮರಗಳಿಂದ; ಸತತಂ=ಯಾವಾಗಲೂ; ಗೃಹೀತೇ=ಸ್ವೀಕೃತವಾದ; ಸತ್=ಒಳ್ಳೆಯ; ಕರ್ಣಿಕಾ=ತಾವರೆಯ ಬೀಜದಂತೆ; ಉಜ್ವಲ=ಶೋಭಿಸುವ; ತಲ=ಪಾದತಲದ; ತ್ವಿಷಿ=ಕಾಂತಿವುಳ್ಳ; ಕೃಷ್ಣ=ಕೃಷ್ಣನ; ಅಂಘ್ರಿ=ಚರಣವೆಂಬ; ಕಮಲೇ=ಕಮಲದಲ್ಲಿ; ಮಮ=ನನ್ನ; ಚಿತ್ತ=ಮನವೆಂಬ; ಭೃಂಗಃ=ದುಂಬಿಯು; ಸಂತತಂ=ಯಾವಾಗಲೂ; ಸ್ಯಾತ್=ಇರಲಿ.

ಎಲ್ಲರೂ ದೇವರ ಚರಣವನ್ನು ಕಮಲಕ್ಕೆ ಹೋಲಿಸುತ್ತಾರೆ. ಸ್ವಲ್ಪವೂ ಸಾಮ್ಯ ಇಲ್ಲದೆ ಹೋಲಿಸಲು ಆಗುವುದಿಲ್ಲ. ಸಾಮ್ಯ ಏನು ಎಂದು ಗೊತ್ತಿಲ್ಲ. ಶ್ರೀ ವಾದಿರಾಜರು ಎಲ್ಲಾ ರೀತಿಯಿಂದಲೂ ಸಾಮ್ಯವನ್ನು ತಿಳಿಸುತ್ತಾರೆ. ತಾವರೆಗೆ ಪಂಕಜ ಎಂದು ಹೆಸರಿದೆ. ಅಂದರೆ ಕೆಸರಲ್ಲಿ ಹುಟ್ಟಿದ್ದು ಎಂದರ್ಥ. ಕೆಸರಿ ಸಂಬಂಧ ಇದೆ. ಕೃಷ್ಣನು ಮಲಗಿರುವಾಗ ಆತನ ಪಾದವನ್ನು ರುಗ್ಮಿಣಿ ಅಥವಾ ಭಾಮೆಯು ಒತ್ತುತ್ತಾರೆ. ಅವರು ಕೃಷ್ಣನ ಪಾದವನ್ನು ಗೌರವದಿಂದ ತಮ್ಮ ಎದೆಯ ಮೇಲೆ ಇಡುತ್ತಾರೆ. ಎದೆಯಲ್ಲಿ ತುಂಬಾ ಕುಂಕುಮ ಕೇಸರಿಯಿಂದ ಕೂಡಿದ ಚಂದನವು ಇದೆ. ಅದೆಲ್ಲಾ ಕೃಷ್ಣನ ಪಾದಕ್ಕೆ ಅಂಟುತ್ತದೆ. ಹೀಗೆ ಚಂದನವೆಂಬ ಕೆಸರಿನ ಸಂಪರ್ಕ ಕೃಷ್ಣನ ಪಾದಕಮಲಕ್ಕೆ ಇದೆ. ಸಾತ್ವಿಕರ ಮನಸ್ಸು ಸದಾ ಕೊಳದ ನೀರಿನಂತೆ ಶುದ್ಧ, ಗಂಭೀರ, ವಿಶಾಲ. ಇಂತಹ ಮನದಲ್ಲಿ ಕೊಳದ ತಾವರೆಯಂತೆ ದೇವರ ಪಾದವು ಚೆನ್ನಾಗಿ ಅರಳುತ್ತದೆ. ತಾವರೆಗೆ ಹೇಗೋ ಹಾಗೆ ಪಾದಕ್ಕೂ ಕೊಳದ ಸಂಬಂಧ ಇದೆ. ಆನೆಗಳ ತಲೆಗಳಿಂದ, ಬಿದಿರುಗಳ ಹಿಂಡಿಲಿನಿಂದ ಮುತ್ತುಗಳು ಹುಟ್ಟುತ್ತವೆ. ಹಾಗೆಯೇ ಕಮಲಗಳಿಂದಲೂ ಎಂದು ಕವಿಗಳ ಕಲ್ಪನೆ. ದೇವರ ಕಾಲಿನ ಉಗುರುಗಳು ಮುತ್ತುಗಳಂತೆ ಶುಭ್ರಗಳಾಗಿವೆ. ಉಗುರುಗಳೆಂಬ ಮುತ್ತುಗಳಿಂದ ಶೋಭಿಸಿವೆ. ಕಮಲದ ದಳಗಳ ಹೊರಮೈ ಕೆಸರಿನಿಂದಾಗಿ ಕಪ್ಪಾಗಿ ಒಳಮೈ ಕೆಂಪಗಿರುತ್ತದೆ. ದೇವರ ಪಾದದ ಬೆರಳುಗಳು ಮೇಲ್ಮೈ ನೀಲವಾಗಿ ಅಡಿಭಾಗ ಕೆಂಪಾಗಿ ದಳಗಳಂತೆ ಶೋಭಿಸುತ್ತಿವೆ.

ಹಂಸಗಳಿಗೆ ಕಮಲಗಳೆಂದರೆ ತುಂಬಾ ಪ್ರೀತಿ. ಇವುಗಳು ಶಬ್ದ ಮಾಡುತ್ತಾ ಕಮಲಗಳ ಸುತ್ತಮುತ್ತ ತಿರುಗುತ್ತವೆ. ಹಾಗೆಯೇ ದೇವರ ಪಾದಗಳಲ್ಲಿ ಗೆಜ್ಜೆಗಳಿವೆ.

ಅವುಗಳಿಗೆ ಮುತ್ತುಗಳನ್ನು ಪೋಣಿಸಿದ್ದಾರೆ. ಚಿಕ್ಕ ಚಿಕ್ಕ ಮಣಿಗಳು ಗಂಟೆಗಳಂತೆ ಧ್ವನಿಗೈಯುತ್ತವೆ. ಹಂಸಗಳ ಮೈ ಬಿಳಿ. ಶಬ್ದಮಾಡುವ ಕೊಕ್ಕುಗಳು ಕೆಂಪು. ಇಲ್ಲಿ ಮುತ್ತುಗಳು ಬಿಳಿ. ಶಬ್ದ ಮಾಡುವ ಗಂಟೆಗಳು ಚಿನ್ನದ್ದಾದ್ದರಿಂದ ಕೆಂಪುಮಿಶ್ರಿತ ಹಳದಿ. ಈ ಗೆಜ್ಜೆಗಳೂ ದೇವರ ಪಾದದ ಸುತ್ತ ಇವೆ. ಹಂಸಗಳು ತಮ್ಮ ಕೊಕ್ಕುಗಳಿಂದ ಕಮಲದ ದಳಗಳನ್ನು ಚುಚ್ಚುವ ಮೂಲಕ ಅವುಗಳಲ್ಲಿ ನಾನಾ ರೀತಿಯ ಗೆರೆಗಳನ್ನು ಮಾಡುತ್ತವೆ. ಇವುಗಳನ್ನು ಕವಿಗಳು ಹೊಗಳುತ್ತಾರೆ. ದೇವರ ಪಾದತಳದಲ್ಲಿ ಧ್ವಜ, ವಜ್ರಾಯುಧ, ಜವೆಗೋಧಿ, ಅಂಕುಶ, ಪದ್ಮ ಇವುಗಳ ಗೆರೆಗಳಿವೆ. ಜ್ಞಾನಿಗಳು ಇವುಗಳನ್ನು ತಮ್ಮ ಶಾಸ್ತ್ರೀಯ ಶೈಲಿಯಲ್ಲಿ ಸದಾ ಹೊಗಳುತ್ತಾರೆ.

ತಾವರೆಗಳು ಸೂರ್ಯನ ಬೆಳಕಿನಿಂದ ಅರಳುತ್ತವೆ. ಬೆಳೆಯುತ್ತವೆ. ಜ್ಞಾನಿಗಳು ದೇವರ ಪಾದಗಳನ್ನು ಧ್ಯಾನಿಸುತ್ತಾರೆ. ಅವುಗಳಲ್ಲಿ ಎಲ್ಲಾ ಗುಣಗಳನ್ನು ಅನುಸಂಧಾನ ಮಾಡುತ್ತಾರೆ. ತಮ್ಮ ಜ್ಞಾನವೆಂಬ ಸೂರ್ಯಪ್ರಕಾಶದಿಂದ ಪಾದಗಳನ್ನು ತ್ರಿವಿಕ್ರಮ ಪಾದಗಳನ್ನಾಗಿ ಬೆಳೆಸಿಕೊಳ್ಳುತ್ತಾರೆ. ಕಮಲವು ಸುಂದರ, ಮೃದು, ಪರಿಮಳ. ಪಾದಗಳೂ ಹಾಗೆಯೇ. ಕಮಲಗಳ ಹಾಗೂ ಪಾದಗಳ ಈ ಸೌಂದರ್ಯಾದಿಗಳನ್ನು ಮತ್ಸರರಹಿತರು ಯಾವಾಗಲೂ ಆಸ್ವಾದಿಸುತ್ತಾರೆ. ಜ್ಞಾನಿಗಳು ಎಲ್ಲರೂ ದೇವರ ಪಾದಗಳನ್ನು ನಾನಾ ರೀತಿಯಲ್ಲಿ ಚಿಂತಿಸುವ ಮೂಲಕ ಸೇವಿಸುತ್ತಾರೆ. ಆದರೆ ನಿದ್ರಾ ಹಸಿವು ಇತ್ಯಾದಿ ಉಪದ್ರವಗಳ ಪ್ರಸಂಗದಲ್ಲಿ ಮರೆಯುವುದೂ ಉಂಟು. ಆದರೆ ಋಜುಗಳಾದ ವಾಯುದೇವರು ಈ ಗುಣಗಳಲ್ಲಿ ಲೋಭದಿಂದ ಸದಾ ಧ್ಯಾನದಲ್ಲೇ ಇರುತ್ತಾರೆ. ನಿದ್ರಾದಿಗಳ ಉಪದ್ರವ ಇರುವುದಿಲ್ಲ. ಕಮಲಗಳ ವಿಷಯದಲ್ಲಿಯೂ ಸೂರ್ಯನ ಪ್ರಭೆ ಸಾಯಂಕಾಲ ಇರುವುದಿಲ್ಲ. ಆದರೆ ಗಾಳಿಯು ಸದಾ ಕಮಲಗಳ ಪರಿಮಳವನ್ನು ಹಿಡಿದುಕೊಂಡು ಅಲ್ಲೇ ಸುತ್ತುತ್ತಿರುತ್ತವೆ. ದೇವರ ಪಾದಗಳಲ್ಲಿ ಯಾವ ರೀತಿಯ ಕಲಂಕಗಳೂ ಅಂದರೆ ದೋಷಗಳೂ ಇಲ್ಲ. ಅಥವಾ ದುಷ್ಟರಿಗೆ ಇವನ ಪಾದಗಳು ದೊರಕುವುದಿಲ್ಲ. ಕಮಲಗಳೂ ಕಲಂಕಿಯಿಂದ ದೂರ. ಸೂರ್ಯೋದಯಕ್ಕೆ ಅರಳುವ ಕಮಲಗಳು ಚಂದ್ರ ಬಂದಾಗ ಮುದುಡುತ್ತವೆ. ಚಂದ್ರನಲ್ಲಿ ಕಪ್ಪಾದ ಕುರುಹುಗಳಿವೆ. ಒಂದು ರೀತಿಯಲ್ಲಿ ಕಲಂಕದಂತೆ. ಆದ್ದರಿಂದ ಚಂದ್ರನು ಕಲಂಕಿ. ಹೀಗೆ ಪಾದ ಹಾಗೂ ಕಮಲಗಳು ಕಲಂಕಿಯಿಂದ ದೂರ. ಉತ್ತಮ ಜಾತಿಯ ಕಮಲಗಳಲ್ಲಿ ಮಕರಂದವು ಬಹಳವಾಗಿ ಹರಿಯುತ್ತದೆ. ದೇವರ ಎಲ್ಲಾ ಅವಯವಗಳಿಗೂ ಅಭೇದ. ಕಣ್ಣುಗಳ ಕೆಲಸವನ್ನು ಪಾದಗಳು ಮಾಡುತ್ತವೆ. ಕಣ್ಣುಗಳಲ್ಲಿ ಭಕ್ತರ ವಿಷಯದಲ್ಲಿ ಕಾರುಣ್ಯವನ್ನು ಹರಿಸುವಂತೆ ಪಾದಗಳೂ ಹರಿಸುತ್ತವೆ. ಕಾರುಣ್ಯವೆಂಬ ಮಕರಂದವನ್ನು ಹರಿಸುವ ಪಾದಗಳೆಂಬ ಕಮಲಗಳು.

ಕಮಲಗಳಲ್ಲಿ ಭ್ರಮರಗಳು ಯಾವಾಗಲೂ ಹಾರುತ್ತವೆ. ತುಂಬಾ ಉತ್ಸಾಹದಿಂದಲೂ ಇರುತ್ತವೆ. ಮಕರಂದವನ್ನು ಹೀರುವ ಸಲುವಾಗಿ ಬಹಳವಾಗಿ ಕಮಲಗಳಿಗೆ ತಾಗಿಕೊಂಡೇ

ಇರುತ್ತವೆ. ಮಕರಂದದಿಂದಲೇ ಅವುಗಳು ಬಲಿಷ್ಠಗಳಾಗುವುದು. ಪಾದಗಳ ವಿಷಯದಲ್ಲಿ –ದೇವರ ಭಕ್ತರ ಕಣ್ಣುಗಳೇ ಭ್ರಮರಗಳು. ಕಣ್ಣುಗಳೂ ಭ್ರಮರದಂತೆ ಚಂಚಲ, ಕಪ್ಪು. ರಕ್ಷೆಗಳೆಂಬ ರೆಕ್ಕೆಗಳು, ರೋಮಗಳೆಂಬ ಕಾಲುಗಳು, ಈ ಕಣ್ಣುಗಳು ಸದಾ ದೇವರ ಪಾದಗಳನ್ನೇ ನೋಡುತ್ತವೆ. ತುಂಬಾ ಪ್ರೀತಿಯೂ ಇರುತ್ತದೆ. ಕಾರುಣ್ಯವನ್ನು ಪಡೆಯುವ ಸಲುವಾಗಿ ಚುರುಕುತನವೂ ಸೇರಿದೆ. ಕಾರುಣ್ಯದಿಂದಲೇ ಪುಷ್ಪಗಳಾಗುತ್ತವೆ. ತಾವರೆಗಳ ಮಧ್ಯದಲ್ಲಿ ಒಳಭಾಗದಲ್ಲಿ ಉರುಟಾದ ಒಂದು ಭಾಗ ಇದೆ. ಇದಕ್ಕೆ ಕರ್ಣಿಕಾ ಎಂದು ಹೆಸರು. ಇದು ಕೆಂಪಾಗಿ ತಳಭಾಗದಲ್ಲಿದೆ. ಅದರಿಂದಾಗಿಯೂ ತಾವರೆಗೆ ಶೋಭೆ. ಅದೇ ರೀತಿ ದೇವರ ಪಾದಗಳ ತಳಭಾಗವೂ ಕೆಂಪಿದೆ. ಕೆಂಪಾದ ಕಾಂತಿಯಿಂದ ಪಾದಗಳಿಗೆ ಶೋಭೆ ಇದೆ. ಇಂತಹ ಪಾದಗಳೆಂಬ ಕಮಲಗಳಲ್ಲಿ ಮನವೆಂಬ ಭ್ರಮರವು ಇರಲಿ ಎಂದು ರಾಜರು ನಮ್ಮ ಬಗ್ಗೆ ದೇವರಲ್ಲಿ ಪ್ರಾರ್ಥಿಸುತ್ತಾರೆ.

**ಶಂಖಾಂಭೋಜನಿಧೀ ಸಮೀಹಿತಧನ ಪ್ರತ್ಯರ್ಪಣೇನಾಂಕುಶಂ**
**ಹಸ್ತಿನ್ಯಾಂತರಕರ್ಷಣೇನ ದಿತಿಜಪ್ರಧ್ವಂಸನೇನಾಶನಿಮ್ ।**
**ನಿರ್ಜಿತ್ಯ ಧ್ವಜಮುತ್ಪಲಾಕಮದಧಾದ್ಯಃ ಕೃಷ್ಣಪಾದೋ ಮುದಾ**
**ಪ್ರಾಯಸ್ತೇಽಪಿ ಚ ತಸ್ಯ ಲಕ್ಷಣಗಣವ್ಯಾಜೇನ ಭೇಜುಸ್ತಲಮ್ ॥ ೬ ॥**

ಯಃ=ಯಾವ; ಕೃಷ್ಣ=ಕೃಷ್ಣನ; ಪಾದ=ಪಾದವು; ಸಮಾಹಿತ=ಅಪೇಕ್ಷಿತವಾದ; ಧನ= ಸಂಪತ್ತಿನ; ಪ್ರತ್ಯರ್ಪಣೇನ=ಕೊಡುವುದರಿಂದ; ಶಂಖ=ಶಂಖವೆಂಬ; ಅಂಭೋಜ=ಪದ್ಮ ವೆಂಬ; ನಿಧೀ=ಸಂಪತ್ತನ್ನು; ಹಸ್ತಿನೀ=ನಾರಿಯರ; ಆಂತರ=ಮನವನ್ನು; ಆಕರ್ಷಣೇನ= ಸೆಳೆದದ್ದರಿಂದ; ಅಂಕುಶಂ=ಅಂಕುಶವನ್ನು; ದಿತಿಜ=ದೈತ್ಯರ; ಪ್ರಧ್ವಂಸನೇನ=ನಾಶದಿಂದ; ಅಶನಿಂ=ವಜ್ರಾಯುಧವನ್ನು; ನಿರ್ಜಿತ್ಯ=ಗೆದ್ದು; ಉತ್=ಎತ್ತರದ; ಪತಾಕಂ=ಪತಾಕೆವುಳ್ಳ; ಧ್ವಜಂ=ಧ್ವಜವನ್ನು; ಅದಧಾತ್=ಧರಿಸಿತೋ; ಮುದಾ=ಸಂತೋಷದಿಂದ; ಪ್ರಾಯಃ= ಬಹುಶಃ; ತೇ ಅಪಿ ಚ=ಅವುಗಳಾದರೂ; ಲಕ್ಷಣ=ಚಿಹ್ನೆಗಳ; ಗಣ=ಸಮೂಹದ; ವ್ಯಾಜೇನ= ನಿಮಿತ್ತದಿಂದ; ತಸ್ಯ=ಕೃಷ್ಣನ; ತಲಂ=ಪಾದತಲವನ್ನು; ಭೇಜುಃ=ಹೊಂದಿದವು.

ಕೃಷ್ಣನ ಪಾದಗಳ ಅಡಿಭಾಗದಲ್ಲಿ ಶಂಖ, ಧ್ವಜ, ಕಮಲ, ಅಂಕುಶ, ವಜ್ರಾಯುಧಗಳ ರೇಖೆಗಳಿವೆ. ಉತ್ತಮರ ಪಾದಗಳಲ್ಲಿ ಇವು ಇರುವುದು ಸಹಜ. ಇವುಗಳಿಂದಾಗಿಯೇ ಅವರ ಉತ್ತಮತ್ವವು ಗೊತ್ತಾಗುವುದು. ಆದರೆ ರಾಜರು ಕವಿತ್ವದ ಶೈಲಿಯಲ್ಲಿ ಇವುಗಳ ಅಸ್ತಿತ್ವವನ್ನು ವಿವರಿಸುತ್ತಾರೆ. ಇದರಿಂದ ದೇವರಲ್ಲಿ ನಮಗೆ ಹೆಚ್ಚಿನ ಮಹತ್ವಬುದ್ಧಿ ಬರಲು ಸಹಕಾರಿಯಾಗುತ್ತದೆ. ಹೇಗೆಂದರೆ–

ನವವಿಧ ಸಂಪತ್ತುಗಳಿವೆ. ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ ಇತ್ಯಾದಿ. ಸಂಪತ್ತುಗಳ ಮೊತ್ತಗಳಲ್ಲಿ ಹೆಚ್ಚುಕಡಿಮೆ ಇರುತ್ತದೆ. ಆಗ ಒಂದೊಂದು ಇಂತಹ

ಹೆಸರುಗಳು ಬರುತ್ತವೆ. ಈ ಒಂಭತ್ತು ರೀತಿಯ ಸಂಪತ್ತುಗಳು ಕುಬೇರನಲ್ಲಿವೆ. ಈ ಸಂಪತ್ತುಗಳನ್ನು ಆ ಆ ಹೆಸರಿನಿಂದ ಧ್ಯಾನಿಸಿದರೆ ಈ ಹೆಸರುಗಳ ಅಭಿಮಾನಿದೇವತೆಗಳು ನಮಗೆ ಐಹಿಕ ಸಂಪತ್ತನ್ನು ಒದಗಿಸುತ್ತವೆ. ಆದರೆ ಕೃಷ್ಣನ ಪಾದವನ್ನು ಐಹಿಕ ಮಾತ್ರವಲ್ಲದೆ ಆಮುಷ್ಮಿಕಸಂಪತ್ತೂ ಲಭಿಸುತ್ತದೆ, ಈ ಶಂಖ ಪದ್ಮ ಹೆಸರುಗಳ ಧ್ಯಾನದಿಂದ ಲಭಿಸು ವುದಕ್ಕಿಂತ ಹೆಚ್ಚು. ಅಂಕುಶವು ಆನೆಗಳನ್ನು ತಮ್ಮತ್ತ ಸೆಳೆಯುತ್ತದೆ. ಅವುಗಳು ಮನವನ್ನು ಬೇರೆ ಕಡೆಗೆ ಕಳಿಸದಂತೆ ಮಾಡುತ್ತದೆ. ಹಸ್ತಿನಿಯರು ಎಂದರೆ ನಾರಿಯರೂ ಆಗುತ್ತಾರೆ. ನಾರಿಯರು ಸದಾ ಹಾಸವುಳ್ಳವರಾದ್ದರಿಂದ ಇಂತಹ ನಾರಿಯರ ಮನವನ್ನು ಈ ಪಾದಗಳು ತನ್ನತ್ತ ಸೆಳೆಯುತ್ತವೆ. ಅಂಕುಶವನ್ನು ಎಣಿಸಿದಾಕ್ಷಣ ಆನೆಗಳು ಸರಿದಾರಿಗೆ ಬರುವುದಿಲ್ಲ. ಅಂಕುಶದಿಂದ ತಿವಿಯಬೇಕು. ಆದರೆ ಕೃಷ್ಣನ ಪಾದದ ಸ್ಮರಣೆಮಾತ್ರ ಸಾಕು. ಸಂಪರ್ಕವೇ ಆಗಬೇಕಾಗಿಲ್ಲ. ವಜ್ರಾಯುಧವು ಅನೇಕ ದೈತ್ಯರನ್ನು ಧ್ವಂಸ ಮಾಡಿದೆ. ಕೃಷ್ಣನ ಪಾದವು ಬಲಿಯೇ ಮೊದಲಾದವರನ್ನು ನಿಗ್ರಹಿಸಿದೆ. ಇಂದ್ರನ ವಜ್ರಾಯುಧದ ಹೊಡೆತವಾದರೂ ಒಮ್ಮೊಮ್ಮೆ ತಪ್ಪುತ್ತೆ. ಆದರೆ ಕೃಷ್ಣನು ಪಾದದಿಂದ ಯಾರನ್ನು ನಿಗ್ರಹಿಸಬೇಕೆಂದು ಸಂಕಲ್ಪಿಸಿದ್ದನೋ ಅವರೆಂದೂ ತಪ್ಪಿಸಿಕೊಳ್ಳಲಿಲ್ಲ. ಈ ರೀತಿಯಾಗಿ ಕೃಷ್ಣನ ಪಾದವು ಇವೆಲ್ಲವನ್ನೂ ಜಯಿಸಿದೆ. ಜಯಿಸಿದ ರಾಜರುಗಳು ಧ್ವಜವನ್ನು ಹಿಡಿದುಕೊಂಡು ಚೈತ್ಯಯಾತ್ರೆಯನ್ನು ಮಾಡುವಂತೆ ಕೃಷ್ಣನ ಪಾದವು ಧ್ವಜವನ್ನು ಹಿಡಿದುಕೊಂಡು ಸಂಚರಿಸುತ್ತಿದೆ. ಸೋತವರು ಏನು ಮಾಡುತ್ತಾರೆ? ಗೆದ್ದವರ ಪಾದತಲದಲ್ಲಿ ಬಂದು ವಾಸಿಸುತ್ತಾರೆ. ಅದೇ ರೀತಿ ಸೋತ ಈ ಶಂಖಾದಿಗಳು ರೇಖೆಗಳ ರೂಪದಿಂದ ಕೃಷ್ಣನ ಪಾದತಲವನ್ನು ಆಶ್ರಯಿಸಿವೆ.

**ವಿರುದ್ಧಗತಯೋಽಪಿ ಹರೌ ವಿರೋಧಂ**
**ಸಂತ್ಯಜ್ಯ ಸಂತಿ ಬಹುಶಸ್ತ್ವಿತಿ ಬೋಧಯಂತೌ**
**ಪದ್ಮಸ್ಥಚಂದ್ರಕಲಿಕಾದ್ಯುತಿಮನ್ನಖಾಂಕೌ**
**ಶ್ರೀರುಗ್ಮಿಣೀಶಚರಣೌ ಶರಣಂ ಮಮಾಸ್ತಾಮ್** ॥ ೭ ॥

ವಿರುದ್ಧ=ವಿರುದ್ಧಗಳಾದ; ಗತಯಃ ಅಪಿ=ಸ್ವಭಾವಗಳಾದರೂ; ಬಹುಶಃ=ಬಹಳ ಧರ್ಮಗಳು; ವಿರೋಧಂ=ವಿರೋಧವನ್ನು; ಸಂತ್ಯಜ್ಯ=ಬಿಟ್ಟು; ಹರೌ=ದೇವರಲ್ಲಿ; ಸಂತಿ= ಇವೆ; ಇತಿ=ಎಂದು; ಬೋಧಯಂತೌ=ತಿಳಿಸುವ; ಪದ್ಮ=ಕಮಲದಲ್ಲಿ; ಸ್ಥ=ಇರುವ; ಚಂದ್ರ= ಚಂದ್ರನ; ಕಲಿಕಾ=ಕಲೆಯ; ದ್ಯುತಿಮತ್=ಕಾಂತಿವುಳ್ಳ; ನಖ=ಉಗುರುಗಳು; ಅಂಕೌ= ಚಿಹ್ನೆವುಳ್ಳ; ಶ್ರೀ=ಕಾಂತಿವುಳ್ಳ; ರುಗ್ಮಿಣೀ=ರುಗ್ಮಿಣಿಯ; ಈಶ=ಕೃಷ್ಣನ; ಚರಣೌ=ಪಾದಗಳು; ಮಮ=ನನಗೆ; ಶರಣಂ=ಮನೆಯಾಗಿ; ಆಸ್ತಾಮ್=ಇರಲಿ.

ರಾತ್ರಿ ಹಗಲು, ಹುಲಿ ಆಕಳು; ಇಲಿ ಬೆಕ್ಕು, ಹಾವು ಮುಂಗುಸಿ, ಅಣುತ್ವ ಮಹತ್ವ –ಇವುಗಳು ವಿರುದ್ಧಗಳು. ಒಂದಿದ್ದಲ್ಲಿ ಇನ್ನೊಂದು ಇರುವುದಿಲ್ಲ. ಹಾಗೆ ಕಮಲ

ಚಂದ್ರರಿಗೂ ವಿರೋಧ ಇದೆ. ಚಂದ್ರ ಉದಿಸಿಬಂದರೆ ಕಮಲ ತಾನು ಮುದುಡಿಕೊಳ್ಳುತ್ತದೆ. ಇದು ಸಾಮಾನ್ಯರಲ್ಲಿ ಮಾತ್ರ, ದೊಡ್ಡವರ ಸನ್ನಿಧಾನ ಇದ್ದರೆ ಅದರ ಮಹತ್ವದಿಂದ ಇವುಗಳು ವಿರೋಧವನ್ನು ಬಿಟ್ಟು ಒಂದೇಕಡೆ ಇರುತ್ತವೆ. ಈ ಶ್ಲೋಕದಲ್ಲಿ ಅಂತಹ ಒಂದು ಪ್ರಸಂಗವನ್ನು ಶ್ರೀ ವಾದಿರಾಜರು ತಿಳಿಸುತ್ತಾರೆ. ಹಿಂದಿನ ಕೆಲವು ಶ್ಲೋಕಗಳಲ್ಲಿ ದೇವರ ಪಾದಗಳನ್ನು ಕಮಲಗಳಿಗೆ ಹೋಲಿಸಿದ್ದಾರೆ. ಈಗ ಕಾಲಬೆರಳುಗಳ ಉಗುರುಗಳನ್ನು ಚಂದ್ರನ ಕಲೆಗಳಿಗೆ ಹೋಲಿಸುತ್ತಾರೆ. ಚಂದ್ರನಿಗೂ ಕಮಲಗಳಿಗೂ ವಿರೋಧ ಇರುವುದರಿಂದ ಇದು ಹೇಗೆ ಸಾಧ್ಯ ಎಂಬ ಪ್ರಶ್ನೆಗೆ ದೇವರ ಸನ್ನಿಧಾನದಲ್ಲಿ ಸಾಧ್ಯ ಎಂದು ಉತ್ತರ. ಇಂತಹ ವಿರುದ್ಧಗಳನ್ನು ಹೊಂದಿಸಿಕೊಳ್ಳುವ ಶಕ್ತಿ ಇರುವ ಪಾದಗಳು ತನಗೆ ಆಶ್ರಯಗಳಾಗಲಿ ಎಂದು ರಾಜರು ದೇವರನ್ನು ಪ್ರಾರ್ಥಿಸುತ್ತಾರೆ.

**ಮೂರ್ಧ್ನ್ಯರ್ಪಿತ ಸ್ವಸದೃಶಂ ಹರಿಪಾದಪದ್ಮ-**
**ಮಾಶಂಕ್ಯನಾಂಬುಜಕುಲಂ ಸಹತೇ ಶಶಾಂಕಃ ।**
**ಸ್ವಸ್ಪರ್ಧಿ ತಚ್ಚ ಶಶಿನಾ ವಶಿನಾನುರಕ್ತಂ**
**ಮತ್ವಾ ಮನಸ್ಯಧಿತ ತತ್ರ ತದಪ್ಯಮೈತ್ರಿಮ್ ॥ ೮ ॥**

ಶಶಾಂಕಃ=ಚಂದ್ರನು; ಮೂರ್ಧ್ನಿ=ತಲೆಯಲ್ಲಿ; ಅರ್ಪಿತ=ಇರುವ; ಸ್ವ=ತನಗೆ; ಸದೃಶಂ= ಸಮನಾದ; ಸ್ವ=ತನಗೆ; ಸ್ಪರ್ಧಿ=ಸ್ಪರ್ಧಿಯಾದ; ಹರಿ=ದೇವರ; ಪಾದಪದ್ಮಂ=ಪಾದ ಕಮಲ ವನ್ನು; ಆಶಂಕ್ಯ=ಸಂಶಯಿಸಿ; ಅಂಬುಜ=ಕಮಲಗಳ; ಕುಲಂ=ಸಮೂಹವನ್ನು; ನ ಸಹತೇ=ಸಹಿಸುವುದಿಲ್ಲ; ತತ್ ಚ=ಅದಾದರೂ; ವಶಿನಾ=ವಶವಾದ; ಶಶಿನಾ=ಚಂದ್ರನಿಂದ; ಅನುರಕ್ತಂ=ಸಂಬದ್ಧವಾದ; ತತ್ ಅಪಿ=ಅದನ್ನಾದರೂ; ಮತ್ವಾ=ತಿಳಿದು; ಮನಸಾ= ಮನದಿಂದ; ಅಮೈತ್ರೀಂ=ದ್ವೇಷವನ್ನು; ಅಧಿತ=ಮಾಡಿತು.

ಚಂದ್ರನಿಗೂ ಕಮಲಗಳಿಗೂ ಯಾಕೆ ಪರಸ್ಪರ ದ್ವೇಷ ಎಂಬುದನ್ನು ರಾಜರು ಕವಿತ್ವದ ಶೈಲಿಯಲ್ಲಿ ಉತ್ಪ್ರೇಕ್ಷಿಸುತ್ತಾರೆ-

ಕೃಷ್ಣನ ಪಾದಗಳ ಬೆರಳುಗಳಲ್ಲಿರುವ ಉಗುರುಗಳು ಚಂದ್ರನಂತಿವೆ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾರೆ. ಸಾದೃಶ್ಯ ಇದ್ದಲ್ಲಿ ಮಾತ್ಸರ್ಯ ಸಹಜವಾಗಿ ಇರುವುದು. ಒಂದೇ ತರಗತಿಯಲ್ಲಿ ಇಬ್ಬರು ಬುದ್ಧಿವಂತರು ಇದ್ದಂತೆ. ಚಂದ್ರನಿಗೆ ಉಗುರುಗಳು ಸದೃಶವಾದ್ದರಿಂದ ಚಂದ್ರನಿಗೆ ಉಗುರುಗಳ ವಿಷಯದಲ್ಲಿ ಸ್ಪರ್ಧೆ ಇರುವುದು ಸಹಜ. ತನ್ನ ಸ್ಪರ್ಧಿಗೆ ಯಾರಾದರೂ ಆಶ್ರಯ ಕೊಟ್ಟರೆ ಆಶ್ರಯ ಕೊಟ್ಟವರಲ್ಲಿ ದ್ವೇಷ ಉಂಟಾಗುವುದು. ಈ ಉಗುರುಗಳು ಪಾದಪದ್ಮಗಳ ತುದಿಯಲ್ಲಿ ಇವೆ. ಒಂದು ರೀತಿ ತಲೆಯಲ್ಲಿ ಹೊತ್ತುಕೊಂಡಂತೆ. ಈ ಪಾದಪದ್ಮ ಮಾತ್ರ ಹೀಗೆ ಮಾಡಿದರೂ ಚಂದ್ರನು ಮಾತ್ರ ಇಡೀ ಕಮಲಗಳ ಸಂತತಿಯನ್ನೇ ದ್ವೇಷಿಸಿದನು. ಕಮಲಗಳಾದರೂ ಚಂದ್ರನನ್ನು

ಕಂಡರೆ ಬೇಸರದಿಂದ ಮುಖವನ್ನು ಬಾಡಿಸಿಕೊಳ್ಳುತ್ತವೆ. ತಾವು ಸಂತೋಷದಿಂದ ಮುಖವನ್ನು ಅರಳಿಸುವುದಿಲ್ಲ ಯಾಕೆಂದರೆ– ಕೃಷ್ಣನ ಪಾದಪದ್ಮವು ಕಮಲಗಳಿಗೆ ಸದೃಶವು. ಆದ್ದರಿಂದ ಮತ್ಸರ ಇರುತ್ತದೆ. ಇಂತಹ ಪ್ರತಿಸ್ಪರ್ಧಿಯ ಜೊತೆಗೆ ಚಂದ್ರನು ಸದಾ ಇರುವನು. ಚಂದ್ರನು ಎಲ್ಲರಿಗೂ ಬೇಕಾದವನು. ಅಂತಹವನು ಸ್ಪರ್ಧಿಯ ಮನೆಯಲ್ಲೇ ಇರುವುದನ್ನು ಸಹಿಸಲಾಗಲಿಲ್ಲ. ತಮ್ಮ ಜೊತೆಗೂ ಇದ್ದಿದ್ದರೆ ಇಷ್ಟು ಬೇಸರ ಆಗುತ್ತಿರಲಿಲ್ಲ. ಆದರೆ ಇತರ ಕಮಲಗಳ ಜೊತೆ ಇರುವುದೇ ಇಲ್ಲ. ಇದರಿಂದಾಗಿ ಚಂದ್ರನನ್ನು ದ್ವೇಷಿಸಲು ಆರಂಭಿಸಿದವು. ಚಂದ್ರ ಕಮಲಗಳ ವಿರೋಧವು ಪ್ರಕೃತಿ ದತ್ತವಾದರೂ ರಾಜರು ಈ ರೀತಿ ಕಲ್ಪಿಸುತ್ತಾರೆ. ಇದರಿಂದಾಗಿ ದೇವರ ಪಾದಗಳ ವೈಭವವನ್ನೇ ಹೇಳಿದಂತಾಯಿತು.

**ಅಂಗೀಕೃತಃ ಕಮಲಯೋಚ್ಚಗತಿಃ ಸದೇತಿ**
**ಸಂದರ್ಶನಾಯ ಕಮಲಾಕರಸಂಗತಂ ಪ್ರಾಕ್ ।**
**ಪಶ್ಚಾತ್ಕ್ರಮೇಣ ಕುಚಪಾಲಕಚಾಗ್ರಲಗ್ನಂ**
**ಶ್ರೀಕೃಷ್ಣಪಾದಕಮಲಂ ಕುರುತಾತ್ ಶ್ರಿಯಂ ನಃ ॥ ೯ ॥**

ಕಮಲಯಾ=ರಮೆಯಿಂದ; ಅಂಗೀಕೃತಃ=ವರಿಸ್ಪಟ್ಟವನು; ಸದಾ=ಯಾವಾಗಲೂ; ಉಚ್ಚ=ಎತ್ತರಕ್ಕೆ; ಗತಿಃ=ಗಮನವುಳ್ಳವನು; ಇತಿ=ಎಂದು; ಸಂದರ್ಶನಾಯ=ತಿಳಿಸಲು; ಪ್ರಾಕ್=ಮೊದಲು; ಕಮಲಾ=ರಮೆಯ; ಕರ=ಕೈಗಳನ್ನು; ಸಂಗತಂ=ಹೊಂದಿದ; ಪಶ್ಚಾತ್=ಅನಂತರ; ಕ್ರಮೇಣ=ಕ್ರಮದಿಂದ; ಕುಚ=ಎದೆಯು; ಫಾಲ=ಹಣೆಯು; ಕಚ=ತಲೆಯು ಇವುಗಳ; ಅಗ್ರ=ತುದಿಯಲ್ಲಿ; ಲಗ್ನಂ=ಸಂ ಬದ್ಧವಾದ; ಶ್ರೀಕೃಷ್ಣ=ಶ್ರೀಕೃಷ್ಣನ; ಪಾದಕಮಲಂ=ಪಾದಕಮಲವು; ನಃ=ನಮಗೆ; ಶ್ರಿಯಂ=ಸಂಪತ್ತನ್ನು; ಕುರುತಾತ್= ಮಾಡಲಿ.

ಲಕ್ಷ್ಮಿಯು ಯಾರನ್ನು ತನ್ನ ಕೈಯಿಂದ ಹಿಡಿಯುತ್ತಾಳೋ ಅವರು ಕ್ರಮೇಣ ಎತ್ತರೆತ್ತರಕ್ಕೆ ಹೋಗುತ್ತಾರೆ. ಇದು ಎಲ್ಲರಿಗೂ ತಿಳಿದ ವಿಷಯ. ಅಂದರೆ ಲಕ್ಷ್ಮೀಕಟಾಕ್ಷ ಬೇಕು ಎತ್ತರಕ್ಕೆ ಏರಲು. ಇದನ್ನು ರಾಜರು ಕೃಷ್ಣನ ಪಾದದ ವಿಷಯದಲ್ಲಿ ಕೂಡಿಸುತ್ತಾರೆ. ಕೃಷ್ಣನು ಮಲಗಿರುವಾಗ ರುಗ್ಮಿಣಿಯು ಆತನ ಪಾದವನ್ನು ಒತ್ತುತ್ತಾಳೆ. ಭಕ್ತಿಯಿಂದ ತನ್ನ ಎದೆ ಮೇಲೆ ಇಟ್ಟುಕೊಳ್ಳುತ್ತಾಳೆ. ಭಕ್ತಿ ಹೆಚ್ಚಾದಾಗ ಹಣೆಗೆ ಒತ್ತಿಕೊಳ್ಳುತ್ತಾಳೆ. ಭಕ್ತಿ ಉಕ್ಕಿದಾಗ ತಲೆಮೇಲೆ ಇಟ್ಟು ಆದರಿಸುತ್ತಾಳೆ. ಇದು ಸಹಜವಾಗಿ ನಡೆಯುತ್ತದೆ. ಇಲ್ಲಿ ರಾಜರ ಉತ್ಪ್ರೇಕ್ಷೆ ಹೀಗಿದೆ– ದೇವರ ಪಾದವನ್ನು ಲಕ್ಷ್ಮಿಯು ತನ್ನ ಕೈಯಿಂದ ಹಿಡಿದಳು. ಆಗ ಪಾದ ಕೆಳಗಿತ್ತು. ಅನಂತರ ಎದೆಗೆ ಬಂತು. ಹಣೆಗೆ ಬಂತು. ತಲೆಗೆ ತಲುಪಿತು. ಇವುಗಳೆಲ್ಲಾ ಕ್ರಮೇಣ ಒಂದಕ್ಕಿಂತ ಒಂದು ಎತ್ತರದಲ್ಲಿದೆ. ಹೀಗೆ ರಮೆಯು ಕೈಯಿಂದ ದೇವರ ಪಾದವನ್ನು ಹಿಡಿದದ್ದಕ್ಕೆ ದೇವರ ಪಾದವು ಎತ್ತರೆತ್ತರಕ್ಕೆ ಏರಿತು.

ರಮೆಯು ಯಾರ ಕೈ ಹಿಡಿಯುತ್ತಾಳೋ ಅವರು ಎತ್ತರಕ್ಕೇರುತ್ತಾರೆ ಎಂಬಂಶದಲ್ಲಿ ಮಾತ್ರ ಹೋಲಿಕೆ ಹೊರತು ದೇವರ ಪಾದವು ಇವಳಿಂದಾಗಿ ಎತ್ತರಕ್ಕೇರಿತು ಎಂಬಂಶದಲ್ಲಿ ಅಲ್ಲ ಎಂದು ತಿಳಿಯಬೇಕು.

**ಭಿನ್ನ ಪ್ರವಾಲಸದೃಶೀ ಪರಿತಃ ಸ್ಫುರಂತೀ**
**ರಮ್ಯಾಂಗುಲೀದಲಚಯದ್ಯುತಿರಿಂದಿರಾಯಾಃ ।**
**ಪಾದಾಂಬುಜೇ ಸಹಜರಾಜದಲಕ್ತಕಾಂಕ**
**ಕಾಂತಿಂ ತನೋತಿ ನಖಮಂಡಲಮಂಡನಾರ್ಹಮ್ ॥ ೧೦ ॥**

ಭಿನ್ನ=ತುಂಡಾದ; ಪ್ರವಾಲ=ಹವಳಕ್ಕೆ; ಸದೃಶೀ=ಸಮವಾದ; ಪರಿತಃ=ಸುತ್ತಲೂ; ಸ್ಫುರಂತೀ=ಶೋಭಿಸುವ; ಇಂದಿರಾಯಾಃ=ರಮೆಯ; ರಮ್ಯ=ಚಂದದ; ಅಂಗುಲೀ= ಬೆರಳುಗಳ; ದಲ=ದಳಗಳ; ಚಯ=ಸಮೂಹದ; ದ್ಯುತಿಃ=ಕಾಂತಿಯು; ಪಾದಾಂಬುಜೈ= ಪಾದಕಮಲದಲ್ಲಿ; ನಖ=ಉಗುರುಗಳ; ಮಂಡಲ=ಸಮೂಹಕ್ಕೆ; ಮಂಡನ=ಅಲಂಕಾರಕ್ಕೆ; ಅರ್ಹಾಂ=ಯೋಗ್ಯವಾದ; ಸಹಜ=ನಿಜವಾದ; ರಾಜತ್=ಶೋಭಿಸುವ; ಅಲಕ್ತಕ=ಕೆಂಪಿನ; ಅಂಕ=ಚಿಹ್ನೆಯ; ಕಾಂತಿಂ=ಕಾಂತಿಯನ್ನು; ತನೋತಿ=ಮಾಡುತ್ತದೆ.

ಕೃಷ್ಣರುಗ್ಮಿಣಿಯರ ಪಾದಗಳನ್ನು ಜೊತೆಯಾಗಿ ವರ್ಣಿಸುತ್ತಾರೆ– ರುಗ್ಮಿಣಿಯ ಪಾದವನ್ನು ಮೊದಲು ವರ್ಣಿಸಿ ಅನಂತರ ಕೃಷ್ಣನ ಪಾದದ ವರ್ಣನೆ. ರುಗ್ಮಿಣಿಯ ಪಾದದ ಬೆರಳುಗಳು ಕೆಂಪು. ಎಷ್ಟೆಂದರೆ ಹವಳದಷ್ಟು, ಹವಳದ ಬಣ್ಣವು ವಾತಾವರಣ ದಿಂದಾಗಿ ಮಾಸುತ್ತದೆ. ಹವಳವನ್ನು ಒಡೆದರೆ ಒಳಭಾಗವು ಇರುವಷ್ಟು ಕೆಂಪು ಈ ಬೆರಳುಗಳು. ಇವುಗಳಿಂದ ಹೊರಟ ಕೆಂಪು ಕಾಂತಿಯು ಕೃಷ್ಣನ ಪಾದದ ಉಗುರುಗಳಲ್ಲಿ ಹರಡಿದೆ. ಎಲ್ಲಾ ಕಡೆಯೂ ಹರಡಿದೆ. ಉಗುರುಗಳು ಬಿಳಿಯಾದ್ದರಿಂದ ಅಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಉಗುರುಗಳ ಮೇಲೆ ಅಲಂಕಾರಕ್ಕಾಗಿ ಕೆಂಪುಬಣ್ಣದಿಂದ ರಂಗೋಲೆ ಯಂತೆ ಬಿಡುವುದಿದೆ. ಲೋಕದಲ್ಲಿ ಇದು ಕೃತಕ. ಕೃಷ್ಣನ ಉಗುರುಗಳಲ್ಲಿ ಹರಡಿದ ಈ ಕೆಂಪುಬಣ್ಣವು ಸಹಜವಾಗಿ ಇರುವ ಅಲಂಕಾರದಂತೆ ಕಾಣುತ್ತಿದೆ.

<u>**ಸಂದೇಶ**</u> : **ಎಲ್ಲಾ ವಸ್ತುಗಳ ವಿಶಿಷ್ಟಗುಣವು ಎದ್ದುಕಾಣುವುದು ದೇವರ ಸಂಪರ್ಕದಿಂದ**.

**ಅಂತಃ ಸಮಾಪೂರಿತಬಹ್ವನಂತ**
**ಸೌಂದರ್ಯಶೇಷೈರಿವ ಪೂರ್ಯಮಾಣ್ಯೈಃ ।**
**ಪುಷ್ಟೋರ್ಧ್ವಭಾಗೇ ಪರಿತಃ ಸುವೃತ್ತೇ**
**ಜಂಘೇ ತಯೋಸ್ತಾಂ ಸ್ಫುಟಮಂತರಂಗೇ ॥ ೧೧ ॥**

ಪರ್ಯಾಮಾಣ್ಯೈಃ=ತುಂಬಿರುವ; ಅಂತಃ=ಒಳಗೆ; ಸಮಾಪೂರಿತ=ಚೆನ್ನಾಗಿ ತುಂಬಿದ; ಬಹು=ಬಹಳ; ಅನಂತ=ತುಂಬಾ; ಸೌಂದರ್ಯ=ಸೌಂದರ್ಯದ; ಶೇಷ್ಯೈಃ ಇವ=ಉಳಿದ ಭಾಗದಿಂದ ಎಂಬಂತೆ; ಪುಷ್ಟ=ಪುಷ್ಟವಾದ; ಊರ್ಧ್ವಭಾಗೇ=ಮೇಲ್ಭಾಗವುಳ್ಳ; ಪರಿತಃ= ಸುತ್ತಲೂ; ಸುವೃತ್ತೇ=ಉರುಟಾದ; ತಯೋಃ=ಅವರ; ಜಂಘೇ=ಜಂಘವು; ಸ್ಫುಟಂ=ಚೆನ್ನಾಗಿ; ಅಂತರಂಗ=ಮನದಲ್ಲಿ.

ಇವರಿಬ್ಬರ ಮೊಣಕಾಲನ್ನು ವರ್ಣಿಸುತ್ತಾರೆ. ಜೀವರ ಸಂಸಾರಿಗಳ ಮೊಣಕಾಲುಗಳು ರಕ್ತಮಾಂಸಗಳಿಂದ ತುಂಬಿದೆ. ಇವರ ಮೊಣಕಾಲುಗಳ ಒಳಗೆ ಸೌಂದರ್ಯವು ತುಂಬಿದೆ. ಎಷ್ಟು ತುಂಬಿದೆ ಅಂದರೆ ಒಳಗಿನಿಂದ ಜಾಗ ಸಾಲದೆ ಮೊಣಕಾಲುಗಳ ಮೇಲ್ಬದಿಯಲ್ಲಿ ಹರಡಿದೆ. ಇಂತಹ ಪುಷ್ಟವಾದ ಉರುಟಾದ ಈ ಕಾಲುಗಳು ನಮ್ಮ ಮನದಲ್ಲಿ ಸದಾ ಇರಲಿ.

**ಪೂರ್ಣಸ್ಯ ತಜ್ಜಾನು ನಿಜಪ್ರಚಾರೈಃ**
**ಸಾನಂದನಂದಾವಸಥಾಂಗಣೇ ಪ್ರಾಕ್ ।**
**ಚೂರ್ಣೀಕೃತಾನೇಕರಜೋಽಸ್ಮದೀಯ–**
**ಮೇನೋಧುನೋತ್ವದ್ಯ ಹೃದಂಗಣಸ್ಥಮ್** ॥ ೧೨ ॥

ಪ್ರಾಕ್=ಮೊದಲು; ಸಾನಂದ=ಆನಂದವುಳ್ಳ; ನಂದ=ನಂದನ; ಆವಸಥ=ಮನೆಯ; ಅಂಗಣೇ=ಅಂಗಳದಲ್ಲಿ; ನಿಜ=ತನ್ನ; ಪ್ರಚಾರೈಃ=ಸಂಚಾರದಿಂದ; ಚೂರ್ಣೀಕೃತ=ಪುಡಿ ಮಾಡಲ್ಪಟ್ಟ; ಅನೇಕ=ಬಹಳ; ರಜಃ=ಧೂಳು; ಪೂರ್ಣಸ್ಯ=ಪೂರ್ಣನ; ತತ್=ಆ; ಜಾನು=ಮೊಣಗಂಟು; ಅದ್ಯ=ಈಗ; ಹೃತ್=ಹೃದಯವೆಂಬ; ಅಂಗಣ=ಅಂಗಳದಲ್ಲಿ; ಸ್ಥಂ=ಇರುವ; ಅಸ್ಮದೀಯಂ=ನಮ್ಮ; ಏನಃ=ಪಾಪವನ್ನು; ಧುನೋತು=ಪುಡಿಮಾಡಲಿ.

ಮೊಣಗಂಟಿನ ವರ್ಣನೆ– ನಂದನ ಮನೆಯಲ್ಲಿ ಈ ಕೃಷ್ಣನು ಅಂಬೆಗಾಲಿನಿಂದ ಸಂಚರಿಸುವ ನಾಟಕವನ್ನು ಮಾಡಿದ್ದನು. ಇದನ್ನು ನೋಡಿ ನಂದನು ಬಹಳ ಆನಂದ ಪಡುತ್ತಿದ್ದನು. ಹೀಗೆ ಅಡ್ಡಾಡುವಾಗ ಕೃಷ್ಣನ ಮೊಣಗಂಟಿಗೆ ಸಿಕ್ಕ ಚಿಕ್ಕಚಿಕ್ಕ ಕಲ್ಲುಗಳು ಪುಡಿಯಾಗುತ್ತಿದ್ದವು. ಈಗ ಕೃಷ್ಣನು ನಮ್ಮ ಮನದ ಅಂಗಳದಲ್ಲಿ ಅಂಬೆಗಾಲು ಇಡಲಿ. ಮನೋಅಂಗಳದಲ್ಲಿಯೂ ಬಹಳ ಪಾಪಗಳೆಂಬ ದೊಡ್ಡ ದೊಡ್ಡ ಕಲ್ಲುಗಳಿವೆ. ಕೃಷ್ಣನೂ ದೊಡ್ಡವನಿದ್ದಾನೆ. ಈಗ ಅವನ ಭಾರ ಬಹಳ ಇದೆ. ಆದ್ದರಿಂದ ಈ ಪಾಪಗಳನ್ನು ಧೂಳೀಪಟ ಮಾಡಲಿ.

**ಸತ್ಕಾಂತ್ಯಾ ಹರಿನೀಲಕಾಂಚನಸಮೌ ಹಸ್ತೀಂದ್ರಹಸ್ತೋಪಮೌ**
**ವಿಷ್ವಕ್‌ವರ್ತುಲತಾಗುಣೇನ ಮೃದುತಾಧರ್ಮೇಣ ಕುಂದಸ್ರಜಃ**
**ಕಲ್ಪೌ ಯದ್ಯಪಿ ರುಗ್ಮಿಣೀಮುರಭಿದೋರೂರೂ ಕಥಂಚಿತ್ತುಲಾ**
**ಲಾವಣ್ಯೇನ ಪರಸ್ಪರಂ ಪರಮಿತಿ ದ್ವಂದ್ವಾತ್ಮತಾಂ ಬಿಭ್ರತೌ** ॥ ೧೩ ॥

ರುಗ್ಮಿಣೀ=ರುಗ್ಮಿಣಿಯ; ಮುರಭಿದೋಃ=ಮುರವೈರಿಯ; ಊರೂ=ತೊಡೆಗಳು; ಯದ್ಯಪಿ =ವಸ್ತುತಃ; ಸತ್=ಒಳ್ಳೆಯ; ಕಾಂತ್ಯಾ=ಕಾಂತಿಯಿಂದ; ಹರಿನೀಲ=ಇಂದ್ರನೀಲ ಮಣಿಗೆ; ಕಾಂಚನ=ಚಿನ್ನಕ್ಕೆ; ಸಮೌ=ಸದೃಶಗಳು; ವಿಷ್ವಕ್=ಸುತ್ತಲೂ; ವರ್ತುಲತಾ= ಉರುಟಾಗಿರುವಿಕೆಯ; ಗುಣೇನ=ಗುಣದಿಂದ; ಹಸ್ತೀಂದ್ರ=ಶ್ರೇಷ್ಠ ಆನೆಯ; ಹಸ್ತ=ಕೈಗೆ; ಉಪಮೌ=ಸಮಗಳು; ಮೃದುತಾ=ಮಾರ್ದವದ; ಧರ್ಮೇಣ=ಧರ್ಮದಿಂದ; ಕುಂದಸ್ರಜಃ= ಗುಂಡುಮಲ್ಲಿಗೆಯ ಮಾಲೆಗೆ; ಕಲ್ಪೌ=ಸಮಗಳು; ಕಥಂಚಿತ್=ಬಹು ಕಷ್ಟದಿಂದ; ಪರಂ= ಆದರೆ; ಲಾವಣ್ಯೇನ=ಸೌಂದರ್ಯದಿಂದ; ಪರಸ್ಪರಂ=ಅನ್ಯೋನ್ಯವಾಗಿ; ತುಲಾ=ಸಮಗಳು; ಇತಿ=ಈ ಕಾರಣದಿಂದ; ದ್ವಂದ್ವಾತ್ಮತಾಂ=ಎರಡಾಗುವಿಕೆಯನ್ನು; ಬಿಭ್ರತೌ=ಧರಿಸಿವೆ.

ಇವರಿಬ್ಬರ ತೊಡೆಗಳ ವರ್ಣನೆ– ಕೃಷ್ಣನ ಮೈಬಣ್ಣ ನೀಲ. ಇವನ ತೊಡೆಗಳು ಚೆನ್ನಾಗಿ ಶೋಭಿಸುತ್ತಿವೆ. ಎಷ್ಟೆಂದರೆ ಇಂದ್ರನೀಲಮಣಿಯಂತೆ. ಬೇರೆ ಹೋಲಿಕೆ ಇಲ್ಲ. ಅದಕ್ಕಾಗಿ ಕಥಂಚಿತ್ ಎಂಬ ಪದವನ್ನು ರಾಜರು ಬಳಸಿದ್ದಾರೆ. ಆದ್ದರಿಂದ ಇಂದ್ರನೀಲಮಣಿಯಷ್ಟೇ ಎಂದು ಭಾವಿಸಬಾರದು. ರುಗ್ಮಿಣಿಯ ಮೈಬಣ್ಣ ಬಂಗಾರದ್ದು. ಆದ್ದರಿಂದ ಇವಳ ತೊಡೆಯು ಚಿನ್ನದಂತೆ ಶೋಭಿಸುತ್ತದೆ. ಸಾಮಾನ್ಯ ಆನೆಗಳ ಸೊಂಡಿಲೇ ನೋಡಲು ಚಂದ. ಕಾರಣ ಉರುಟಾಗಿದೆ. ಐರಾವತದ ಸೊಂಡಿಲು ಇನ್ನೂ ಚೆನ್ನಾಗಿ ಉರುಟಾಗಿದೆ. ಈ ರೀತಿಯಾಗಿ ಆನೆಯ ಸೊಂಡಿಲಿನಂತೆ ಇವರ ತೊಡೆಗಳು ಉರುಟಾಗಿವೆ. ಗುಂಡುಮಲ್ಲಿಗೆಯ ಮಾಲೆಯಂತೆ ಮೆತ್ತಗಾಗಿವೆ. ಈ ಮೂರು ವಿಷಯಗಳಲ್ಲಿ ಮೂರು ವಸ್ತುಗಳ ಹೋಲಿಕೆ ಕೊಡಬೇಕಾದರೆ ತುಂಬಾ ಶ್ರಮಪಡಬೇಕಾಯಿತು. ಯಾಕೆಂದರೆ ಹೋಲಿಕೆಗೆ ಬೇಕಾದ ವಸ್ತುಗಳೇ ಸಿಗಲಿಲ್ಲ. ಹೋಲಿಕೆ ಇಲ್ಲದಿದ್ದರೆ ಶಿಷ್ಯರಿಗೆ ಮನದಟ್ಟಾಗು ವುದಿಲ್ಲ. ಅದಕ್ಕಾಗಿ ಬೇರೆ ಗತಿ ಇಲ್ಲದೆ ಇಂದ್ರನೀಲಮಣಿ, ಆನೆ, ಗುಂಡುಮಲ್ಲಿಗೆಯನ್ನು ಉದಾಹರಣೆಯಾಗಿ ತೆಗೆದುಕೊಂಡದ್ದು. ಆದರೆ ಸೌಂದರ್ಯ ವಿಷಯದಲ್ಲಿ ಎಷ್ಟು ಹುಡುಕಿದರೂ ಉದಾಹರಣೆ ಸಿಗಲಿಲ್ಲ. ಉದಾಹರಣೆ ಇಲ್ಲದಿದ್ದರೆ ಶಿಷ್ಯನ ಸೌಂದರ್ಯದ ಅರ್ಥ ಆಗುವುದಿಲ್ಲ. ಅದಕ್ಕಾಗಿ ಇವರಿಬ್ಬರೂ ಎರಡೆರಡು ತೊಡೆಗಳನ್ನು ಹೊಂದಿದ್ದೊ ಏನೋ ಎಂದು ರಾಜರು ಊಹಿಸುತ್ತಾರೆ. ಎರಡೆರಡು ತೊಡೆಗಳಿದ್ದರೆ ಉದಾಹರಣೆ ಸಿಗುತ್ತದೆ. ಇವರಿಬ್ಬರ ಬಲತೊಡೆಗಳು ಎಷ್ಟು ಚಂದ? ಎಂದು ಯಾರಾದರೂ ಕೇಳಿದರೆ ಎಡೆತೊಡೆಯಷ್ಟು ಎಂದು ಹೇಳಬಹುದು. ಎಡತೊಡೆಗೆ ಬಲತೊಡೆಯಷ್ಟು ಹೋಲಿಕೆ ಯನ್ನು ಕೊಡಬಹುದು.

<u>ಸಂದೇಶ</u> : **ದೇವರಿಗೆ ಯಾವುದರ ಹೋಲಿಕೆಯನ್ನು ಕೊಟ್ಟರೂ ಅದು ನೀಚೋಪಮೆಯೇ ಆಗುತ್ತದೆ.**

**ಊರೂ ಸಮಾರೋಪ್ಯ ಮರುದ್ಗಣೇಶಂ ಆರಂಜಯಂತೌ ದಿಶತಾಂ ಸುಖಂ ಮೇ**
**ವೈರಿವ್ರಜಂ ಸಂಹರತಾಂ ಮುರಾರೇಃ ಸ್ವಾರಾತಿರಕ್ಷಃ ಕ್ಷಯಮೂಲಭೂಮೀ ॥ ೧೪ ॥**

ಮರುತ್=ವಾಯುಗಳು; ಗಣ=ಸಮೂಹಕ್ಕೆ; ಈಶಂ=ಒಡೆಯನು; ಸಮಾರೋಪ್ಯ= ಏರಿಸಿ; ಆರಂಜಯಂತೌ=ತೃಪ್ತಿಪಡಿಸುವ; ಊರೂ=ತೊಡೆಗಳು; ಮೇ=ನನಗೆ; ಸುಖಂ=ಆನಂದವನ್ನು; ದಿಶತಾಂ=ಕೊಡಲಿ; ಸ್ವ=ತನ್ನ; ಆರಾತಿ=ಶ್ರುತವಾದ; ರಕ್ಷ=ದೈತ್ಯನ; ಕ್ಷಯ=ನಾಶಕ್ಕೆ; ಮೂಲಭೂಮೀ=ಆಶ್ರಯವಾದ; ಮುರಾರೇಃ=ಕೃಷ್ಣನ ತೊಡೆಗಳು; ವೈರಿ=ಶತ್ರುಗಳ; ವ್ರಜಂ=ಸಮೂಹವನ್ನು; ಸಂಹರತಾಂ=ಸಂಹರಿಸಲಿ.

ಮುಖ್ಯಪ್ರಾಣನು ದೇವರ ತೊಡೆಯಲ್ಲಿ ಸದಾ ಕಾಲ ಕುಳಿತಿರುವವನು. ಆದ್ದರಿಂದ ಯಾವಾಗಲೂ ನೆಮ್ಮದಿಯಲ್ಲಿ ಇದ್ದಾನೆ. ತುಂಬಾ ಕಾರ್ಯಭಾರವುಳ್ಳ ಅವನಿಗೆ ನೆಮ್ಮದಿ ಕೊಟ್ಟ ತೊಡೆಗಳು ಅಲ್ಪನಾದ ನನಗೂ ಕೊಡಲಿ. ಆಂತರಿಕ ಬಾಹ್ಯ ಶತ್ರುಗಳ ಪೀಡೆಯಿಂದ ಮಾನಸಿಕ ನೆಮ್ಮದಿ ತಪ್ಪಿದೆ. ಆ ಶತ್ರುಗಳನ್ನೂ ಈ ತೊಡೆಗಳೇ ದೂರೀಕರಿಸಲಿ. ಹಿರಣ್ಯಕಶಿಪು ಎಲ್ಲರಿಗೂ ಉಪದ್ರವಕಾರಿಯಾಗಿದ್ದ. ಅವನನ್ನು ಕೃಷ್ಣನ ಈ ತೊಡೆಗಳೇ ತನ್ನಲ್ಲಿ ಇರಿಸಿ ಕೊಂಡು ನಾಶಮಾಡಿದ್ದು.

**ಅಪರಿಮಿತ ಸುಖೌಘಂ ಸ್ವಾಶ್ರಿತಾಯಾ ರಮಾಯಾಃ**
**ಶತಗುಣಿತವಿಕಾಸಂ ವಾಸಸಃ ಸ್ವಾಶ್ರಿತಸ್ಯ ।**
**ಅಪಗತನಿಜಲಾಭಃ ಸಂತತಂ ಯೋ ವಿಧತ್ತೇ**
**ಸ ಕಿಲ ಮುರಭಿದೂರಃ ಕಾರಣಂ ವೈಶ್ಯಜಾತೇಃ ॥ ೧೫ ॥**

ಸ್ವ=ತನ್ನನ್ನು; ಆಶ್ರಿತಾಯಾಃ=ಆಶ್ರಯಿಸಿದ; ರಮಾಯಾಃ=ರಮೆಗೆ; ಅಪರಿಮಿತ=ಬಹಳ; ಸುಖ=ಆನಂದಗಳ; ಓಘಂ=ಸಮೂಹವನ್ನು; ಸ್ವ=ತನ್ನನ್ನು; ಆಶ್ರಿತಸ್ಯ=ಆಶ್ರಯಿಸಿದ; ವಾಸಸಃ=ವಸ್ತ್ರಕ್ಕೆ; ಶತಗುಣಿತ=ನೂರುಪಟ್ಟು; ವಿಕಾಸಂ=ಶೋಭೆಯನ್ನು; ಯಃ=ಯಾವ; ಊರುಃ=ತೊಡೆಯು; ಅಪಗತ=ಹೋದ; ನಿಜ=ತನಗೆ; ಲಾಭ=ಲಾಭವುಳ್ಳದ್ದಾಗಿ; ಸಂತತಂ=ಯಾವಾಗಲೂ; ವಿಧತ್ತೇ=ಮಾಡುತ್ತದೋ; ಸಃ=ಆ; ಮುರಭಿತ್=ಕೃಷ್ಣನ; ಊರುಃ=ತೊಡೆಯು; ವೈಶ್ಯಜಾತೇಃ=ವೈಶ್ಯಜಾತಿಗೆ; ಕಾರಣಂಕಿಲ=ಕಾರಣವಾ?

ರಮೆಯು ನಾನಾ ರೀತಿಯಿಂದ ಕೃಷ್ಣನ ತೊಡೆಗಳನ್ನು ಆಶ್ರಯಿಸಿದ್ದಾಳೆ. ಆತನ ತೊಡೆಯಲ್ಲಿ ಇರುತ್ತಾಳೆ. ತೊಡೆಗಳನ್ನು ತನ್ನ ಕೈಗಳಿಂದ ಒತ್ತುತ್ತಾಳೆ ಇತ್ಯಾದಿ. ಇದರಿಂದ ಅವಳಿಗೇ ಆನಂದದ ಲಾಭ. ತುಂಬಾ ಸಂತೋಷ ಪಡುತ್ತಾಳೆ. ತೊಡೆಗೆ ಯಾವ ಆನಂದವೂ ಇವಳಿಂದಾಗಿ ಇಲ್ಲ. ಹಾಗೆಯೇ ತೊಡೆಯಲ್ಲಿ ಪೀತಾಂಬರ ಇದೆ. ತುಂಬಾ ಚಂದ ಕಾಣುತ್ತದೆ. ಪೀತಾಂಬರವನ್ನು ತೆಗೆದಿಟ್ಟರೆ ಆ ಬಟ್ಟೆ ಅಷ್ಟೇನೂ ಶೋಭಿಸುವುದಿಲ್ಲ. ಕೃಷ್ಣನು ಉಟ್ಟುಕೊಂಡಾಗ ಈ ತೊಡೆಗಳಿಂದಾಗಿ ನೂರುಪಟ್ಟು ಹೆಚ್ಚಾಗಿ ಶೋಭಿಸುತ್ತದೆ. ಹೊರತು ಬಟ್ಟೆಯಿಂದ ತೊಡೆಗೆ ಏನೂ ಶೋಭೆ ಇಲ್ಲ. ಇಂತಹ ತೊಡೆಯಿಂದಲೇ ವೈಶ್ಯರು ಹುಟ್ಟಿದ್ದು. ಈ ವಿಷಯದಲ್ಲಿ ಪುರುಷಸೂಕ್ತವು ಪ್ರಮಾಣ. ಇಲ್ಲಿ ರಾಜರು ಮೋಜಿ

ಗಾಗಿ ಸೋಜಿಗವನ್ನು 'ಕಿಲ' ಎಂಬ ಶಬ್ದದಿಂದ ತೋರಿಸುತ್ತಾರೆ. ಏನು ಸೋಜಿಗ ಅಂದರೆ- ವೈಶ್ಯರು ಹಣವನ್ನೋ, ವಸ್ತುಗಳನ್ನೋ ಇನ್ನೊಬ್ಬರಿಗೆ ಬಡ್ಡಿಗಾಗಿ ಕೊಡುತ್ತಾರೆ. ಅವಧಿ ಮುಗಿದನಂತರ ಬಡ್ಡಿ ಸಮೇತವಾಗಿ ವಸೂಲು ಮಾಡುತ್ತಾರೆ. ತುಂಬಾ ಲಾಭ ಗಳಿಸುತ್ತಾರೆ. ನೆಮ್ಮದಿಯಿಂದ ಇರುತ್ತಾರೆ. ಇದು ವೈಶ್ಯರ ಸ್ವಭಾವ. ಆದರೆ ಈ ವೈಶ್ಯರಿಗೆ ತಂದೆಯ ಸ್ಥಾನದಲ್ಲಿರುವ ತೊಡೆಯು ವೈಶ್ಯರಿಗೆ ವಿರುದ್ಧವಾದ ಸ್ವಭಾವವುಳ್ಳದ್ದು. ತಾನು ಯಾವುದೇ ರೀತಿಯ ಲಾಭ ಇಲ್ಲದೆ ಸುಖರೂಪದಲ್ಲಾಗಲೀ ಕಾಂತಿಯ ರೂಪದಲ್ಲಾಗಲೀ, ರಮೆಗೆ ಸುಖವನ್ನೂ ವಸ್ತ್ರಕ್ಕೆ ಶೋಭೆಯನ್ನೂ ಕೊಡುತ್ತದೆ. 'ಪಿತೃಗುಣ ಮಾತೃಜಾತಿಃ ಸುತಾನಾ' ಮಕ್ಕಳಿಗೆ ತಂದೆಯ ಗುಣ ತಾಯಿಯ ಜಾತಿ ಬರುವುದು ಎಂದು ಶಾಸ್ತ್ರದ ಮಾತು. ಈ ಮಾತು ಇಲ್ಲಿ ಅನ್ವಯಿಸಲಿಲ್ಲ. ಆದ್ದರಿಂದ ತಂದೆ ಹೇಗಾಗುತ್ತದೆ ಎಂದು ಆಶ್ಚರ್ಯ.

**<u>ಸಂದೇಶ</u> : ದೇವರಿಗೂ ಜೀವರಿಗೂ ಪಿತೃಪುತ್ರಭಾವ ಇದ್ದರೂ ಲೋಕದ ಪಿತೃಪುತ್ರಭಾವಕ್ಕಿಂತ ವಿಲಕ್ಷಣ.**

**ಸುವರ್ಣವರ್ಣಾಂಬರ ಭಾಸಿ ಭೈಷ್ಮೀ**
**ಮುಕುಂದಯೋಃ ಪಾತು ಕಟಿದ್ವಯಂ ನಃ ।**
**ಸುಸಾಂದ್ರಸಂಧ್ಯಾಘನಸಂಗಿಶೃಂಗ-**
**ಮಿವೋಲ್ಲಸತ್ ಕಾಂಚನನೀಲಗಿರ್ಯೋಃ** ॥ ೧೬ ॥

ಸುವರ್ಣ=ಚಿನ್ನದಂತೆ; ವರ್ಣ=ಬಣ್ಣವುಳ್ಳ; ಅಂಬರ=ಬಟ್ಟೆಯಿಂದ; ಭಾಸಿ=ಶೋಭಿಸುವ; ಸು=ಚೆನ್ನಾಗಿ; ಸಾಂದ್ರ=ನಿಬಿಡವಾದ; ಸಂಧ್ಯಾ=ಸಂಧ್ಯಾಕಾಲದ; ಘನ=ಮೋಡದ; ಸಂಗಿ= ಸಂಬಂಧವುಳ್ಳ; ಕಾಂಚನ=ಚಿನ್ನದ; ನೀಲ=ನೀಲಮಣಿಯ; ಗಿರ್ಯೋಃ=ಪರ್ವತ ಗಳ; ಉಲ್ಲಸತ್=ಶೋಭಿಸುವ; ಶೃಂಗಂ ಇವ=ಶಿಖರದಂತಿರುವ; ಭೈಷ್ಮೀ ಮುಕುಂದಯೋಃ= ರುಗ್ಮಿಣೀಕೃಷ್ಣರ; ಕಟಿದ್ವಯಂ=ಸೊಂಟಗಳು; ನಃ=ನಮ್ಮನ್ನು; ಪಾತು=ರಕ್ಷಿಸಲಿ.

ಸೊಂಟದ ವರ್ಣನೆ- ಒಂದು ಚಿನ್ನದ ಬೆಟ್ಟ, ಇನ್ನೊಂದು ಇಂದ್ರನೀಲಮಣಿದ್ದು. ಇವುಗಳಿಗೆ ಸಾಯಂಕಾಲದ ಮೋಡದ ಸಂಬಂಧ. ಸಾಯಂಮೋಡ ಯಾಕೆಂದರೆ ಇಂತಹ ಮೋಡಕ್ಕೆ ಸೂರ್ಯಕಿರಣಗಳ ಸಂಬಂಧವಾದರೆ ಮೋಡಗಳು ತುಂಬಾ ಕೆಂಪಾಗಿ ಸಂಬಂಧವಾದರೆ ಎಷ್ಟು ಚಂದ ಕಾಣುತ್ತದೋ ಅಷ್ಟೇ ಅಲ್ಲದೆ ಅದಕ್ಕಿಂತಲೂ ಹೆಚ್ಚು ಚಂದ ಇವರಿಬ್ಬರ ಸೊಂಟಗಳು. ಇವರಿಬ್ಬರ ಮೈಬಣ್ಣ ಚಿನ್ನದ್ದು ಹಾಗೂ ಇಂದ್ರನೀಲಮಣಿದ್ದು. ಕಟಿಪ್ರದೇಶವು ಶಿಖರಗಳಂತೆ ಪುಷ್ಟವಾಗಿವೆ. ಅವುಗಳ ಮೇಲೆ ಉಟ್ಟ ಪೀತಾಂಬರ ಕೆಂಪಾದ ಮೋಡಗಳಂತೆ ತೋರುತ್ತವೆ. ಇವುಗಳಿಂದ ಶೋಭಿಸುವ ಇವರ ಎರಡು ಸೊಂಟಗಳು ನಮ್ಮನ್ನು ರಕ್ಷಿಸಲಿ.

**ಪೀತಾಂಬರಾಲಂಕೃತಮರ್ಘ್ಯರತ್ನಸ್ಯೂತಸ್ಫುರತ್ ಕಿಂಕಿಣಿ ಮೇಖಲಾದ್ಯೈಃ ।**
**ಜಾತಪ್ರಭಂ ಪೀನಲಸನ್ನಿತಂಬಂ ಚೇತಃ ಸದಾ ಚಿಂತಯ ಚಿನ್ಮಯಸ್ಯ ॥ ೧೭ ॥**

ಪೀತಾಂಬರ=ಪೀತಾಂಬರದಿಂದ; ಅಲಂಕೃತಂ=ಅಲಂಕೃತವಾದ; ಅಗ್ರ್ಯ=ಶ್ರೇಷ್ಠ ವಾದ; ಸ್ಯೂತ=ಪೋಣಿಸಿದ; ಸ್ಫುರತ್=ಶೋಭಿಸುವ; ಕಿಂಕಿಣಿ=ಸಣ್ಣ ಮಣಿಗಳ; ಮೇಖಲಾ=ಉಡಿದಾರ; ಆದ್ಯೈಃ=ಮೊದಲಾದುವುಗಳಿಂದ; ಜಾತ=ಉಂಟಾದ; ಪ್ರಭು= ಕಾಂತಿವುಳ್ಳ; ಚಿನ್ಮಯಸ್ಯ=ಜ್ಞಾನಮಯನ; ಪೀನ=ಪುಷ್ಟವಾದ; ಲಸತ್= ಶೋಭಿಸುವ; ನಿತಂಬರಂ=ಕಟಿಪ್ರದೇಶವನ್ನು; ಚೇತಃ=ಮನಸ್ಸೇ; ಸದಾ=ಯಾವಾಗಲೂ; ಚಿಂತಯ= ಧ್ಯಾನಿಸು.

ಕೃಷ್ಣರುಗ್ಮಿಣಿಯರ ಪೃಷ್ಠಭಾಗದ ವರ್ಣನೆ– ದೇವರು ಪೀತಾಂಬರವನ್ನು ಉಟ್ಟಿದ್ದಾನೆ. ಇದರಿಂದಾಗಿ ಲೌಕಿಕವಾಗಿ ಒಂದು ರೀತಿಯ ಶೋಭೆ ಪೃಷ್ಠಭಾಗಕ್ಕೆ ಇದೆ. ಈ ಪೀತಾಂಬರದ ಮೇಲೆ ಉಡ್ಯಾಣ ಇದೆ. ಇದರಲ್ಲಿ ಉತ್ತಮ ಜಾತಿಯ ರತ್ನಗಳು ಚಿಕ್ಕಚಿಕ್ಕ ಮಣಿಗಳು ಇವೆ. ಇಂತಹ ಉಡ್ಯಾಣವೇ ಮೊದಲಾದ ಅನೇಕ ಆಭರಣಗಳಿಂದ ತುಂಬಾ ಚಂದ ಕಾಣುತ್ತಿದೆ. ತುಂಬಾ ದಪ್ಪ ಪುಷ್ಟವಾಗಿರುವ ದೇವರ ಕಟಿಪ್ರದೇಶವನ್ನು ಮನಸ್ಸಿನಿಂದ ನಾವು ಸದಾ ಸ್ಮರಿಸೋಣ.

**ಆಪಾದಪದ್ಮಂ ಪರಿಲಂಬಮಾನಾ ನೀವೀ ರಮಾಯಾ ರಮಣೀಯಕಾಂಚ್ಯಾಃ ।**
**ವಿಷ್ವಕ್ಸ್ಫುರದ್ರತ್ನಗಣಸ್ಯ ಮಧ್ಯಲಕ್ಷ್ಮ್ಯಾ ವಿನಮ್ರಾ ಇವ ಭಾತಿ ಭಾಸಃ ॥ ೧೮ ॥**

ಆಪಾದಪದ್ಮಂ=ಪಾದಕಮಲ ತನಕ; ಪರಿಲಂಬಮಾನಾ=ನೇತಾಡುವ; ರಮಾಯಾಃ= ರುಗ್ಮಿಣಿಯ; ನೀವೀ=ಸೀರೆಯ; ನೆರಿಗೆಯುಲ; ರಮಣೀಯ=ಚಂದದ; ಕಾಂಚ್ಯಾಃ= ಉಡ್ಯಾಣದ; ವಿಷ್ವಕ್=ಸುತ್ತಲೂ; ಸ್ಫುರತ್=ಶೋಭಿಸುವ; ರತ್ನ=ರತ್ನಗಳ; ಗಣಸ್ಯ= ಸಮೂಹದ; ಮಧ್ಯ=ಮಧ್ಯದ; ಲಕ್ಷ್ಮ್ಯಾ=ಕಾಂತಿಯಿಂದ; ವಿನಮ್ರಾ=ವಿನೀತಗಳಾದ; ಭಾಸ ಇವ=ಕಾಂತಿಗಳಂತೆ; ಭಾತಿ=ಶೋಭಿಸುತ್ತಿದೆ.

ರುಗ್ಮಿಣಿಯು ಪೀತಾಂಬರವನ್ನು ಉಟ್ಟಿದ್ದಾಳೆ. ಸೀರೆಯ ನೆರಿಗೆಯು ಪಾದದತನಕ ಹರಡುವುದು ಸಹಜ. ಪಾದಗಳನ್ನು ಮುಚ್ಚುವ ರೀತಿಯಲ್ಲಿ ನೆರಿಗೆಯನ್ನು ಇಳಿಬಿಡಬೇಕು. ಸೊಂಟದಲ್ಲಿ ಆರಂಭಿಸಿ ಪಾದತನಕ ಇಳಿಬಿಡುತ್ತಾರೆ. ಈ ನೆರಿಗೆಯ ಮೇಲೆ ಸೊಂಟದಲ್ಲಿ ಪಟ್ಟಿಯನ್ನು ಕಟ್ಟುತ್ತಾರೆ. ಅದರಲ್ಲಿ ನವರತ್ನಗಳು ತುಂಬಾ ಇರುತ್ತವೆ. ನವರತ್ನಗಳ ಪ್ರಕಾಶದ ಮುಂದೆ ಚಿನ್ನದ ಪಟ್ಟಿಯು ಏನೂ ಶೋಭಿಸುವುದಿಲ್ಲ. ಆದ್ದರಿಂದ ಈ ಶೋಭೆಗೆ ಪರಾಜಯ ಏವಾಯಿತು. ಪರಾಜಿತರು ಕೆಳಕೆಳಗೆ ಹೋಗುವುದು ರೂಢಿ. ಪಾದದ ತನಕ ಇಳಿದಿರುವ ಈ ಸೀರೆಯ ನೆರಿಗೆಗಳು ಸೋತಿರುವ ಚಿನ್ನದ ಪಟ್ಟಿಯ ಕಾಂತಿಯಂತೆ ತೋರುತ್ತದೆ.

ವ್ರಜಭುವಿ ಬಹುಪಾಶೈರ್ಯನ್ನ ಬದ್ಧಂ ಮುರಾರೇಃ
ತದುದರಮಧುನಾಸೀತ್ಸಂತತಂ ಭೀಷ್ಮಪುತ್ರ್ಯಾಃ ।
ಪುಲಕಿತಕರಚಾರುಪ್ರೇಮದಾಮ್ನಾ ನಿಬದ್ಧಂ
ಪ್ರಭುರಪಿ ವಶಮೇತಿ ಪ್ರೇಮಭಾರ್ಯೈರುಪಾಯ್ಯೈಃ ॥ ೧೯ ॥

ವ್ರಜ=ಗೋಕುಲದ; ಭುವಿ=ಭೂಮಿಯಲ್ಲಿ; ಬಹು=ಬಹಳ; ಪಾಶೈಃ=ಹಗ್ಗಗಳಿಂದ; ಯತ್=ಯಾವುದು; ನ ಬದ್ಧಂ=ಕಟ್ಟಲ್ಪಡಲಿಲ್ಲವೋ; ಮುರಾರೇಃ=ಕೃಷ್ಣನ; ತತ್=ಆ; ಉದರಂ=ಹೊಟ್ಟೆಯು; ಅಧುನಾ=ಈಗ; ಭೀಷ್ಮಪುತ್ರ್ಯಾಃ=ಭೀಷ್ಮಕನ ಮಗಳ; ಪುಲಕಿತ=ರೋಮಾಂಚಗೊಂಡ; ಕರ=ಕೈಯೆಂಬ; ಚಾರು=ಚಂದದ; ಪ್ರೇಮ=ಪ್ರೀತಿ ಎಂಬ; ದಾಮ್ನಾ=ಹಗ್ಗದಿಂದ; ನಿಬದ್ಧಂ=ಕಟ್ಟಲ್ಪಟ್ಟಿದೆ; ಪ್ರಭುಃ ಅಪಿ=ಶಕ್ತನೂ ಕೂಡಾ; ಉದಾರ್ಯೈಃ= ಉತ್ತಮಗಳಾದ; ಪ್ರೇಮಭಾರ್ಯೈಃ=ಪ್ರೀತಿವಿಶೇಷಗಳಿಂದ; ವಶಂ=ಅಧೀನವನ್ನು; ಏತಿ=ಹೊಂದುತ್ತಾನೆ.

ಕೃಷ್ಣನ ಬಾಲ್ಯದಲ್ಲಿ ನಡೆದ ಒಂದು ಘಟನೆ– ಕೃಷ್ಣನ ತುಂಟತನವನ್ನು ಸಹಿಸಲು ಗೋಪಿಯರಿಂದ ಸಾಧ್ಯವಾಗಲಿಲ್ಲ. ಆತನನ್ನು ಕಟ್ಟಲು ಪ್ರಯತ್ನಿಸಿದಳು. ಎಷ್ಟು ಹಗ್ಗಗಳನ್ನು ಜೋಡಿಸಿದರೂ ಸಾಲದಾಯಿತು. ಆಗ ಕೃಷ್ಣ ತುಂಬಾ ಚಿಕ್ಕವನಿದ್ದನು. ಈಗ ಕೃಷ್ಣ ದೊಡ್ಡವನಾಗಿದ್ದಾನೆ. ಲಗ್ನ ಆಗಿದೆ. ಮಕ್ಕಳಿದ್ದಾರೆ. ಆದರೂ ಈಗ ಕಟ್ಟಲು ಸಿಗುತ್ತಾನೆ. ರುಗ್ಮಿಣಿಯು ಈತನ ತೊಡೆಯಲ್ಲಿ ಇರುತ್ತಾಳೆ. ತನ್ನ ಕೈಯಿಂದ ಆತನನ್ನು ಬಂಧಿಸುತ್ತಾಳೆ. ಬಂಧನಕ್ಕೆ ಕೃಷ್ಣನು ಸಿಗುತ್ತಾನೆ. ಕಾರಣ ಇವಳಿಗೆ ಕೃಷ್ಣನಲ್ಲಿರುವ ಪ್ರೀತಿ. ಪ್ರೀತಿಯಿಂದ ಇವಳ ಮೈ ರೋಮಾಂಚಿತವಾಗುತ್ತದೆ. ಆಗ ರೋಮಗಳು ನೆಟ್ಟಗೆ ನಿಲ್ಲುತ್ತವೆ. ಇವಳ ಕೈ ಒಂದು ಪುಟ್ಟ ಹಗ್ಗದಂತೆ. ಹಿಂದೆ ಗೋಪಿಗೆ ಕೃಷ್ಣನಲ್ಲಿ ಪ್ರೀತಿ ಇರಲಿಲ್ಲ. ಆದ್ದರಿಂದ ಚಿಕ್ಕವನಿದ್ದರೂ ಹಗ್ಗ ಉದ್ದ ಇದ್ದರೂ ಸಿಗಲಿಲ್ಲ. ಈಗ ದೊಡ್ಡವನಾಗಿದ್ದರೂ ಹಗ್ಗ ಚಿಕ್ಕದಿದ್ದರೂ ಸಿಕ್ಕಿದ. ಆದ್ದರಿಂದ ಕೃಷ್ಣನನ್ನು ಕಟ್ಟಲು ಅಥವಾ ಕಟ್ಟದಿರಲು ಹಗ್ಗ ಕಾರಣ ಅಲ್ಲ. ಪ್ರೀತಿ ಕಾರಣ. ತತ್ರಾಪಿ ಸಾಮಾನ್ಯ ಪ್ರೀತಿಗೆ ಸಿಗೋಲ್ಲ. ಎಲ್ಲರನ್ನೂ ಪ್ರೀತಿಸುವುದಕ್ಕಿಂತ ಹೆಚ್ಚು ಪ್ರೀತಿಸಬೇಕು. ಹಾಗಿದ್ದರೆ ಮಾತ್ರ ಸಿಗುತ್ತಾನೆ.

ಅಂಕಸ್ಥಿತೋದಧಿಸುತೋಚ್ಚ ಕರಾಂಗುಲೀನಾಂ
ಕಾಂತಿಸ್ತ್ರಿಧೋದರಗತೇವ ವಲಿರ್ವಿರೇಜೇ ।
ನಾಭಿಂ ಪ್ರವಿಶ್ಯ ಶನಕೈರುದಿತಾ ತದೀಯ–
ನೇತ್ರಾಂತಕಾಂತಿರಿವ ರೋಮಲತಾ ಚ ತನ್ವೀ ॥ ೨೦ ॥

ತ್ರಿಧಾ=ಮೂರು ರೀತಿಯಾಗಿ; ಉದರ=ಹೊಟ್ಟೆಯಲ್ಲಿ; ಗತಾ=ಇರುವ; ವಲಿಃ=ರೇಖೆಗಳು; ಅಂಕ=ತೊಡೆಯಲ್ಲಿ; ಸ್ಥಿತ=ಇರುವ; ಉದಧಿ=ಸಮುದ್ರದ; ಸುತಾ=ಮಗಳ; ಉಚ್ಚ=ಉದ್ದವಾದ; ಕರ=ಕೈಯ; ಅಂಗುಲೀನಾಂ=ಬೆರಳುಗಳ; ಕಾಂತಿಃ ಇವ=ಪ್ರಕಾಶದಂತೆ;

ವಿರೇಜೇ=ಶೋಭಿಸಿದೆ; ತನ್ವೀ=ಸವುರವಾದ; ರೋಮಃ=ರೋಮಗಳೆಂಬ; ಲತಾ=ಬಳ್ಳಿಯು; ನಾಭಿಂ=ಹೊಕ್ಕಳನ್ನು; ಪ್ರವಿಶ್ಯ=ಪ್ರವೇಶಿಸಿ; ಶನಕೈಃ=ಮೆಲ್ಲನೆ; ಉದಿತಾ=ಹೊರಬಂದ; ತದೀಯ=ರುಗ್ಮಿಣಿಯ; ನೇತ್ರ=ಕಣ್ಣಿನ; ಅಂತ=ಕೊನೆಯ; ಕಾಂತಿಃ ಇವ=ಕಾಂತಿಯಂತೆ; ವಿರೇಜೇ=ಶೋಭಿಸಿತು.

ಕೃಷ್ಣನ ಉದರದಲ್ಲಿ ಮೂರು ರೇಖೆಗಳಿವೆ. ಹೊಟ್ಟೆಯು ಚಿಕ್ಕದಿದ್ದರೆ ಈ ರೇಖೆಗಳು ಚೆನ್ನಾಗಿ ಕಾಣುತ್ತವೆ. ಹೊಟ್ಟೆ ಚಿಕ್ಕದಿರುವಿಕೆ ಹಾಗೂ ರೇಖೆಗಳು ಇವೆರಡೂ ಶರೀರದ ಲಕ್ಷಣಗಳು. ರುಗ್ಮಿಣಿಯು ಕೃಷ್ಣನ ತೊಡೆಯಲ್ಲಿ ಕುಳಿತು ತನ್ನ ಕೈಯಿಂದ ಆತನ ಉದರವನ್ನು ಆಲಿಂಗಿಸುತ್ತಿದ್ದಾಳೆ ಎಂಬುದನ್ನು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾರೆ. ಈ ಆಲಿಂಗನಕ್ಕೆ ಕೈಯ ಮಧ್ಯದ ಮೂರು ಬೆರಳು ತುಂಬಾ ಸಹಕಾರಿ. ಈ ಮೂರು ಬೆರಳುಗಳಿಂದ ಹೊರಟ ಶೋಭೆಯು ಮೂರು ರೇಖೆಗಳಾಗಿ ಉದರವನ್ನು ಸುತ್ತಿಕೊಂಡಿರುವಂತೆ ತೋರುತ್ತದೆ. ಕೃಷ್ಣನ ಹೊಕ್ಕಳಿನಿಂದ ಆರಂಭಿಸಿ ಮೇಲ್ಮುಖವಾಗಿ ಒಂದು ರೋಮಗಳ ಸಾಲು ಹೊರಟಿದೆ. ಬಹಳ ಸಪೂರವಾಗಿದೆ ಈ ಸಾಲು. ಇದು ರುಗ್ಮಿಣಿಯ ಕಡೆಗಣ್ಣಿನ ಕಾಂತಿಯಂತೆ ತೋರುತ್ತದೆ. ಈಕೆ ಕಡೆಗಣ್ಣಿಗೆ ಕಾಡಿಗೆಯನ್ನು ಹಚ್ಚುತ್ತಾಳೆ. ಆ ಮೂಲಕ ಹೊರಟ ಕಣ್ಣಿನ ಕಾಂತಿಯೂ ಕಪ್ಪಗಿರುತ್ತದೆ. ಈಕೆ ತನ್ನ ಕಡೆಗಣ್ಣಿನಿಂದ ದೇವರ ನಾಭಿಯನ್ನು ನೋಡುತ್ತಾಳೆ. ಹಾಗೆಯೇ ನಾಭಿಯನ್ನು ಆರಂಭಿಸಿ ಮೇಲ್ಭಾಗವನ್ನು ನೋಡುತ್ತಾಳೆ. ಕಡೆಗಣ್ಣು ಯಾವಾಗಲೂ ಚಂಚಲ. ನಾಭಿ ಎಂಬ ಬಾವಿಗೆ ಇಳಿದು ಅನಂತರ ಈ ಕಾಂತಿಯು ಮೇಲೆ ಬಂದಂತೆ ಈ ರೋಮಗಳ ಸಾಲು ತೋರುತ್ತದೆ.

**ಸುವರ್ಣವರ್ಣೋದರಮಧ್ಯಲಗ್ನಾ**
**ಮನೋಜ್ಞರೋಮಾವಲಿರಿಂದಿರಾಯಾಃ ।**
**ಜಿಗಾಯ ವಕ್ಷೋಜಕರೀಂದ್ರಕುಂಭ-**
**ಯುಗಾವತೀರ್ಣಾಂ ಮುದವಾರಿಧಾರಾಮ್** ॥ ೨೧ ॥

ಸುವರ್ಣ=ಚಿನ್ನದ; ವರ್ಣ=ಬಣ್ಣವುಳ್ಳ; ಉದರ=ಹೊಟ್ಟೆಯ; ಮಧ್ಯ=ಮಧ್ಯದಲ್ಲಿ; ಲಗ್ನ= ಇರುವ; ಇಂದಿರಾಯಾಃ=ರುಗ್ಮಿಣಿಯ; ಮನೋಜ್ಞ=ಚಂದದ; ರೋಮ=ರೋಮಗಳ; ಆವಲಿಃ=ಸಾಲು; ವಕ್ಷೋಜ=ಸ್ತನಗಳೆಂಬ; ಕರೀಂದ್ರ=ಉತ್ತಮ ಆನೆಯ; ಕುಂಭ= ಕುಂಭಸ್ಥಳಗಳ; ಯುಗ=ಎರಡರಿಂದ; ಅವತೀರ್ಣಾಂ=ಇಳಿದ; ಮದ=ಮದದ; ವಾರಿ= ನೀರಿನ; ಧಾರಾಂ=ಧಾರೆಯನ್ನು; ಜಿಗಾಯ=ಗೆದ್ದಿತು.

ರುಗ್ಮಿಣಿಯ ಮೈಬಣ್ಣ ಚಿನ್ನದ್ದು. ಅವಳ ನಾಭಿಯಿಂದಲೂ ಒಂದು ರೋಮಸಾಲು ಮೇಲ್ಮುಖವಾಗಿ ಹೊರಟು ಸ್ತನಗಳ ತನಕ ಬಂದಿದೆ. ಇದು ಆನೆಗಳ ಮದಜಲದಂತೆ ತೋರುತ್ತದೆ. ಆನೆಗಳಿಗೆ ಮದವೇರಿದಾಗ ಅವುಗಳ ತಲೆಯಿಂದ ಒಂದು ರೀತಿಯ

ನೀರು ಕೆಳಗೆ ಹರಿಯುತ್ತದೆ. ಇವುಗಳ ತಲೆಯಲ್ಲಿ ಎತ್ತರವಾದ ಎರಡು ಭಾಗಗಳಿವೆ. ಇಲ್ಲಿಂದ ಹರಿಯುತ್ತದೆ. ರುಗ್ಮಿಣಿಯ ಸ್ತನಗಳು ಕುಂಭಸ್ಥಳಗಳಂತೆ ಇವೆ. ಈ ಸ್ತನಗಳ ಮಧ್ಯದಿಂದ ಹೊರಟ ರೋಮಸಾಲು ಮದಜಲದಂತೆ ತೋರುತ್ತದೆ.

**ಸದ್ರೋಮಾವಲಿ ನೀಲರತ್ನಲತಿಕಾಂ ತನ್ನಾಭಿವಾಪೀತಟಾ-**
**ದುದ್ಯಾಂತೀಂ ವಿಲಸತ್‌ಕುಚಾಚಲ ತಟೀದ್ವಂದ್ವಾಂತರಪ್ರಾಪ್ತಯೇ ।**
**ಮಧ್ಯೇ ವ್ಯೋಮವಶಾತ್ ಅಲಬ್ಧಸರಣಿಂ ಧರ್ತುಂ ವಿಧಾತ್ರಾ ಕೃತಾಂ**
**ಸ್ನಿಗ್ಧಾಷ್ಟಾಪದಯಷ್ಟಿಮಬ್ಧಿದುಹಿತುರ್ಮೃದ್ವೀ ವಲಿಃ ಸ್ಪರ್ಧತೇ ॥ ೨೨ ॥**

ಅಬ್ಧಿ=ಸಮುದ್ರದ; ದುಹಿತುಃ=ಮಗಳ; ಮೃದ್ವೀ=ಮೃದುವಾದ; ವಲಿಃ=ರೋಮಗಳ ಸಾಲು; ತತ್=ರುಗ್ಮಿಣಿಯ; ನಾಭಿ=ಹೊಕ್ಕುಳೆಂಬ; ವಾಪೀ=ಬಾವಿಯ; ತಟಾತ್=ದಡದಿಂದ; ವಿಲಸತ್=ಶೋಭಿಸುವ; ಕುಚ=ಸ್ತನಗಳೆಂಬ; ಅಚಲ=ಬೆಟ್ಟಗಳ; ತಟೀ=ದಡಗಳ; ದ್ವಂದ್ವ=ಎರಡರ; ಅಂತರ=ಮಧ್ಯದ; ಪ್ರಾಪ್ತಯೇ=ಪ್ರಾಪ್ತಿಗೋಸ್ಕರ; ಉತ್=ಮೇಲೆ; ಯಾಂತೀಂ=ಹೊರಡುವ; ಮಧ್ಯೇ=ಮಧ್ಯದಲ್ಲಿ; ವ್ಯೋಮ=ಆಕಾಶದ; ವಶಾತ್= ಕಾರಣದಿಂದ; ಅಲಬ್ಧ=ಸಿಗದಿರುವ; ಸರಣಿಂ=ಮಾರ್ಗವುಳ್ಳ; ಸತ್=ಒಳ್ಳೆಯ; ರೋಮ= ರೋಮಗಳ; ಆವಲಿ=ಸಾಲು ಎಂಬ; ನೀಲ=ನೀಲವಾದ; ರತ್ನ=ರತ್ನದ; ಲತಿಕಾಂ= ಬಳ್ಳಿಯನ್ನು; ಧರ್ತುಂ=ಧರಿಸಲು; ವಿಧಾತ್ರಾ=ಬ್ರಹ್ಮನಿಂದ; ಕೃತಾಂ=ಮಾಡಲ್ಪಟ್ಟ; ಸ್ನಿಗ್ಧ= ಚಂದದ; ಅಷ್ಟಾಪದ=ಬಂಗಾರದ; ಯಷ್ಟಿಂ=ಕೋಲನ್ನು; ಸ್ಪರ್ಧತೇ=ಗೆಲ್ಲುತ್ತದೆ.

ರುಗ್ಮಿಣಿಯು ಬಹಳ ಚಂದದ ದೇಹವುಳ್ಳವಳು. ಸೊಂಟದ ಭಾಗ ತುಂಬಾ ಕೃಶವಾಗಿದೆ. ನಾಭಿಯು ಬಹಳ ಆಳವಾಗಿದೆ. ನಾಭಿಯಿಂದ ಒಂದು ರೋಮಸಾಲು ಮೇಲ್ಮುಖವಾಗಿ ಹೊರಟಿದೆ. ಎದೆಯಲ್ಲಿ ಪುಷ್ಟವಾದ ಎರಡು ಸ್ತನಗಳಿವೆ. ಈ ರೋಮಸಾಲು ಎರಡು ಸ್ತನಗಳ ಮಧ್ಯೆ ಬಂದಿದೆ. ಇವಿಷ್ಟು ರುಗ್ಮಿಣಿಯ ದೇಹದ ವರ್ಣನೆ. ಇವುಗಳನ್ನು ರಾಜರು ಬಹಳ ಚಮತ್ಕಾರವಾಗಿ ವರ್ಣಿಸುತ್ತಾರೆ– ನಾಭಿಯು ಆಳವಾದ ಒಂದು ಸರೋವರ. ಈ ಸರೋವರದಿಂದ ಇಂದ್ರನೀಲಮಣಿಗಳಿಂದ ರಚಿತವಾದ ಒಂದು ಬಳ್ಳಿಯು ಹೊರಟಿದೆ. ರೋಮಗಳು ಕಪ್ಪಾದ್ದರಿಂದ ಇಂದ್ರನೀಲ ಮಣಿಯ ಹೋಲಿಕೆ. ನಾಭಿಯನ್ನು ಆಧರಿಸಿಕೊಂಡು ಮೇಲ್ಮುಖವಾಗಿ ಈ ಬಳ್ಳಿ ಹೊರಟಿದೆ. ಮೇಲೆ ಸ್ತನಗಳೆಂಬ ಎರಡು ಬೆಟ್ಟಗಳಿವೆ. ಇವುಗಳ ಮಧ್ಯೇ ಕಣಿವೆಯಂತೆ ಜಾಗ ಇದೆ. ಈ ಜಾಗಕ್ಕೆ ಬಳ್ಳಿ ಹೊರಟಿದೆ. ಬಳ್ಳಿಗೆ ಯಾವಾಗಲೂ ಒಂದು ಆಧಾರ ಬೇಕು. ನಾಭಿಯಿಂದ ಹೊರಟಾಗ ಅದೇ ಆಧಾರವಾಗಿತ್ತು. ಆದರೆ ಮೇಲೆ ಮೇಲೆ ಬಂದಂತೆ ಆಧಾರ ತಪ್ಪಿಹೋಯಿತು. ಮೇಲೆ ಉದರ ಇರುವುದು ನಾರಿಯರ ಉದರ, ಸೊಂಟ ಇವು ಬಹಳ ಕೃಶವಾಗಿರಬೇಕು ಎಂದು ನಿಯಮ. ಎಷ್ಟು ಕೃಶ ಎಂದರೆ ಆಕಾಶದಂತೆ ಕಾಣಿಲೇಬಾರದು ಎಂಬಷ್ಟು, ಒಂದು ರೀತಿಯಲ್ಲಿ ಇಲ್ಲ ಎಂದೇ ಹೇಳಬಹುದು.

ಆದ್ದರಿಂದ ಈ ಬಳ್ಳಿಗೆ ಆಧಾರ ಇಲ್ಲ ಎಂದಾಯಿತು. ಆಗ ಬ್ರಹ್ಮನು ಬಂಗಾರದ ಮೂರು ಕೋಲುಗಳನ್ನು ಒಂದರ ಮೇಲೆ ಒಂದರಂತೆ ಇಟ್ಟನು. ಇದನ್ನು ಆಧರಿಸಿಕೊಂಡು ಬಳ್ಳಿಯು ಕಣಿವೆಯ ತನಕ ಬಂತು. ಉದರದಲ್ಲಿ ಅಡ್ಡವಾಗಿ ಒಂದರ ಮೇಲೆ ಒಂದರಂತೆ ರೇಖೆಗಳಿರುವುದು ಸ್ವಾಭಾವಿಕ. ಇವಳ ಮೈಬಣ್ಣ ಬಂಗಾರದ್ದು. ಆದ್ದರಿಂದ ರೇಖೆಗಳೂ ಸುವರ್ಣಮಯ. ಈ ರೀತಿ ರೋಮಗಳ ಸಾಲು ಉದರದ ಮೂರು ರೇಖೆಗಳ ಮೇಲೆ ಶೋಭಿಸುತ್ತಿದೆ.

**ಶ್ರೀಭೂಕಟಾಕ್ಷೋತ್ಪಲಮಬ್ಜಭೂದ್ವಿರೇಫಾಲಯಾಂಭೋರುಹಮಚ್ಯುತಸ್ಯ ।**
**ನಾಭಿಹ್ರದಂ ವೃತ್ತಮಗಾಧಮಚ್ಛ ಶೋಭಾಂಬುಪೂರ್ಣಂ ವಿಶಚಿತ್ತಮೀನ ॥ ೨೩ ॥**

ಶ್ರೀ=ರಮೆಯ; ಭೂ=ಭೂದೇವಿಯ; ಕಟಾಕ್ಷ=ಕಡೆಗಣ್ಣುಗಳೆಂಬ; ಉತ್ಪಲಂ= ನೈದಿಲೆಗಳುಳ್ಳ; ಅಬ್ಜ=ಕಮಲದಲ್ಲಿ; ಭೂ=ಹುಟ್ಟಿದ ಬ್ರಹ್ಮನೆಂಬ; ದ್ವಿರೇಫ=ಭ್ರಮರಕ್ಕೆ; ಆಲಯ=ಆಶ್ರಯವಾದ; ಅಂಭೋರುಹಂ=ಕಮಲವುಳ್ಳ; ವೃತ್ತಂ=ಉರುಟಾದ; ಅಗಾಧಂ= ಆಳವಾದ; ಅಚ್ಛ=ಸ್ವಚ್ಛವಾದ; ಶೋಭಾ=ಕಾಂತಿ ಎಂಬ; ಅಂಬು=ನೀರಿನಿಂದ; ಪೂರ್ಣಂ= ತುಂಬಿದ; ಅಚ್ಯುತಸ್ಯ=ಕೃಷ್ಣನ; ನಾಭಿ=ಹೊಕ್ಕುಳೆಂಬ; ಹ್ರದಂ=ಸರೋವರವನ್ನು; ಚಿತ್ತ= ಮನವೆಂಬ; ಮೀನ=ಮೀನೇ; ವಿಶ=ಪ್ರವೇಶಿಸು.

ಕೃಷ್ಣನ ನಾಭಿಯು ಒಂದು ಕೊಳದಂತಿದೆ. ಕೊಳದಂತೆ ನಾಭಿಯೂ ಆಳವಾಗಿದೆ. ಕೊಳದಲ್ಲಿ ನೀರು, ನೈದಿಲೆ, ತಾವರೆ ಇವೆಲ್ಲಾ ಇರಬೇಕು. ಈ ಕೊಳದಲ್ಲಿ ಇವೆಲ್ಲಾ ಇವೆ. ಕೃಷ್ಣನ ರಮಣಿಯರಾದ ರುಗ್ಮಿಣೀಭಾಮೆಯರೇ ಮೊದಲಾದವರು. ತಮ್ಮ ಕಟಾಕ್ಷದಿಂದ ಸದಾ ಈ ನಾಭಿಯ ದರ್ಶನ ಮಾಡುತ್ತಾರೆ. ಇವರ ಕಟಾಕ್ಷವು ಕಾಡಿಗೆಯಿಂದ ಕೂಡಿದೆ. ಆದ್ದರಿಂದ ನೈದಿಲೆಯಂತೆ ಕಪ್ಪು ಬಣ್ಣವುಳ್ಳದ್ದು. ಇವರು ದರ್ಶನ ಮಾಡುತ್ತಾರೆ ಎನ್ನುವುದನ್ನು ಆಡುಭಾಷೆಯಲ್ಲಿ ಹೇಳುವುದಾದರೆ ಇವರ ದೃಷ್ಟಿ ಅಲ್ಲಿ ಇದೆ ಎಂದು. ಕಮಲವಂತೂ ನಾಭಿಯಿಂದಲೇ ಹೊರಟದ್ದು. ಒಳ್ಳೆಯ ಪರಿಮಳಿತ ಕಮಲ ಇದೆ. ಯಾಕೆಂದರೆ ಬ್ರಹ್ಮನೆಂಬ ದುಂಬಿಯು ಸದಾ ಈ ಕಮಲದಲ್ಲಿ ಇರುತ್ತದೆ. ಕೊಳದಲ್ಲಿ ಇರುವ ನೀರು ಸ್ವಚ್ಛವಾಗಿರುತ್ತದೆ. ಇಲ್ಲಿ ಒಳ್ಳೆಯ ಶೋಭೆ ಎಂದ ನೀರು ಇದೆ. ಇಂತಹ ಕೊಳವನ್ನು ಮೀನು ಆಶ್ರಯಿಸಿದರೆ ಮೀನೂ ಚೆನ್ನಾಗಿ ಬೆಳೆಯುತ್ತದೆ. ಅದಕ್ಕಾಗಿ ರಾಜರು ಮನವೆಂಬ ಮೀನನ್ನು ಈ ಕೊಳವನ್ನು ಸೇರುವಂತೆ ಆಜ್ಞಾಪಿಸುತ್ತಾರೆ. ಮೀನಿನಂತೆ ಮನವೂ ಚಂಚಲವಾದ್ದರಿಂದ ಮನಕ್ಕೆ ಮೀನಿನ ಹೋಲಿಕೆ.

**ಉದ್ದೀಪ್ತಹಾರಾಂತರರತ್ನಕಾಂತ್ಯಾ ಹೃದ್ಯಂ ಮನೋಜ್ಞೋದರಬಂಧಬದ್ಧಮ್ ।**
**ತದ್ವಿಶ್ವಪಿತ್ರೋಸ್ತ್ರಿವಲಿತ್ರಿಕಾಲಂ ಶರ್ಮಾಣಿ ನಿರ್ಮಾತು ಕೃಶೋದರಂ ನಃ ॥ ೨೪ ॥**

ಉದ್ದೀಪ್ತ=ಚೆನ್ನಾಗಿ ಶೋಭಿಸುವ; ಹಾರ=ಮಾಲೆಗಳ; ಅಂತರ=ಮಧ್ಯದ; ರತ್ನ=

ರತ್ನಗಳ; ಕಾಂತ್ಯಾ=ಕಾಂತಿಯಿಂದ; ಹೃದ್ಯಂ=ಚಂದವಾದ; ಮನೋಜ್ಞ=ಚಂದದ; ಉದರಬಂಧ=ಒಡ್ಯಾಣದಿಂದ; ಬದ್ಧಂ=ಕಟ್ಟಲ್ಪಟ್ಟ; ವಿಶ್ವಪಿತ್ರೋಃ=ಜಗತ್ಪಿತೃಗಳ; ತ್ರಿವಲಿ= ಮೂರು ರೇಖೆಗಳುಳ್ಳ; ತತ್=ಆ; ಕೃಶ=ತೆಳ್ಳಗಿನ; ಉದರಂ=ಹೊಟ್ಟೆಯು; ನಃ=ನಮಗೆ; ತ್ರಿಕಾಲಂ=ಮೂರು ಕಾಲವೂ; ಶರ್ಮಾಣಿ=ಸುಖವನ್ನು; ನಿರ್ಮಾತು=ಕೊಡಲಿ.

ಕೃಷ್ಣರುಗ್ಮಿಣಿಯರು ಎಷ್ಟೇ ದೊಡ್ಡವರಾದರೂ ಅವರ ಹೊಟ್ಟೆಯು ಬಹಳ ಚಿಕ್ಕದು. ಇದು ಒಳ್ಳೆಯ ಲಕ್ಷಣ. ಕುತ್ತಿಗೆಯಲ್ಇಲ ಇಳಿಬಿಟ್ಟ ಬಂಗಾರದ ಹಾರಗಳು ಹೊಟ್ಟೆಯ ಮೇಲೆ ಓಲಾಡುತ್ತವೆ. ಈ ಹಾರಗಳ ಮಧ್ಯೇ ಮಧ್ಯೇ ರತ್ನಗಳು. ಇವುಗಳ ಪ್ರಕಾಶದಿಂದ ಉದರ ಚೆನ್ನಾಗಿ ತೋರುತ್ತಿದೆ. ಈ ಉದರದ ಮೇಲೆ ಚಿನ್ನದ ಒಡ್ಯಾಣ. ಇದೂ ಚಂದವೇ. ಮೂರು ರೇಖೆಗಳು. ಇದರಿಂದ ಹೊಟ್ಟೆ ಮತ್ತಷ್ಟು ಚಂದ. ಇಂತಹ ಹೊಟ್ಟೆಯನ್ನು ಸದಾ ಎಣಿಸೋಣ. ಮನವನ್ನು ತಂಪಾಗಿಸೋಣ.

**ಗರ್ಭಸ್ಥಸರ್ವಭುವನಾವಪಿ ತಾವಿದಾನೀಂ**
**ಪ್ರದ್ಯುಮ್ನಮುಖ್ಯಜನಕಾವಿತಿ ಸೂಚನಾಯ ।**
**ವಿಶ್ವೈಕಮಂದಿರಮಪಿ ಸ್ಮ ದಧತ್ತದೀಯಂ**
**ಮಧ್ಯಂ ಮುದೇ ಭವತು ಮನ್ಮಥಗಾತ್ರಪಾತ್ರಮ್** ॥ ೨೫ ॥

ತೌ=ಅವರಿಬ್ಬರು; ಗರ್ಭ=ಹೊಟ್ಟೆಯಲ್ಲಿ; ಸ್ಥ=ಇರುವ; ಸರ್ವ=ಎಲ್ಲಾ; ಭುವನೌ ಅಪಿ=ಲೋಕವುಳ್ಳವರಾದರೂ; ಇದಾನೀಂ=ಈಗ; ಪ್ರದ್ಯುಮ್ನ=ಪ್ರದ್ಯುಮ್ನನಿಗೆ; ಮುಖ್ಯ= ಮುಖ್ಯವಾಗಿ; ಜನಕೌ=ಜನಕರು; ಇತಿ=ಎಂದು; ಸೂಚನಾಯ=ತಿಳಿಸಲು; ವಿಶ್ವ=ಎಲ್ಲದಕ್ಕೂ; ಏಕ=ಮುಖ್ಯವಾದ; ಮಂದಿರಂ ಅಪಿ=ಆಶ್ರಯವಾದರೂ; ಮನ್ಮಥ= ಕಾಮನ; ಮಾತ್ರಂ= ಕೇವಲ ದೇಹವನ್ನು; ದಧತ್=ಧರಿಸಿರುವ; ತದೀಯಂ=ಅವರ; ಮಧ್ಯಂ=ಸೊಂಟವು; ಮುದೇ=ನೆಮ್ಮದಿಗಾಗಿ; ಭವತು=ಆಗಲಿ.

ಈ ದಂಪತಿಗಳ ಸೊಂಟವು ಬಹಳ ಕೃಶವಾಗಿದೆ ಎಂಬುದನ್ನು ಚಮತ್ಕಾರವಾಗಿ ವರ್ಣಿಸುತ್ತಾರೆ– ಯದ್ಯಪಿ ದೇವರ ಉದರದಲ್ಲಿ ಎಲ್ಲವೂ ಇದೆ. ಎಲ್ಲದಕ್ಕೂ ಜನಕರು. ಆದರೂ ಪ್ರದ್ಯುಮ್ನನಿಗೆ ಮುಖ್ಯವಾಗಿ ಜನಕರು. ಜನಕ ಅಂದರೆ ತನ್ನ ಉದರದಲ್ಲಿರುವು ದನ್ನು ಹೊರಗೆ ಹಾಕುವವನು ಜನಕನು. ಹೊರಗೆ ಬಂದದ್ದು ಜನ್ಯ. ಇವರ ಉದರದಲ್ಲಿ ಎಲ್ಲವೂ ಇದ್ದರೂ ಸದ್ಯಕ್ಕೆ ಕಾಣುವುದು ಕೃಶತ್ವವು. ಆ ಕೃಶತ್ವವನ್ನು ಹೊರ ಹಾಕಿದರು. ಅದೇ ಮನ್ಮಥವಾಯಿತು. ಅಂದರೆ ಮನ್ಮಥನು ಅನಂಗನು. ಕಾಣಿಸುವುದಿಲ್ಲ. ದೇವರ ಉದರವೂ ಕಾಣಿಸುವುದಿಲ್ಲ. ಅಂದರೆ ಕೃಶ ಎಂದರ್ಥ. ಬೇರೆಯವರು ಸಾಂಗರು, ಶರೀರವುಳ್ಳವರು; ಕಾಣಿಸುವವರು. ದೇವರ ಉದರಕ್ಕೂ ಜನ್ಯವಾದ ಇವರಿಗೂ ವಿರುದ್ಧಧರ್ಮಗಳಿವೆ. ಆದ್ದರಿಂದ ಇವರಿಗೆ ಮುಖ್ಯವಾಗಿ ಜನಕರಾಗುವುದಿಲ್ಲ. ಇದು

ವಾದಿರಾಜರು ಇಲ್ಲಿ ಕವಿತ್ವವನ್ನು ಮೆರೆದಿದ್ದಾರೆ. ದಾಸರೂ ಕೂಡಾ ಒಂದು ಹಾಡಿನಲ್ಲಿ ಬ್ರಹ್ಮನನ್ನು ಈ ಮನ್ಮಥನನ್ನು ದೇವರ ಗಂಡುಮಕ್ಕಳನ್ನಾಗಿ ಹೇಳಿದ್ದಾರೆ.

**ಸತ್ತರ್ಕಮಾತ್ರಕಲಿತಂ ಸಕಲಾಪವರ್ಗಂ**
**ಮಧ್ಯಂ ಮುದೇಽಸ್ತು ಮಧುಕೈಟಭಮರ್ದನಸ್ಯ ।**
**ತದ್ರಮ್ಯನಾಭಿವಿವರಾಭ್ಯುದಿತಾಂಬರಸ್ಯ**
**ಪದ್ಮೋಪಭೋಗ್ಯ ಪರಿಣಾಮ ಇವೋಪರಿಷ್ಟಾತ್ ॥ ೨೬ ॥**

ಸತ್=ಒಳ್ಳೆಯ; ತರ್ಕಮಾತ್ರ=ಕೇವಲ ತರ್ಕಕ್ಕೆ; ಕಲಿತಂ=ತೋರುವ; ಸಕಲ= ಎಲ್ಲರಿಗೂ; ಅಪವರ್ಗಂ=ಮೋಕ್ಷಕ್ಕೆ ಕಾರಣವಾದ; ತತ್=ಕೃಷ್ಣನ; ರಮ್ಯ=ಚಂದದ; ನಾಭಿ= ಹೊಕ್ಕಳಿನ; ವಿವರ=ಜಾಗದಿಂದ; ಅಭ್ಯುದಿತ=ಹುಟ್ಟಿದ; ಅಂಬರಸ್ಯ=ಆಕಾಶದ; ಉಪರಿಷ್ಟಾತ್=ಮೇಲೆ; ಪದ್ಮ=ಲಕ್ಷ್ಮಿಯಿಂದ; ಉಪಭೋಗ್ಯ=ಭೋಗ್ಯವಾದ; ಪರಿಣಾಮ ಇವ=ಪರಿಣಾಮದಂತಿರುವ; ಮಧು=ಮಧುವಿನ; ಕೈಟಭ=ಕೈಟಭನ; ಮರ್ದನಸ್ಯ= ನಾಶಕನ; ಮಧ್ಯಂ=ಉದರವು; ಮುದೇ=ಸಂತೋಷಕ್ಕೆ; ಅಸ್ತು=ಆಗಲಿ.

ಈ ಶ್ಲೋಕದಲ್ಲಿ ಕೃಷ್ಣನ ಸೊಂಟದ ವರ್ಣನೆ– ಸೊಂಟಪ್ರದೇಶವು ಕೃಶವಾಗಿದ್ದಷ್ಟು ಒಳ್ಳೆದು. ಇದು ಶರೀರದ ಲಕ್ಷಣಗಳಲ್ಲಿ ಒಂದು. ಕವಿಗಳ ಕಲ್ಪನೆಯಲ್ಲಿ ಸೊಂಟವು ಕಾಣಿಸಲೇ ಬಾರದು. ಕೇವಲ ತರ್ಕದಿಂದ ತಿಳಿಯಲ್ಪಡಬೇಕು. ಹೇಗೆಂದರೆ ಕೆಳಗಿನ ಭಾಗ ಹಾಗೂ ಮೇಲಿನ ಭಾಗಗಳೆರಡೂ ಜೊತೆಯಲ್ಲಿ ಹಿಂದೆ ಮುಂದೆ ಚಲಿಸಬೇಕಾದರೆ ಇವುಗಳಿಗೆ ಜೋಡಕವಾದ ಒಂದು ಭಾಗ ಇರಲೇಬೇಕು. ಇದೇ ಸೊಂಟಪ್ರದೇಶ ಎಂದು. ಇದರ ಒಟ್ಟು ತಾತ್ಪರ್ಯ ಸೊಂಟ ಅಷ್ಟೂ ಕೃಶ ಎಂದು. ಸೊಂಟದ ಸುತ್ತಳತೆಯಲ್ಲಿ ಉದರವೂ ಸೇರುತ್ತದೆ. ಈ ಉದರದಲ್ಲಿ ದೇವರು ಮುಕ್ತರನ್ನು ಇಟ್ಟುಕೊಂಡಿದ್ದಾನೆ. ಈ ರೀತಿ ಎಲ್ಲಾ ಮುಕ್ತರಿಗೂ ಆಶ್ರಯವಾದದ್ದು ಈ ಸೊಂಟ.

**ಲಕ್ಷ್ಮೀಮುಕುಂದತನುವೃತ್ತಮನೋಜ್ಞಮಧ್ಯ–**
**ಮುದ್ವೀಕ್ಷ್ಯ ಶಿಕ್ಷಿತಧಿಯಃ ಕವಯೋಽಪಿ ಯಸ್ಮಾತ್ ।**
**ಕಿಂಚಾಸ್ತಿ ನೇತಿ ಖಲು ಸಂದಿಹತೇಽಧುನಾಪಿ**
**ಸಂದೇಹಸಂಜ್ಞಿತಮಭೂದತ ಏವ ಮಧ್ಯಮ್ ॥ ೨೭ ॥**

ಯಸ್ಮಾತ್=ಯಾವ ಕಾರಣದಿಂದ; ಶಿಕ್ಷಿತ=ನುರಿತ; ಧಿಯಃ=ಬುದ್ಧಿವುಳ್ಳ; ಕವಯಃ ಅಪಿ=ಜ್ಞಾನಿಗಳೂ ಕೂಡಾ; ಲಕ್ಷ್ಮೀ=ರುಗ್ಮಿಣಿಯ; ಮುಕುಂದ=ಕೃಷ್ಣನ; ತನು=ಚಿಕ್ಕದಾದ; ವೃತ್ತ=ಉರುಟಾದ; ಮನೋಜ್ಞ=ಚಂದದ; ಮಧ್ಯಂ=ಸೊಂಟವನ್ನು; ಉದ್ವೀಕ್ಷ್ಯ=ನೋಡಿ; ಕಿಂಚ ಅಸ್ತಿ=ಇದೆಯೋ? ನ=ಇಲ್ಲವೋ; ಇತಿ=ಎಂದು; ಅಧುನಾ ಅಪಿ=ಈಗಲೂ ಕೂಡಾ;

ಸಂದಿಹತೇ ಖಲ=ಸಂಶಯ ಪಡುತ್ತಾರೆ ತಾನೆ; ಅತ ಏವ=ಆದ್ದರಿಂದಲೇ; ಮಧ್ಯಂ= ಸೊಂಟವು; ಸಂದೇಹ=ಸಂದೇಹವೆಂಬ; ಸಂಜ್ಞಿತಂ=ಹೆಸರುಳ್ಳದ್ದು; ಅಭೂತ್=ಆಯಿತು.

ಸೊಂಟಕ್ಕೆ ಸಂಸ್ಕೃತದಲ್ಲಿ 'ಸಂದೇಹ' ಎಂಬ ಹೆಸರಿದೆ. ಸಂಶಯವನ್ನೂ ಸಂದೇಹ ಎಂಬ ಶಬ್ದದಿಂದ ಕರೆಯುತ್ತಾರೆ. ಇವೆರಡನ್ನೂ ರಾಜರು ಚೆನ್ನಾಗಿ ಕೂಡಿಸುತ್ತಾರೆ. ಈ ರುಗ್ಮಿಣೀಕೃಷ್ಣರ ಸೊಂಟವು ತುಂಬಾ ಸಪುರವಾಗಿದೆ. ಉರುಟಾಗಿದೆ. ನೋಡಲು ಬಹಳ ಚಂದ ಇದೆ. ಜ್ಞಾನಿಗಳು ಇಂತಹ ಸೊಂಟವನ್ನು ನೋಡುತ್ತಿದ್ದಾರೆ. ಜ್ಞಾನಿಗಳೆಂದರೆ ಯಾವ ವಿಷಯವನ್ನೇ ಆಗಲಿ ಉಂಟು ಯಾ ಇಲ್ಲ ಎಂದು ಕರಾರುವಾಕ್ಕಾಗಿ ಹೇಳು ವವರು. ಇಂತಹ ಪಂಡಿತರೂ ಕೂಡಾ ಇವರಿಬ್ಬರ ಸೊಂಟದ ವಿಷಯದಲ್ಲಿ ಯಾವ ತೀರ್ಮಾನವನ್ನೂ ತೆಗೆದುಕೊಳ್ಳಲು ಆಗಲಿಲ್ಲ. ಉಂಟು ಎಂದು ಹೇಳಲು ಸೊಂಟ ಕಾಣಿಸುತ್ತಿಲ್ಲ. ಇಲ್ಲ ಎನ್ನೋಣವೇ ಸೊಂಟ ಇಲ್ಲದೆ ದೇಹದ ಮೇಲ್ಭಾಗ ಕೆಳಭಾಗ ಇರಲು ಹೇಗೆ ಸಾಧ್ಯ ಎಂಬ ಪ್ರಶ್ನೆ ಬರುತ್ತದೆ. ತೀರ್ಮಾನ ಮಾಡಲು ಸಾಧ್ಯವಾಗಿಲ್ಲ ವಾದ್ದರಿಂದ ಸೊಂಟಕ್ಕೆ ಸಂದೇಹ ಎಂಬ ಹೆಸರನ್ನೇ ಇಟ್ಟರು. ಇದು ರಾಜರ ಚಮತ್ಕಾರ. ಯದ್ಯಪಿ ಸೊಂಟಕ್ಕೆ ಸಂದೇಹ ಎಂಬ ಹೆಸರು ಬರಲು ಬೇರೆ ಕಾರಣ ಇದೆ.

**ಮಧ್ಯಂ ಮನೋಜ್ಞಂ ಮೃದುಲಂ ಸುವೃತ್ತಂ ಬುದ್ಧೌ ಸದಾ ತಿಷ್ಠತು ಯತ್ಕೃಶತ್ವಂ ।**
**ಉದ್ವೀಕ್ಷ್ಯ ತತ್ಪೂರ್ತಿವಿಧಿತ್ಸಯೇವ ಪದ್ಮಾ ಕರಾಬ್ಜೇನ ಸದಾಲಿಲಿಂಗೇ ॥ ೨೮ ॥**

ಪದ್ಮಾ=ರುಗ್ಮಿಣಿಯು; ಯತ್=ಯಾವುದರ; ಕೃಶತ್ವಂ=ಸೂಕ್ಷ್ಮತ್ವವನ್ನು; ಉದ್ವೀಕ್ಷ್ಯ= ನೋಡಿ; ಪೂರ್ತಿ=ಪೂರ್ಣತೆಯನ್ನು; ವಿಧಿತ್ಸಯಾ ಇವ=ತುಂಬಿಸುವವಳಂತೆ; ಸದಾ= ಯಾವಾಗಲೂ; ಆಲಿಲಿಂಗೇ=ಆಲಿಂಗಿಸಿದಳೋ; ತತ್=ಅಂತಹ; ಮನೋಜ್ಞಂ= ಚಂದದ; ಮೃದುಲಂ=ಮೆತ್ತಗಿನ; ಸುವೃತ್ತಂ=ಉರುಟಾದ; ಮಧ್ಯಂ=ಸೊಂಟವು; ಸದಾ= ಯಾವಾಗಲೂ; ಬುದ್ಧೌ=ಮನದಲ್ಲಿ; ತಿಷ್ಠತು=ಇರಲಿ.

ಕೃಶವಾದ ಈ ಸೊಂಟವನ್ನು ರುಗ್ಮಿಣಿಯು ಸದಾ ಆಲಿಂಗಿಸಿಕೊಂಡಿದ್ದಾಳೆ. ದೇವರ ಎಲ್ಲಾ ಅವಯವಗಳೂ ಪುಷ್ಟವಾಗಿವೆ. ಈ ಸೊಂಟ ಮಾತ್ರ ಕೃಶವಾಗಿದೆ. ಮೇಲ್ನೋಟಕ್ಕೆ ಇದೊಂದು ನ್ಯೂನತೆಯಂತೆ ತೋರುತ್ತದೆ. ಇದನ್ನು ಹೋಗಲಾಡಿಸಲು ಇವಳು ಯಾವಾಗಲೂ ಆತನ ಸೊಂಟವನ್ನು ಆಲಿಂಗಿಸಿಕೊಂಡೇ ಇರುತ್ತಾಳೆ. ಇವಳ ಕೈಯಿಂದ ಕೂಡಿರುವ ಸೊಂಟವೂ ಇತರ ಭಾಗಗಳಂತೆ ಪುಷ್ಟವಾಗಿಯೇ ತೋರುತ್ತದೆ ಎಂದು ರಾಜರು ಉತ್ಪ್ರೇಕ್ಷಿಸುತ್ತಾರೆ. ಇಂತಹ ಚಂದದ, ಉರುಟಾದ, ಮೆತ್ತಗಿನ ಸೊಂಟವು ಸದಾ ನಮ್ಮ ಮನದಲ್ಲಿ ನಿಲ್ಲಲಿ. ಅಂದರೆ ಸದಾ ಅದನ್ನು ಧ್ಯಾನಿಸೋಣ.

**ವಕ್ಷಃ ಸುರಕ್ಷಾಂ ಕುರುತಾನ್ಮುರಾರೇಃ ಸದ್ವರ್ಣ್ಯಲಾವಣ್ಯ ಗುಣೈಕಧಾಮ ।**
**ತತ್ಯಾಜ ಯನ್ನೈವ ಚಿರಂ ಸಪತ್ನೀ ವಕ್ಷೋಜಲಬ್ಧಾಂಕಮಪಿ ಸ್ಮ ಲಕ್ಷ್ಮೀಃ ॥ ೨೯ ॥**

ಚಿರಂ=ಸದಾ; ಸಪತ್ನೀ=ಸವತಿಯರ; ವಕ್ಷೋ=ಎದೆಯಲ್ಲಿ; ಜ=ಹುಟ್ಟಿದ್ದರ; ಲಬ್ಧ=ಹೊಂದಿದ; ಅಂಕಂ ಅಪಿ=ಚಿಹ್ನೆ ಇದ್ದರೂ; ಯತ್=ಯಾವುದನ್ನು; ಲಕ್ಷ್ಮೀಃ=ರಮೆಯು; ನ ಏವ ತತ್ಯಾಜ=ಬಿಡಲಿಲ್ಲವೋ; ಮುರಾರೇಃ=ಕೃಷ್ಣನ; ಸತ್=ಸಜ್ಜನರಿಂದ; ವರ್ಣ್ಯ= ವರ್ಣಿಸಲ್ಪಡುವ; ಲಾವಣ್ಯ=ಚಂದವೆಂಬ; ಗುಣ=ಗುಣಕ್ಕೆ; ಏಕ=ಮುಖ್ಯವಾದ; ಧಾಮ= ಆಶ್ರಯವಾದ; ವಕ್ಷಃ=ಎದೆಯು; ಸುರಕ್ಷಾಂ=ರಕ್ಷಣೆಯನ್ನು; ಕುರುತಾತ್=ಮಾಡಲಿ.

ಕೃಷ್ಣನ ಎದೆಯ ವರ್ಣನೆ– ಸಾಮಾನ್ಯ ಚಂದವನ್ನು ಸಜ್ಜನರು ಹೊಗಳುವುದೇ ಇಲ್ಲ. ಹೊಗಳಿದರೆಂದರೆ ಬಹಳ ಚಂದವುಂಟೆಂದೇ ಅರ್ಥ. ಕೃಷ್ಣನ ಎದೆಯನ್ನು ಇವರು ಬಾಯಿತುಂಬಾ ಹೊಗಳುತ್ತಾರೆ. ಏನೂ ಸಂಕೋಚಪಡುವುದೂ ಇಲ್ಲ. ಆದ್ದರಿಂದ ಕೃಷ್ಣನ ಎದೆಯು ತುಂಬಾ ಚಂದ. ರಾಜರು ಇನ್ನೊಂದು ಕಾರಣವನ್ನು ಕೊಡುತ್ತಾರೆ. ಇದು ಸ್ವಲ್ಪ ಹಾಸ್ಯಭರಿತವಾಗಿದೆ. ಒಬ್ಬನಿಗೆ ಅನೇಕ ಪತ್ನಿಯರಿದ್ದರೆ ಸವತಿಯರಲ್ಲಿ ಪರಸ್ಪರ ಮತ್ಸರ ಇರುತ್ತದೆ. ಪರಸ್ಪರರ ಮನೆಗೂ ಹೋಗುವುದಿಲ್ಲ. ಪರಸ್ಪರರು ಮುಟ್ಟಿದ ವಸ್ತುವನ್ನು ಬಿಟ್ಟು ಹೋಗುತ್ತಾರೆ ಕೂಡಾ. ಇದು ಸಾಮಾನ್ಯನಿಯಮ. ರಮೆಯು ಕೃಷ್ಣನ ಎದೆಯಲ್ಲಿ ಶ್ರೀವತ್ಸರೂಪದಿಂದ ಇದ್ದಾಳೆ. ಕೃಷ್ಣನು ಬಹಳ ಪತ್ನಿಯಿರುವವನು. ಇವರನ್ನು ಕೃಷ್ಣನು ಆಗಾಗ ಆಲಿಂಗಿಸುತ್ತಾನೆ. ಆಗ ಅವರ ಎದೆಯಲ್ಲಿರುವ ಕೇಸರಿಯುಕ್ತ ಚಂದನವು ಇವನ ಎದೆಗೆ ತಾಗುತ್ತದೆ. ಸವತಿಯರ ಚಂದನವು ಎದೆಯಲ್ಲಿ ಇರುವುದರಿಂದ ರಮೆಯು ಆ ಎದೆಯನ್ನು ಬಿಟ್ಟು ಹೋಗಬೇಕಿತ್ತು. ಆದರೆ ಹೋಗಲಿಲ್ಲ. ಅಂದರೆ ಅಷ್ಟೂ ಚಂದ ಈ ಎದೆ ಎಂದರ್ಥ. ಇವಳಿಗೆ ಸವತಿಮಾತ್ಸರ್ಯಕ್ಕಿಂತ ಈ ಸೌಂದರ್ಯವೇ ಹೆಚ್ಚಾಗಿ ಕಂಡಿತು. ಇಂತಹ ಎದೆಯು ನನ್ನ ಎದೆಗೂ ವೈಶಾಲ್ಯ ಎಂಬ ಚಂದವನ್ನು ತಂದುಕೊಡುವ ಮೂಲಕ ಕಾಪಾಡಲಿ.

> **ಆಲಿಂಗಿತಪ್ರಿಯತಮಾಕುಚಕುಂಕುಮಾಂಕ–**
> **ಲಕ್ಷ್ಯಂ ಜಿಗಾಯ ವಸುದೇವಸುತಸ್ಯ ವಕ್ಷಃ ।**
> **ಮತ್ತಸ್ಫುರತ್ಪರಿಣತದ್ವಿಪಧಾತುರಕ್ತ–**
> **ಕುಂಭಾಂಕ ಜೃಂಭಿಹರಿನೀಲ ವಿಶಾಲವಪ್ರಮ್** ॥ ೩೦ ॥

ಆಲಿಂಗಿತ=ಆಲಿಂಗಿಸಲ್ಪಟ್ಟ; ಪ್ರಿಯತಮ=ಅತ್ಯಂತ ಪ್ರಿಯಳ; ಕುಚ=ಸ್ತನಗಳ; ಕುಂಕುಮ=ಕೇಸರಿಯಿಂದ; ಅಂಕ=ಚಿಹ್ನಿತವಾದ; ಲಕ್ಷ್ಯಂ=ಚಂದವಾದ; ವಸುದೇವ= ವಸುದೇವನ; ಸುತಸ್ಯ=ಮಗನ; ವಕ್ಷಃ=ಎದೆಯು; ಮತ್ತ=ಮದಭರಿತ; ಸ್ಫುರತ್= ಶೋಭಿಸುವ; ಪರಿಣತ=ಪರಿಣತವಾದ; ದ್ವಿಪ=ಆನೆಯ; ಧಾತು=ಧಾತುವಿನ; ರಕ್ತ=ಕೆಂಪುಳ್ಳ; ಕುಂಭ=ಕುಂಭಸ್ಥಳದ; ಅಂಕ=ಚಿಹ್ನೆಯಿಂದ; ಜೃಂಭಿ=ಚಂದವಾದ; ಹರಿನೀಲ= ಇಂದ್ರನೀಲದ; ವಿಶಾಲ=ಅಗಲವಾದ; ವಪ್ರಂ=ಹಲಗೆಯನ್ನು; ಜಯತಿ=ಗೆಲ್ಲುತ್ತದೆ.

ಎದೆಯು ಬಹಳ ಅಗಲ ಇದೆ ಎಂದು ತಿಳಿಸುತ್ತಾರೆ– ಕೃಷ್ಣನು ರುಗ್ಮಿಣಿಯನ್ನು

ಆಲಿಂಗಿಸುತ್ತಾನೆ. ಆಕೆಯ ಕುಚಕುಂಭಗಳಲ್ಲಿ ಕೇಸರಿಮಿಶ್ರಿತ ಚಂದನ ಇದೆ. ಅದು ಕೃಷ್ಣನ ಮೈಗೆ ಮೆತ್ತಿಕೊಳ್ಳುತ್ತದೆ. ಈ ಪ್ರಸಂಗದಲ್ಲಿ ಕೃಷ್ಣನ ಎದೆಯು ನೋಡಲು ತುಂಬಾ ಚಂದ. ಈ ವಿಷಯದಲ್ಲಿ ಒಂದು ಉದಾಹರಣೆ– ಆನೆಯು ಮದವೇರಿದಾಗ ತನ್ನ ಸೊಂಡಿಲನ್ನು ದಾಡೆಗಳನ್ನು ಅಡ್ಡಾದಿಡ್ಡಿಯಾಗಿ ತಿರುಗಿಸುತ್ತದೆ. ಸಿಕ್ಕಿದ್ದಕ್ಕೆಲ್ಲಾ ತನ್ನ ಕುಂಭಸ್ಥಳವನ್ನು ಒರಸುತ್ತದೆ. ಒಂದು ಮರಕ್ಕೆ ಒರಸಿದಾಗ ಅದರ ಕೆಂಪಾದ ದ್ರವವು ಇದರ ಕುಂಭಸ್ಥಳಕ್ಕೆ ತಾಗುತ್ತದೆ. ಅಂತಹ ಕುಂಭಸ್ಥಳದಿಂದ ಪುನಃ ನೀಲಮಣಿಯ ಪರ್ವತಕ್ಕೆ ಒದೆಯುತ್ತದೆ. ಆಗ ಆ ದ್ರವವು ಈ ಪರ್ವತದ ಗೋಡೆಗೆ ತಾಗಿದಾಗ ಕಾಣುವಂತೆ ಕಾಣುತ್ತಿತ್ತು ಕೃಷ್ಣನ ಎದೆ. ಅದಕ್ಕಿಂತಲೂ ಚಂದ ಕಾಣುತ್ತಿತ್ತು.

**ವಕ್ಷೋ ವಿಶಾಲಂ ಹರಿನೀಲನೀಲಂ ಲಕ್ಷ್ಮೀಗೃಹಂ ಚಂದನಚರ್ಚಿತಂ ತತ್ ।**
**ಸತ್ಕೌಸ್ತುಭೋದ್ಭಾಸಕಮಸ್ತು ಚಿತ್ತೇ ವಿಸ್ತೀರ್ಣಭೂಷಾವಲಿ ವಿಠ್ಠಲಸ್ಯ ॥ ೩೧ ॥**

ವಿಠ್ಠಲಸ್ಯ=ಕೃಷ್ಣನ; ವಿಶಾಲಂ=ವಿಸ್ತೀರ್ಣವಾದ; ಹರಿನೀಲ=ಇಂದ್ರನೀಲಮಣಿಯಂತೆ; ನೀಲಂ=ನೀಲವಾದ; ಲಕ್ಷ್ಮೀ=ರಮೆಗೆ; ಗೃಹಂ=ಮನೆಯಾದ; ಚಂದನ=ಗಂಧದಿಂದ; ಚರ್ಚಿತಂ=ಅಲಂಕೃತವಾದ; ಸತ್=ಒಳ್ಳೆಯ; ಕೌಸ್ತುಭ=ಆಭರಣವನ್ನು; ಉದ್ಭಾಸಕಂ= ಬೆಳಗಿಸುವ; ವಿಸ್ತೀರ್ಣ=ಬಹಳವಾದ; ಭೂಷಾ=ಆಭರಣಗಳ; ಆವಲಿ=ಸಾಲುಳ್ಳ; ತತ್=ಆ; ವಕ್ಷಃ=ಎದೆಯು; ಚಿತ್ತೇ=ಮನದಲ್ಲಿ; ಅಸ್ತು=ಇರಲಿ.

ಕೃಷ್ಣನ ಎದೆಯು ತುಂಬಾ ವಿಶಾಲವಾಗಿದೆ. ಇಂದ್ರನೀಲಮಣಿಯಂತೆ ನೀಲವಾಗಿದೆ. ಎದೆ ತುಂಬಾ ಚಂದನ ಇದೆ. ರಮೆಯು ಶ್ರೀವತ್ಸರೂಪದಿಂದ ಎದೆಯಲ್ಲಿ ವಾಸಮಾಡಿಕೊಂಡಿದ್ದಾಳೆ. ಹಾಗೆಯೇ ಕೌಸ್ತುಭ ಎಂಬ ಮಣಿಯನ್ನು ಎದೆಯ ಮೇಲೆ ಕಂಠದಲ್ಲಿ ಧರಿಸಿದ್ದಾನೆ. ದೊಡ್ಡ ದೊಡ್ಡ ಆಭರಣಗಳನ್ನು ತುಂಬಾ ಧರಿಸಿದ್ದಾನೆ. ಇಂತಹ ಎದೆಯನ್ನು ನಾವು ಯಾವಾಗಲೂ ಧ್ಯಾನಿಸಬೇಕು.

**ಸೌವರ್ಣರಮ್ಯಕಲಶೋಪಮಿತಂ ಮನೋಜ್ಞಂ**
**ವಕ್ಷೋಜಕುಡ್ಮಲಯುಗಂ ಜಯತೀಂದಿರಾಯಾಃ ।**
**ಯಚ್ಚರ್ಚಿತೋಽಪಿ ನವಕುಂಕುಮರಾಶಿರಾಸೀ–**
**ದ್ವಕ್ಷೋಽನುಲೇಪನಮಣಿಃ ಪುರುಷೋತ್ತಮಸ್ಯ ॥ ೩೨ ॥**

ಇಂದಿರಾಯಾಃ=ರುಗ್ಮಿಣಿಯ; ಸೌವರ್ಣ=ಚಿನ್ನದ; ರಮ್ಯ=ಚಂದದ; ಕಲಶ=ಕಲಶಕ್ಕೆ; ಉಪಮಿತಂ=ಸಮಾನವಾದ; ಮನೋಜ್ಞಂ=ಚಂದದ; ವಕ್ಷೋಜ=ಸ್ತನಗಳೆಂಬ; ಕುಡ್ಮಲ=ಮೊಗ್ಗುಗಳ; ಯುಗಂ=ಎರಡು; ಜಯತಿ=ಶ್ರೇಷ್ಠವಾಗಿದೆ; ಯತ್=ಎಲ್ಲಿ; ಚರ್ಚಿತೋಽಪಿ=ಹಚ್ಚಲ್ಪಟ್ಟರೂ; ನವ=ಹೊಸ; ಕುಂಕುಮ=ಕೇಸರಿಯ; ರಾಶಿಃ=ಸಮೂಹವು; ಪುರುಷೋತ್ತಮಸ್ಯ=ಕೃಷ್ಣನ; ವಕ್ಷಃ=ಎದೆಗೆ; ಅನುಲೇಪನಮಣಿಃ=ಶ್ರೇಷ್ಠವಾದ ಬಂಧನವು; ಆಸೀತ್=ಆಯಿತು.

ರುಗ್ಮಿಣಿಯ ಸ್ತನಗಳನ್ನು ವರ್ಣಿಸುತ್ತಾರೆ– ರುಗ್ಮಿಣಿಯ ಮೈಯು ಚಿನ್ನದ ಬಣ್ಣದ್ದು. ಇವಳ ಎದೆಯಲ್ಲಿರುವ ಎರಡು ಸ್ತನಗಳು ಬಂಗಾರದ ಕಲಶಗಳಂತೆ ಇವೆ. ಸ್ತನಗಳ ಆಕಾರ ಕಮಲಗಳ ಮೊಗ್ಗುಗಳಂತೆ ಇದೆ. ಆದ್ದರಿಂದ ತುಂಬಾ ಚಂದ ಕಾಣುತ್ತವೆ. ಇವುಗಳ ಚಂದ ವರ್ಣನಾತೀತ ಎನ್ನುವುದಕ್ಕೆ ಇನ್ನೂ ಒಂದು ಕಾರಣವಿದೆ– ಇವಳು ತನ್ನ ಎದೆಗೆ ಚಂದನವನ್ನು ಹಚ್ಚಿಕೊಂಡಿದ್ದಾಳೆ. ಕೃಷ್ಣನು ಇವಳನ್ನು ಆಲಿಂಗಿಸುವಾಗ ಆ ಚಂದನವು ತನ್ನ ಎದೆಗೆ ತಗಲುವಂತೆ ಮಾಡುತ್ತಾನೆ. ಇವಳ ಎದೆಗೆ ತಗಲಿದ್ದು ಇವನಿಗೆ ಬೇಕಾಗಿಲ್ಲ. ಇವನು ಇವಳಿಗಿಂತ ಉತ್ತಮನು. ಇವನ ಪ್ರಸಾದವನ್ನೇ ಇವರೆಲ್ಲಾ ಶಿರಸಾ ಧರಿಸಲು ಕಾತರರಾರಿದ್ದಾರೆ. ಹೀಗಿದ್ದರೂ ಇವಳ ಸ್ತನಗಳ ಚಂದನವನ್ನು ತನ್ನ ಎದೆಗೆ ತಗಲಿಸಿಕೊಂಡನೆಂದರೆ ಇವಳ ಎದೆಯ ಸೌಂದರ್ಯವು ವರ್ಣನಾತೀತ.

**ಆಚ್ಛಾದಿತೋರಃಸ್ಥಲಮೂಲದೇಶಂ**
**ಜಾತಸ್ಯ ಯಸ್ಯಾಖಿಲಧರ್ಮಗೋಪ್ತಾ ।**
**ಶೌರಿಃ ಕರಂ ಯಚ್ಛತಿ ತಂ ರಮಾಯಾ–**
**ಶ್ಚಾರು ಸ್ತನಂ ವರ್ಣಯಿತುಂ ಕಃ ಈಶಃ** ॥ ೩೩ ॥

ಆಚ್ಛಾದಿತ=ಆವರಿಸಲ್ಪಟ್ಟ; ಉರಸ್ಥಲ=ಎದೆ ಎಂಬ; ಮೂಲದೇಶಂ=ಬುಡವುಳ್ಳದ್ದಾಗಿ; ಜತಸ್ಯ=ಹುಟ್ಟಿದ; ಯಸ್ಯ=ಯಾವುದಕ್ಕೆ; ಅಖಿಲ=ಎಲ್ಲಾ; ಧರ್ಮ=ಧರ್ಮಗಳು; ಗೋಪ್ತಾ=ರಕ್ಷಕನಾದ; ಶೌರಿಃ=ಕೃಷ್ಣನು; ಕರಂ=ಕರವನ್ನು; ಯಚ್ಛತಿ=ಕೊಡುತ್ತಾನೋ; ರಮಾಯಾಃ=ರುಗ್ಮಿಣಿಯ; ತಂ=ಅಂತಹ; ಚಾರು=ಚಂದದ; ಸ್ತನಂ=ಸ್ತನಗಳನ್ನು; ವರ್ಣಯಿತುಂ=ವರ್ಣಿಸಲು; ಕಃ=ಯಾರು; ಈಶಃ=ಶಕ್ತನು.

ಪುನಃ ಈಕೆಯ ಸ್ತನಗಳ ವರ್ಣನೆ– ಕೃಷ್ಣನ ದ್ರೋಹಿಗಳಿಗೆ ಶಿಕ್ಷಕ. ದ್ರೋಹಿಗಳಿಗೆ ಏನೂ ಸಿಗದಂತೆ ಮಾಡುವವನು. ತನ್ಮೂಲಕ ಸಮಾಜಕ್ಕೆ ಎಚ್ಚರಿಕೆಯನ್ನು ಕೊಡುವವನು. ಅದರೆ ರುಗ್ಮಿಣಿಯ ಸ್ತನ ವಿಷಯದಲ್ಲಿ ಇದು ಸಲ್ಲ. ಈಕೆಯ ಸ್ತನಗಳೂ ದ್ರೋಹಿಗಳು. ಈ ಸ್ತನಗಳು ಎದೆಯಲ್ಲಿ ಹುಟ್ಟಿದವುಗಳು. ತಮ್ಮ ಬೆಳವಣಿಗೆಯಿಂದ ಉತ್ಪತ್ತಿಸ್ಥಾನವಾದ ಎದೆಯೇ ಕಾಣದಂತೆ ಮಾಡುತ್ತವೆ. ಒಂದು ರೀತಿಯಲ್ಲಿ ಮಾತೃದ್ರೋಹಿಯಂತೆ. ಒಟ್ಟಿಗೆ ಸ್ತನಗಳು ಬಹಳ ದುಂಡಗೆ ಎಂದರ್ಥ. ಇದು ಸ್ತನಗಳ ಲಕ್ಷಣವೇ ಆಗಿದೆ. ಆದರೆ ಕವಿತ್ವದೃಷ್ಟಿಯಲ್ಲಿ ನೋಡುವಾಗ ದ್ರೋಹದಂತೆ ಕಾಣುತ್ತದೆ. ಕೆಲವರು ತಮ್ಮ ಶ್ರೀಮಂತಿಕೆ ಯಿಂದ ಚೆನ್ನಾಗಿ ಬೆಳೆದು ತಮಗೆ ಜನ್ಮಕೊಟ್ಟು ಮೂಲಸ್ಥಾನವಾದ ತಂದೆತಾಯಿಯನ್ನು ಕಡೆಗಣಿಸುವಂತೆ. ಇದು ದೊಡ್ಡ ದ್ರೋಹ. ಇಂತಹ ದ್ರೋಹಿಗಳನ್ನು ದೇವರು ಎಂದೂ ಕ್ಷಮಿಸಲಾರ. ಹೀಗಿದ್ದರೂ ಕೃಷ್ಣನು ಈ ಸ್ತನಗಳ ವಿಷಯದಲ್ಲಿ ಸ್ವಲ್ಪ ಮೃದು ಧೋರಣೆಯನ್ನು ತಾಳಿದ್ದಾನೆ. ಆ ಸ್ತನಗಳಿಗೆ ಕರವನ್ನು ಆಗಾಗ ಒಪ್ಪಿಸುತ್ತಾನೆ. ಕರ ಅಂದರೆ ತೆರಿಗೆ ಹಾಗೂ ಕೈ ಎಂದು ಎರಡು ಅರ್ಥ ಇದೆ. ಅವಳ ಸ್ತನಗಳನ್ನು ತನ್ನ ಕೈಗಳಿಂದ ಹಿಡಿಯುತ್ತಾನೆ. ಇದರಿಂದ ಸ್ತನಗಳಿಗೆ ಕರವನ್ನು ಅರ್ಪಿಸಿದಂತೆ ಆಯಿತು.

<u>ಸಂದೇಶ</u> : ಭಗವದ್ಭಕ್ತರು ಒಂದೊಮ್ಮೆ ದ್ರೋಹಿಗಳಾದರೂ ದೇವರು ಕ್ಷಮಿಸುತ್ತಾನೆ.

ಉದ್ಯನ್ಮನೋಜ್ಞಮುಖನಿರ್ಮಲಪೂರ್ಣಚಂದ್ರ-
ಮುದ್ವೀಕ್ಷ್ಯ ಮಂದಹಸಿತಾಮೃತಶೋಭಿಬಿಂಬಮ್ ।
ಬಿಭ್ರತ್‌ಸದಾ ಮುಕುಲಿತಾಂಬುಜಕೋಶಕಾಂತಿಂ
ಪುಷ್ಣಾತು ವಿಶ್ವಜನನೀ ಕುಚಮಂಡಲಂ ನಃ ॥ ೩೪ ॥

ಮಂದಹಸಿತ=ನಗುವೆಂಬ; ಅಮೃತ=ಅಮೃತದಿಂದ; ಶೋಭಿ=ಶೋಭಿಸುವ; ಬಿಂಬಂ=ಮಂಡಲವುಳ್ಳ; ಉದ್ಯತ್=ಉದಿಸುವ; ಮನೋಜ್ಞ=ಚಂದದ; ಮುಖ=ಮುಖವೆಂಬ; ನಿರ್ಮಲ=ಒಳ್ಳೆಯ; ಪೂರ್ಣ=ತುಂಬಿದ; ಚಂದ್ರಂ=ಚಂದ್ರನನ್ನು; ಉದ್ವೀಕ್ಷ್ಯ=ನೋಡಿ; ಮುಕುಲಿತ=ಮುದುಡಿದ; ಅಂಬುಜ=ಕಮಲದ; ಕೋಶ=ಕೋಶದ; ಕಾಂತಿಂ=ಕಾಂತಿಯನ್ನು; ಸದಾ=ಯಾವಾಗಲೂ; ಬಿಭ್ರತ್=ಧರಿಸಿರುವ; ವಿಶ್ವಜನನೀ=ಲೋಕಮಾತೆಯ; ಕುಚಮಂಡಲಂ=ಸ್ತನಗಳು; ನಃ=ನಮ್ಮನ್ನು; ಪುಷ್ಣಾತು=ರಕ್ಷಿಸಲಿ.

ಮಂದಹಸಿತ ಮಂದಹಾಸವೆಂಬ; ಅಮೃತ=ಅಮೃತದಿಂದ; ಶೋಭಿ=ಶೋಭಿಸುವ; ಬಿಂಬಂ=ಮಂಡಲವುಳ್ಳ; ಉದ್ಯತ್=ಉದಿಸುವ; ಮನೋಜ್ಞ=ಚಂದದ; ಮುಖ=ಮುಖವೆಂಬ; ನಿರ್ಮಲ=ಸ್ವಚ್ಛವಾದ; ಪೂರ್ಣಚಂದ್ರಂ=ಪೂರ್ಣಚಂದ್ರನನ್ನು; ಉದ್ವೀಕ್ಷ್ಯ=ನೋಡಿ; ಸದಾ=ಯಾವಾಗಲೂ; ಮುಕುಲಿತ=ಮುದುಡಿದ; ಅಭೋಜ= ಕಮಲದ; ಕೋಶ=ಕೋಶದ; ಕಾಂತಿಂ=ಶೋಭೆಯನ್ನು; ಬಿಭ್ರತ್=ಧರಿಸಿರುವ; ವಿಶ್ವ= ಜಗತ್ತಿಗೆ; ಜನನೀ=ತಾಯಿಯ; ಕುಚ=ಸ್ತನಗಳ; ಮಂಡಲಂ=ಎರಡು; ನಃ=ನಮ್ಮನ್ನು; ಪುಷ್ಣಾತು=ರಕ್ಷಿಸಲಿ.

ರುಗ್ಮಿಣಿಯ ಸಾರ್ವಕಾಲಿಕ ತಾರುಣ್ಯವನ್ನು ಸ್ತನಗಳ ಮೂಲಕ ತಿಳಿಸುತ್ತಾರೆ. ಮೇಲೆ ಆಕಾಶದಲ್ಲಿ ಚಂದ್ರ ಇರುವಾಗ ಕಮಲಗಳು ಅರಳುವುದಿಲ್ಲ. ಮೊಗ್ಗಿನಂತೆ ಗಟ್ಟಿಯಾಗಿ ಇರುತ್ತವೆ. ಇದು ಲೋಕಸಿದ್ಧ ವಿಚಾರ. ಇದನ್ನು ರಾಜರು ಈಕೆಯ ಸ್ತನಗಳ ವಿಷಯದಲ್ಲಿ ತಿಳಿಸುತ್ತಾರೆ. ಈಕೆಯ ಸ್ತನಗಳು ಕಮಲದ ಮೊಗ್ಗಿನಂತೆ ಗಟ್ಟಿಯಾಗಿವೆ. ಕಮಲಗಳು ಅರಳಿದರೆ ಶಿಥಿಲಗಳಾಗುತ್ತವೆ. ಶೈಥಿಲ್ಯವು ವಾರ್ಧಕ್ಯದ ಪ್ರತೀಕ. ಅರಳಿದ ಕಮಲಗಳು ಉದುರುತ್ತವೆ. ಅರಳದೆ ಗಟ್ಟಿಯಾಗಿಯೇ ಇರುವುದು ತಾರುಣ್ಯದ ಸಂಕೇತ. ಇವಳ ಸ್ತನಗಳೆಂಬ ಕಮಲಗಳು ಮೊಗ್ಗಿನಂತೆ ಗಟ್ಟಿಯಾಗಿಯೇ ಇವೆ. ಎಂದೂ ಅರಳಿ ಶಿಥಿಲಗಳಾಗುವುದಿಲ್ಲ. ಕಾರಣ– ಮೇಲಿರುವ ಚಂದ್ರ. ಈಕೆಯ ಮುಖವು ಚಂದ್ರನಂತೆ ಉರುಟಾಗಿದೆ. ಸ್ವಚ್ಛವಾಗಿದೆ. ಚಂದ ಇದೆ. ಮಂದಹಾಸವೆಂಬ ಬೆಳದಿಂಗಳನ್ನು ಅಮೃತದಂತೆ ಸದಾ ಹೊರಚೆಲ್ಲುತ್ತಿದೆ. ಲೋಕದ ಚಂದ್ರನಲ್ಲಾದರೂ ಸ್ವಲ್ಪ ಕಲೆಗಳಿವೆ. ಆದ್ದರಿಂದ ಅದರಿಂದ ಹೊರಟ ಬೆಳದಿಂಗಳು ಕಮಲದ ಅರಳುವಿಕೆಯನ್ನು ಪೂರ್ಣವಾಗಿ ತಡೆಹಿಡಿಯಲು ಅಸಮರ್ಥಗಳಾಗಬಹುದು. ಆದರೆ ಈಕೆಯ ಮುಖ

ಚಂದ್ರನಿಂದ ಹೊರಟ ಹಾಸವೆಂಬ ಬೆಳದಿಂಗಳಿಂದ ಈ ಕಮಲಗಳು ಅರಳಲು ಸಾಧ್ಯವೇ ಇಲ್ಲ. ಮುಖಚಂದ್ರ ಯಾವಾಗಲೂ ಇದೆ. ಈಕೆಯ ಸ್ತನಕಮಲಗಳೂ ಸದಾ ಮೊಗ್ಗಿನ ರೂಪದಲ್ಲೇ ಇವೆ. ಆದ್ದರಿಂದ ಈಕೆಗೆ ಮುದಿತನದ ಪ್ರಶ್ನೆಯೇ ಇಲ್ಲ. ಮಕ್ಕಳಿಗೆ ಪುಷ್ಟಿ ಬರುವುದೇ ಸ್ತನ್ಯಪಾನದಿಂದ. ಜಗತ್ತಿನ ತಾಯಿಯಾದ ಈಕೆಯು ತನ್ನ ಮಕ್ಕಳಾದ ನಮ್ಮನ್ನು ಸ್ತನ್ಯದ ಪಾನದಿಂದ ಕಾಪಾಡಲಿ.

**ಸದ್ವಂಶಜಾತಃ ಸುಗುಣಃ ಸುವೃತ್ತರತ್ನೋಽಪಿ ಹಾರಃ ಕಮಲಾಕುಚಾಂತೇ ।**
**ನೈವಾವಕಾಶಂ ಲಭತೇ ಕುಲೇನ ಕಿಂ ವಾ ಗುಣೋಘೈಃ ಕಠಿನೋಪಕಂಠೇ ॥ ೩೫ ॥**

ಸತ್=ಒಳ್ಳೆಯ; ವಂಶ=ವಂಶದಲ್ಲಿ; ಜಾತಃ=ಹುಟ್ಟಿದ; ಸುಗುಣಃ=ಒಳ್ಳೆಯ ಗುಣವುಳ್ಳ; ಸುವೃತ್ತ=ಒಳ್ಳೆಯ ಆಚಾರದಲ್ಲಿ; ರತ್ನಃ ಅಪಿ=ಶ್ರೇಷ್ಠನಾದರೂ; ಹಾರಃ=ಹಾರವು; ಕಮಲಾ=ರಮೆಯ; ಕುಚ=ಸ್ತನಗಳ; ಅಂತೇ=ಮಧ್ಯದಲ್ಲಿ; ಅವಕಾಶ=ಜಾಗವನ್ನು; ನ ಏವ ಲಭತೇ=ಹೊಂದುವುದಿಲ್ಲ; ಕಠಿನ=ಕಠಿಣರ; ಉಪಕಂಠೇ=ಸಮೀಪದಲ್ಲಿ; ಕುಲೇನ=ವಂಶದಿಂದ; ಗುಣೋಘೈಃ ವಾ=ಗುಣಗಳಿಂದಾಗಲೀ; ಕಿಂ=ಏನು ಪ್ರಯೋಜನ?

ಇನ್ನೊಂದು ರೀತಿಯಿಂದ ಸ್ತನಗಳ ಕಾಠಿನ್ಯದ ಮೂಲಕ ತಾರುಣ್ಯವನ್ನು ವರ್ಣಿಸುತ್ತಾರೆ. ರುಗ್ಮಿಣಿಯು ಎದೆಯ ಮೇಲೆ ಮುತ್ತುಗಳ ಹಾರಗಳನ್ನು ಹಾಕಿಕೊಂಡಿದ್ದಾಳೆ. ಅವುಗಳು ಸ್ತನಗಳ ಮೇಲೆ ಇವೆ. ಈ ಎರಡು ಸ್ತನಗಳು ಈ ಹಾರಗಳನ್ನು ತಮ್ಮ ಮಧ್ಯದಲ್ಲಿ ಸೇರಿಸಿಕೊಳ್ಳಲಿಲ್ಲ. ಅಷ್ಟೂ ಗಟ್ಟಿ ಈ ಸ್ತನಗಳು ಎಂದರ್ಥ. ಇದನ್ನೇ ಚಮತ್ಕಾರವಾಗಿ ವರ್ಣಿಸುತ್ತಾರೆ– ಮುತ್ತುಗಳು ಹುಟ್ಟುವ ಜಾಗ ಬಹಳ ಇವೆ. ಅವುಗಳಲ್ಲಿ ಉತ್ತಮ ಜಾತಿಯ ಬಿದಿರಿನ ಹಿಂಡಿಲೂ ಒಂದು. ಬಿದಿರಿನ ಹಿಂಡಿಲಿಗೆ ಸಂಸ್ಕೃತದಲ್ಲಿ 'ಸದ್ವಂಶ' ಎಂಬ ಹೆಸರು. ಒಳ್ಳೆಯ ವಂಶ ಎಂಬರ್ಥವೂ ಬರುತ್ತದೆ. ತಥಾ ಚ ಮುತ್ತುಗಳು. ಒಳ್ಳೆಯ ಬಿದಿರಿನಿಂದ ಹುಟ್ಟಿದ್ದು ಎಂಬರ್ಥದ ಜೊತೆಗೆ ಒಳ್ಳೆಯ ವಂಶದಲ್ಲಿ ಅಂದರೆ ಪರಂಪರೆಯಲ್ಲಿ ಬಂದದ್ದು ಎಂಬರ್ಥವೂ ಧ್ವನಿತವಾಗುತ್ತದೆ. ಹಗ್ಗಕ್ಕೆ ಗುಣ ಎಂದು ಹೆಸರು. ಈ ಮುತ್ತಿನ ಹಾರವು ಗುಣದಿಂದ ಕೂಡಿದೆ. ಹಗ್ಗದಿಂದ ಪೋಣಿಸಲ್ಪಟ್ಟಿದೆ ಎಂದು ಅರ್ಥ ಆಗುವಾಗ ವ್ಯಕ್ತಿಗಳಿಗೆ ಬೇಕಾಗುವ ಸೌಜನ್ಯಾದಿ ಗುಣಗಳಿಂದ ಕೂಡಿದ್ದು ಎಂದೂ ಅರ್ಥ ಮಾಡಬೇಕು. ಹಾರಗಳು ಸುವೃತ್ತರತ್ನದಿಂದ ಕೂಡಿರುತ್ತದೆ. ಅಂದರೆ ಈ ಹಾರಗಳ ತುದಿಗೆ ಉರುಟಾದ ದೊಡ್ಡದಾದ ರತ್ನವನ್ನು ಪೋಣಿಸುತ್ತಾರೆ. ಸುವೃತ್ತರತ್ನ ಶಬ್ದಕ್ಕೆ ಇನ್ನೊಂದು ಅರ್ಥ– ಸುವೃತ್ತ ಅಂದರೆ ಒಳ್ಳೆಯ ಆಚಾರ. ಸುವೃತ್ತರತ್ನವುಳ್ಳದ್ದು ಅಂದರೆ ಉತ್ತಮ ಆಚಾರವುಳ್ಳದ್ದು ಎಂದರ್ಥ. ಒಬ್ಬ ವ್ಯಕ್ತಿಯು ಸಮಾಜದಿಂದ ಆದೃತನಾಗಬೇಕಾದರೆ ಇವೆಲ್ಲಾ ಗುಣಗಳು ಬೇಕು. ಆಗ ಸಮಾಜವು ಇವನನ್ನು ತನ್ನೊಳಗೆ ಸೇರಿಸಿಕೊಳ್ಳುತ್ತದೆ. ಆದರೆ ಸಮಾಜವು ಕಠಿನ ಹೃದಯವುಳ್ಳದ್ದಾಗಿದ್ದರೆ ವ್ಯಕ್ತಿಯಲ್ಲಿ ಏನು ಗುಣಗಳಿದ್ದರೂ ತನ್ನಲ್ಲಿ ಸೇರಿಸಿಕೊಳ್ಳುವುದಿಲ್ಲ ಎಂಬುದಕ್ಕೆ ಈ ಸ್ತನಗಳೇ ಸಾಕ್ಷಿ.

ಈ ಮುತ್ತಿನ ಹಾರಗಳಲ್ಲಿ ಈ ಎಲ್ಲಾ ಗುಣಗಳಿವೆ. ಆದರೆ ಸ್ತನಗಳು ತುಂಬಾ ಕಠಿನಗಳಾದ್ದರಿಂದ ಈ ಹಾರಗಳನ್ನು ತನ್ನಲ್ಲಿ ಸೇರಿಸಿಕೊಳ್ಳಲಿಲ್ಲ. ಇದರ ಒಟ್ಟಭಿಪ್ರಾಯ- ಸ್ತನಗಳು ಗಟ್ಟಿ. ಆದ್ದರಿಂದ ಈಕೆಯು ತುಂಬಾ ತರುಣಿ ಎಂದು.

> **ಶಾಂರ್ಗಸ್ಯ ಗ್ರಹಣೇ ಮನೋರಮಗುಣಸ್ಯಾಕರ್ಷಣೇ ಸಾಯಕ-**
> **ಸ್ಯಾದಾನೇ ಯುಧಿ ಮಾಧವಸ್ಯ ಫಲಿತಾಃ ಸಂಧಾನಕರ್ಮಣ್ಯಪಿ ।**
> **ಚತ್ವಾರಃ ಕಬರೀಂ ಪ್ರಗೃಹ್ಯ ಕಮಲಾಮಾಲಿಂಗ್ಯ ಗಂಡಸ್ಥಲೀಂ**
> **ಸಂಗೃಹ್ಯಾಧರಜಾಮೃತಂ ಚ ಪಿಬತೋ ಹಸ್ತಾಃ ರಹಃ ಕೇಲಿಷು ॥ ೩೬ ॥**

ಯುಧಿ=ಯುದ್ಧದಲ್ಲಿ; ಶಾಂರ್ಗಸ್ಯ=ಶಾಂರ್ಗದ; ಗೃಹಣೇ=ಹಿಡಿಯುವಿಕೆಯಲ್ಲಿ; ಮನೋರಮ=ಚಂದದ; ಗುಣಸ್ಯ=ಹಗ್ಗದ; ಆಕರ್ಷಣೇ=ಹಿಡಿತದಲ್ಲಿ; ಸಾಯಕಸ್ಯ=ಬಾಣದ; ಆದಾನೇ=ಸ್ವೀಕಾರದಲ್ಲಿ; ಸಂಧಾನ=ಜೋಡಿಸುವ; ಕರ್ಮಣಿ ಅಪಿ=ಕೆಲಸದಲ್ಲಿಯೂ; ಮಾಧವಸ್ಯ=ಕೃಷ್ಣನ; ಚತ್ವಾರಃ=ನಾಲ್ಕು; ಹಸ್ತಾಃ=ಕೈಗಳು; ಫಲಿತಾಃ=ಸಾರ್ಥಕಗಳು; ರಹಃ=ರಹಸ್ಯದ; ಕೇಲಿಷು ಚ=ಆಟದಲ್ಲಿಯೂ; ಕಬರೀಂ=ತಲೆಕೂದಲನ್ನು; ಪ್ರಗೃಹ್ಯ=ಹಿಡಿದು; ಕಮಲಾಂ=ರಮೆಯನ್ನು; ಆಲಿಂಗ್ಯ=ಆಲಿಂಗಿಸಿ; ಗಂಡಸ್ಥಲೀಂ=ಕಪೋಲ ವನ್ನು; ಪಿಬತಃ=ಕುಡಿಯುವ; ಮಾಧವಸ್ಯ=ಕೃಷ್ಣನ; ಹಸ್ತಾಃ=ಕೈಗಳು; ಫಲಿತಾಃ= ಸಫಲಗಳು.

ಕೃಷ್ಣನಿಗೆ ೪ ಕೈಗಳಿವೆ. ಇವುಗಳ ಉಪಯೋಗವನ್ನು ಗಂಭೀರವಾಗಿಯೂ ವಿನೋದ ವಾಗಿಯೂ ರಾಜರು ವರ್ಣಿಸುತ್ತಾರೆ- ಕೃಷ್ಣನು ಅನೇಕ ದುಷ್ಟರ ಜೊತೆ ಹೋರಾಡಿದವನು. ಯುದ್ಧದ ಪ್ರಸಂಗದಲ್ಲಿ ಬಹಳ ಚುರುಕುತನ ಬೇಕು. ಎಷ್ಟು ಕೈಗಳಿದ್ದರೂ ಸಾಲದು. ಒಂದು ಕೈಯಿಂದ ಬಿಲ್ಲನ್ನು ಹಿಡಿಯಬೇಕು. ಇನ್ನೊಂದು ಕೈಯಿಂದ ಬಿಲ್ಲಿನ ಹಗ್ಗವನ್ನು ಎಳೆಯಬೇಕು. ಮತ್ತೊಂದು ಕೈಯಿಂದ ಬಾಣವನ್ನು ಬತ್ತಳಿಕೆಯಿಂದ ತೆಗೆಯಬೇಕು. ಮಗದೊಂದು ಕೈಯಿಂದ ಬಾಣವನ್ನು ಜೋಡಿಸಿ ಹೊಡೆಯಬೇಕು. ಈ ಎಲ್ಲಾ ಕೆಲಸ ಗಳನ್ನು ಒಟ್ಟಿಗೆ ಮಾಡಬೇಕು. ಒಂದರನಂತರ ಒಂದರಂತೆ ಮಾಡಲು ಅವಕಾಶ ಇಲ್ಲ. ಆ ವೇಳೆಗೆ ಶತ್ರುಗಳು ಮುಗಿಬೀಳುತ್ತಾರೆ. ಇದಕ್ಕಾಗಿ ನಾಲ್ಕು ಕೈಗಳು ಸಾರ್ಥಕವಾಗಿವೆ. ಇದು ಯುದ್ಧವೆಂಬ ಗಂಭೀರ ಪ್ರಸಂಗದಲ್ಲಿ ಕೈಗಳ ಉಪಯೋಗ. ರುಗ್ಮಿಣಿಯ ಜೊತೆಗೆ ಕೃಷ್ಣನ ಶೃಂಗಾರಪ್ರಸಂಗದಲ್ಲಿಯೂ ನಾಲ್ಕು ಕೈಗಳ ಉಪಯೋಗವನ್ನು ತಿಳಿಸುತ್ತಾರೆ- ಕೃಷ್ಣನು ಪತ್ನಿಯ ಜೊತೆ ಏಕಾಂತದಲ್ಲಿದ್ದಾನೆ. ತನ್ನ ಒಂದು ಕೈಯಿಂದ ಆಕೆಯ ತಲೆಕೂದ ಲನ್ನು ಹಿಡಿದು ಎಳೆಯುತ್ತಾನೆ. ಇನ್ನೆರಡು ಕೈಗಳಿಂದ ಆಕೆಯನ್ನು ಆಲಿಂಗಿಸುತ್ತಾನೆ. ಇನ್ನೊಂದು ಕೈಯಿಂದ ಆಕೆಯ ತುಟಿಯನ್ನು ಬಿಡಿಸುತ್ತಾನೆ. ತುಟಿಯ ರಸವನ್ನು ಸವಿಯು ತ್ತಾನೆ. ಇವೆಲ್ಲವನ್ನೂ ಏಕಕಾಲದಲ್ಲಿ ಮಾಡಿದಾಗಲೇ ರಮೆಗೆ ಪೂರ್ಣವಾದ ಆನಂದವು ಲಭಿಸುವುದು. ಹೀಗೆ ವಿನೋದದ ಪ್ರಸಂಗದಲ್ಲಿಯೂ ನಾಲ್ಕು ಕೈಗಳಿಗೆ ಸಾರ್ಥಕ್ಯ ಇದೆ.

**ಹಸ್ತಾಃ ಸ್ಫುರನ್ಮರಕತದ್ಯುತಯೋಽತಿದೀರ್ಘಾಃ**
**ಕೃಷ್ಣಸ್ಯ ರಮ್ಯನಖಮೌಕ್ತಿಕ ಶೋಭಮಾನಾಃ ।**
**ಯಚ್ಛಂತು ನಃ ಫಲಿತಪುಷ್ಪಿತಪಾರಿಜಾತ–**
**ಶಾಖಾಸಮಾನವಿಭವಾ ವಿಭವೋಽಖಿಲಾರ್ಥಾನ್ ॥ ೩೭ ॥**

ಸ್ಫುರತ್=ಶೋಭಿಸುವ; ಮರಕತ=ಇಂದ್ರನೀಲಮಣಿಯಂತೆ; ದ್ಯುತಯಃ=ಕಾಂತಿವುಳ್ಳ; ಅತಿ=ಬಹಳ; ದೀರ್ಘಾಃ=ಉದ್ದವಾದ; ರಮ್ಯ=ಶೋಭಿಸುವ; ನಖಾ=ಉಗುರುಗಳೆಂಬ; ಮೌಕ್ತಿಕೈಃ=ಮುತ್ತುಗಳಿಂದ; ಶೋಭಮಾನಾಃ=ಶೋಭಿಸುವ; ಫಲಿತ=ಫಲಗಳಿಂದ ಕೂಡಿದ; ಪುಷ್ಪಿತ=ಹೂಗಳಿಂದ ಕೂಡಿದ; ಪಾರಿಜಾತ=ಪಾರಿಜಾತಮರದ; ಶಾಖಾ=ಗೆಲ್ಲುಗಳಿಗೆ; ಸಮಾನ=ಸದೃಶಗಳಾದ; ವಿಭವಾಃ=ವೈಭವವುಳ್ಳ; ವಿಭವಃ=ಸಮರ್ಥಗಳಾದ; ಕೃಷ್ಣಸ್ಯ=ಕೃಷ್ಣನ; ಹಸ್ತಾಃ=ಕರಗಳು; ನಃ=ನಮಗೆ; ಅಖಿಲ=ಎಲ್ಲಾ; ಅರ್ಥಾನ್=ಅಭೀಷ್ಟ ಗಳನ್ನು; ಯಚ್ಛಂತು=ಕೊಡಲಿ.

ಕೃಷ್ಣನ ದೇಹವನ್ನು ಒಂದು ಪಾರಿಜಾತಮರಕ್ಕೆ ಹೋಲಿಸುತ್ತಾರೆ. ಮರದಲ್ಲಿ ಉದ್ದವಾದ ಗೆಲ್ಲುಗಳಿವೆ. ಕೃಷ್ಣನಿಗೆ ಉದ್ದವಾದ ಕೈಗಳಿವೆ. ಮರದಲ್ಲಿ ಹಸುರಾದ ಎಲೆಗಳು ದಟ್ಟವಾಗಿವೆ. ಆದ್ದರಿಂದ ಗೆಲ್ಲುಗಳು ಹಸುರಾಗಿ ತೋರುತ್ತವೆ. ಕೃಷ್ಣನ ಮೈಬಣ್ಣ ನೀಲ. ಕೈಗಳೂ ನೀಲ. ಕವಿಗಳ ದೃಷ್ಟಿಯಲ್ಲಿ ನೀಲ ಹಾಗೂ ಹಸುರು ಸಾಮಾನ್ಯವಾಗಿ ಸಮಾನವಾಗಿದೆ. ಕೈಗಳ ತುದಿಯಲ್ಲಿ ಬೆರಳುಗಳು. ಅವುಗಳು ಉಪಗೆಲ್ಲುಗಳಂತೆ ತೋರುತ್ತವೆ. ಈ ಬೆರಳುಗಳ ತುದಿಯಲ್ಲಿ ಉಗುರುಗಳು. ಈ ಉಗುರುಗಳಲ್ಲಿ ರಕ್ತದ ಛಾಯೆ ಇದೆ. ಬಿಳಿಯಾದ ಉಗುರುಗಳಲ್ಲಿ ಈ ಛಾಯೆಯಿಂದಾಗಿ ಉಗುರುಗಳು ಪಾರಿಜಾತ ಪುಷ್ಪದಂತೆ ತೋರುತ್ತದೆ. ಪಾರಿಜಾತ ಹೂ ಬಿಳಿ. ಅದರ ತೊಟ್ಟು ಕೆಂಪು. ಉಗುರಿನ ತುದಿ ಚೂರ್ಣ ಬಿಳಿ. ಇದು ಮುತ್ತಿನಂತಹ ಫಲಕ್ಕೆ ದ್ಯೋತಕ. ಈ ರೀತಿಯಾಗಿ ಹೂ ಹಣ್ಣುಗಳಿಂದ ಕೂಡಿದ ಪಾರಿಜಾತಮರದ ಗೆಲ್ಲುಗಳಂತೆ ಕೃಷ್ಣನ ಕೈಗಳಿವೆ. ಇಂತಹ ನಾಲ್ಕು ಕೈಗಳು ನಾಲ್ಕು ವಿಧದ ಪುರುಷಾರ್ಥಗಳನ್ನು ಕೊಡಲು ಶಕ್ತಗಳು. ನಮ್ಮ ಅಭೀಷ್ಟಗಳನ್ನು ಕೊಟ್ಟು ಕೊನೆಗೆ ಮುಕ್ತಾಫಲವನ್ನು (ಮೋಕ್ಷ) ಕೊಡಲಿ. ನಮ್ಮನ್ನು ಚೆನ್ನಾಗಿ ಬೆಳೆಸಲಿ.

**ಚಕ್ರಂ ಹರೇರ್ಮರ್ದಿತದೈತ್ಯಚಕ್ರಂ ಶಂಖಃ ಸ್ವನೈರ್ಧಿಕ್ಕೃತದೈತ್ಯಶಂಖಃ ।**
**ಪದ್ಮಂ ಚ ವಿಧ್ವಸ್ತಪರಾಸ್ಯ ಪದ್ಮಂ ಗದಾ ಚ ಸಾ ಪಾಪಗದಾಪಹಂತ್ರೀ ॥ ೩೮ ॥**

ಹರೇಃ=ಕೃಷ್ಣನ; ಚಕ್ರಂ=ಚಕ್ರವು; ಮರ್ದಿತ=ನಾಶಮಾಡಿದ; ದೈತ್ಯ=ದುಷ್ಟರ; ಚಕ್ರಂ=ಸಮೂಹವುಳ್ಳದ್ದು; ಶಂಖಃ=ಶಂಖವು; ಸ್ವನೈಃ=ಧ್ವನಿಗಳಿಂದ; ಧಿಕೃತ=ತಿರಸ್ಕರಿಸಲ್ಪಟ್ಟ; ದೈತ್ಯ=ದೈತ್ಯರ; ಶಂಖಃ=ಸಮೂಹವುಳ್ಳದ್ದು; ಪದ್ಮಂ ಚ=ಕಮಲವಾದರೂ; ವಿಧ್ವಸ್ತ=ನಾಶಮಾಡಲ್ಪಟ್ಟ; ಪರ=ಶತ್ರುಗಳ; ಆಸ್ಯ=ಮುಖವೆಂಬ; ಪದ್ಮಂ=ಕಮಲವುಳ್ಳದ್ದು; ಗದಾ

ಚ=ಗದೆಯಾದರೂ; ಸಾ=ಅದು; ಪಾಪ=ಪಾಪಗಳೆಂಬ; ಗದಾ=ರೋಗವನ್ನು; ಅಪಹಂತ್ರೀ= ಪರಿಹರಿಸತಕ್ಕದ್ದು.

ಕೃಷ್ಣನ ಕೈಗಳ ನಾಲ್ಕು ಆಯುಧಗಳ ವರ್ಣನೆ– ಕೃಷ್ಣನು ಬಹಳ ದೈತ್ಯರನ್ನು ಕೊಂದವನು. ದೈತ್ಯರು ಕಾದಾಡಲು ಬರುವಾಗ ಬಹಳ ಗಲಾಟೆ ಮಾಡಿಕೊಂಡೇ ಬರುತ್ತಿದ್ದರು. ಆಗ ಕೃಷ್ಣನು ತನ್ನ ಶಂಖವನ್ನು ಊದುತ್ತಿದ್ದನು. ಈ ಧ್ವನಿಯು ದೈತ್ಯರ ಧೈರ್ಯವನ್ನು ಅಣಕಿಸುತ್ತಿತ್ತು. ಶಂಖ ಅಂದರೆ ಒಂದು ಸಂಖ್ಯೆಯ ಹೆಸರೂ ಕೂಡಾ. ದೈತ್ಯರು ಎಷ್ಟೇ ಸಂಖ್ಯೆಯಲ್ಲಿದ್ದರೂ ಈ ಶಂಖದ ಧ್ವನಿಗೆ ಭೀತರಾಗುತ್ತಿದ್ದರು. ಅನಂತರ ಹಠಮಾರಿತನದಿಂದ ಯುದ್ಧಕ್ಕೆ ಬರುತ್ತಿದ್ದರು. ಆಗ ಕೃಷ್ಣನು ತನ್ನ ಚಕ್ರದಿಂದ ಅವರ ಚಕ್ರವನ್ನು ಅಂದರೆ ಸಮೂಹವನ್ನು ನಾಶಮಾಡುತ್ತಿದ್ದನು. ಅಳಿದುಳಿದ ಅಸುರರ ಮುಖ ಕಮಲವು ಕೃಷ್ಣನ ಕೈಯ ಕಮಲದ ಮುಂದೆ ನಿಸ್ತೇಜವಾಗುತ್ತಿತ್ತು. ಈ ರೀತಿಯಾಗಿ ಸಜ್ಜನರಿಗೆ ಈ ದೈತ್ಯರ ಉಪಟಳವನ್ನು ಪರಿಹರಿಸುತ್ತಿದ್ದನು. ಈ ಉಪಟಳಕ್ಕೆ ಸಜ್ಜನರಲ್ಲಿರುವ ಪಾಪವೂ ಕಾರಣ. ಈ ಪಾಪದಿಂದಾಗಿಯೇ ಸಜ್ಜನರು ದೈತ್ಯರಿಂದ ಪೀಡಿತರಾಗುತ್ತಿದ್ದರು. ದೇವರು ತನ್ನ ಗದೆಯಿಂದಲೂ ದುಷ್ಟರನ್ನು ಮರ್ದಿಸಿ ಸಾತ್ವಿಕರ ಪಾಪವೆಂಬ ಗದೆಯನ್ನು ಅಂದರೆ ಕಾಯಿಲೆಯನ್ನು ನಾಶಮಾಡುತ್ತಿದ್ದನು. ಗದಾ ಶಬ್ದಕ್ಕೆ ಕಾಯಿಲೆ ಎಂಬ ಅರ್ಥ ಇದೆ.

**ದ್ವಿಷಾಮಸಹ್ಯೋಽಪಿ ನಿಜಪ್ರಹರ್ಷಕರೋಽಸ್ಯ ಖಡ್ಗಃ ಕಿಲ ನಂದಕಾಖ್ಯಃ ।**
**ವಿಯುಕ್ತನಾರೀಪರಿತಾಪಕಾರೀ ಕಿಮಿಂದುರಾನಂದಕರೋ ನ ಲೋಕೇ ॥ ೩೯ ॥**

ದ್ವಿಷಾಂ=ಶತ್ರುಗಳಿಗೆ; ಅಸಹ್ಯಃ ಅಪಿ=ಸಹಿಸಲು ಅಸಾಧ್ಯವಾದರೂ; ನಿಜ=ತನ್ನವರಿಗೆ; ಪ್ರಹರ್ಷ=ನೆಮ್ಮದಿಯನ್ನು; ಕರಃ=ಮಾಡುವ; ಅಸ್ಯ=ಇವನ; ಖಡ್ಗಃ=ಕತ್ತಿಯು; ನಂದಕ=ನಂದಕ ಎಂಬ; ಆಖ್ಯಃ ಕಿಲ=ಹೆಸರುಳ್ಳದ್ದು ತಾನೆ; ವಿಯುಕ್ತ=ಅಗಲಿದ; ನಾರೀ= ಸ್ತ್ರೀಯರಿಗೆ; ಪರಿತಾಪ=ದುಃಖವನ್ನು; ಕಾರೀ=ಮಾಡುವ; ಇಂದುಃ=ಚಂದ್ರನು; ಲೋಕೇ= ಜಗತ್ತಿನಲ್ಲಿ; ಆನಂದಕರಃ=ಸಂತೋಷವನ್ನು ಮಾಡುವವನು; ನ ಕಿಂ=ಅಲ್ಲವೇನು?

ಕೃಷ್ಣನ ಕತ್ತಿಗೆ 'ನಂದಕ' ಎಂದು ಹೆಸರು. ನಂದಕ ಅಂದರೆ ಸಂತೋಷಪಡಿಸುವುದು ಎಂದು ಅರ್ಥ. ಯದ್ಯಪಿ ಈ ಕತ್ತಿಯು ಯಾವ ದುಷ್ಟರಿಗೂ ನೆಮ್ಮದಿ ಕೊಟ್ಟಿಲ್ಲ. ಹೀಗಿರುವಾಗ ಇದಕ್ಕೆ ನಂದಕ ಎಂಬ ಹೆಸರು ಹೇಗೆ ಕೂಡುತ್ತೆ? ಉತ್ತರ– ಈ ಕತ್ತಿಯು ಎಲ್ಲರಿಗೂ ಸಿಂಹಸ್ವಪ್ನವಾಗದೆ ದುಷ್ಟರಿಗೆ ಮಾತ್ರ ಆಗಿದೆ. ಶಿಷ್ಟರಿಗೆ ಆನಂದದಾಯಕವೇ. ಆದ್ದರಿಂದ ನಂದಕ ಎಂದು ಹೆಸರು ಕೂಡುತ್ತದೆ. ಇದಕ್ಕೆ ಉದಾಹರಣೆ– ದಾಂಪತ್ಯ ಜೀವನದ ತಾರುಣ್ಯದಲ್ಲಿ ಪತಿಯು ಕಾರ್ಯನಿಮಿತ್ತದಿಂದ ಬೇರೆ ಊರಿಗೆ ಹೋಗಿರುತ್ತಾನೆ. ಅದು ಶುಕ್ಲಪಕ್ಷದ ಸಮಯ. ರಾತ್ರಿ ಆಕಾಶದಲ್ಲಿ ಚಂದ್ರನು ಚೆನ್ನಾಗಿ ಉದಿಸಿರುತ್ತಾನೆ. ಆ ಚಂದ್ರನನ್ನು ನೋಡಿದಾಗ ಪತ್ನಿಗೆ ಪತಿಯ

ವಿರಹವೇದನೆಯು ಬಹಳವಾಗಿರುತ್ತದೆ. ಚಂದ್ರನು ಅವಳಿಗೆ ದುಃಖವನ್ನು ಕೊಟ್ಟರೂ ಬೇರೆಯವರಿಗೆ ನೆಮ್ಮದಿಯನ್ನೇ ಕೊಡುತ್ತಾನೆ.

**ಸಂದೇಶ : ಎಲ್ಲರಿಗೂ ಇಷ್ಟವಾಗುವ ಯಾವ ವಸ್ತುವೂ ಜಗತ್ತಿನಲ್ಲಿ ಇಲ್ಲ.**

**ಶರೈರಪಾರೈರಿಪುವರ್ಗದೈನ್ಯ ಕರೋಽಸ್ಯ ಚಾಪಸ್ತ್ರಿನತೋ ಮುರಾರೇಃ ।**
**ತಥಾಪಿ ಸದ್ವಂಶಭವಾ ಗುಣಾಢ್ಯಾ ನತಾ ಸಮರ್ಥಾ ಅಪಿ ಸರ್ವಸಂಧೌ ॥ ೪೦ ॥**

ಅಪಾರೈಃ=ಬಹಳ; ಶರೈಃ=ಬಾಣಗಳಿಂದ; ರಿಪು=ಶತ್ರುಗಳ; ವರ್ಗ=ಸಮೂಹಕ್ಕೆ; ದೈನ್ಯ=ದುಃಖವನ್ನು; ಕರಃ=ಮಾಡುವ; ಅಸ್ಯ=ಈ; ಮುರಾರೇಃ=ಕೃಷ್ಣನ; ಚಾಪಃ=ಧನುಸ್ಸು; ತ್ರಿ=ಮೂರುಕಡೆ; ನತಃ=ಬಾಗಿದೆ; ತಥಾಹಿ=ಇದು ಸರಿ; ಸತ್=ಒಳ್ಳೆಯ; ವಂಶ=ವಂಶದಲ್ಲಿ; ಭವಾಃ=ಹುಟ್ಟಿರುವ; ಗುಣ=ಗುಣಗಳಿಂದ; ಆಢ್ಯಾಃ=ಕೂಡಿದವರು; ಸಮರ್ಥಾ ಅಪಿ= ಶಕ್ತರಾದರೂ; ಸರ್ವ=ಎಲ್ಲಾ; ಸಂಧೌ=ಸಂಧಿಗಳಲ್ಲಿ; ನತಾಃ=ಬಗ್ಗಿರುವವರು.

ಕೃಷ್ಣನ ಧನುಸ್ಸಿನ ವರ್ಣನೆ– ಧನುಸ್ಸು ಮೂರು ಕಡೆ ಬಾಗಿರುವುದು ಸಹಜ– ಎರಡು ತುದಿಗಳಲ್ಲಿ ಹಾಗೂ ಹಿಡಿಯುವ ಮಧ್ಯಭಾಗದಲ್ಲಿ. ಇದನ್ನು ರಾಜರು ಈ ರೀತಿ ತಿಳಿಸುತ್ತಾರೆ– ಬಾಗುವುದು ದುರ್ಬಲರ ಲಕ್ಷಣ. ಈ ಧನುಸ್ಸು ತಾನು ದುರ್ಬಲವಲ್ಲ. ತನ್ನಿಂದ ಹೊರಟ ಅನೇಕ ಬಾಣಗಳಿಂದ ಮಹಾಮಹಾ ದೈತ್ಯರ ತಲೆಗಳನ್ನು ಉರುಳಿಸಿದೆ. ಹೀಗಿರುವಾಗ ಇದು ಯಾಕೆ ಬಾಗಬೇಕು? ಉತ್ತರ– ಒಳ್ಳೆಯ ವಂಶದಿಂದ ಬಂದವರು ಗುಣಗಳಿಂದ ಕೂಡಿದವರು ಮೂರು ಕಡೆ ಮಾತ್ರ ಅಲ್ಲ; ಎಲ್ಲಾ ಸಂದರ್ಭದಲ್ಲಿಯೂ ಬಾಗಿಕೊಂಡೇ ಇರುತ್ತಾರೆ. ತಮಗೆ ಎಷ್ಟು ಸಾಮರ್ಥ್ಯ ಇದ್ದರೂ ಅಹಂಕಾರ ಪಡುವುದಿಲ್ಲ. ಇಲ್ಲಿ 'ಸದ್ವಂಶಭವಾಗುಣಾಢ್ಯಾ' ಎಂಬುದು ಎರಡು ಅರ್ಥವುಳ್ಳದ್ದು. ಬಿಲ್ಲು ಹಗುರ ಇರಬೇಕು ಎಂಬ ಅಭಿಪ್ರಾಯದಿಂದ ಉತ್ತಮ ಜಾತಿಯ ಬಿದಿರಿನಿಂದ ಮಾಡುತ್ತಿದ್ದರು. ಬಿದಿರಿನ ಹಿಂಡಿಲಿಗೆ ವಂಶ ಎಂದು ಹೆಸರಿದೆ. ತಥಾ ಬಿಲ್ಲು ಸದ್ವಂಶದಿಂದ ಬಂದಂತೆ ಆಯಿತು. ಗುಣ ಎಂಬ ಶಬ್ದಕ್ಕೆ ಹಗ್ಗ ಎಂಬ ಅರ್ಥವೂ ಇದೆ. ಧನುಸ್ಸು ಎರಡೂ ತುದಿಗಳಲ್ಲಿ ಹಗ್ಗದಿಂದ ಬಿಗಿದಿರುತ್ತೆ. ಆದ್ದರಿಂದ ಗುಣದಿಂದ ಕೂಡಿದೆ. ಸಾತ್ವಿಕರಂತೆ ಬಿಲ್ಲೂ ಕೂಡಾ ಬಾಗಿಕೊಂಡಿರುವುದು ಉಚಿತವೇ ಆಗಿದೆ.

**ಹಸ್ತಾಃ ಹರೇಃ ಕಟಕಕಂಕಣಮುದ್ರಿಕಾದ್ಯೈಃ**
**ದೀಪ್ತಾಃ ಸುದರ್ಶನಗದಾಂಬುಜಶಂಖಶೋಭಾಃ ।**
**ವೃತ್ತಾಸ್ತ್ರಿರೇಖಮಣಿಬಂಧರುಚೋಽತಿದೀರ್ಘಾಃ**
**ರಕ್ತಾಬ್ಜಕೋಮಲತಲಾ ಮಮ ಮಾನಸೇ ಸ್ಯುಃ ॥ ೪೧ ॥**

ಕಟಕ=ಕಡಗಗಳು; ಕಂಕಣ=ಬಳೆಗಳು; ಮುದ್ರಿಕಾ=ಉಂಗುರಗಳು; ಆದ್ಯೈಃ= ಮೊದಲಾದವುಗಳಿಂದ; ದೀಪ್ತಾಃ=ಶೋಭಿಸುವ; ಸುದರ್ಶನ=ಚಕ್ರವು; ಗದಾ=ಗದೆಯು;

ಅಂಬುಜ=ಕಮಲವು; ಶಂಖ=ಶಂಖವು ಇವುಗಳ; ಶೋಭಾಃ=ಪ್ರಕಾಶವುಳ್ಳ; ವೃತ್ತಾಃ=ಉರುಟಾದ; ತ್ರಿ=ಮೂರು; ರೇಖ=ಗೆರೆಗಳುಳ್ಳ; ಮಣಿಬಂಧ=ಮಣಿಗಂಟಿನ; ರುಚಃ=ಕಾಂತಿವುಳ್ಳ; ಅತಿದೀರ್ಘಾಃ=ಬಹಳ ಉದ್ದವಾದ; ರಕ್ತ=ಕೆಂಪಾದ; ಅಬ್ಜ=ಕಮಲದಂತೆ; ಕೋಮಲ=ಮೃದುವಾದ; ತಲಾ=ತಲವುಳ್ಳ; ಹರೇಃ=ಕೃಷ್ಣನ; ಹಸ್ತಾಃ=ಕೈಗಳು; ಮಮ=ನನ್ನ; ಮಾನಸೇ=ಮನದಲ್ಲಿ; ಸ್ಯುಃ=ಇರಲಿ.

ಕೃಷ್ಣನ ಕೈಗಳನ್ನು ವರ್ಣಿಸುತ್ತಾರೆ– ಬೆರಳುಗಳಿಗೆ ಉಂಗುರಗಳಿವೆ. ಹಾಗೆಯೇ ಕಡಗಗಳಿಂದ ಬಳೆಗಳಿಂದ ದೇವರ ಕೈಗಳು ಶೋಭಿಸುತ್ತಿವೆ. ಇದು ಲೌಕಿಕವಾಗಿ. ಆಧ್ಯಾತ್ಮಿಕವಾಗಿ ಈ ಆಭರಣಗಳಿಗೇ ಶೋಭೆ. ಶಂಖ ಚಕ್ರ ಗದಾ ಪದ್ಮಗಳು ನಾಲ್ಕು ಕೈಗಳಲ್ಲಿ ಶೋಭಿಸುತ್ತಿವೆ. ಮಣಿಗಂಟಿನಲ್ಲಿ ಮೂರು ರೇಖೆಗಳಿವೆ. ಈ ಕೈಗಳು ಉದ್ದವಾಗಿಯೂ ಉರುಟಾಗಿಯೂ ಇವೆ. ಅಂಗೈಗಳು ಕೆಂಪಾಗಿವೆ, ಮೃದುವಾಗಿಯೂ ಇವೆ, ಕಮಲದಂತೆ. ನಮಗೆ ಜೀವನದಲ್ಲಿ ಅಭಯಕ್ಕೋಸ್ಕರ ಈ ಕೈಗಳನ್ನು ಯಾವಾಗಲೂ ಸ್ಮರಿಸೋಣ.

> ಭೈಷ್ಮ್ಯಾಃ ಕ್ವಣತ್ಕನಕ ಕಂಕಣರಂಜಿತೋ ಮೇ
> ಹಸ್ತಃ ಸಮಸ್ತಫಲದಸ್ತನುತಾದಭೀಷ್ಟಮ್ ।
> ಯೇನಾನಿಶಂ ರಹಸಿ ಬಂಧಮುಪೇಕ್ಷಮಾಣಃ
> ಶ್ರೀಶೋಽಖಿಲಂ ಹರತಿ ಪೂರ್ಣಮನೋರಥೋಽಪಿ ॥ ೪೨ ॥

ಕ್ವಣತ್=ಧ್ವನಿಸುವ; ಕನಕ=ಬಂಗಾರದ; ಕಂಕಣ=ಬಳೆಗಳಿಂದ; ರಂಜಿತಃ=ಶೋಭಿಸುವ; ಸಮಸ್ತ=ಎಲ್ಲಾ; ಫಲ=ಫಲಗಳನ್ನು; ದಃ=ಕೊಡುವ; ಭೈಷ್ಮ್ಯಾಃ=ರುಗ್ಮಿಣಿಯ; ಹಸ್ತಃ=ಕೈಯು; ಮೇ=ನನಗೆ; ಅಭೀಷ್ಟಂ=ಇಷ್ಟವನ್ನು; ತನುತಾತ್=ಕೊಡಲಿ; ಯೇನ=ಯಾವ ಕೈಯಿಂದ; ರಹಸಿ=ಏಕಾಂತದಲ್ಲಿ; ಬಂಧಂ=ಆಲಿಂಗನವನ್ನು; ಅಪೇಕ್ಷಮಾಣಃ=ಆಶಿಸುವ; ಶ್ರೀ=ರಮೆಗೆ; ಈಶಃ=ಒಡೆಯನು; ಪೂರ್ಣ=ತುಂಬಿದ; ಮನೋರಥಃ ಅಪಿ=ಆಸೆವುಳ್ಳವನಾದರೂ; ಅನಿಶಂ=ಯಾವಾಗಲೂ; ಅಖಿಲಂ=ಎಲ್ಲವನ್ನೂ; ಹರತಿ=ಸಂಹರಿಸುತ್ತಾನೆ.

ರುಗ್ಮಿಣಿಯ ಕೈಗಳು– ಈಕೆ ಕೈತುಂಬಾ ಚಿನ್ನದ ಬಳೆಗಳನ್ನು ಹಾಕಿಕೊಂಡಿದ್ದಾಳೆ. ಅವುಗಳು ಯಾವಾಗಲೂ ಶಬ್ದಮಾಡುತ್ತಿರುತ್ತವೆ. ಈ ಕೈಗಳನ್ನು ಭಕ್ತರು ಸದಾ ಸ್ಮರಿಸುತ್ತಾರೆ. ತಮ್ಮ ಮನೋಭೀಷ್ಟಗಳನ್ನು ಪೂರೈಸಿಕೊಳ್ಳುತ್ತಾರೆ. ಇಂತಹ ಕೈಗಳು ನನ್ನ ಅಭೀಷ್ಟಗಳನ್ನು ಪೂರೈಸಲಿ. ನಾವು ಮಾನವರು. ಪರಿಪೂರ್ಣರಲ್ಲ. ಆದ್ದರಿಂದ ಅಭೀಷ್ಟಗಳನ್ನು ಪೂರೈಸಿಕೊಳ್ಳಲು ಈಕೆಯ ಕೈಗಳನ್ನು ಆಶಿಸುವುದು ಸಹಜ. ಕೃಷ್ಣನು ಪರಿಪೂರ್ಣನು. ಈತನಿಗೆ ಯಾವುದರ ಕೊರತೆಯೂ ಇಲ್ಲ. ಆದರೂ ಈಕೆಯ ಕೈಯಿಂದ ಆಲಿಂಗನವನ್ನು ಆಶಿಸುತ್ತಾನೆ. ಅಷ್ಟು ಚಂದದ ಹಸ್ತಗಳು. ಇಂತಹ ಆಲಿಂಗನವನ್ನು ತುಂಬಾ ಹೊತ್ತು

ಆಶಿಸುತ್ತಾನೆ. ಅದಕ್ಕಾಗಿಯೇ ಇಡೀ ಜಗತ್ತನ್ನೇ ಸಂಹರಿಸುತ್ತಾನೆ. ಜಗತ್ತು ಬದುಕಿದ್ದರೆ ದೇವರಿಗೆ ಏಕಾಂತ ಸಿಗುವುದಿಲ್ಲ. ಭಕ್ತರ ಆಗಾಗ ಭೇಟಿಯಿಂದಾಗಿ ದೀರ್ಘಕಾಲದ ಏಕಾಂತಕ್ಕೆ ಭಂಗವಾಗುತ್ತದೆ. ಇಷ್ಟು ಆಕರ್ಷಣೀಯವಾದ ಕೈಗಳು.

**ವೃತ್ತೇ ತ್ರಿರೇಖೇ ರತ್ನೌಘದೀಪ್ತೇ ಶ್ರೀಶ್ರೀಶಕಂಧರೇ ।**
**ವಿಷ್ವಕ್‌ಸ್ರವದ್ರತ್ನಚಿತ್ರೌ ಜಿಗ್ಯತುಃ ಶಂಖಶೇವಧೀ ॥ ೪೩ ॥**

ವೃತ್ತೇ=ಉರುಟಾದ; ತ್ರಿರೇಖೇ=ಮೂರು ಗೆರೆಗಳುಳ್ಳ; ರತ್ನ=ರತ್ನಗಳು; ಓಘಃ= ಸಮೂಹದಿಂದ; ದೀಪ್ತೇ=ಶೋಭಿಸುವ; ಶ್ರೀ=ರುಗ್ಮಿಣಿಯು; ಶ್ರೀಶ=ಕೃಷ್ಣನು ಇವರ; ಕಂಧರೇ=ಕುತ್ತಿಗೆಗಳು; ವಿಷ್ವಕ್=ಸುತ್ತಲೂ; ಸ್ರವತ್=ಸುರಿಸುವ; ರತ್ನ=ರತ್ನಗಳಿಂದ; ಚಿತ್ರೌ=ಆಶ್ಚರ್ಯಗಳಾದ; ಶಂಖ=ಶಂಖ ಎಂಬ; ಶೇವಧೀ=ನಿಧಿಗಳನ್ನು; ಜಗ್ಯತುಃ=ಗೆದ್ದವು.

ಇವರಿಬ್ಬರ ಕುತ್ತಿಗೆಗಳು– ಈ ಕುತ್ತಿಗೆಗಳು ಚೆನ್ನಾಗಿವೆ, ಉರುಟಾಗಿವೆ. ಕುತ್ತಿಗೆ ಲಕ್ಷಣವಾದ ಮೂರು ರೇಖೆಗಳಿಂದ ಕೂಡಿವೆ. ನವರತ್ನಗಳ ರಾಶಿಯಂತೆ ಶೋಭಿಸುತ್ತಿವೆ. ಕುತ್ತಿಗೆಗೆ ಶಂಖದ ಹೋಲಿಕೆಯನ್ನು ಶಾಸ್ತ್ರಕಾರರು ಕೊಡುತ್ತಾರೆ. ಶಂಖವೆಂದರೆ ಊದುವ ಶಂಖವೂ ಹೌದು. ಒಂದು ಮೊತ್ತದ ಸಂಪತ್ತೂ ಹೌದು. ಊದುರ ಶಂಖದಿಂದ ಗಂಭೀರವಾದ ಧ್ವನ್ಯಾತ್ಮಕ ಶಬ್ದ ಮಾತ್ರ ಹೊರಡುತ್ತದೆ. ಇವರ ಕಂಠಗಳಿಂದ ಗಂಭೀರವಾದ ವರ್ಣಾತ್ಮಕ ಧ್ವನಿಯೂ ಹೊರಡುತ್ತದೆ. ನಾನಾ ವರ್ಣಗಳು ಹೊರಡುವುದರಿಂದ ನವರತ್ನಗಳ ರಾಶಿಯಂತೆ ನಾನಾ ರೀತಿಯ ಶೋಭೆಯನ್ನು ಹೊರಡಿಸುತ್ತದೆ. ಸಂಪತ್ತೆಂದು ತೆಗೆದುಕೊಂಡರೆ ಶಂಖವು ಒಂದೇ ಮೊತ್ತದ ಸಂಪತ್ತನ್ನು ಕೊಡುತ್ತದೆ. ಆ ಮೊತ್ತಕ್ಕಿಂತ ಜಾಸ್ತಿ ಕೊಡುವುದಿಲ್ಲ. ಇವರ ಕಂಠಗಳು ಎಲ್ಲಾ ರೀತಿಯ ಸಂಪತ್ತುಗಳನ್ನೂ ಕೊಡುತ್ತವೆ. ಶಂಖವೆಂಬ ಮೊತ್ತವು ಬಾಹ್ಯಸಂಪತ್ತನ್ನು ಮಾತ್ರ ಕೊಡುತ್ತದೆ. ಇವರ ಶಂಖದಂತಿರುವ ಕಂಠಗಳು ಬಾಹ್ಯ–ಆಂತರಿಕ ಎರಡೂ ರೀತಿಯ ಸಂಪತ್ತುಗಳನ್ನು ಕೊಡುತ್ತವೆ. ಈ ರೀತಿ ನಾನಾ ಮುಖಗಳಿಂದ ಶಂಖವೆಂಬ ನಿಧಿಯನ್ನು ಇವರ ಕಂಠಗಳು ಸೋಲಿಸಿದವು.

**ರತ್ನೌಘರಮ್ಯೇಣ ಪರಿಶ್ರಿತೇನ ಚಿರೇಣ ದೀಪ್ತಂ ನಿಜಭೂಷಣೇನ ।**
**ವೃತ್ತಂ ತ್ರಿರೇಖಂ ವರಹಾರಜುಷ್ಟಂ ನಿತ್ಯಂ ಸ್ಮರ ಶ್ರೀರಮಣಸ್ಯ ಕಂಠಮ್ ॥ ೪೪ ॥**

ರತ್ನ=ರತ್ನಗಳ; ಓಘ=ಸಮೂಹದಿಂದ; ರಮ್ಯೇಣ=ಚಂದವಾದ; ಪರಿಶ್ರಿತೇನ=ಸುತ್ತ ಇರುವ; ನಿಜಭೂಷಣೇನ=ತನ್ನ ಆಭರಣದಿಂದ; ಚಿರೇಣ=ಯಾವಾಗಲೂ; ದೀಪ್ತಂ= ಶೋಭಿಸುವ; ವೃತ್ತಂ=ಉರುಟಾದ; ತ್ರಿರೇಖಂ=ಮೂರು ಗೆರೆಗಳುಳ್ಳ; ವರ= ಉತ್ತಮವಾದ; ಹಾರ=ಸರಗಳಿಂದ; ಜುಷ್ಟಂ=ಸೇವಿಸಲ್ಪಡುವ; ಶ್ರೀರಮಣಸ್ಯ=ರಮಾ ಪತಿಯ; ಕಂಠಂ= ಕುತ್ತಿಗೆಯನ್ನು; ನಿತ್ಯಂ=ಸದಾ; ಸ್ಮರ=ಸ್ಮರಿಸು.

ದೇವರ ಕುತ್ತಿಗೆಯಲ್ಲಿ ಒಂದು ಆಭರಣ ಇದೆ. ಇದರ ಹೆಸರು ಕೌಸ್ತುಭ ಎಂದು.

ಇದರಲ್ಲಿ ನವರತ್ನಗಳ ಜೋಡಣೆ ಇದೆ. ಆದ್ದರಿಂದ ನೋಡಲು ಬಹಳ ಚಂದ. ಇಂತಹ ಆಭರಣದಿಂದ ಲೌಕಿಕವಾಗಿ ಕಂಠವು ಹೊಳೆಯುತ್ತದೆ. ಹಾಗೆಯೇ ಬೇರೆ ಆಭರಣಗಳೂ ಇವೆ. ಇಂತಹ ಉರುಟಾದ ಮೂರು ಗೆರೆಗಳಿಂದ ಕೂಡಿದ ಕೃಷ್ಣನ ಕುತ್ತಿಗೆಯನ್ನು ಎಲೋ ಮನವೇ ಸದಾ ಸ್ಮರಿಸು.

**ಸನ್ನೀಲೋತ್ಪಲ ಚಾರುಚಂಪಕಲಸಜ್ಜಾತಿಸ್ಫುರನ್ಮಲ್ಲಿಕಾ–**
**ರಕ್ತಾಶೋಕಮೃದುಪ್ರಸೂನರಚಿತಾ ರಮ್ಯಾಬ್ಜರಾಜನ್ಮುಖೀ ।**
**ಮುಕ್ತಾ ನೀಲಮಣಿಪ್ರವಾಲವಿಲಸನ್ಮಾಣಿಕ್ಯ ಹೇಮೋಜ್ವಲಾ**
**ಭರ್ತ್ರಂಸಾರ್ಪಿತರುಗ್ಮಿಣೀ ಕರತಲೇವಾಭಾತಿ ಮಾಲಾ ವಿಭೋಃ ॥ ೪೫ ॥**

ಸತ್=ಒಳ್ಳೆಯ; ನೀಲೋತ್ಪಲ=ನೈದಿಲೆಯಿಂದ; ಚಾರು=ಚಂದದ; ಚಂಪಕ=ಕಮಲ ದಿಂದ; ಲಸತ್=ಶೋಭಿಸುವ; ಜಾತಿ=ಜಾಜಿಯಿಂದ; ಸ್ಫುರತ್=ಹೊಳೆಯುವ; ಮಲ್ಲಿಕಾ= ಮಲ್ಲಿಗೆಯಿಂದ; ರಕ್ತ=ಕೆಂಪಾದ; ಅಶೋಕ=ಅಶೋಕ ಪುಷ್ಪದಿಂದ; ಮೃದು=ಮೃದುವಾದ; ಪ್ರಸೂನ=ಬೇರೆ ಹೂಗಳಿಂದ; ರಚಿತಾ=ರಚಿತವಾದ; ರಮ್ಯ=ಚಂದದ; ಅಬ್ಜ=ಕಮಲದಿಂದ; ರಾಜತ್=ಶೋಭಿಸುವ; ಮುಖೀ=ಮುಖವುಳ್ಳ; ಮುತ್ತು=ಮುತ್ತಿನಂತೆ; ನೀಲಮಣಿ=ನೀಲ ಮಣಿಯಂತೆ; ಪ್ರವಾಲ=ಹವಳದಂತೆ; ವಿಲಸತ್=ಶೋಭಿಸುವ; ಮಾಣಿಕ್ಯ=ಮಾಣಿಕ್ಯ ದಂತೆ; ಹೇಮ=ಬಂಗಾರದಂತೆ; ಉಜ್ವಲಾ=ಹೊಳೆಯುವ; ಮಾಲಾ=ವನಮಾಲೆಯು; ವಿಭೋಃ=ಒಡೆಯನ; ಭರ್ತೃ=ಪತಿಯ; ಅಂಸ=ಹೆಗಲಿನಲ್ಲಿ; ಅರ್ಪಿತ=ಇಟ್ಟಿರುವ; ರುಗ್ಮಿಣೀ= ರುಗ್ಮಿಣಿಯ; ಕರತಲಾ ಇವ=ಕೈಯಂತೆ; ಆಭಾತಿ=ಶೋಭಿಸುತ್ತಿದೆ.

ಕೃಷ್ಣನ ಕುತ್ತಿಗೆಯ ವನಮಾಲೆಯ ವರ್ಣನೆ– ನಾನಾ ಬಗೆಯ ಹೂಗಳಿಂದ ರಚಿತವಾದ ಮೇಲೆ ವನಮಾಲೆ. ನೈದಿಲೆ, ಸಂಪಿಗೆ, ಜಾಜಿ, ಮಲ್ಲಿಗೆ, ಕೆಂಪಾದ ಅಶೋಕ ಹಾಗೆಯೇ ಇತರ ಹೂಗಳೂ ಇರಬೇಕು. ಈ ಹಾರದ ತುದಿಯಲ್ಲಿ ಹೂಗಳಿಗೆ ರಾಜನಾದ ಕಮಲಗಳು ನೇತಾಡುತ್ತಿರಬೇಕು. ಕಾಲಗಂಟಿನ ತನಕ ಇಳಿದಿರುವ ಈ ಮಾಲಿಕೆಯನ್ನು ನೋಡಿದಾಗ ರುಗ್ಮಿಣಿಯು ತನ್ನ ಎರಡು ಕೈಗಳಿಂದ ಕೃಷ್ಣನನ್ನು ಆಲಿಂಗಿಸಿಕೊಂಡಂತೆ ತೋರುತ್ತದೆ.

ಮಾಲಿಕೆಯಲ್ಲಿ ಯಾವ ಯಾವ ಬಣ್ಣದ ಹೂಗಳಿವೆಯೋ ಅದೇ ಬಣ್ಣದ ಆಭರಣಗಳು ಈಕೆಯ ಕೈಯಲ್ಲಿವೆ. ನೈದಿಲೆ ಮಾಲಿಕೆಯಲ್ಲಿದೆ. ಅದರ ಬಣ್ಣ ನೀಲ. ಈಕೆಯ ಕೈಯಲ್ಲಿ ನೀಲಮಣಿಯ ಆಭರಣ ಇದೆ. ಚಿನ್ನದ ಬಳೆಗಳು ಈಕೆಯ ಕೈಯಲ್ಲಿವೆ. ಚಿನ್ನದ ಬಣ್ಣದ ಸಂಪಿಗೆಗಳು ಮಾಲಿಕೆಯಲ್ಲಿವೆ. ಕೈಯಲ್ಲಿರುವ ಮಾಣಿಕ್ಯ ಹಾಗೂ ಮಾಲಿಕೆಯ ಜಾಜಿ ಪುಷ್ಪಗಳು ಸಮಾನ ಕಾಂತಿವುಳ್ಳವುಗಳು. ಮಾಲಿಕೆಯ ಮಲ್ಲಿಗೆಯಂತೆ ಕೈಯಲ್ಲಿರುವ ಮುತ್ತಿನ ಆಭರಣಗಳು. ಕೆಂಪಾದ ಅಶೋಕ ಪುಷ್ಪದ ಹೋಲಿಕೆ ಹವಳದ

ಆಭರಣಗಳಿಗೆ. ಇನ್ನೂ ನಾನಾ ರೀತಿಯ ಆಭರಣಗಳಂತೆ ಬೇರೆ ಬೇರೆ ಹೂಗಳು. ಮಾಲಿಕೆಯ ತುದಿಯಲ್ಲಿ ದೊಡ್ಡ ಕಮಲವು ನೇತಾಡುವಂತೆ ಈಕೆಯ ದೇಹವೇ ಕೈಗಳೆಂಬ ಮಾಲಿಕೆಯ ತುದಿಯಲ್ಲಿ ಜೋತಾಡುವ ಕಮಲ. ಕೃಷ್ಣನ ಮೈಯಲ್ಲಿರುವ ಪ್ರತಿಯೊಂದೂ ರುಗ್ಮಿಣಿಯಿಂದ ಅಭಿಮಾನ್ಯಮಾನವು.

ಬಂಧೋಜ್ಝಿತಾಯಾ ಅಪಿ ಸಿಂಧುಪುತ್ರ್ಯಾಃ
ಮಾಂಗಲ್ಯಸೂತ್ರಂ ಕಿಲ ನಿತ್ಯಬದ್ಧಮ್ ।
ಮುಗ್ಧಾಬಲಾಮೋಹನಕಂಠಯೋಗೇ
ಮೋಕ್ಷೋಽಪ್ಯನಾಕಾಂಕ್ಷಿತ ಏವ ನೂನಮ್ ॥ ೪೬ ॥

ಬಂಧ=ಬಂಧನದಿಂದ; ಉಜ್ಝಿತಾಯಾ ಅಪಿ=ರಹಿತಳಾಗಿದ್ದರೂ; ಸಿಂಧು=ಸಮುದ್ರದ; ಪುತ್ರ್ಯಾಃ=ಮಗಳಗೆ; ಮಾಂಗಲ್ಯಸೂತ್ರಂ=ಮಂಗಳಸೂತ್ರವು; ನಿತ್ಯ=ಯಾವಾಗಲೂ; ಬದ್ಧಂ ಕಿಲ=ಬಂಧನ ತಾನೆ; ಮುಗ್ಧ=ಮುಗ್ಧಳಾದ; ಅಬಲಾ=ಹೆಣ್ಣಿನ; ಮೋಹನ=ಚಂದದ; ಕಂಠ=ಕುತ್ತಿಗೆಯ; ಯೋಗೇ=ಸಂಬಂಧದಲ್ಲಿ; ಮೋಕ್ಷಃ ಅಪಿ=ಬಿಡುಗಡೆಯೂ; ನೂನ್= ಖಂಡಿತವಾಗಿಯೂ; ಅನಾಕಾಂಕ್ಷಿತ ಏವ=ಅನಪೇಕ್ಷಿತವು.

ರುಗ್ಮಿಣಿಯ ಕುತ್ತಿಗೆಯಲ್ಲಿ ಮಂಗಳಸೂತ್ರ ಇದೆ. ಇದಕ್ಕೆ ಎಂದೂ ಬಿಡುಗಡೆಯೇ ಇಲ್ಲ. ಬೇರೆ ಆಭರಣಗಳಿಗಾದರೂ ಒಮ್ಮೊಮ್ಮೆ ಬಿಡುಗಡೆ ಇರುತ್ತದೆ. ವಿಶೇಷ ಸಂದರ್ಭದಲ್ಲಿ ಮಾತ್ರ ಧರಿಸುತ್ತಾರೆ. ಬೇರೆ ಸಮಯದಲ್ಲಿ ತೆಗೆದಿಡುತ್ತಾರೆ. ಮಂಗಳಸೂತ್ರ ಹಾಗಲ್ಲ, ಯಾವಾಗಲೂ ಕುತ್ತಿಗೆಯಲ್ಲಿ ಇರಬೇಕು. ವಸ್ತುತಃ ರುಗ್ಮಿಣಿಗೆ ಯಾವ ಬಂಧನವೂ ಇಲ್ಲ. ಈಕೆ ನಿತ್ಯಮುಕ್ತಳು. ಇಂಥವಳ ಬಳಿಗೆ ಬಂದಾಗ ಎಂತಹ ಬಂಧನವೂ ದೂರವಾಗ ಬೇಕು. ಆದರೂ ಆಗಲಿಲ್ಲ. ಇದಕ್ಕೆ ನಿಜವಾದ ಕಾರಣ– ಈಕೆಯ ಪತಿಯಾದ ಕೃಷ್ಣನಿಗೆ ಎಂದೆಂದೂ ಮರಣ ಇಲ್ಲ ಎನ್ನುವುದು. ಪತಿ ತೀರಿದರೆ ತಾನೆ ಪತಿಯಿಂದ ಕೊಡಲ್ಪಟ್ಟ ಮಂಗಳಸೂತ್ರಕ್ಕೆ ಬಿಡುಗಡೆ. ರಾಜರು ಬೇರೆ ಕಾರಣವನ್ನು ಊಹಿಸುತ್ತಾರೆ. ಈಕೆ ತುಂಬಾ ಮುಗ್ಧಳು. ತುಂಬಾ ಚಂದ ಕೂಡಾ. ಇಂತಹ ಹೆಣ್ಣಿನ ಮೃದುವಾದ ಕುತ್ತಿಗೆಗೆ ಸುತ್ತಿಕೊಂಡಿರುವಾಗ ಬಿಡುಗಡೆಯನ್ನು ಯಾರು ಅಪೇಕ್ಷಿಸುತ್ತಾರೆ.

ಸನ್ನೀಲರತ್ನರುಚಿರಂ ಸತತಂ ಶ್ರಿಯೈ ಸ್ಯಾತ್
ಮಾಂಗಲ್ಯಸೂತ್ರಮಿಹ ಮಂಗಲ ದೇವತಾಯಾಃ ।
ಯತ್ ಕಂಠದೇಶ ಧೃತಮಬ್ಜದಲಾಯತಾಕ್ಷ್ಯಾಃ
ನ ಪ್ರಾಕ್ವ್ಯಯುಂಕ್ತ ನ ವಿಯೋಕ್ಷ್ಯತಿ ನೋ ವಿಯುಂಕ್ತೇ ॥ ೪೭ ॥

ಮಂಗಲದೇವತಾಯಾಃ=ಮಂಗಳದೇವತೆಯಾದ; ಅಬ್ಜ=ಕಮಲದ; ದಲ= ದಳದಂತೆ; ಆಯತ=ವಿಶಾಲವಾದ; ಅಕ್ಷ್ಯಾಃ=ಕಣ್ಣುಳ್ಳ ರುಗ್ಮಿಣಿಯ; ಕಂಠ=ಕುತ್ತಿಗೆಯ;

ದೇಶ=ಜಾಗದಲ್ಲಿ; ಧೃತಂ=ಧರಿಸಲ್ಪಟ್ಟ; ಸತ್=ಒಳ್ಳೆಯ; ನೀಲರತ್ನ=ನೀಲಮಣಿಯಿಂದ; ರುಚಿರಂ=ಚಂದವಾದ; ಯತ್=ಯಾವ; ಮಾಂಗಲ್ಯಸೂತ್ರಂ=ಮಂಗಳಸೂತ್ರವು; ಪ್ರಾಕ್=ಹಿಂದೆ; ನ ವ್ಯಯುಂಕ್ತ=ಕಳಚಲಿಲ್ಲ; ನ ವಿಯೋಕ್ಷ್ಯತಿ=ಕಳಚುವುದಿಲ್ಲ; ನೋ ವಿಯುಂಕ್ತೇ=ಕಳಚುತ್ತಲೂ ಇಲ್ಲ; ತತ್=ಅದು; ಇಹ=ಇಲ್ಲಿ; ಸತತಂ=ಯಾವಾಗಲೂ; ಶ್ರಿಯೈ=ಶ್ರೇಯಸ್ಸಿಗಾಗಿ; ಸ್ಯಾತ್=ಇರಲಿ.

ಈಕೆ ಮಂಗಳದೇವತೆ. ನಮ್ಮ ಎಲ್ಲಾ ಕೆಲಸಗಳೂ ಸಾಂಗವಾಗಿ ನೆರವೇರುವಂತೆ ಮಾಡುವವಳು. ಆ ಕೆಲಸದಲ್ಲಿ ನಮಗೆ ಸಿದ್ಧಿಯನ್ನು ಒದಗಿಸುವವಳು. ಕಮಲಾಕ್ಷಿಯಾದ ಇಂತಹ ರುಗ್ಮಿಣಿಯ ಕಂಠದಲ್ಲಿ ಒಂದು ಮಂಗಲಸೂತ್ರ ಇದೆ. ಇದು ಮೂರು ಕಾಲದಲ್ಲಿಯೂ ಈಕೆಯ ಕುತ್ತಿಗೆಯಿಂದ ತಪ್ಪುವುದಿಲ್ಲ. ಇದರಲ್ಲಿ ಒಂದು ನೀಲವಾದ ದೊಡ್ಡ ರತ್ನ ಇದೆ. ಇದರಿಂದ ಇನ್ನೂ ಚಂದ ಈ ಸೂತ್ರ. ಇಂತಹ ಸೂತ್ರ ನನ್ನನ್ನು ಸದಾ ರಕ್ಷಿಸಲಿ. ನನಗೆ ಯಾವಾಗಲೂ ಮಂಗಳವನ್ನುಂಟುಮಾಡಲಿ. ನಾನು ಈ ಸಂಸಾರದ ಬವಣೆಯಿಂದ ತುಂಬಾ ನೊಂದಿದ್ದೇನೆ.

**ದೂರೇ ವಿಧೂಯ ಹರಿಣಂ ಸುಭಗಂ ತದೀಯ–**
**ನೇತ್ರಂ ಸ್ವಬಿಂಬಖಚಿತಂ ವಿತನೋತು ಚಂದ್ರಃ ।**
**ಸಾಮ್ಯಂ ತಥಾಪಿ ನ ಸಮೇತಿ ಶುಚಿಸ್ಮಿತಸ್ಯ**
**ಲೋಲಾಲಕಸ್ಯ ಕಮಲಾಚ್ಯುತಸನ್ಮುಖಸ್ಯ** ॥ ೪೮ ॥

ಚಂದ್ರಃ=ಚಂದ್ರನು; ಹರಿಣಂ=ಜಿಂಕೆಯನ್ನು; ದೂರೇ=ದೂರದಲ್ಲಿ; ವಿಧೂಯ=ಇಟ್ಟು; ಸುಭಗಂ=ಚಂದದ; ತದೀಯ=ಚಂದ್ರನ; ನೇತ್ರಂ=ಕಣ್ಣನ್ನು; ಸ್ವ=ತನ್ನ; ಬಿಂಬ=ಬಿಂಬದಲ್ಲಿ; ಖಚಿತಂ=ಇರತಕ್ಕದ್ದನ್ನಾಗಿ; ವಿತನೋತು=ಮಾಡಲಿ; ತಥಾ ಪಿ=ಹಾಗಿದ್ದರೂ; ಶುಚಿ=ಸ್ವಚ್ಛವಾದ; ಸ್ಮಿತಸ್ಯ=ಮಂದಹಾಸವುಳ್ಳ; ಲೋಲ=ಅಲುಗಾಡುವ; ಅಲಕಸ್ಯ=ಕೂದಲುಳ್ಳ; ಕಮಲಾ=ರಮೆಯ; ಅಚ್ಯುತಸ್ಯ=ಕೃಷ್ಣನ; ಸತ್=ಒಳ್ಳೆಯ; ಮುಖಸ್ಯ=ಮುಖಕ್ಕೆ; ಸಾಮ್ಯಂ=ಹೋಲಿಕೆಯನ್ನು; ನ ಸಮೇತಿ=ಹೊಂದುವುದಿಲ್ಲ.

ಕವಿಗಳು ಸಾಮಾನ್ಯವಾಗಿ ಮುಖಕ್ಕೆ ಚಂದ್ರನ ಹೋಲಿಕೆಯನ್ನು ಕೊಡುವುದು ಸ್ವಾಭಾವಿಕ. ಈ ದಂಪತಿಗಳ ಮುಖಕ್ಕೂ ಚಂದ್ರನ ಹೋಲಿಕೆಯನ್ನೇ ಕೊಡಲು ಕವಿಗಳು ಉತ್ಸುಕರಾಗಿದ್ದಾರೆ. ಆಗ ಯಾರೋ ಹೇಳಿದರು– ಚಂದ್ರನಲ್ಲಿ ಜಿಂಕೆಯ ಚಿಹ್ನೆ ಇದೆ. ಇದು ಚಂದ್ರನ ಒಂದು ಕಲೆ. ಈ ದೋಷ ಚಂದ್ರನಲ್ಲಿರುವಾಗ ದೋಷರಹಿತವಾದ ಇವರ ಮುಖಕ್ಕೆ ಚಂದ್ರನ ಹೋಲಿಕೆ ಹೇಗೆ ಕೊಡುವುದು? ಇವರಿಬ್ಬರ ಕಣ್ಣುಗಳು ಜಿಂಕೆಯ ಕಣ್ಣುಗಳಂತೆ ನಿರ್ಮಲವಾಗಿವೆ; ಸೂಕ್ಷ್ಮವಾಗಿವೆ. ಚಂದ್ರನು ತಾನು ಜಿಂಕೆಯನ್ನು ತನ್ನಿಂದ ದೂರ ಸರಿಸಿ ಜಿಂಕೆಯ ಕಣ್ಣುಗಳನ್ನು ತನ್ನಲ್ಲಿ ಇಟ್ಟುಕೊಂಡಿದ್ದರೆ ಆಗ ಸಾಮ್ಯವನ್ನು

ಹೇಳಬಹುದೇನೋ ಎಂದು. ಇದನ್ನು ಚಂದ್ರನು ಕೇಳಿಸಿಕೊಂಡನು. ಈ ದಂಪತಿಗಳ ಮುಖಕ್ಕೆ ತನ್ನ ಹೋಲಿಕೆಯನ್ನೇ ಕೊಡಬೇಕೆಂಬ ಆಸೆಯಿಂದ ತಾನು ಜಿಂಕೆಯನ್ನು ತನ್ನಿಂದ ದೂರಸರಿಸಿ ಅದರ ಕಣ್ಣುಗಳನ್ನೇ ತನ್ನಲ್ಲಿ ಇಟ್ಟುಕೊಳ್ಳುತ್ತೇನೆಂದು ಚಂದ್ರನು ಹೇಳಿದನು. ಆಗ ಮಗದೊಬ್ಬ ಹೇಳಿದನು– ಆದರೂ ಹೋಲಿಕೆ ಸಾಧ್ಯವಿಲ್ಲ. ಯಾಕೆಂದರೆ ಇವರ ಮುಖದಲ್ಲಿ ಸದಾ ಮಂದಹಾಸವಿದೆ. ಮುಂಗುರುಳುಗಳು ಯಾವಾಗಲೂ ಮುಖದಲ್ಲಿ ಹಾರಾಡುತ್ತಿವೆ. ಊಹಿಸಲೂ ಸಾಧ್ಯ ಇಲ್ಲದಷ್ಟು ಪ್ರಕಾಶ ಇದೆ. ಇದು ಯಾವುದೂ ಚಂದ್ರನಲ್ಲಿ ಇಲ್ಲ. ಆದ್ದರಿಂದ ಹೋಲಿಕೆ ಹೇಗೆ ಸಾಧ್ಯ ಎಂದು.

**ಮಾಣಿಕ್ಯಸಂಶೋಭಿಮುಖಂ ಸದಾಂತಃ**
**ಶಾಣಾಗಮೋದ್ಭಾಸಿತಮೌಕ್ತಿಕಾಢ್ಯಮ್ ।**
**ಮಾನಾರ್ಹನೀಲೋತ್ಪಲಸತ್ಕರಂಡಂ**
**ಶ್ರೀನಾಥಗಂಡದ್ವಯಮಾಜಿಗಾಯ ॥ ೪೯ ॥**

ಶ್ರೀನಾಥ=ಶ್ರೀಕೃಷ್ಣನ; ಗಂಡದ್ವಯಂ=ಎರಡು ಗಂಡಸ್ಥಳಗಳು; ಮಾಣಿಕ್ಯ=ಮಾಣಿಕ್ಯದಿಂದ; ಸಂಶೋಭಿ=ಶೋಭಿಸುವ; ಮುಖಂ=ಮುಖವುಳ್ಳ; ಸದಾ=ಯಾವಾಗಲೂ; ಅಂತಃ=ಒಳಗೆ; ಶಾಣ=ಹರಿತ ಕಲ್ಲಿನ; ಆಗಮೇನ=ಬರುವಿಕೆಯಿಂದ; ಉದ್ಭಾಸಿತ=ಶೋಭಿಸುವ; ಮೌಕ್ತಿಕ=ಮುತ್ತುಗಳಿಂದ; ಆಢ್ಯಂ=ತುಂಬಿದ; ಮಾನ=ಬೆಲೆಗೆ; ಅರ್ಹ=ಯೋಗ್ಯವಾದ; ನೀಲ=ನೀಲಮಣಿಯ; ಉತ್ಪಲ=ಉತ್ಪಲದಿಂದ ಕೂಡಿದ; ಸತ್=ಒಳ್ಳೆಯ; ಕರಂಡಂ=ಕರಡಿಗೆಯನ್ನು; ಆಜಿಗಾಯ=ಗೆದ್ದಿತು.

ಕೃಷ್ಣನ ಎರಡು ಕಪೋಲಗಳು ಇಂದ್ರನೀಲಮಣಿಯಿಂದ ಮಾಡಿದ ಒಂದು ಕರಡಿಗೆಯಂತೆ ಇದೆ. ಈ ಕರಡಿಗೆಯ ಜೋಡುವ ಭಾಗದಲ್ಲಿ ಕೆಂಪು ಮಾಣಿಕ್ಯವನ್ನು ಪೋಣಿಸಿದಂತೆ ಕೃಷ್ಣನ ಕೆಂಪಾದ ತುಟಿಗಳು ಇವೆ. ಈ ಕರಡಿಗೆಯ ಒಳಗೆ ಸಾಣೆಕಲ್ಲಿನಂತೆ ಹೊಳೆಯುವ ಮುತ್ತುಗಳಿಂತಿರುವ ಹಲ್ಲುಗಳು ಇವೆ. ಸಂಪುಟವು ಉಬ್ಬಿಕೊಂಡಿರುವಂತೆ ಕೃಷ್ಣನ ಎರಡು ಕಪೋಲಗಳು ಚೆನ್ನಾಗಿ ಉಬ್ಬಿಕೊಂಡಿವೆ. ನೀಲೋಪಲ ಎಂಬ ಪಾಠವೂ ಇದೆ. ಈ ಪಾಠಪ್ರಕಾರ ನೀಲೋಪಲ ಅಂದರೆ ಕಪ್ಪಾದ ಶಿಲೆ, ಅಂದರೆ ಶಾಲಿಗ್ರಾಮ ಎಂದರ್ಥ. ಈ ಶಿಲೆಗಳನ್ನು ಜೋಪಾನವಾಗಿಡಲು ಕರಂಡಕ ಬೇಕು. ಅಂತಹ ಕರಂಡಕದಂತೆ ಇದೆ ಈ ಕಪೋಲ. ಅದರಂತೆ ಅಲ್ಲ, ಅದನ್ನೂ ಮೀರಿ ಇದೆ.

**ಚಂದ್ರೋಪಮಂ ಶ್ರೀರಮಣಸ್ಯ ಸೌಖ್ಯ–**
**ಸಂದೋಹದಂ ರಂಜಿತಮೋಷ್ಠಭಾಸಾ ।**
**ಸೌಂದರ್ಯದುಗ್ಧಾಂಬುಧಿಫೇನಕಲ್ಪಂ**
**ಮಂದಸ್ಮಿತಂ ಮಂದಯತಾದಘಂ ನಃ ॥ ೫೦ ॥**

ಚಂದ್ರ=ಚಂದ್ರನಿಗೆ; ಉಪಮಂ=ಸಮಾನವಾದ; ಸೌಖ್ಯಂ=ನೆಮ್ಮದಿಯ; ಸಂದೋಹ=ಸಮೂಹವನ್ನು; ದಂ=ಕೊಡುವ; ಓಷ್ಠ=ತುಟಿಗಳು; ಭಾಸಾ=ಕಾಂತಿಯಿಂದ; ರಂಜಿತಂ=ಶೋಭಿಸುವ; ಸೌಂದರ್ಯ=ಚಂದವೆಂಬ; ದುಗ್ಧ=ಹಾಲಿನ; ಅಂಬುಧಿ=ಸಮುದ್ರದ; ಫೇನಕಲ್ಪಂ=ನೊರೆಯಂತಿರುವ; ಶ್ರೀರಮಣಸ್ಯ=ಶ್ರೀಪತಿಯ; ಮಂದಸ್ಮಿತಂ=ಮುಗುಳ್ನಗು; ನಃ=ನಮ್ಮ; ಅಘಂ=ಪಾಪವನ್ನು; ಮಂದಯತಾತ್=ಕಡಿಮೆಮಾಡಲಿ.

ದೇವರ ಮಂದಹಾಸದ ವರ್ಣನೆ– ಈ ನಗುವು ಕ್ಷೀರಸಮುದ್ರದ ನೊರೆಯಂತಿದೆ. ಮುಖವು ಹಾಲಿನ ಕಡಲಿನಂತಿದೆ. ದೇವರ ಮುಖವು ತಲೆಕೂದಲಿನಂತೆ ಪೂರಾ ಕಪ್ಪು ಅಲ್ಲ. ಸೂರ್ಯಮಂಡಲದ ಬಣ್ಣದಿಂದ ಮಿಶ್ರವಾದ ಇಂದ್ರನೀಲಮಣಿಯಂತೆ ಇದೆ. ಹಾಲಿನ ಕಡಲೂ ಇದೆ. ಈ ಮುಖದಲ್ಲಿರುವ ಸೌಂದರ್ಯವು ಹಾಲಿನಂತಿದೆ. ಹಾಲೂ ಅಪಾರ. ನೋಡಲು ಚಂದ. ಸೌಂದರ್ಯವೂ ಅನಂತ. ಬಹಳ ಆಕರ್ಷಣೀಯವೂ ಆಗಿದೆ. ಹಾಲಿನಲ್ಲಿ ತುಪ್ಪದ ಅಂಶ ಬಹಳ ಇದ್ದರೆ ನೊರೆ ಸ್ವಲ್ಪ ಹಳದಿಮಿಶ್ರಿತವಾಗಿರುತ್ತದೆ. ಆದ್ದರಿಂದಲೇ ದೇವರ ನಗುವು ಚಂದ್ರನ ಬೆಳದಿಂಗಳಿನಂತೆ ಇದೆ. ಈ ಮಂದಹಾಸವನ್ನು ನೊಡುವವರು ತಮ್ಮ ಮಾನಸಿಕ ಕ್ಲೇಷವನ್ನು ಕಳೆದುಕೊಳ್ಳುತ್ತಾರೆ. ಪದ್ಮರಾಗಮಣಿಗಳು ಸಮುದ್ರದಲ್ಲಿ ಇರುತ್ತವೆ. ಇವುಗಳ ಕೆಂಪು ಕಾಂತಿಯಿಂದ ನೊರೆಗಳು ಮತ್ತಷ್ಟು ಹೊಳೆಯುವಂತೆ ಕೆಂಪಾದ ತುಟಿಗಳಿಂದ ಈ ಮಂದಹಾಸವು ಇನ್ನಷ್ಟು ಶೋಭೆಗೆ ಒಳಗಾಗಿದೆ. ಇಂತಹ ಮುಗುಳ್ನಗು ನಮ್ಮ ಪಾಪವನ್ನು ನಾಶಮಾಡಲಿ.

**ಸ್ವಚ್ಛಾ ಮೃದುಸ್ಮಿತದಶಾಕಲಿತೈಕದೇಶಾ**
**ಲಕ್ಷ್ಮೀಕಪೋಲಲಲಿತಕ್ಷತಹೇತುಭೂತಾ ।**
**ಸತ್ಕುಂದಕುಡ್ಮಲಸಮಾ ನಿಬಿಡಾ ಮಮಾಂತಃ**
**ಕೃಷ್ಣಸ್ಯ ರಮ್ಯರದನಾವಲಿರಾವಿರಸ್ತು** ॥ ೫೧ ॥

ಸ್ವಚ್ಛಾ=ನಿರ್ಮಲವಾದ; ಮೃದು=ಸ್ವಲ್ಪ; ಸ್ಮಿತ=ಹಾಸದ; ದಶಾ=ಸಮಯದಲ್ಲಿ; ಆಕಲಿತ=ಕಾಣುವ; ಏಕದೇಶ=ತುದಿಭಾಗವುಳ್ಳ; ಲಕ್ಷ್ಮೀ=ರುಗ್ಮಿಣಿಯ; ಕಪೋಲ=ಕೆನ್ನೆಯಲ್ಲಿ; ಲಲಿತ=ಚಂದದ; ಕ್ಷತ=ಗಾಯಕ್ಕೆ; ಹೇತುಭೂತಾ=ಕಾರಣವಾದ; ಸತ್=ಒಳ್ಳೆಯ; ಕುಂದ=ಗುಂಡುಮಲ್ಲಿಗೆಯ; ಕುಡ್ಮಲ=ಮೊಗ್ಗಿಗೆ; ಸಮಾ=ಸಮಾನವಾದ; ನಿಬಿಡಾ=ಒತ್ತೊತ್ತಾಗಿರುವ; ಕೃಷ್ಣಸ್ಯ=ಕೃಷ್ಣನ; ರಮ್ಯ=ಚಂದದ; ರದನ=ಹಲ್ಲುಗಳ; ಆವಲಿಃ=ಸಾಲುಗಳು; ಮಮ=ನನ್ನ; ಅಂತಃ=ಹೃದಯದಲ್ಲಿ; ಅಸ್ತು=ಇರಲಿ.

ಕೃಷ್ಣನ ಹಲ್ಲುಗಳ ವರ್ಣನೆ– ದೇವರು ಮಂದಹಾಸ ಬೀರುವಾಗ ಈ ಹಲ್ಲುಗಳ ತುದಿಭಾಗವು ಸ್ವಲ್ಪ ಗೋಚರಿಸುತ್ತದೆ. ರುಗ್ಮಿಣಿಯ ಜೊತೆ ಸರಸವಾಡುವಾಗ ತನ್ನ ಈ ಹಲ್ಲುಗಳಿಂದ ಆಕೆಯ ಕೆನ್ನೆಯಲ್ಲಿ ಸ್ವಲ್ಪ ಗಾಯವನ್ನು ಮಾಡುತ್ತಾನೆ. ಆ ಗಾಯಗಳು ರಕ್ತವನ್ನು ಸುರಿಸುವುದಿಲ್ಲ. ನೋಡಲು ಚಂದವಾಗಿಯೂ ಇರುತ್ತದೆ. ಗುಂಡುಮಲ್ಲಿಗೆಯ

ಚಿಕ್ಕ ಮೊಗ್ಗುಗಳಂತೆ ಇವೆ ಈ ಹಲ್ಲುಗಳು. ಹಾಗೆಯೇ ಒಂದಕ್ಕೊಂದು ತಾಗಿಕೊಂಡಿವೆ. ತುಂಬಾ ಬಿಳಿಯಾದ ಈ ಹಲ್ಲುಗಳನ್ನು ನಾವು ಯಾವಾಗಲೂ ಸ್ಮರಿಸಬೇಕು.

**ಸನ್ಮಾನ್ಯಲಾವಣ್ಯ ಮರಂದಸಾಂದ್ರಮಮ್ಲಾನಸಚ್ಚಂಪಕಸಂಪದಂತಃ ।**
**ಮನ್ಮಾನಸೇ ಸ್ಯಾಲ್ಲಸದುನ್ನತಾಗ್ರಂ ಸೌಮ್ಯಸ್ಯ ನಾಸಾಪುಟಮಚ್ಯುತಸ್ಯ ॥ ೫೨ ॥**

ಸತ್=ಸಾತ್ವಿಕರಿಂದ; ಮಾನ್ಯ=ಆದೃತವಾದ; ಲಾವಣ್ಯ=ಚಂದವೆಂಬ; ಮರಂದ= ಮಕರಂದದಿಂದ; ಸಾಂದ್ರಂ=ನಿಬಿಡವಾದ; ಅಮ್ಲಾನ=ಬಾಡದಿರುವ; ಸತ್=ಒಳ್ಳೆಯ; ಚಂಪಕ=ಸಂಪಿಗೆಯ; ಸಂಪತ್=ಕಾಂತಿವುಳ್ಳ; ಲಸತ್=ಶೋಭಿಸುವ; ಉನ್ನತ=ಎತ್ತರ ವಾದ; ಅಗ್ರಂ=ತುದಿವುಳ್ಳ; ಸೌಮ್ಯಸ್ಯ=ಶಾಂತನಾದ; ಅಚ್ಯುತಸ್ಯ=ಕೃಷ್ಣನ; ನಾಸಾಪುಟಂ= ಮೂಗು; ಅಂತಃ=ಒಳಗೆ; ಮತ್=ನನ್ನ; ಮಾನಸೇ=ಮನದಲ್ಲಿ; ಸ್ಯಾತ್=ಇರಲಿ.

ಮೂಗಿನ ವರ್ಣನೆ– ಮೂಗಿನ ಲಕ್ಷಣ ಸಂಪಿಗೆಯಂತೆ ಇರುವುದು. ಕೃಷ್ಣನ ಮೂಗೂ ಆಕಾರದಲ್ಲಿ ಹಾಗೇ ಇದೆ. ಸಂಪಿಗೆಯಲ್ಲಿ ಮಕರಂದ ಇರುವಂತೆ ಮೂಗಲ್ಲಿ ಸೌಂದರ್ಯ ಇದೆ. ಈ ಸೌಂದರ್ಯ ಸಾಮಾನ್ಯವಲ್ಲ. ಮಹನೀಯರೂ ಕೂಡಾ ಈ ಸೌಂದರ್ಯವನ್ನು ಬಾಯಿ ತುಂಬಾ ಹೊಗಳುತ್ತಾರೆ. ಬಣ್ಣದಿಂದ ಕೆಂಡಸಂಪಿಗೆಯ ಹೋಲಿಕೆ ಮೂಗಿಗೆ ಇಲ್ಲ. ಅದು ಸಿಟ್ಟಿನ ದ್ಯೋತಕ. ಆ ದೋಷ ಕೃಷ್ಣನಲ್ಲಿ ಇಲ್ಲ. ಅದಕ್ಕಾಗಿ ಕೃಷ್ಣನನ್ನು ರಾಜರು ಸೌಮ್ಯ ಶಾಂತ ಸ್ವಭಾವದವನು ಎಂದು ಹೇಳಿದ್ದಾರೆ. ಅಚ್ಯುತಸ್ಯ ಎಂಬ ಶಬ್ದದಿಂದಲೂ ಇದನ್ನೇ ತಿಳಿಸಿದ್ದಾರೆ. ಇಂತಹ ಮೂಗು ನಮ್ಮ ಹೃದಯದಲ್ಲಿ ಸದಾ ನೆಲೆಸಲಿ. ನಮ್ಮ ಮುಂಗೋಪವನ್ನು ದೂರಮಾಡಲಿ.

**ವ್ಯಕ್ತಾತಿಕೋಮಲಮನೋರಮವರ್ಣಪೂರ್ಣಂ**
**ಶ್ರುತ್ಯರ್ಥವೃತ್ತಿಮಧುರಸ್ವರಮತ್ಯಗಾಧಮ್ ।**
**ಸತ್ಕ್ಲೇಶದುರ್ವಿಷಶಮೇಽಮೃತವರ್ಷಕಲ್ಪಂ**
**ತತ್ತ್ವಂ ನಿಜಂ ಹರಿವಚಃ ಪರಿಬೋಧಯೇನ್ಮಾಮ್ ॥ ೫೩ ॥**

ವ್ಯಕ್ತ=ಸ್ಪಷ್ಟವಾದ; ಅತಿಕೋಮಲ=ಸುಲಭವಾದ; ಮನೋಹರ=ಚಂದದ; ವರ್ಣ=ಅಕ್ಷರಗಳಿಂದ; ಪೂರ್ಣಂ=ತುಂಬಿದ; ಶ್ರುತಿ=ವೇದಗಳ; ಅರ್ಥ=ಅರ್ಥದಲ್ಲಿ; ವೃತ್ತಿ= ಇರುವ; ಮಧುರ=ಇಂಪಾದ; ಸ್ವರಂ=ಧ್ವನಿವುಳ್ಳ; ಅತಿ=ಬಹಳ; ಅಗಾಧಂ=ಗಂಭೀರವಾದ; ಸತ್=ಸಾತ್ವಿಕರ; ಕ್ಲೇಶ=ದುಃಖವೆಂಬ; ದುರ್=ಅಸಾಧ್ಯವಾದ; ವಿಷ=ವಿಷದ; ಶಮೇ=ನಾಶ ದಲ್ಲಿ; ಅಮೃತವರ್ಷಕಲ್ಪಂ=ಅಮೃತಧಾರೆಗೆ ಸಮಾನವಾದ; ಹರಿ=ಕೃಷ್ಣನ; ವಚಃ=ಮಾತು; ಮಾಂ=ನನ್ನನ್ನು; ನಿಜಂ=ತನ್ನ; ತತ್ತ್ವಂ=ತತ್ತ್ವವನ್ನು; ಬೋಧಯೇತ್=ತಿಳಿಸಲಿ.

ದೇವರ ಮಾತುಗಳ ವರ್ಣನೆ– ಮುತ್ತಿನಂತಹ ಮಾತುಗಳು ಯಾವಾಗಲೂ ವೇದಗಳ ಅರ್ಥವನ್ನೇ ತಿಳಿಸತಕ್ಕವುಗಳು. ಲೌಕಿಕ ಹಾಳುಹರಟೆ ಈ ಕೃಷ್ಣನಲ್ಲಿ ಇಲ್ಲವೇ

ಇಲ್ಲ. ವೈದಿಕ ಮಾತುಗಳಾದರೂ ಕಠಿಣ ಪದಗಳ ಬಳಕೆ ಇಲ್ಲ. ಹೆಜ್ಜೆಹೆಜ್ಜೆಗೂ ಪ್ರಾಸಮಯ. ಕೇಳಲೂ ಬಹಳ ಇಂಪು. ಕೇಳುವವರಿಗೆ ಶ್ರವಣದನಂತರ ಯಾವ ಸಂಶಯವೂ ಉಳಿಯುವುದಿಲ್ಲ. ಬಾಲಕರಿಗೂ ಸುಲಭದಲ್ಲಿ ಅರ್ಥವಾಗಬೇಕು. ಬಹಳ ಸುಲಭ ಎಂದು ತಾತ್ಸಾರ ಪಡುವಂತಿಲ್ಲ. ಪಂಡಿತರೂ ತಲೆಕೆಡಿಸಿಕೊಳ್ಳಬೇಕು. ಅರ್ಥಗರ್ಭಿತವಾದ ಮಾತುಗಳು; ಮಾನಸಿಕ ಕ್ಲೇಶದಿಂದ ನೊಂದ ಶ್ರೋತೃಗಳಿಗೆ ಅಮೃತಸಿಂಚನದಂತೆ ಈ ಮಾತುಗಳು ತಂಪೆರೆಯುತ್ತಿದ್ದವು. ಇಂತಹ ಮಾತುಗಳಿಂದ ನಮಗೆ ಕೃಷ್ಣನ ಸರಿಯಾದ ತಿಳುವಳಿಕೆ ಬರಲಿ.

**ನಾನಾವಿಧಾನುಪಮರತ್ನವಿಚಿತ್ರಿತಾಭ್ಯಾಂ**
**ಮೀನೋಪಮೋಜ್ವಲಹಿರಣ್ಮಯಕುಂಡಲಾಭ್ಯಾಮ್ ।**
**ಶ್ರೀನಾಥಕರ್ಣಯುಗಲಂ ಸುಭಗಂ ಭವಾರ್ತ್ಯಾ**
**ದೀನಸ್ಯ ಮೇ ಗಿರಮಿಮಾಂ ಶೃಣುಯಾಚ್ಛ್ರಿತಸ್ಯ ॥ ೫೪ ॥**

ನಾನಾವಿಧ=ಬೇರೆಬೇರೆ; ಅನುಪಮ=ಉತ್ತಮವಾದ; ರತ್ನ=ರತ್ನಗಳಿಂದ; ವಿಚಿತ್ರಿತಾಭ್ಯಾಂ=ಆಶ್ಚರ್ಯಗಳಾದ; ಮೀನ=ಮೀನಿಗೆ; ಉಪಮ=ಸಮಾನವಾದ; ಉಜ್ವಲ= ಶೋಭಿಸುವ; ಹಿರಣ್ಮಯ=ಚಿನ್ನದ; ಕುಂಡಲಾಭ್ಯಾಂ=ಕುಂಡಲಗಳಿಂದ; ಸುಭಗಂ= ಚಂದದ; ಶ್ರೀನಾಥ=ಶ್ರೀಕೃಷ್ಣನ; ಕರ್ಣ=ಕಿವಿಗಳ; ಯುಗಲಂ=ಎರಡು; ಭವ= ಸಂಸಾರದ; ಆರ್ತ್ಯಾ=ದುಃಖದಿಂದ; ದೀನಸ್ಯ=ನೊಂದಿರುವ; ಶ್ರಿತಸ್ಯ=ಆಶ್ರಿತನ; ಮೇ= ನನ್ನ; ಇಮಾಂ=ಈ; ಗಿರಂ=ಮಾತನ್ನು; ಶೃಣುಯಾತ್=ಕೇಳಲಿ.

ಎರಡು ಕಿವಿಗಳ ವರ್ಣನೆ– ಈ ಕಿವಿಗಳಲ್ಲಿ ಮೀನಿನ ಆಕಾರದ ಎರಡು ಒಂಟಿಗಳು. ದೇವರಿಗೆ ಮಕರಕುಂಡಲ ಎಂದು ಹೆಸರಿದೆ. ಈ ಒಂಟಿಗಳಲ್ಲಿ ನಾನಾವಿಧದ ರತ್ನಗಳನ್ನು ಅಳವಡಿಸಿದ್ದಾರೆ. ಇದರಿಂದ ಒಂಟಿಗಳು ತುಂಬಾ ಬೆಳಕನ್ನು ಚೆಲ್ಲುತ್ತಿವೆ. ಜೊತೆಗೆ ಚಂದವೂ ಇವೆ. ದೇವರ ಕಿವಿಗಳಲ್ಲಿ ಇವುಗಳು ಇರುವುದರಿಂದ ಇನ್ನಷ್ಟು ಚಂದ ಕಾಣುತ್ತಿವೆ. ಚಿನ್ನಕ್ಕೇನೇ ಶೋಭೆಯನ್ನು ಕೊಡುವ ಈ ಕಿವಿಗಳು ನನ್ನ ಪ್ರಾರ್ಥನೆಯನ್ನು ಕೇಳಿಸಿಕೊಳ್ಳಲಿ. ನಾನು ಈ ಸಂಸಾರದ ಬೇಗೆಯಿಂದ ತುಂಬಾ ಆಯಾಸಗೊಂಡಿದ್ದೇನೆ.

ರಾಜರಿಗೆ ಸಂಸಾರದ ತಾಪ ಇಲ್ಲ. ನಮ್ಮ ಬಗ್ಗೆ ಅವರು ಪ್ರಾರ್ಥನೆ ಮಾಡುತ್ತಾರೆ. 'ಈ ಮಾತನ್ನು' ಅಂದರೆ ತನ್ನ ರುಗ್ಮಿಣೀಶವಿಜಯ ಎಂಬ ಕಾವ್ಯರೂಪದ ಮಾತನ್ನು ಕೇಳಿಸಿಕೊಳ್ಳಲಿ ಎಂದರ್ಥ.

**ಅಂಭೋಜಕೋಮಲವಿಶಾಲಸುದೀರ್ಘಪತ್ರ**
**ಸಂಭಾಸಮಾನಮಲಿರಾಜದಧೀರತಾರಮ್ ।**

ಶಂಭುಪ್ರಭೃತ್ಯಮರವಾಂಛಿತವಲ್ಗುವೀಕ್ಷಂ
ಜೃಂಭನ್ಮುಕುಂದನಯನಂ ಮುಹುರೀಕ್ಷತಾನ್ಮಾಮ್ ॥ ೫೫ ॥

ಅಂಭೋಜ=ಕಮಲದ; ಕೋಮಲ=ಮೃದುವಾದ; ವಿಶಾಲ=ಅಗಲದ; ಸುದೀರ್ಘ= ಉದ್ದದ; ಪತ್ರ=ದಳದಂತೆ; ಸಂಭಾಸಮಾನಃ=ಶೋಭಿಸುವ; ಅಲಿರಾಜತ್=ಉತ್ತಮ ಭ್ರಮರದಂತೆ; ಅಧೀರ=ಚಂಚಲವಾದ; ತಾರಂ=ಬೊಂಬೆವುಳ್ಳ; ಶಂಭು=ಬ್ರಹ್ಮನೇ; ಪ್ರಭೃತಿ= ಮೊದಲಾದ; ಅಮರ=ದೇವತೆಗಳಿಂದ; ವಾಂಛಿತ=ಅಪೇಕ್ಷಿತ ವಾದ; ವಲ್ಗು=ಚಂದದ; ವೀಕ್ಷಂ=ನೋಟವುಳ್ಳ; ಜೃಂಭತ್=ವೃದ್ಧವಾದ; ಮುಕುಂದ-ನಯನಂ=ಕೃಷ್ಣನ ಕಣ್ಣು; ಮಾಂ=ನನ್ನನ್ನು; ಮುಹುಃ=ಪುನಃ; ಈಕ್ಷತಾತ=ನೋಡಲಿ.

ಕೃಷ್ಣಮ ಕಣ್ಣುಗಳು– ಕಮಲದ ದಳಗಳು ಉದ್ದ, ಚಂದ, ಅಗಲ. ಇದರಂತೆ ಕೃಷ್ಣ ಕಣ್ಣುಗಳಿವೆ. ಕಣ್ಣುಗಳ ಮಧ್ಯದಲ್ಲಿ ಎರಡು ಗುಡ್ಡೆಗಳು ಭ್ರಮರದಂತೆ ಅತ್ತಿತ್ತ ಓಡಾಡುತ್ತಾ ಇನ್ನೂ ಶೋಭೆಯನ್ನು ಕೊಡುತ್ತಿವೆ ಕಣ್ಣಿಗೆ. ಇಂತಹ ದೃಷ್ಟಿಯಿಂದ ಕಾರುಣ್ಯವನ್ನು ನಮ್ಮ ಮೇಲೆ ಹರಿಸಲಿ ಎಂದು ಬ್ರಹ್ಮಾದಿದೇವತೆಗಳು ಸದಾ ಆಶಿಸುತ್ತಾರೆ. ತೇಜಃ ಪುಂಜದಿಂದ ಕೂಡಿದ ಇನ್ನೊಬ್ಬರನ್ನು ಬೆಳೆಸುವ ಕಣ್ಣುಗಳಿಂದ ಕೃಷ್ಣನು ಸದಾ ನಮ್ಮನ್ನು ನೋಡಲಿ.

ವಕ್ರಾಲಕಂ ಮಣಿಮಯೋಜ್ವಲಪಟ್ಟಬಂಧಂ
ಕಸ್ತೂರಿಕಾತಿಲಕಭೂಷಿತಮಚ್ಯುತಸ್ಯ ।
ವಿಸ್ತೀರ್ಣಮೀಷದುದಿತಾಲಿಕಯುಗ್ಮಮಿಷ್ಟಂ
ಅಸ್ಮಾಕಫಾಲಲಿಖಿತಂ ಕುರುತಾಲ್ಲಲಾಟಮ್ ॥ ೫೬ ॥

ವಕ್ರ=ಗುಂಗುರಾದ; ಅಲಕಂ=ಕೂದಲುಳ್ಳ; ಮಣಿಮಯ=ಮಣಿಮಯವಾದ; ಉಜ್ವಲ=ಹೊಳೆಯುವ; ಪಟ್ಟಬಂಧಂ=ಲಲಾಟಪಟ್ಟಿವುಳ್ಳ; ಕಸ್ತೂರಿಕಾ=ಕಸ್ತೂರಿಯ; ತಿಲಕ=ತಿಲಕದಿಂದ; ಭೂಷಿತಂ=ಚಂದವಾದ; ವಿಸ್ತೀರ್ಣಂ=ವಿಶಾಲವಾದ; ಈಷತ್=ಸ್ವಲ್ಪ'; ಉದಿತ=ಮೇಲ್ಮುಖವಾದ; ಅಲಿಕ=ಕೊನೆಯ; ಯುಗ್ಮಂ=ಎರಡುಳ್ಳ; ಇಷ್ಟಂ=ಇಷ್ಟವಾದ; ಅಚ್ಯುತಸ್ಯ=ಕೃಷ್ಣನ; ಲಲಾಟಂ=ಹಣೆಯು; ಅಸ್ಮಾಕ=ನಮ್ಮ; ಫಾಲ=ಹಣೆಯ; ಲಿಖಿತಂ=ಗೆರೆಗಳನ್ನು; ಕುರುತಾತ್=ಮಾಡಲಿ.

ಕೃಷ್ಣನ ಹಣೆಯ ವರ್ಣನೆ– ತಲೆಯ ಕೂದಲು ಅಂದರೆ ಮುಂಗುರುಳು ಈ ಹಣೆಯ ಮೇಲೆ ನೇತಾಡುತ್ತಿವೆ. ಅವು ಗುಂಗುರುಗಳಾಗಿಯೂ ಇವೆ. ಹಣೆಗೆ ಕಟ್ಟುವ ಆಭರಣಕ್ಕೆ ಲಲಾಟಪಟ್ಟಿ ಎಂದು ಹೆಸರು. ಅದು ನವರತ್ನಗಳಿಂದ ಕೂಡಿದೆ. ಅದರಲ್ಲಿಯೂ ನೇತಾಡುವ ಮಣಿಗಳಿವೆ. ಹಣೆಯ ಮಧ್ಯದಲ್ಲಿ ಕಸ್ತೂರಿಯ ತಿಲಕವಿದೆ. ಹಣೆ ಅಗಲವಾಗಿರುವುದು ಲಕ್ಷಣ. ಈ ಹಣೆಯ ಎರಡೂ ತುದಿಗಳು ಸ್ವಲ್ಪ ಮೇಲ್ಮುಖವಾಗಿವೆ.

ಇದು ಇನ್ನೂ ಶೋಭೆಯನ್ನು ಕೊಡುತ್ತದೆ. ಇಂತಹ ಹಣೆಯನ್ನು ನಾವು ಧ್ಯಾನಮಾಡೋಣ. ಇದರ ಫಲ– ದೇವರ ಹಣೆಯಲ್ಲಿ ಎಂದೂ ಅನಿಷ್ಟವಾದ ರೇಖೆಗಳು ಇರುವುದಿಲ್ಲ. 'ತಂ ಯಥಾ ಉಪಾಸತೇ ತಥೈವ ಭವತಿ' ಎಂಬ ಮಾತಿನಂತೆ ಇಂತಹ ಹಣೆಯನ್ನು ನಾವು ಚಿಂತಿಸಿದರೆ ನಮ್ಮ ಹಣೆಯಲ್ಲಿರುವ ಅನಿಷ್ಟರೇಖೆಗಳು ದೂರವಾಗುತ್ತವೆ. ಇಷ್ಟರೇಖೆಗಳು ಮಾತ್ರ ಉಳಿಯುತ್ತವೆ.

**ಶ್ಯಾಮಂ ತ್ರಿವಕ್ರಂ ವಿಧಿಮುಖ್ಯದೇವಸಾಮ್ರಾಜ್ಯವಿಶ್ರಾಣನಹೇತುಲೀಲಮ್ ।**
**ಕಾಮಾಗ್ರ್ಯಚಾಪಾಕೃತಿಕಾಮತಾತ ಭ್ರೂಮಂಡಲಂ ಖಂಡಯತಾದಘಂ ನಃ ॥ ೫೭ ॥**

ಶ್ಯಾಮಂ=ಕಪ್ಪಾದ; ತ್ರಿವಕ್ರಂ=ಮೂರು ಕಡೆ ಬಾಗಿದ; ವಿಧಿ=ಬ್ರಹ್ಮನೇ; ಮುಖ್ಯ=ಮೊದಲಾದ; ದೇವ=ದೇವತೆಗಳ; ಸಾಮ್ರಾಜ್ಯ=ರಾಜ್ಯದ; ವಿಶ್ರಾಣನ=ನಾಶಕ್ಕೆ; ಹೇತು=ಕಾರಣವಾದ; ಲೀಲಂ=ಆಟವುಳ್ಳ; ಕಾಮ=ಕಾಮನ; ಅಗ್ರ್ಯ=ಉತ್ತಮವಾದ; ಚಾಪ=ಧನುಸ್ಸಿನ; ಆಕೃತಿ=ಆಕಾರವುಳ್ಳ; ಕಾಮ=ಕಾಮನ; ತಾತ=ತಂದೆಯ; ಭ್ರೂಮಂಡಲಂ=ಹುಬ್ಬುಗಳು; ನಃ=ನಮ್ಮ; ಅಘಂ=ಪಾಪವನ್ನು; ಖಂಡಯಿತಾತ್= ನಾಶಮಾಡಲಿ.

ಹುಬ್ಬುಗಳ ವರ್ಣನೆ– ಈ ಹುಬ್ಬುಗಳ ಶಕ್ತಿ ಅಪಾರ. ದೇವರು ಈ ಹುಬ್ಬುಗಳ ಹಾರಿಸುವಿಕೆಯಿಂದ ಜಗತ್ತಿಗೇ ನಾಶವನ್ನು ಒದಗಿಸುತ್ತಾರೆ. ಇದರಿಂದ ಬ್ರಹ್ಮನನ್ನೇ ಆರಂಭಿಸಿ ಸಮಸ್ತದೇವತೆಗಳ ಸಿಂಹಾಸನವೂ ನೀರುಪಾಲಾಗುತ್ತದೆ. ಬಿಲ್ಲಿನಂತೆ ಮೂರು ಕಡೆ ಬಾಗಿರುವ ಈ ಹುಬ್ಬುಗಳು ತುಂಬಾ ಕಪ್ಪಾಗಿ ಶೋಭಿಸುತ್ತವೆ. ಈ ಹುಬ್ಬುಗಳ ಮುಂದೆ ಕಾಮನ ಧನುಸ್ಸು ಅಪ್ರಯೋಜಕ. ಇದಕ್ಕಿರುವಷ್ಟು ಆಕರ್ಷಣೆ ಆತನ ಬಿಲ್ಲಿಗಿಲ್ಲ. ಬಿಲ್ಲು ಎಲ್ಲವನ್ನೂ ಖಂಡಿಸಲು ಶಕ್ತ. ಕೃಷ್ಣನ ಈ ಹುಬ್ಬೆಂಬ ಬಿಲ್ಲು ನಮ್ಮ ಪಾಪಗಳನ್ನು ಖಂಡಿಸಲಿ.

**ಸ ಭವತು ಯಶಸೇ ಪ್ರವಾಲಕಾಂತಿ–**
**ರ್ಮೃದುಲತರಃ ಸರಸೋಽಧರೋ ಮುರಾರೇಃ ।**
**ಯದುದಿತರಸಲುಬ್ಧಧೀರವಾತ್ಸೀದುರಸಿ**
**ರಮಾಽನನ ಪದ್ಮಚುಂಬಿವೇಣೌ ॥ ೫೮ ॥**

ಯತ್=ಯಾವುದರಿಂದ; ಉದಿತ=ಹೊರಟು; ರಸ=ರಸದಲ್ಲಿ; ಲುಬ್ಧ=ಆಸೆವುಳ್ಳ; ಧೀಃ=ಮನವುಳ್ಳ; ರಮಾ=ರಮೆಯು; ಉರಸಿ=ಎದೆಯಲ್ಲಿ; ಆನನ=ಮುಖವೆಂಬ; ಪದ್ಮ=ಕಮಲವನ್ನು; ಚುಂಬಿ=ಚುಂಬಿಸುವ; ವೇಣೌ=ಕೊಳಲಿನಲ್ಲಿ; ಅವಾತ್ಸೀತ್=ವಾಸಿಸಿದಳೋ; ಸಃ=ಅಂತಹ; ಪ್ರವಾಲ=ಹವಳದಂತೆ; ಕಾಂತಿಃ=ಶೋಭೆವುಳ್ಳ; ಮೃದುಲತರಃ=ತುಂಬಾ ಮೆತ್ತಗಾದ; ಸರಸಃ=ರಸದಿಂದ ಕೂಡಿದ; ಮುರಾರೇಃ=ಕೃಷ್ಣನ; ಅಧರಃ=ತುಟಿಯು; ಯಶಸೇ=ಶ್ರೇಯಸ್ಸಿಗೆ; ಭವತು=ಆಗಲಿ.

ತುಟಿಗಳ ವರ್ಣನೆ– ತುಟಿಗಳು ಕೆಂಪಾಗಿರಬೇಕು. ಇದು ಲಕ್ಷಣ. ದೇವರ ತುಟಿಗಳು ಹವಳದಂತೆ ಮೋಹಕವಾದ ಕೆಂಪಿನಿಂದ ಕೂಡಿದೆ. ಪಸೆಯಿಂದ ಕೂಡಿಕೊಂಡು ತುಂಬಾ ಮೃದುವಾಗಿಯೂ ಇದೆ. ಈ ತುಟಿಯಲ್ಲಿ ದೇವರು ತನ್ನ ಕೊಳಲನ್ನಿಟ್ಟು ಊದುತ್ತಾನೆ. ಆಗ ಜೊಲ್ಲು ಈ ಕೊಳಲಿಗೆ ಸೇರುತ್ತದೆ. ದೇವರ ತುಟಿಯ ರಸವನ್ನು ಹೀರುವ ಅಧಿಕಾರ ರಮೆಗೆ ಮಾತ್ರ. ಆಕೆಗೆ ಆಸೆಯೂ ಇದೆ. ಆದ್ದರಿಂದ ಅವಳು ಒಂದು ರೂಪ ದಿಂದ ಈ ಕೊಳಲಿನಲ್ಲಿ ಸೇರಿದ್ದಾಳೆ. ಒಮ್ಮೊಮ್ಮೆ ಈ ರಸವು ತುಟಿಗಳ ಬದಿಯಲ್ಲಿ ಕೆಳಗೆ ಬೀಳುವುದೂ ಇದೆ. ಕೆಳಗೆ ಅಂದರೆ ಕೃಷ್ಣನ ಎದೆಗೆ. ಅದೂ ವ್ಯರ್ಥವಾಗಬಾರದು. ಅದನ್ನು ತಾನೇ ಹೀರಬೇಕು ಎಂಬ ಆಸೆಯಿಂದ ಇನ್ನೊಂದು ರೂಪದಿಂದ ಆತನ ಎದೆಯಲ್ಲಿಯೂ ಸೇರಿಕೊಂಡಳು. ಇಂತಹ ತುಟಿಗಳ ಸ್ಮರಣೆಯಿಂದ ನಮಗೆ ಜೀವನದಲ್ಲಿ ಕ್ಷೇಮವಾಗಲಿ.

**ಸಂಪಕ್ವಬಿಂಬಸಮರಮ್ಯತಮಾಧರೋಷ್ಠಃ**
**ಸತ್‌ಸಂಪದೇ ಭವತು ಸಾತ್ವತರಾಜರಾಜ್ಞ್ಯಾಃ ।**
**ಯತ್‌ಸಂಭವಾಮೃತಕಣೇನ ಫಣೀಂದ್ರತಲ್ಪ**
**ಕೃಷ್ಣಃ ಸ ನಿತ್ಯಮಜರಾಮರಣೋ ಬಭೂವ** ॥ ೫೯ ॥

ಯತ್=ಎಲ್ಲಿಂದ; ಸಂಭವ=ಉಂಟಾದ; ಅಮೃತಕಣೇನ=ಅಮೃತಬಿಂದುವಿನಿಂದ; ಫಣೀಂದ್ರ=ಸರ್ಪಶ್ರೇಷ್ಠನೇ; ತಲ್ಪ=ಹಾಸಿಗೆಯಾಗಿ ಉಳ್ಳ; ಸಃ=ಆ; ಕೃಷ್ಣಃ=ಕೃಷ್ಣನು; ನಿತ್ಯಂ=ಸದಾ; ಅಜರಾಮರಣಃ=ಮುಪ್ಪು ಮರಣ ರಹಿತನು; ಬಭೂವ=ಆದನೋ; ಸಾತ್ವತ=ಯಾದವರ; ರಾಜ=ರಾಜನ; ರಾಜ್ಞ್ಯಾ=ರಾಣಿಯ; ಸಂಪಕ್ವ=ಚೆನ್ನಾಗಿ ಹಣ್ಣಾದ; ಬಿಂಬ=ತೊಂಡೆಹಣ್ಣಿಗೆ; ಸಮ=ಸಮವಾದ; ರಮ್ಯತಮ=ಚಂದದ; ಅಧರೋಷ್ಠ=ಕೆಳತುಟಿಯು; ಸತ್=ಒಳ್ಳೆಯ; ಸಂಪದೇ=ಸಂಪತ್ತಿಗೆ; ಭವತು=ಆಗಲಿ.

ರುಗ್ಮಿಣಿಯ ತುಟಿಗಳ ವರ್ಣನೆ– ಕೃಷ್ಣನಿಗೆ ಮುದಿತನವೂ ಮರಣವೂ ಎರಡೂ ಇಲ್ಲ. ಇದಕ್ಕೆ ಕಾರಣವನ್ನು ರಾಜರು ತಮಾಷೆಯಾಗಿ ತಿಳಿಸುತ್ತಾರೆ– ರುಗ್ಮಿಣಿಯ ತುಟಿಗಳ ಅಮೃತರಸವನ್ನು ಈ ಕೃಷ್ಣನು ಯಾವಾಗಲೂ ಕುಡಿಯುತ್ತಾನೆ. ಅಮೃತವನ್ನು ಕುಡಿಯುವ ದೇವತೆಗಳಿಗೆ ಇವು ಎರಡೂ ಇಲ್ಲ. ಅದೇ ರೀತಿ ಕೃಷ್ಣನಿಗೂ ಇಲ್ಲ. ಇಲ್ಲದಿದ್ದರೆ ಕೃಷ್ಣನಿಗೆ ವಯಸ್ಸಿಗಿಂತ ಮೊದಲೇ ಮುಪ್ಪು ಬರಬೇಕಿತ್ತು. ಯಾಕೆಂದರೆ ತಾನು ಸದಾ ಶೇಷನ ಮೇಲೆ ಮಲಗುವವನು. ಶೇಷನ ಬಾಯಿಂದ ವಿಷಾನಿಲ ಸದಾ ಹೊರಡುತ್ತದೆ. ಅದನ್ನು ಸೇವಿಸಿದರೆ ಯಾರಿಗೆ ತಾನೆ ಮುಪ್ಪು ಮರಣ ಬೇಗ ಬರಲಿಕ್ಕಿಲ್ಲ. ಹೀಗಿದ್ದರೂ ಕೃಷ್ಣನಿಗೆ ಬಾರದಿರಲು ಇದೇ ಕಾರಣ. ಇಷ್ಟು ಶಕ್ತಿವುಳ್ಳದ್ದು ಈಕೆಯ ತುಟಿಯ ರಸವು. ಇಂತಹ ರಸವುಳ್ಳದ್ದು ತುಟಿಯು. ಒಳ್ಳೆಯ ಹಣ್ಣಾದ ತೊಂಡೆಕಾಯಿಯ ಆಕಾರ ಹಾಗೂ ಬಣ್ಣದಿಂದ ತುಂಬಾ ಚಂದ ಇದೆ. ಇಂತಹ ತುಟಿಗಳು ನಮಗೂ ಅಜರಾಮರಣವನ್ನು ಕೊಡಲಿ. ಈ ರೀತಿ ವರ್ಣನೆಯಿಂದ ಕೃಷ್ಣನಿಗಿಂತ ರುಗ್ಮಿಣಿಯೇ

ದೊಡ್ಡವಳು ಎಂಬ ತಪ್ಪು ಅಭಿಪ್ರಾಯ ಬರಬಾರದು. ಅದಕ್ಕಾಗಿ ರುಗ್ಮಿಣಿಯನ್ನು ತಿಳಿಸುವಾಗ ಯಾದವರ ಪತಿಯ ಪತ್ನಿ ಎಂದು ತಿಳಿಸಿದ್ದಾರೆ. ಪತ್ನಿಗಿಂತ ಪತಿ ಹಿರಿಯನು ತಾನೆ.

**ಸೌವರ್ಣರಮ್ಯಫಲಕೋಪಮಿತಃ ಕಪೋಲಃ**
**ಸೌಭಾಗ್ಯದೋ ಭವತು ರಂಜಿತಕುಂಡಲಶ್ರೀಃ ।**
**ಯಚ್ಚುಂಬನಂ ವಿರಚಯನ್ವಿಗತಾನ್ಯತೃಷ್ಣಃ**
**ಕೃಷ್ಣೋ ಬಭೂವ ಸರಸಃ ಕಿಲ ನಿತ್ಯತೃಪ್ತಃ ॥ ೬೦ ॥**

ಯತ್=ಯಾವುದರ; ಚುಂಬನಂ=ಚುಂಬನವನ್ನು; ವಿರಚಯನ್=ಮಾಡುತ್ತಾ; ಸರಸಃ=ರಸಿಕನಾದ; ಕೃಷ್ಣಃ=ಕೃಷ್ಣನು; ವಿಗತ್=ಹೋದ; ಅನ್ಯ=ಬೇರೆ; ತೃಷ್ಣಃ= ಆಸೆವುಳ್ಳವನಾಗಿ; ನಿತ್ಯ=ಯಾವಾಗಲೂ; ತೃಪ್ತಃ=ತೃಪ್ತನು; ಬಭೂವ ಕಿಲ=ಆದನಷ್ಟೇ; ಸೌವರ್ಣ=ಬಂಗಾರದ; ರಮ್ಯ=ಚಂದದ; ಫಲಕ=ಹಲಗೆಯಂತೆ; ಉಪಮಿತಃ=ಸಮಾನ ವಾದ; ರಂಜಿತ=ಹೊಳೆಯುವ; ಕುಂಡಲ=ಕುಂಡಲದಿಂದ; ಶ್ರೀಃ=ಕಾಂತಿವುಳ್ಳ; ಕಪೋಲಃ=ಕಪೋಲವು; ಸೌಭಾಗ್ಯದಃ=ಸಂಪತ್ತನ್ನು ಕೊಡತಕ್ಕದ್ದು; ಭವತಿ=ಆಗಲಿ.

ಈಕೆಯ ಕಪೋಲದ ವರ್ಣನೆ– ಪುನಃ ರಾಜರು ತಮಾಷೆಗಾಗಿ ವರ್ಣಿಸುತ್ತಾರೆ– ಕೃಷ್ಣನು ನಿತ್ಯತೃಪ್ತನು. ಯಾವುದರ ಆಸೆಯೂ ಇಲ್ಲ. ಕಾರಣ– ಈತನು ಯಾವಾಗಲೂ ಈಕೆಯ ಕಪೋಲವನ್ನು ಚುಂಬಿಸುತ್ತಾ ಇರುತ್ತಾನೆ. ಇದರಿಂದ ಸಿಗುವಷ್ಟು ಸುಖ ಬೇರೆ ಯಾವುದರಿಂದಲೂ ಸಿಗುತ್ತಿಲ್ಲ. ಈಕೆ ಯಾವಾಗಲೂ ಈತನ ಜೊತೆಯಲ್ಲೇ ಇರುತ್ತಾಳೆ. ಆದ್ದರಿಂದ ಸದಾ ಮುದ್ದಾಡುತ್ತಾ ಸದಾ ಸುಖದಿಂದ ಇದ್ದಾನೆ. ಈ ರೀತಿಯ ಶಕ್ತಿವುಳ್ಳದ್ದು ಈಕೆಯ ಕಪೋಲ. ಈಕೆಯ ಮೈಯು ಬಂಗಾರದ ಬಣ್ಣದ್ದು. ಆದ್ದರಿಂದ ಕಪೋಲವು ಚಿನ್ನದ ಹಲಗೆಯಂತೆ ಇದೆ. ಕಿವಿಗಳಲ್ಲಿ ಹಾಕಿದ ಆಭರಣದಿಂದ ಇನ್ನಷ್ಟು ಹೊಳೆಯುತ್ತದೆ. ಇಂತಹ ಕಪೋಲವು ನಮಗೆ ನಿತ್ಯತೃಪ್ತಿಯನ್ನು ಕೊಡಲಿ. ಗೃಹಸ್ಥರು ತನ್ನ ಪತ್ನಿಯಿಂದ ತೃಪ್ತಿ ಪಡಬೇಕು. ಅನ್ಯ ಆಸೆ ಕೂಡದು ಎಂಬ ಸಂದೇಶವನ್ನು ಜಗತ್ತಿಗೆ ಸಾರಲು ರಾಜರು ಈ ರೀತಿ ಹೇಳಿದ್ದಾರೆ. ಅದಕ್ಕಾಗಿ ಈ ಶ್ಲೋಕದ ಕೊನೆಯಲ್ಲಿ 'ಕಿಲ' ಎಂಬ ಶಬ್ದವನ್ನು ಬಳಸಿದ್ದಾರೆ.

**ರೋಮ್ಣಾಂ ಹರ್ಷಣಕಾರಿಣೀಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಷ್ಟಾದಶಃ ॥ ೬೧ ॥**

**॥ ಇತಿ ಅಷ್ಟಾದಶಃ ಸರ್ಗಃ ॥**

## ॥ ಅಥ ಏಕೋನವಿಂಶತಿಃ ಸರ್ಗಃ ॥

ದಂತಕ್ಷತೈಃ ಕೃತಪದಂ ಪ್ರವಿಭಾತಿ ದೇವ್ಯಾ
ಗಂಡಸ್ಥಲಂ ಪ್ರಿಯವಶೀಕರಣೋಚಿತಸ್ಯ ।
ಮುಷ್ಣತ್ಪ್ರಭಂ ಕನಕಯಂತ್ರವರಸ್ಯ ವಶ್ಯ
ಕರ್ಮಾರ್ಹರಕ್ತರಸತೋ ರಚಿತಾಕ್ಷರಸ್ಯ ॥ ೧ ॥

ದಂತ=ಹಲ್ಲುಗಳ; ಕ್ಷತೈಃ=ಗಾಯಗಳಿಂದ; ಕೃತ=ಮಾಡಲ್ಪಟ್ಟ; ಪದಂ=ಸ್ಥಾನವುಳ್ಳ; ವಶ್ಯ=ವಶೀಕರಣವೆಂಬ; ಕರ್ಮ=ಕೆಲಸಕ್ಕೆ; ಅರ್ಹ=ಯೋಗ್ಯವಾದ; ರಕ್ತ=ಕೆಂಪಾದ; ರಸತಃ=ರಸದಿಂದ; ರಚಿತ=ಬರೆದ; ಅಕ್ಷರಸ್ಯ=ಬರಹವುಳ್ಳ; ಪ್ರಿಯ=ಇಷ್ಟದ; ವಶೀಕರಣ=ವಶಕ್ಕೆ; ಉಚಿತಸ್ಯ=ಯೋಗ್ಯವಾದ; ಕನಕ=ಚಿನ್ನದ; ಯಂತ್ರವರಸ್ಯ= ಶ್ರೇಷ್ಠಯಂತ್ರದ; ಪ್ರಭಾಂ=ಕಾಂತಿಯನ್ನು; ಮುಷ್ಣತ್=ಅಪಹರಿಸುವ; ದೇವ್ಯಾಃ=ರುಗ್ಮಿಣಿಯ; ಗಂಡಸ್ಥಳಂ=ಗಂಡಸ್ಥಲವು; ಪ್ರವಿಭಾತಿ=ಶೋಭಿಸುತ್ತದೆ.

ರುಗ್ಮಿಣಿಯ ಕೆನ್ನೆಗಳನ್ನು ವರ್ಣಿಸುತ್ತಾರೆ– ಈಕೆಯ ಜೊತೆ ಸರಸವಾಡುವಾಗ ಕೃಷ್ಣನು ಈಕೆಯ ಕೆನ್ನೆಗಳನ್ನು ಕಚ್ಚುತ್ತಾನೆ. ಈತನ ಹಲ್ಲುಗಳ ಗುರುತು ಕೆನ್ನೆಯಲ್ಲಿ ಮೂಡುತ್ತದೆ. ಸ್ವಲ್ಪ ರಕ್ತವೂ ಬಂದಿರುತ್ತದೆ. ಈಕೆಯ ಕೆನ್ನೆಯು ಬಂಗಾರದ ಬಣ್ಣವುಳ್ಳದ್ದು. ಇದನ್ನು ನೋಡಿದಾಗ ವಶೀಕರಣಯಂತ್ರದ ಸ್ಮರಣೆ ಬರುತ್ತದೆ. ಅನೇಕ ರೀತಿಯ ಯಂತ್ರಗಳಲ್ಲಿ ವಶೀಕರಣಯಂತ್ರವೂ ಒಂದು. ಬಂಗಾರದ ತಗಡು. ಅದರಲ್ಲಿ ಕುಂಕುಮ ನೀರಿನಿಂದ ಮಂತ್ರವನ್ನು ಬರೆಯುತ್ತಾರೆ. ಬರೆದ ಈ ಮಂತ್ರದಿಂದ ಯೋಗ್ಯವಾದ ವಸ್ತುವನ್ನು ನಮ್ಮ ವಶಕ್ಕೆ ತೆಗೆದುಕೊಳ್ಳಲು ಆಗುತ್ತದೆ, ಆ ಯಂತ್ರವನ್ನು ಆ ವಸ್ತುವಿಗೆ ಕಟ್ಟಿದಾಗ. ಪ್ರಕೃತ ಈಗ– ಈಕೆಯ ಅಗಲವಾದ ಕೆನ್ನೆಯು ಬಂಗಾರದ ತಗಡು. ಆ ಕೆನ್ನೆಯನ್ನು ಕೃಷ್ಣನು ಪ್ರೀತಿಯಿಂದ ಕಚ್ಚಿದ್ದಾನೆ. ಆಗ ಉಂಟಾದ ರಕ್ತಮಯವಾದ ಹಲ್ಲಿನ ಗಾಯಗಳೇ ಮಂತ್ರದ ಅಕ್ಷರಗಳು. ಈಕೆಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕಿದೆ. ಅದಕ್ಕಾಗಿ ಈ ತಗಡನ್ನು ಆಕೆಗೆ ಕಟ್ಟಿದಂತೆ ತೋರುತ್ತದೆ. ವಶೀಕರಣ ಯಂತ್ರಕ್ಕಿಂತಲೂ ಹೆಚ್ಚಿನ ಶೋಭೆ ಇದೆ ಈ ಕೆನ್ನೆಗೆ. ವಶೀಕರಣಯಂತ್ರವಾದರೂ ಕ್ರಮೇಣ ತನ್ನ ಶಕ್ತಿಯನ್ನು ಕಳಕೊಂಡೀತು. ಆದರೆ ಈಕೆಯ ಕೆನ್ನೆ ಸದಾ ಒಂದೇ ರೀತಿ ಇರುತ್ತದೆ.

ಅಂತರ್ನಿಗೂಢಕನಕಾಂಕುರಿತಾನನೋಽಪಿ–
ನಾಸಾವಿಭೂಷಣಮಣಿರ್ಮುರವೈರಿಪತ್ನ್ಯಾಃ ।
ಮುಕ್ತಾಮಯಃ ಕಿಲ ಮನೋಜ್ಞವಧೂಸುಧಾರ್ದ್ರ–
ಬಿಂಬೋಷ್ಠಚುಂಬಿ ವದನಸ್ಯ ಸದಾಮಯಃ ಕ್ವ ॥ ೨ ॥

ಮುರ=ಮುರನ; ವೈರಿ=ಶತ್ರುವಿನ; ಪತ್ನ್ಯಾಃ=ಪತ್ನಿಯ; ನಾಸಾ=ಮೂಗಿನ; ವಿಭೂಷಣ=ಅಲಂಕಾರದ; ಮಣಿಃ=ಮಣಿಯು; ಅಂತಃ=ಒಳಗೆ; ನಿಗೂಢ=ಅಡಗಿದೆ; ಕನಕ=ಬಂಗಾರದಿಂದ; ಅಂಕುರಿತ=ಚಿಗುರಿದ; ಆನನಃ ಅಪಿ=ಮುಖವುಳ್ಳದ್ದಾದರೂ; ಮುಕ್ತಾಮಯಃ=ಮುತ್ತಿನ ರೂಪದ್ದು (ರೋಗರಹಿತವಾದದ್ದು); ಕಿಲ=ತಾನೆ; ಮನೋಜ್ಞ=ಚಂದದ; ವಧೂ=ನಾರಿಯ; ಸುಧಾ=ಅಮೃತದಿಂದ; ಆರ್ದ್ರ=ಒದ್ದೆಯಾದ; ಬಿಂಬ=ತೊಂಡೆಯಂತಿರುವ; ಓಷ್ಠ=ತುಟಿಯನ್ನು; ಚುಂಬಿ=ಚುಂಬಿಸುವ; ವದನಸ್ಯ=ಮುಖಕ್ಕೆ; ಆಮಯಃ=ರೋಗವು; ಕ್ವ=ಎಲ್ಲಿ?;

ಮೂಗುತಿಯ ವರ್ಣನೆ– ಮುತ್ತಿನ ಮೂಗುತಿ, ಅದನ್ನು ಚಿನ್ನದ ಸರಿಗೆಗೆ ಪೋಣಿಸಿದೆ. ಮೂಗನ್ನು ತೂತು ಮಾಡಿ ಚಿನ್ನದ ಸರಿಗೆಯನ್ನು ಆ ತೂತಿನ ಮೂಲಕ ಒಳಗೆ ಸೇರಿಸಿದೆ. ಮೂಗಿನ ರಂಧ್ರದಿಂದ ಆ ಸರಿಗೆ ಹೊರಗೆ ಬಂದಿದೆ. ಅದನ್ನು ಪುನಃ ಮೇಲ್ಮುಖವನ್ನಾಗಿ ಮಾಡಿ ಮುತ್ತಿನ ಸುತ್ತ ಜೋಡಿಸಿದೆ. ಮುತ್ತು ಬಹಳ ದೊಡ್ಡದು. ಅದು ಕೆಳಮುಖವಾಗಿ ನೇತಾಡುತ್ತಿದೆ. ಈಕೆಯ ತುಟಿಗೆ ಒಂದು ರೀತಿಯಲ್ಲಿ ತಾಗಿಕೊಂಡಂತೆ ಇದೆ. ಇದು ಮೂಗುತಿಯನ್ನು ಇಟ್ಟುಕೊಳ್ಳುವ ಕ್ರಮ. ಇದನ್ನೇ ರಾಜರು ಕಾವ್ಯದ ಶೈಲಿಯಲ್ಲಿ ವರ್ಣಿಸುತ್ತಾರೆ– ಮುತ್ತನ್ನು ಸಂಸ್ಕೃತದಲ್ಲಿ 'ಮುಕ್ತಾಮಯ' ಎಂಬ ಶಬ್ದದಿಂದ ಕರೆಯುತ್ತಾರೆ. ಇದಕ್ಕೆ ಇನ್ನೊಂದು ಅರ್ಥ– 'ಕಾಯಿಲೆಯಿಂದ ರಹಿತ' ಎಂದು. ಆಮಯ ಎಂದು ಕಾಯಿಲೆಗೆ ಹೆಸರಿದೆ. ಈ ಮುತ್ತಿನ ಹೃದಯದಲ್ಲಿ ಅಂದರೆ ಮಧ್ಯದಲ್ಲಿ ಚಿನ್ನದ ಸರಿಗೆಯಿದೆ. ಒಂದು ರಂಧ್ರದಿಂದ ಒಳಹೋಗಿ ಇನ್ನೊಂದು ರಂಧ್ರದಿಂದ ಹೊರಬಂದಿದೆ. ಎದೆಯಲ್ಲಿ ನಾಟಿದ ಬಾಣವು ಬೆನ್ನಲ್ಲಿ ಬಂದಂತೆ. ಆಗ ವ್ಯಕ್ತಿಗೆ ತುಂಬಾ ನೋವಾಗುತ್ತದೆ. ಅದೇ ರೀತಿ ಈ ಮುತ್ತಿಗೂ ತುಂಬಾ ನೋವು ಆಗಬೇಕು. ಆದರೂ ಈ ಮುತ್ತು ಮುಕ್ತಾಮಯ– ಅಂದರೆ ಎರಡು ಅರ್ಥ. ಒಂದು ಸಂಸ್ಕೃತದ ಹೆಸರು ಮುಕ್ತಾಮಯ ಎಂದು. ಇನ್ನೊಂದು ದುಃಖದಿಂದ, ಕಾಯಿಲೆಯಿಂದ ರಹಿತ ಎಂದು. ಮಧ್ಯದಲ್ಲಿ ಬಾಣದಂತೆ ಈ ಸರಿಗೆಯಿದ್ದರೂ ಈ ಮುತ್ತು ಮುಕ್ತಾಮಯ ಎಂಬುದು ಆಶ್ಚರ್ಯ ಎಂದು ತಿಳಿಸಲು ಈ ಶ್ಲೋಕದಲ್ಲಿ ಕಿಲ ಎಂಬ ಶಬ್ದವನ್ನು ಸೇರಿಸಿದ್ದಾರೆ.

ಇದೇನೂ ಆಶ್ಚರ್ಯವಲ್ಲ ಎಂಬುದನ್ನೂ ರಾಜರು ತಿಳಿಸುತ್ತಾರೆ– ಈ ಮೂಗುತಿ ಕೆಳಗೆ ಬಾಗಿಕೊಂಡು ಈಕೆಯ ತುಟಿಯ ಎಂಜಲನ್ನು ಕುಡಿಯುತ್ತಿದೆ ತಾನೆ. ಈಕೆಯ ತುಟಿಯಲ್ಲಿರುವ ಎಂಜಲು ಇದು ಅಮೃತ. ಬಾಣದಿಂದ ನೋವನ್ನು ಅನುಭವಿಸುವ ವ್ಯಕ್ತಿಗೆ ನೀರಿನ ಸಿಂಪಡಿಸುವಿಕೆಯಿಂದ ನೆಮ್ಮದಿ ಸಿಗುತ್ತದೆ. ಹಾಗೆಯೇ ಈ ಮುತ್ತಿಗೆ ತುಟಿಯ ರಸದ ಸಂಪರ್ಕದಿಂದ ಯಾವ ರೀತಿಯ ನೋವೂ ಇಲ್ಲ. ಆದ್ದರಿಂದ 'ಮುಕ್ತಾಮಯ' ಆಗಿರುವುದು ಆಶ್ಚರ್ಯವಲ್ಲ.

**ಮುಕ್ತಾತ್ಮಕೋऽಪಿ ಮೃದುಲೋಷ್ಠಪುಟಾನುಷಕ್ತ**
**ನಿತ್ಯಂ ಯದುಲ್ಲಸದಪಾಂಗಶರೇಣ ಭಿನ್ನಃ ।**
**ನಾಸಾ ವಿಭೂಷಣಮಣಿಃ ಪರಿಲಂಬತೇ ಸ್ಯಾಃ**
**ದೇವ್ಯಾಃ ಕಿಮಚ್ಯುತ ವಶೀಕರಣೇ ಪ್ರಯಾಸಃ** ॥ ೩ ॥

ಮುಕ್ತ=ಮುಕ್ತಿನ; ಆತ್ಮಕಃ ಅಪಿ=ಸ್ವರೂಪವಾದರೂ (ಮುಕ್ತನಾದರೂ); ಮೃದು= ಮೆತ್ತಗಿನ; ಲೋಷ್ಠಪುಟ=ತುಟಿಗಳಲ್ಲಿ; ಅನುಷಕ್ತಃ=ಆಸಕ್ತವಾದ; ನಿತ್ಯಂ=ಸದಾ; ಯತ್= ಯಾರ; ಉಲ್ಲಸತ್=ಶೋಭಿಸುವ; ಅಪಾಂಗ=ಕಡೆಗಣ್ಣೆಂಬ; ಶರೇಣ=ಬಾಣದಿಂದ; ಭಿನ್ನಃ= ಹೊಡೆಯಲ್ಪಟ್ಟ; ನಾಸಾ=ಮೂಗಿನ; ವಿಭೂಷಣ=ಅಲಂಕಾರದ; ಮಣಿಃ=ಮಣಿಯು; ಪರಿಲಂಬತೇ=ನೇತಾಡುತ್ತಿದೆ; ಅಸ್ಯಾಃ=ಈ; ದೇವ್ಯಾಃ=ದೇವಿಗೆ; ಅಚ್ಯುತ=ಕೃಷ್ಣನ; ವಶೀಕರಣೇ=ವಶೀಕರಣದಲ್ಲಿ; ಕಿಂ ಪ್ರಯಾಸಃ=ಯಾವ ದಣಿವು.

ಮುತ್ತಿಗೆ 'ಮುಕ್ತಾತ್ಮಾ' ಎಂಬ ಹೆಸರು. ಮುಕ್ತರಾದ ಚೇತನರು ಎಂಬ ಅರ್ಥವೂ ಈ ಶಬ್ದಕ್ಕೆ ಇದೆ. ಮುಕ್ತರು ಎಂದೂ ನಾರಿಯರ ತುಟಿಯ ರಸಕ್ಕೆ ಆಸಕ್ತರಾಗುವುದಿಲ್ಲ. ಆದರೂ ಈ ಮುಕ್ತಾತ್ಮವು ರಮೆಯ ತುಟಿಯ ರಸಕ್ಕೆ ಮಾರುಹೋಗಿದೆ. ಅಲ್ಲೇ ಮೂಗನ್ನು ಹಿಡಿದು ನೇತಾಡುತ್ತಿದೆ. ಈಕೆಯು ತನ್ನ ಕಡೆಗಣ್ಣಿನಿಂದ ಇದನ್ನು ಸದಾ ನೋಡುತ್ತಿದ್ದಾಳೆ. ಕಡೆಗಣ್ಣಿನ ಹೊಡೆತ ಸದಾ ಬೀಳುತ್ತಿದೆ. ಆದರೂ ಅಲ್ಲಿಂದ ಈ ಮುಕ್ತಾತ್ಮವು ಹೊರಡೋಲ್ಲ. ಇಂತಹ ವಶೀಕರಣಶಕ್ತಿ ಇವಳಿಗಿದೆ. ಕೃಷ್ಣನು ಒಬ್ಬ ಮುಕ್ತಾತ್ಮನೆ. ಆದ್ದರಿಂದ ಇವನನ್ನೂ ವಶೀಕರಿಸಲು ಇವಳಿಗೆ ಯಾವ ಆಯಾಸವೂ ಆಗುವುದಿಲ್ಲ.

**ನಾಸಾಖ್ಯಚಂಪಕಭಿಯಾ ಚಲಿತಸ್ಯ ನೇತ್ರ–**
**ಚಾರ್ವಂಬುಜಾರ್ಪಿತಹೃದಾ ಚ ಸಮುತ್ಸುಕಸ್ಯ ।**
**ಭೃಂಗಸ್ಯ ಸಂಪದಮಧೀರಜವಸ್ಯ ಮುಷ್ಣನ್**
**ಲಕ್ಷ್ಮೀಂ ತನೋತು ಯದುಪುಂಗವರಾಜ್ಞ್ಯಪಾಂಗಃ** ॥ ೪ ॥

ನಾಸಾ=ಮೂಗು; ಆಖ್ಯ=ಎಂಬ; ಚಂಪಕ=ಸಂಪಿಗೆಯ; ಭಿಯಾ=ಭಯದಿಂದ; ಚಲಿತಸ್ಯ=ಓಡಿದ; ನೇತ್ರ=ಕಣ್ಣೆಂಬ; ಚಾರು=ಚಂದದ; ಅಂಬುಜ=ಕಮಲದಲ್ಲಿ; ಅರ್ಪಿತ=ಇಟ್ಟಿರುವ; ಹೃದಾ=ಮನದಿಂದ; ಸಮುತ್ಸುಕಸ್ಯ=ಉತ್ಸಾಹವುಳ್ಳ; ಅಧೀರ=ಭಯದ; ಜವಸ್ಯ=ವೇಗವುಳ್ಳ; ಭೃಂಗಸ್ಯ=ಭ್ರಮರದ; ಸಂಪದಂ=ಸಂಪತ್ತನ್ನು; ಮುಷ್ಣನ್=ಅಪಹರಿಸುವ; ಯದು=ಯಾದವರಲ್ಲಿ; ಪುಂಗವ=ಶ್ರೇಷ್ಠನ; ರಾಜ್ಞಿ=ರಾಣಿಯ; ಅಪಾಂಗಃ=ಕಡೆಗಣ್ಣು; ಲಕ್ಷ್ಮೀಂ=ಸಂಪತ್ತನ್ನು; ತನೋತು=ಕೊಡಲಿ.

ಈಕೆಯ ಕಡೆಗಣ್ಣಿನ ವರ್ಣನೆ– ಕಣ್ಣುಗಳು ಕಮಲದ ದಳದಂತೆ, ಮೂಗು ಸಂಪಿಗೆಯ ಮೊಗ್ಗಿನಂತೆ ಇರುವುದು ಲಕ್ಷಣ. ಇವಳ ಈ ಎರಡು ಅವಯವಗಳೂ ಹಾಗೆಯೇ

ಇವೆ. ಕಣ್ಣಿನ ಬೊಂಬೆಯು ಕಪ್ಪಾಗಿದ್ದು ದುಂಬಿಯಂತೆ ಚಂಚಲವಾಗಿವೆ. ದುಂಬಿಗೆ ಸಂಪಿಗೆ ಹೂ ಎಂದರೆ ಆಗೋಲ್ಲ. ಮೂಗಿನ ಮುತ್ತನ್ನು ನೋಡುವ ಮೂಲಕ ಅಲ್ಲಿಗೆ ಬಂತು. ಆದರೆ ಮೂಗೆಂಬ ಸಂಪಿಗೆಯ ಭಯದಿಂದ ಹಿಂದೆ ಹೋಯಿತು. ಕಮಲ ಅಂದರೆ ದುಂಬಿಗೆ ಬಲು ಇಷ್ಟ. ಈ ಕಣ್ಣಲ್ಲೇ ತುಂಬಾ ಆಸೆಯಿಂದ ಉಳಿಯಿತು. ಈ ಕಣ್ಣಿನ ಪಕ್ಕದಲ್ಲೇ ಕೆಳಗೆ ಮೂಗು. ಈ ಮೂಗಿನ ಅಂದರೆ ಸಂಪಿಗೆಯ ಭಯದಿಂದ ದೂರ ಹೋಗುತ್ತೆ. ಕಮಲದ ಆಸೆಯಿಂದ ಪುನಃ ಸಮೀಪಕ್ಕೆ ಬರುತ್ತೆ. ಇಷ್ಟೂ ಚಂಚಲ ಈಕೆಯ ಕಣ್ಣಗುಡ್ಡೆ. ದುಂಬಿಯಲ್ಲಿಯೂ ಇಂತಹ ಚುರುಕುತನ ಇಲ್ಲ. ಆದ್ದರಿಂದ ದುಂಬಿಯನ್ನೂ ಮೀರಿದೆ ಈ ಕಡೆಗಣ್ಣು. ಇಂತಹ ಕಣ್ಣು ನಮಗೆ ಸದಾ ಸಂಪತ್ತನ್ನು ಕೊಡಲಿ. ಇವಳ ಕಣ್ಣಿಗೆ ಇಂತಹ ಸೌಂದರ್ಯ ಬಂದದ್ದು ಈಕೆಯು ಕೃಷ್ಣನ ಪತ್ನಿಯಾದ್ದರಿಂದ.

**ಸ್ವರ್ಣಾಂಗೀ ವರನೀಲರತ್ನಸದೃಶಾಪಾಂಗೀ ಪ್ರವಾಲೋಲ್ಲಸತ್–**
**ಪಾದಾ ಯಾ ಸ್ಮಿತಮೌಕ್ತಿಕಾ ಮರಕತಸ್ಕಂಧಾಭನೀಲಾ ಜಟಾ ।**
**ವೈಡೂರ್ಯಾಗ್ರ್ಯನಖಾ ನಖಕ್ಷತಲಸನ್ಮಾಣಿಕ್ಯಪುಷ್ಪೋಷ್ಠಸತ್**
**ಗೋಮೇದಾ ರದವಜ್ರರುಕ್ಸುರತರುಂ ನಾಸ್ಯೈ ದದೌ ಶ್ರೀಪತಿಃ ॥ ೫ ॥**

ಯಾ=ಯಾರು; ಸ್ವರ್ಣ=ಚಿನ್ನದ; ಅಂಗೀ=ಶರೀರವುಳ್ಳವಳೋ; ವರ=ಶ್ರೇಷ್ಠ; ನೀಲರತ್ನ=ನೀಲಮಣಿಗೆ; ಸದೃಶ=ಸಮಾನವಾದ; ಅಪಾಂಗೀ=ಕಡೆಗಣ್ಣುವುಳ್ಳವಳೋ; ಪ್ರವಾಲ=ಹವಳದಂತೆ; ಉಲ್ಲಸತ್=ಶೋಭಿಸುವ; ಪಾದ=ಚರಣದವಳೋ; ಸ್ಮಿತ= ಮಂದಹಾಸವೆಂಬ; ಮೌಕ್ತಿಕಾ=ಮುತ್ತುಳ್ಳವಳೋ; ಮರಕತ=ಮರಕತಮಣಿಯ; ಸ್ಕಂಧ= ಗೆಲ್ಲಿನಂತೆ; ಆಭಾ=ಕಾಂತಿವುಳ್ಳ; ನೀಲಾ=ನೀಲವಾದ; ಜಟಾ=ಜಡೆವುಳ್ಳವಳೋ; ವೈಡೂರ್ಯಾ=ವೈಡೂರ್ಯದಂತೆ; ಅಗ್ರ್ಯ=ಉತ್ತಮವಾದ; ನಖಾ=ಉಗುರುಳ್ಳವಳೋ; ನಖ=ಉಗುರಿನ; ಕ್ಷತ=ಗಾಯದಂತೆ; ಲಸತ್=ಶೋಭಿಸುವ; ಮಾಣಿಕ್ಯ=ಮಾಣಿಕ್ಯದ; ಪುಷ್ಪಾ=ಹೂವುಳ್ಳವಳೋ; ಓಷ್ಠ=ತುಟಿ ಎಂಬ; ಸತ್=ಒಳ್ಳೆಯ; ಗೋಮೇದಾ= ಗೋಮೇದಿಕಾವುಳ್ಳವಳೋ; ರದ=ಹಲ್ಲುಗಳೆಂಬ; ವಜ್ರ=ವಜ್ರಗಳ; ರುಕ್=ಶೋಭೆವುಳ್ಳ ವಳೋ; ಅಸ್ಯೈ=ಇವಳಿಗೆ; ಶ್ರೀಪತಿಃ=ಕೃಷ್ಣನು; ಸುರತರುಂ=ಪಾರಿಜಾತವನ್ನು; ನ ದದೌ=ಕೊಡಲಿಲ್ಲ

ಸಮಗ್ರವಾಗಿ ರುಗ್ಮಿಣಿಯನ್ನು ವರ್ಣಿಸುತ್ತಾರೆ– ಕೃಷ್ಣನು ಸತ್ಯಭಾಮೆಗೆ ಪಾರಿಜಾತದ ಮರವನ್ನು ಕೊಟ್ಟನು. ರುಗ್ಮಿಣಿಗೆ ಕೊಡಲಿಲ್ಲ. ಯಾಕೆಂದರೆ ರುಗ್ಮಿಣಿಯು ಸ್ವಯಂ ಪಾರಿಜಾತದ ಮರದಂತೆ ಇದ್ದಾಳೆ. ಹೀಗಿರುವಾಗ ಅವಳಿಗೆ ಯಾಕೆ ಎಂದು ಆಲೋಚಿಸಿದನು.

ಇದು ಬಾಹ್ಯ ದೃಷ್ಟಿಯಿಂದ. ಅಂತಃಚಕ್ಷುವಿನಿಂದ ನೋಡಿದಾಗ ರುಗ್ಮಿಣಿ ಭಾಮೆಯರಲ್ಲಿ ಭೇದ ಇಲ್ಲ.

ಈ ಶ್ಲೋಕದಲ್ಲಿ ರುಗ್ಮಿಣಿಗೆ ಪಾರಿಜಾತದ ಹೋಲಿಕೆಯನ್ನು ಕೊಡುತ್ತಾರೆ. ರುಗ್ಮಿಣಿಯು ಬಂಗಾರದ ಬಣ್ಣದ ದೇಹವುಳ್ಳವಳು. ದೇವತೆಗಳ ಪುಷ್ಪವಾದ ಪಾರಿಜಾತದ ಮರವು ಬಂಗಾರದ್ದು. ಉತ್ತಮವಾದ ನೀಲಮಣಿಯಂತಿರುವ ಕಡೆಗಣ್ಣಿನಿಂದ ಕೂಡಿದವಳು ಈಕೆ. ಪಾರಿಜಾತದ ಎಲೆಗಳು ನೀಲಮಣಿಯಿಂದ ರಚಿತಗಳು. ಈಕೆಯ ಕಡೆಗಣ್ಣು ಹಾಗೂ ಎಲೆಗಳು ಸದಾ ಅಲುಗಾಡುತ್ತಾ ಇರುತ್ತವೆ. ಈಕೆಯ ಪಾದದ ಅಡಿಭಾಗವು ಹವಳದಂತೆ ಕೆಂಪಗಿವೆ. ಪಾರಿಜಾತಮರದ ಬೇರುಗಳು ಹವಳದಿಂದ ನಿರ್ಮಿತ. ಈಕೆಯ ಪಾದದ ಅಡಿಭಾಗ ಹಾಗೂ ಮರದ ಬೇರುಗಳು ಎರಡೂ ಕಾಣಿಸುವುದಿಲ್ಲ. ಈಕೆಯ ಮುಖದಲ್ಲಿ ಮಂದಹಾಸ ಇದೆ. ಮರದಲ್ಲಿ ಮುತ್ತುಗಳೇ ಫಲದ ರೂಪದಲ್ಲಿ ಇದೆ. ಮಂದಹಾಸವು ಬೆಳ್ಳಗೆ ಎಂದು ಕವಿಗಳ ವಿಚಾರ. ಮುತ್ತುಗಳೂ ಬಿಳಿ. ಅಟ್ಟಹಾಸವು ದೂರಕ್ಕೂ ಕೇಳಿಸುತ್ತದೆ. ಮಂದಹಾಸವು ಸಮೀಪಕ್ಕೆ ಬಂದಾಗ ಮಾತ್ರ ಗೋಚರಿಸುವುದು. ಅದೇ ರೀತಿ ಈ ಪಾರಿಜಾತಮರದ ಫಲಗಳಾದ ಮುತ್ತುಗಳು ದೂರಕ್ಕೆ ಕಾಣಿಸದೆ ಸಮೀಪದಲ್ಲಿ ಮಾತ್ರ ಗೋಚರಿಸುತ್ತವೆ. ಈ ಮರದ ಗೆಲ್ಲುಗಳು ಮರಕತಮಣಿಗಳಿಂದ ರಚಿತಗಳು. ಆದ್ದರಿಂದ ಕಪ್ಪಗಿವೆ. ಗೆಲ್ಲುಗಳು ಅನೇಕಗಳಿರುತ್ತವೆ. ಈಕೆ ನಾಲ್ಕು ಜಡೆಗಳಿಂದ ಶೋಭಿಸುತ್ತಾಳೆ. ಜಡೆಗಳು ತುಂಬಾ ಕಪ್ಪಗಿವೆ. ಗೆಲ್ಲುಗಳು ಉದ್ದ ಇರುವಂತೆ ಜಡೆಗಳೂ ಉದ್ದ ಇವೆ. ಒಂದೊಂದು ಜಡೆಯಲ್ಲೂ ಅನೇಕ ಕವಲುಗಳಿರುತ್ತವೆ. ಈ ಕವಲುಗಳನ್ನು ಒಂದಕ್ಕೊಂದು ಹೆಣೆದಾಗ ಜಡೆಯಾಗುವುದು. ಗೆಲ್ಲುಗಳಲ್ಲಿಯೂ ಒಂದೊಂದರಲ್ಲೂ ಅನೇಕ ಕವಲುಗಳು ಇರುತ್ತವೆ. ಬೇರುಗಳಿಂದಲೇ ಗೆಲ್ಲುಗಳು ಆರಂಭವಾಗುವುದಿಲ್ಲ. ಬೇರುಗಳನಂತರ ಕಾಂಡ. ಅನಂತರ ಮೇಲ್ಭಾಗದಲ್ಲಿ ಗೆಲ್ಲುಗಳು. ಹಾಗೆಯೇ ಈಕೆಯ ಪಾದಗಳಿಂದಲೇ ಜಡೆ ಆರಂಭವಾಗಿಲ್ಲ. ಮೇಲ್ಭಾಗದಲ್ಲಿ ಜಡೆಗಳು ಇವೆ. ಎಲೆಯ ಬಣ್ಣ ಹಾಗೂ ಗೆಲ್ಲುಗಳ ಬಣ್ಣ ಬೇರೆಬೇರೆ. ವೈಡೂರ್ಯದ ಬಣ್ಣ ಕೆಂಪುಮಿಶ್ರಿತ ಬಿಳಿ. ಇಂತಹ ಉಗುರುಗಳು ಈಕೆಯ ಬೆರಳುಗಳಲ್ಲಿವೆ. ಈಕೆಯ ಮೈಯಲ್ಲಿ ಕೃಷ್ಣನ ಬೆರಳುಗಳ ಉಗುರುಗಳಿಂದ ಆದ ಗಾಯಗಳಿವೆ. ಈ ಗಾಯಗಳು ಹಳದಿಮಿಶ್ರಿತ ಕೆಂಪುಗಳು. ಇದು ಮಾಣಿಕ್ಯದ ಬಣ್ಣ. ಮರದಲ್ಲಿ ಮಾಣಿಕ್ಯಗಳೇ ಹೂವುಗಳು. ತೊಂಡೆಕಾಯಿಯ ಆಕಾರ ಗೋಮೇದಿಕ ಮಣಿಗೆ. ಈಕೆಯ ತುಟಿಯು ಗೋವೇದಿಕಾಮಣಿಯ ಆಕಾರದಲ್ಲಿದೆ. ವಜ್ರದಂತೆ ಗಟ್ಟಿಯಾದ ಬಿಳಿಯಾದ ಹಲ್ಲುಗಳು ಈಕೆಗಿವೆ. ನವರತ್ನಗಳ ಪೈಕಿ ಕೆಲವು ರತ್ನಗಳು ಮರದ ಕೆಲವು ಭಾಗಗಳಾಗಿವೆ. ಉಳಿದ ರತ್ನಗಳೂ ಈ ಮರದಲ್ಲಿವೆ. ಈ ದೇವಪಾರಿಜಾತಮರವು ಮಾಣಿಕ್ಯವೆಂಬ ಹೂವುಗಳನ್ನು ಮಾತ್ರ ಕೊಡದೆ ಇತರ ರತ್ನರೂಪ ಫಲಗಳನ್ನೂ ಕೊಡುತ್ತದೆ. ಯಾಕೆಂದರೆ ಈ ಮರವು ನವರತ್ನಭರಿತವು. ಈ ರೀತಿ ಈಕೆಯು ನವರತ್ನಭರಿತವಾದ ಪಾರಿಜಾತದಂತೆ ಇದ್ದಾಳೆ. ಆದ್ದರಿಂದ ಅವಳಿಗೆ ಪಾರಿಜಾತದ ಮರವನ್ನು ಕೃಷ್ಣನು ಕೊಡಲಿಲ್ಲ.

**ಕಾರ್ಶ್ಯಂ ಕಾಯೇ ಮನೋಜ್ಞೇ ಕಚಭರಕರಯೋರ್ಲಂಬಮಾನತ್ವದೈರ್ಘ್ಯೇ**
**ಚಕ್ಷುರ್ಮಧ್ಯೋರುದೇಶೇಷ್ವಧಿಕಚಪಲತಾ ದೃಶ್ಯತಾ ಮಾರ್ದವಾನಿ ।**
**ತತ್ತೇ ತಾನಿ ಕ್ರಮೇಣ ದ್ವಿರದಪರಿಲಸತ್ಕುಂಭ ಶೋಭಾಪಹಾರಿ–**
**ಣ್ಯಸ್ತಿ ಸ್ತಃ ಸಂತಿ ಲಕ್ಷ್ಮ್ಯಾಃ ಕುಚಕಲಶತಟೇ ನಾಸ್ತಿ ನಸ್ತೋ ನ ಸಂತಿ ॥ ೬ ॥**

ಲಕ್ಷ್ಮ್ಯಾಃ=ರುಗ್ಮಿಣಿಯ; ಮನೋಜ್ಞೇ=ಚಂದದ; ಕಾಯೇ=ದೇಹದಲ್ಲಿ; ಕಾರ್ಶ್ಯಂ= ಕೃಶತ್ವವು; ಅಸ್ತಿ=ಇದೆ; ಕಚ=ಕೂದಲುಗಳ; ಭರ=ಸಮೂಹದಲ್ಲಿ; ಕರಯೋಃ=ಕೈಗಳಲ್ಲಿ; ಲಂಬಮಾನತ್ವ=ನೇತಾಡುವಿಕೆ; ದೈರ್ಘ್ಯಂ=ಉದ್ದವಾಗಿರುವಿಕೆಯು; ಸ್ತಃ=ಇದೆ; ಚಕ್ಷುಃ= ಕಣ್ಣುಗಳಲ್ಲಿ; ಮಧ್ಯ=ಉದರದಲ್ಲಿ; ಊರುದೇಶೇಷು=ತೊಡೆಪ್ರದೇಶದಲ್ಲಿ; ಅಧಿಕ=ಬಹಳ; ಚಪಲತಾ=ಚಾಂಚಲ್ಯವು; ಅದೃಶ್ಯತಾ=ಕಾಣದಿರುವಿಕೆಯು; ಮಾರ್ದವಾನಿ=ಮೃದುತ್ವವು; ಸಂತಿ=ಇದೆ; ತತ್=ಅದು; ತೇ=ಅವುಗಳ ಎರಡು; ತಾನಿ=ಅವುಗಳು ಮೂರು; ದ್ವಿರದ= ಆನೆಯ; ಪರಿಲಸತ್=ಶೋಭಿಸುವ; ಕುಂಭ=ಕುಂಭಸ್ಥಳದ; ಶೋಭ=ಕಾಂತಿ ಯನ್ನು; ಅಪಹಾರಿಣಿ=ಅಪಹರಿಸುವ; ಕುಚ=ಸ್ತನಗಳೆಂಬ; ಕಲಶ=ಕಲಶಗಳ; ತಟೆ=ಪ್ರದೇಶದಲ್ಲಿ; ನ ಅಸ್ತಿ=ಇಲ್ಲ; ನಸ್ತಃ=ಇಲ್ಲ; ನ ಸಂತಿ=ಇಲ್ಲ.

ನಾರಿಯರ ದೇಹದ ಲಕ್ಷಣಗಳನ್ನು ರುಗ್ಮಿಣಿಯ ದೇಹದಲ್ಲಿ ವರ್ಣಿಸುತ್ತಾರೆ. ಜೊತೆಗೆ ಶಬ್ದಚಮತ್ಕಾರವನ್ನೂ ಮೆರೆಯುತ್ತಾರೆ. ದೇಹದ ಯಾವ ಭಾಗದಲ್ಲಿ ಯಾವ ಧರ್ಮ ಇರಬೇಕು, ಯಾವ ಭಾಗದಲ್ಲಿ ಯಾವ ಧರ್ಮ ಇರಬಾರದು ಎಂದು ತಿಳಿಸುತ್ತಾರೆ. ಹಾಗೆ ತಿಳಿಸುವಾಗ ಧರ್ಮಗಳನ್ನು ಒಂದು ಧರ್ಮ, ಎರಡು ಧರ್ಮ, ಮೂರು ಧರ್ಮಗಳೆಂದು ವಿಭಾಗಮಾಡುತ್ತಾರೆ. ಇವುಗಳನ್ನು ತಿಳಿಸಲು ಕರ್ತೃಪದವಾಗಿ ಸರ್ವನಾಮ ಶಬ್ದವನ್ನು ಏಕವಚನ, ದ್ವಿವಚನ, ಬಹುವಚನವಾಗಿ ಜೊತೆಗೆ ಬಳಸುತ್ತಾರೆ. ಹಾಗೆಯೇ ಕ್ರಿಯಾಪದವನ್ನು ಮೂರುವಚನಗಳಿಂದ ಜೊತೆಗೇ ಬಳಸುವುದು ಸುಲಭದ ಮಾತಲ್ಲ.

ನಾರಿಯರ ಇಡೀ ದೇಹವು ಕೃಶವಾಗಿರಬೇಕು –ಇದು ಒಂದು ಧರ್ಮ. ತಲೆಕೂದಲು ಹಾಗೂ ಕೈಗಳು ಉದ್ದವಾಗಿರಬೇಕು ಹಾಗೂ ನೇತಾಡುತ್ತಿರಬೇಕು –ಇವು ಎರಡು ಧರ್ಮಗಳು. ಇವಳ ತಲೆಕೂದಲು ಹಾಗೂ ಕೈಗಳು ಹಾಗೆಯೇ ಇವೆ. ಕಣ್ಣು, ಹೊಟ್ಟೆ, ತೊಡೆಗಳು ಮೂರು ಭಾಗಗಳು. ಇವುಗಳಲ್ಲಿ ಕ್ರಮವಾಗಿ ಚಾಂಚಲ್ಯ, ಅದೃಶ್ಯತ್ವ ಅಂದರೆ ಕೃಶತ್ವ, ಮೃದುತ್ವಗಳೆಂಬ ಮೂರು ಧರ್ಮಗಳಿರಬೇಕು. ಹಾಗೆಯೇ ಇವೆ. ಈ ರೀತಿ ಮೂರು ವಿಭಾಗಮಾಡಿದ ಮೂರು ರೀತಿಯ ಧರ್ಮಗಳು –ಒಂದು ಕೃಶತ್ವ, ಎರಡು ದೀರ್ಘತ್ವ ಹಾಗೂ ನೇತಾಡುವಿಕೆ. ಮೂರು ಚಾಂಚಲ್ಯ. ಅದೃಶ್ಯತ್ವ, ಮೃದುತ್ವಗಳು ನಾರಿಯರ ಸ್ತನಗಳಲ್ಲಿ ಇರಬಾರದು. ಈಕೆಯ ಎರಡು ಸ್ತನಗಳು ಆನೆಯ ಕುಂಭಸ್ಥಳವನ್ನೂ ನಾಚಿಸುವಂತದ್ದು. ದಷ್ಟಪುಷ್ಟವಾದ ಸ್ತನಗಳು. ಇವುಗಳಲ್ಲಿ ದೇಹದಲ್ಲಿರುವ ಆ ಕೃಶತ್ವ ಇಲ್ಲ. ಒಂದು ಧರ್ಮವಾದ ಕೃಶತ್ವವನ್ನು ತಿಳಿಸಲು ಸರ್ವನಾಮದ 'ತತ್' ಎಂಬ

ಶಬ್ದವನ್ನು ಏಕವಚನದಲ್ಲಿ ಬಳಸಿದ್ದಾರೆ. ಇಲ್ಲ ಎಂದು ತಿಳಿಸಲು ಕ್ರಿಯಾಪದವನ್ನು 'ನಾಸ್ತಿ' ಎಂದು ಏಕವಚನದಲ್ಲಿ ಬಳಸಿದ್ದಾರೆ. ಸ್ತನಗಳು ಉದ್ದವಾಗಿ ನೇತಾಡುತ್ತಿದ್ದರೆ ಅದು ಮುದಿತನದ ಲಕ್ಷಣ. ಇವಳು ನವತರುಣಿ. ಸ್ತನಗಳು ಉರುಟಾಗಿವೆ. ಆದ್ದರಿಂದಲೇ ನೇತಾಡುತ್ತಿಲ್ಲ. ಇವು ಎರಡು ಧರ್ಮಗಳು. ಇವು ದ್ವಿವಚನದ 'ತೇ' ಎಂಬುದನ್ನು ಇಲ್ಲ ಎನ್ನುವುದಕ್ಕೆ ಧಾತುವಿನ 'ನ ಸ್ತಃ' ಎಂದೂ ಉಪಯೋಗಿಸಿದ್ದಾರೆ. ಸ್ತನಗಳು ಸ್ಥಿರವಾಗಿರಬೇಕು. ಬಟ್ಟೆ ತುಂಬಾ ಹೊದ್ದುಕೊಂಡರೂ ಎದ್ದು ಕಾಣುವಂತಿರಬೇಕು; ಕಠಿಣವಾಗಿರಬೇಕು –ಇವು ಮೂರು ಧರ್ಮಗಳು. ಇವುಗಳು ಸ್ತನಗಳಿಗಿರಬೇಕು. ಕಣ್ಣು, ಉದರ, ತೊಡೆಗಳಲ್ಲಿರುವ ಧರ್ಮಗಳು ಸ್ತನಗಳಲ್ಲಿ ಇಲ್ಲ. ಈ ಮೂರು ಧರ್ಮಗಳನ್ನು ತಿಳಿಸಲು 'ತಾನಿ' ಎಂದು ಬಹುವಚನದ ಶಬ್ದವನ್ನೂ ಇಲ್ಲ ಎನ್ನಲು 'ನ ಸಂತಿ' ಎಂಬ ಕ್ರಿಯಾಪದವನ್ನೂ ಬಳಸಿದ್ದಾರೆ.

ಈ ಶ್ಲೋಕದ ಚಮತ್ಕಾರವನ್ನು ನೋಡಿದಾಗ ವಾಣಿಯು ರಾಜರು ಹೇಳಿದಂತೆ ಕುಣಿಯುತ್ತಾಳೆ ಎಂದು ಅರ್ಥವಾಗುತ್ತದೆ.

**ಭ್ರೂಮಧ್ಯಲಗ್ನ ಮೃಗನಾಭಿಲಲಾಮರೇಖಾ**
**ಶ್ರೀಶ್ರೀಶಯೋರನುಕರೋತಿ ಹಿ ನೀಲನೀಲಾ ।**
**ಶಾಣೋಪಲೋಪರಿಗತಂ ರಣಧೀರಮಾರ–**
**ಚಾಪಾನುಷಕ್ತಮಸಿತೋತ್ಪಲಚಾರು ಬಾಣಮ್** ॥ ೭ ॥

ಶ್ರೀ=ರುಗ್ಮಿಣಿಯು; ಶ್ರೀಶ=ಕೃಷ್ಣನ; ನೀಲನೀಲ=ಅತ್ಯಂತ ನೀಲವಾದ; ಭ್ರೂ= ಹುಬ್ಬುಗಳ; ಮಧ್ಯ=ಮಧ್ಯದಲ್ಲಿ; ಲಗ್ನ=ಇರುವ; ಮೃಗನಾಭಿಃ=ಕಸ್ತೂರಿಯ; ಲಲಾಮ= ತಿಲಕದ; ರೇಖಾ=ರೇಖೆಯು; ಶಾಣ=ಹರಿತಮಾಡುವ; ಉಪಲ=ಕಲ್ಲಿನ; ಉಪರಿ=ಮೇಲೆ; ಗತಂ=ಇರುವ; ರಣ=ಯುದ್ಧದಲ್ಲಿ; ಧೀರ=ಧೀರನಾದ; ಮಾರ=ಕಾಮನ; ಚಾಪ=ಬಿಲ್ಲಿನಲ್ಲಿ; ಅನುಷಕ್ತಂ=ಇರುವ; ಅಸಿತ=ನೀಲವಾದ; ಉತ್ಪಲ=ನೈದಿಲೆಯೆಂಬ; ಚಾರು=ಚಂದದ; ಬಾಣಂ=ಬಾಣವನ್ನು; ಅನುಕರೋತಿ=ಅನುಸರಿಸುತ್ತಿದೆ.

ಈ ದಂಪತಿಗಳು ತಮ್ಮ ಹಣೆಗಳಲ್ಲಿ ಎರಡು ಹುಬ್ಬುಗಳ ಮಧ್ಯದಲ್ಲಿ ಕಸ್ತೂರೀತಿಲಕವನ್ನು ಉದ್ದವಾಗಿ ಇಟ್ಟುಕೊಂಡಿದ್ದಾರೆ. ತುಂಬಾ ಕಪ್ಪಗಿರುವ ತಿಲಕ. ಇದು ಯುದ್ಧಕ್ಕೆ ಹೊರಟ ಮನ್ಮಥನ ಬಾಣದಂತೆ ತೋರುತ್ತದೆ. ಮನ್ಮಥನ ಐದು ಬಾಣಗಳಲ್ಲಿ ಒಂದು ಬಾಣ ನೈದಿಲೆಹೂ. ನೈದಿಲೆಯ ಬಣ್ಣ ನೀಲ. ಹಣೆಯಲ್ಲಿ ಇಟ್ಟುಕೊಂಡಿರುವ ತಿಲಕವೂ ಕಸ್ತೂರಿಯದ್ದಾದ್ದರಿಂದ ನೀಲ. ಎರಡು ಹುಬ್ಬುಗಳು ಬಿಲ್ಲಿನಂತೆ ಇವೆ. ಬಾಣವನ್ನು ಬಿಲ್ಲಿನ ಮಧ್ಯದಲ್ಲಿ ಜೋಡಿಸುತ್ತಾರೆ. ಯುದ್ಧಕ್ಕೆ ಹೊರಡುವಾಗ ಬತ್ತಳಿಕೆಯಲ್ಲಿರುವ ಬಾಣಗಳು ಹರಿತ ಇರದಿದ್ದರೂ ಅದನ್ನು ಬಿಲ್ಲಿಗೆ ಜೋಡಿಸುವಾಗ

ಅದನ್ನು ಹರಿತಮಾಡುತ್ತಾರೆ. ಅದಕ್ಕಾಗಿಯೇ ಒಂದು ಕಲ್ಲು ಇದೆ. ಅದಕ್ಕೆ ಸಾಣೆಕಲ್ಲು ಎಂದು ಹೆಸರು. ಈ ದಂಪತಿಗಳ ಹಣೆಗಳು ಆ ಕಲ್ಲಿನಂತೆ ಅಗಲವಾಗಿದೆ. ಹಣೆಯಲ್ಲಿ ಈ ತಿಲಕ ಇರುವುದರಿಂದ ಹರಿತ ಮಾಡುವುದಕ್ಕಾಗಿ ಸಾಣೆಕಲ್ಲಿಗೆ ತಿಕ್ಕುವುದಕ್ಕೋಸ್ಕರ ಇಟ್ಟಂತೆ ಕಾಣುತ್ತದೆ. ತಿಲಕವನ್ನು ಉರುಟಾಗಿ ಇಡದೆ ಉದ್ದವಾಗಿ ಇಟ್ಟುಕೊಂಡಿದ್ದಾರೆ. ತಿಲಕದ ತುದಿಯು ಬಾಣದ ತುದಿಯಂತೆ ಮೊನಚಾಗಿದೆ. ಈ ರೀತಿಯಾಗಿ ಎಲ್ಲ ವಿಧದಲ್ಲಿಯೂ ಹೋಲಿಕೆ ಇದೆ.

**ನಿತ್ಯಂ ಪರಸ್ಪರ ಮನೋರಮಗಾತ್ರಸಂಗಾತ್**
**ಮತ್ತಾಲಿರಕ್ತಸರಸೀರುಹಕಾಂತಿಮಂತೌ ।**
**ಲಕ್ಷ್ಮೀರಮಾರಮಣಯೋರ್ಜಗದಾದಿಪಿತ್ರೋಃ**
**ಅಸ್ಮಾಕಮೀಪ್ಸಿತಫಲಂ ಕುರುತಾಂ ಕಟಾಕ್ಷೌ ॥ ೮ ॥**

ನಿತ್ಯಂ=ಯಾವಾಗಲೂ; ಪರಸ್ಪರ=ಅನ್ಯೋನ್ಯವಾಗಿ; ಮನೋರಮ=ಚಂದದ; ಗಾತ್ರ=ದೇಹಗಳ; ಸಂಗಾತ್=ಸಂಬಂಧದಿಂದ; ಮತ್ತ=ಮದಭರಿತವಾದ; ಅಲಿ=ಭ್ರಮರದ; ರಕ್ತ=ಕೆಂಪಾದ; ಸರಸೀರುಹ=ತಾವರೆಯ; ಕಾಂತಿಮಂತೌ=ಕಾಂತಿವುಳ್ಳ; ಜಗತ್= ಲೋಕದ; ಆದಿಪಿತ್ರೋಃ=ಮೊದಲಿನ ಪಿತೃಗಳಾದ; ಲಕ್ಷ್ಮೀ=ರುಗ್ಮಿಣಿಯ; ರಮಾ= ರಮೆಯ; ರಮಣಯೋಃ=ಪತಿಯ; ಕಟಾಕ್ಷೌ=ಕಡೆಗಣ್ಣುಗಳು; ಅಸ್ಮಾಕಂ=ನಮಗೆ; ಈಪ್ಸಿತ= ಹೊಂದಲು ಯೋಗ್ಯವಾದ; ಫಲಂ=ಫಲವನ್ನು; ಕುರುತಾಂ=ಮಾಡಲಿ.

ಈ ದಂಪತಿಗಳು ತಮ್ಮ ಕಣ್ಣುಗಳಿಂದ ಪರಸ್ಪರ ಶರೀರಗಳನ್ನು ನೋಡುತ್ತಾರೆ. ಕೃಷ್ಣನ ಮೈಬಣ್ಣ ನೀಲ. ಇದನ್ನು ನೋಡುವ ರುಗ್ಮಿಣಿಯ ಕಣ್ಣುಗಳು ನೀಲವಾಗಿ ತೋರುತ್ತವೆ. ಕೃಷ್ಣನ ಮೈಯ ಬಣ್ಣವು ಅವಳ ಕಣ್ಣುಗಳಲ್ಲಿ ಪ್ರತಿಫಲಿಸುತ್ತದೆ. ಇದರಿಂದಾಗಿ ಮಕರಂದವನ್ನು ಪಾನಮಾಡಿ ಮದವೇರಿದ ದುಂಬಿಯಂತೆ ತೋರುತ್ತಿತ್ತು. ಈಕೆಯ ಮೈಬಣ್ಣ ಬಂಗಾರದ್ದು. ಇದರಲ್ಲಿ ನೆಟ್ಟದ್ದು ಕೃಷ್ಣನ ದೃಷ್ಟಿ. ಈ ಕಣ್ಣಲ್ಲಿ ಅವಳ ಮೈಬಣ್ಣವು ಪ್ರತಿಫಲಿಸುತ್ತದೆ. ಇದರಿಂದಾಗಿ ಈತನ ಕಣ್ಣುಗಳು ಹಳದಿಮಿಶ್ರಿತ ನೀಲಬಣ್ಣದ ತಾವರೆಯಂತೆ ಕಾಣುತ್ತಿತ್ತು. ಇವರು ಜಗತ್ತಿಗೇ ಪಿತೃಗಳು. ಇವರು ಪರಸ್ಪರರ ದೇಹಗಳನ್ನು ತಮ್ಮ ಕಣ್ಣುಗಳಲ್ಲಿ ತುಂಬಿಕೊಳ್ಳುತ್ತಾರೆ. ಹಾಗೆಯೇ ನಮ್ಮ ದೇಹಗಳನ್ನು ತಮ್ಮ ಕಣ್ಣುಗಳಲ್ಲಿ ತುಂಬಿಕೊಳ್ಳಲಿ. ತನ್ಮೂಲಕ ನಮ್ಮ ಅಭೀಷ್ಟಗಳನ್ನು ದಯಪಾಲಿಸಲಿ, ನಮ್ಮನ್ನು ರಕ್ಷಿಸಲಿ.

**ರಕ್ತಾರಮಾರಾಮಕಟಾಕ್ಷಲಕ್ಷ್ಮೀರ್ಲಕ್ಷೀಕರೋತ್ವಸ್ಮದಮಿತ್ರವರ್ಗಮ್ ।**
**ಸೈವಾನುರಕ್ತಾ ವಿಧಿಶರ್ವಪೂರ್ವಸೌಭಾಗ್ಯದಾತ್ರೀ ಶರಣಾಗತಂ ಮಾಮ್ ॥ ೯ ॥**

ರಮಾ=ರುಗ್ಮಿಣಿಯ; ರಾಮ=ಕೃಷ್ಣನ; ಕಟಾಕ್ಷ=ಕಡೆಗಣ್ಣಿನ; ಲಕ್ಷ್ಮೀಃ=ಕಾಂತಿಯು; ರಕ್ತಾ=ಕೆಂಪಾಗಿ; ಅಸ್ಮತ್=ನಮ್ಮ; ಅಮಿತ್ರ=ಶತ್ರುಗಳ; ವರ್ಗಂ=ಗುಂಪನ್ನು;

ಲಕ್ಷೀಕರೋತು=ಮೊದಲಾದವರಿಗೆ; ಸೌಭಾಗ್ಯ=ಸಂಪತ್ತನ್ನು; ದಾತ್ರೀ=ಕೊಡುವ; ಸ ಏವ=ಅದೇ ಕಣ್ಣು; ಅನುರಕ್ತಾ=ಕೊನೆ ಭಾಗದಲ್ಲಿ ಕೆಂಪಾಗಿ; ಶರಣಾಗತಂ=ಶರಣು ಬಂದಿರುವ; ಮಾಂ=ನನ್ನನ್ನು; ಲಕ್ಷೀಕರೋತು=ಗುರಿಯಾಗಿಸಲಿ.

ಈ ದಂಪತಿಗಳ ಕಣ್ಣುಗಳು ಒಮ್ಮೊಮ್ಮೆ ಪೂರ್ಣ ಕೆಂಪಾಗುತ್ತವೆ. ಆಗ ಇಂತಹ ದೃಷ್ಟಿಗೆ ಕಲಿಯೇ ಮೊದಲಾದ ನಮ್ಮ ವಿರೋಧಿಗಳು ಬಲಿಯಾಗಲಿ. ಕಡೆಗಣ್ಣು ಮಾತ್ರ ಕೆಂಪಾಗುವುದು ಕಣ್ಣಿನ ಲಕ್ಷಣ. ಇಂತಹ ದೃಷ್ಟಿಗೆ ವಿಷಯರಾಗಿಯೇ ಬ್ರಹ್ಮಾದಿ ದೇವತೆಗಳು ಸಕಲಸಂಪತ್ತನ್ನು ಪಡೆದದ್ದು. ಬೇರೆ ಗತಿಯಿಲ್ಲದ ನಾನು ಇವರಿಗೆ ಮೊರೆಹೊಂದಿದ್ದೇನೆ. ಇಂತಹ ನನ್ನಲ್ಲಿ ಇವರ ಸಂಪತ್ಕರವಾದ ದೃಷ್ಟಿಯು ಬೀಳಲಿ.

**ಮುಕುಟರವಿಭಿಯಾಽಧೋ ಲಂಬಮಾನಂ ಮುಖೇಂದು-**
**ಪ್ರವಿಲಸದುರುಭಾಸಾ ಚೋನ್ಮುಖಂ ತನ್ಮುಖಸ್ಥಂ ।**
**ಕುಟಿಲಮಲಕರಾಶಿಂ ಕರ್ಣನೀಲೋತ್ಪಲಶ್ರೀ-**
**ಪರಿಹೃತನಿಜದೈನ್ಯಂ ತರ್ಕಯಾಮ್ಯಂಧಕಾರಮ್ ॥ ೧೦ ॥**

ಮುಕುಟ=ಕಿರೀಟವೆಂಬ; ರವಿ=ಸೂರ್ಯನ; ಭಿಯಾ=ಭಯದಿಂದ; ಅಧಃ=ಕೆಳಗೆ; ಲಂಬಮಾನಂ=ಇಳಿದಿರುವ; ಮುಖ=ಮುಖವೆಂಬ; ಇಂದು=ಚಂದ್ರನ; ಪ್ರವಿಲಸತ್=ಶೋಭಿಸುವ; ಉರು=ಶ್ರೇಷ್ಠ; ಭಾಸಾ=ಕಾಂತಿಯಿಂದ; ಉನ್ಮುಖಂ=ಮೇಲ್ಮುಖವಾದ; ತತ್=ಅವರ; ಮುಖ=ಮುಖದಲ್ಲಿ; ಸ್ಥಂ=ಇರುವ; ಕರ್ಣ=ಕಿವಿಗಳ; ನೀಲೋತ್ಪಲ=ನೈದಿಲೆಯ; ಶ್ರೀ=ಕಾಂತಿಯಿಂದ; ಪರಿಹೃತ=ಕಡಿಮೆಯಾದ; ನಿಜ=ತನ್ನ; ದೈನ್ಯಂ=ದೀನತೆವುಳ್ಳ; ಕುಟಿಲಂ=ವಕ್ರವಾದ; ಅಲಕ=ಮುಂಗುರುಳುಗಳ; ರಾಶಿಂ=ರಾಶಿಯುನ್ನು; ಅಂಧಕಾರಂ=ಕತ್ತಲೆಯನ್ನಾಗಿ; ತರ್ಕಯಾಮಿ=ಚಿಂತಿಸುತ್ತೇನೆ.

ಮುಂಗುರುಳುಗಳ ವರ್ಣನೆ- ಹಣೆಗಳಲ್ಲಿ ನೇತಾಡುವ ಮುಂಗುರುಳುಗಳು ದಟ್ಟವಾದ ಕತ್ತಲೆಯಂತೆ ಇದೆ. ಈ ಕತ್ತಲೆ ತಲೆಯಿಂದ ಕೆಳಗೆ ಇಳಿಯಿತು. ಯಾಕೆಂದರೆ ತಲೆಯಲ್ಲಿ ಸೂರ್ಯನಂತೆ ಜ್ವಲಿಸುವ ಕಿರೀಟ ಇದೆ. ಸೂರ್ಯ ಇದ್ದಲ್ಲಿ ಕತ್ತಲೆ ಇರಲು ಭಯಪಡುತ್ತದೆ. ಆದ್ದರಿಂದ ಕೆಳಗೆ ಇಳಿಯಿತು. ಪೂರ್ತಿ ಕೆಳಗೆ ಇಳಿಯೋಣವೆಂದರೆ ಕೆಳಗೆ ಮುಖವೆಂಬ ಚಂದ್ರನ ಬೆಳಕು ಬಹಳ ಇದೆ. ಈ ಬೆಳಕಿನ ಭಯದಿಂದ ಪುನಃ ಸ್ವಲ್ಪ ಮೇಲೇರಿತು. ಅಂದರೆ ಮುಂಗುರುಳು ವಕ್ರವಾಗಿ ಮೇಲ್ಮುಖವಾಗಿ ಇರುವುದು ಸಹಜ. ಈ ಮುಂಗುರುಳುಗಳು ವಕ್ರವಾಗಿವೆ ಎಂದರ್ಥ. ಈ ಎರಡು ಬೆಳಕುಗಳ ಭಯ ಇರುವುದಾದರೆ ಇವುಗಳ ಮಧ್ಯದಲ್ಲಿ ಯಾಕೆ ಇರಬೇಕು? ಅಂದರೆ ಈ ಕತ್ತಲೆಗೆ ಧೈರ್ಯತುಂಬಲು ಕಿವಿಯಲ್ಲಿ ಇಟ್ಟುಕೊಂಡಿರುವ ನೈದಿಲೆಗಳಿವೆ. ಇವರಿಬ್ಬರು ತಮ್ಮ ಕಿವಿಗಳಲ್ಲಿ ನೈದಿಲೆಗಳನ್ನು ಇಟ್ಟುಕೊಂಡಿದ್ದಾರೆ. ನೈದಿಲೆಗೂ ರಾತ್ರಿಗೂ ಜೊತೆಯಾಗುತ್ತದೆ.

ನೈದಿಲೆಗೂ ಚಂದ್ರನಿಗೂ ಗೆಳೆತನವಿದೆ. ನೈದಿಲೆ ಹಾಗೂ ಕತ್ತಲೆಯ ಬಣ್ಣವು ಸುಮಾರಾಗಿ ಒಂದೇ ರೀತಿ. ಆದ್ದರಿಂದ ಚಂದ್ರನ ಕಾಂತಿಯು ಈ ಕತ್ತಲೆಯನ್ನು ಓಡಿಸುವುದಿಲ್ಲ. ತನಗೆ ಮಿತ್ರನು ಸಿಕ್ಕಿದ್ದರಿಂದ ಸೂರ್ಯನ ಬೆಳಕಿಗೂ ಹೆದರಬೇಕಾಗಿಲ್ಲ. ಆದ್ದರಿಂದ ಈ ಎರಡು ಪ್ರಕಾಶಗಳ ಮಧ್ಯದಲ್ಲಿ ಈ ಮುಂಗುರುಳೆಂಬ ಅಂಧಕಾರವೂ ಇದೆ. ಈ ಮುಂಗುರುಳು ಕತ್ತಲೆಯಂತೆ ಕಪ್ಪಾಗಿದೆ ಎಂದು ಅಭಿಪ್ರಾಯ.

**ಉತ್ತುಂಗನೀಲಚಮರೀಮೃಗಬಾಲಭಾರ–**
**ಕಲ್ಪಂ ಸ್ಫುರದ್ವಿವಿಧರತ್ನಲಸತ್ಕಿರೀಟಮ್ ।**
**ಉತ್ಫುಲ್ಲಪುಷ್ಪನಿಕರಾಕರಮುಜ್ವಲಂತಂ**
**ನಿತ್ಯಂ ಸ್ಮರಾಮಿ ಕಮಲಾಚ್ಯುತ ಮೌಲಿದೇಶಮ್** ॥ ೧೧ ॥

ಉತ್ತುಂಗ=ದೊಡ್ಡ; ನೀಲ=ಕಪ್ಪಾದ; ಚಮರೀಮೃಗ=ಚಮರೀ ಎಂಬ ಮೃಗದ; ಬಾಲ=ಬಾಲನ; ಭಾರ=ರೋಮಕ್ಕೆ; ಕಲ್ಪಂ=ಸಮಾನವಾದ; ಸ್ಫುರತ್=ಹೊಳೆಯುವ; ವಿವಿಧ=ನಾನಾ; ರತ್ನ=ರತ್ನಗಳಿಂದ; ಲಸತ್=ಶೋಭಿಸುವ; ಕಿರೀಟಮ್=ಕಿರೀಟವುಳ್ಳ; ಉತ್ಫುಲ್ಲ=ಅರಳಿದ; ಪುಷ್ಪ=ಹೂಗಳ; ನಿಕರ=ಸಮೂಹಕ್ಕೆ; ಆಕರಂ=ಆಶ್ರಯವಾದ; ಉಜ್ವಲಂ=ಹೊಳೆಯುವ; ತಂ=ಆ; ಕಮಲಾ=ರಮೆಯ; ಅಚ್ಯುತ=ಕೃಷ್ಣನ; ಮೌಲಿದೇಶಂ= ತಲೆಯನ್ನು; ನಿತ್ಯಂ=ಸದಾ; ಸ್ವರಾಮಿ=ಸ್ಮರಿಸುತ್ತೇನೆ.

ತಲೆಯ ವರ್ಣನೆ– ತಲೆತುಂಬಾ ಕೂದಲು. ತುಂಬಾ ಕಪ್ಪಾಗಿದೆ. ಚಮರೀ ಎಂಬ ಮೃಗದ ಬಾಲದ ಗೊಂಡೆಯಿಂದ ಚಾಮರವನ್ನು ಮಾಡುತ್ತಾರೆ. ಆ ಪ್ರಾಣಿ ಬಿಳಿ. ಅದರ ಬಾಲದ ಗೊಂಡೆಯಾದ ಚಾಮರವೂ ಬಿಳಿ. ಒಂದುವೇಳೆ ಆ ಪ್ರಾಣಿಯು ಕಪ್ಪಾಗಿದ್ದರೆ ಅದರ ಬಾಲದ ದಟ್ಟವಾದ ಕಪ್ಪಾದ ರೋಮಗಳಂತೆ ಇವರ ತಲೆಕೂದಲುಗಳಿವೆ. ನವರತ್ನಗಳಿಂದ ಖಚಿತವಾದ ಕಿರೀಟಗಳು ತಲೆಯಲ್ಲಿ ಇವೆ. ಅರಳಿದ ಒಳ್ಳೆಯ ಪರಿಮಳದ ಹೂಗಳನ್ನು ತಲೆಗೆ ಮುಡಿದುಕೊಂಡಿದ್ದಾರೆ. ಇಂತಹ ತಲೆಗಳು ಇವರಿಬ್ಬರದು. ಈ ತಲೆಗಳನ್ನು ಸದಾ ನಾನು ಸ್ಮರಿಸುತ್ತೇನೆ.

**ಇತ್ಥಂ ಜಾಂಬವತೀಮುವಾಹ ಸವಿಭುಃ ಸಲ್ಲಕ್ಷಣಾಂ ಲಕ್ಷಣಾಂ**
**ಸತ್ಯಾಂ ಸರ್ವಗುಣಾಕರಾಂ ಶಶಿಮುಖೀಂ ನೀಲಾಂ ಚ ನೀಲಾಲಕಾಮ್ ।**
**ಕಾಲಿಂದೀ ಕಲಕಂಠಕಂಠನಿನದಾಂ ಸ್ವಾಂ ಮಿತ್ರವಿಂದಾಂ ತಥಾ**
**ಬಾಲಾ ಭೂಮಿಹೃತಾಶ್ಚ ಬಹುಶೋ ದ್ವಾರಾವತೀವಲ್ಲಭಃ** ॥ ೧೨ ॥

ಇತ್ಥಂ=ಈ ರೀತಿಯಾಗಿ; ದ್ವಾರಾವತೀ=ದ್ವಾರಾವತಿಯ; ವಲ್ಲಭಃ=ಸ್ವಾಮಿಯು; ಸಃ=ಕೃಷ್ಣನು; ವಿಭುಃ=ಶಕ್ತನು; ಜಾಂಬವತೀಂ=ಜಾಂಬವತಿಯನ್ನು; ಸತ್=ಒಳ್ಳೆಯ; ಲಕ್ಷಣಾಂ=ಲಕ್ಷಣವುಳ್ಳ; ಲಕ್ಷಣಾಂ=ಲಕ್ಷಣೆಯನ್ನು; ಸರ್ವ=ಎಲ್ಲಾ; ಗುಣ=ಗುಣಗಳಿಗೆ;

ಆಕರಾಂ=ಆಶ್ರಯಳಾದ; ಸತ್ಯಾಂ=ಸತ್ಯಭಾಮೆಯನ್ನು; ಶಶಿಮುಖೀಂ=ಚಂದ್ರಮುಖಿ ಯಾದ; ನೀಲಾಂ=ನೀತಿಯನ್ನು; ನೀಲ=ಕಪ್ಪಾದ; ಅಲಕಾಂ=ಮುಂಗುರುಳುಳ್ಳ; ಕಾಲಿಂದೀಂ=ಕಾಲಿಂದಿಯನ್ನು; ಕಲಕಂಠ=ಕೋಗಿಲೆಯ; ಕಂಠ=ಧ್ವನಿಯಂತೆ; ನಿನದಾಂ=ಧ್ವನಿವುಳ್ಳ; ಸ್ವಾಂ=ತನ್ನವಳಾದ; ಮಿತ್ರವಿಂದಾಂ=ಮಿತ್ರವಿಂದೆಯನ್ನು; ತಥಾ= ಹಾಗೆಯೇ; ಭೂಮಿಸುತ=ನರಕಾಸುರನಿಂದ; ಆಹೃತಾಃ=ಅಪಹರಿಸಲ್ಪಟ್ಟ; ಬಹುಶಃ=ಬಹಳ; ಬಾಲಾಃ=ಹುಡುಗಿಯರನ್ನೂ; ಉವಾಹ=ಮದುವೆಯಾದನು.

ಕೃಷ್ಣನಿಗೆ ಅಷ್ಟಮಹಿಷಿಯರು ಇವರಲ್ಲಿ ರುಗ್ಮಿಣಿಯ ವಿವಾಹವನ್ನು ಈತನಕ ಹೇಳಿದರು. ಅನಂತರದಲ್ಲಿ ಜಾಂಬವಂತನ ಮಗಳಾದ ಜಾಂಬವತಿಯ ಜೊತೆ ವಿವಾಹವಾಯಿತು. ಸತ್ಯಭಾಮೆಯ ಸಾಕ್ಷಾತ್ ರುಗ್ಮಿಣಿಯ ಅವತಾರವೇ ಆಗಿದ್ದಾಳೆ. ಆದ್ದರಿಂದಲೇ ಅವಳನ್ನು ತಿಳಿಸುವಾಗ ಎಲ್ಲಾ ಗುಣಗಳಿಂದ ಕೂಡಿದವಳು ಎಂದು ರಾಜರು ಹೇಳಿದ್ದಾರೆ. ಅನಂತರ ನೀಲೆಯ ಜೊತೆ; ಅನಂತರ ಕಾಲಿಂದಿ; ಅನಂತರ ಮಿತ್ರವಿಂದಾ –ಈಕೆಯು ಕೃಷ್ಣನ ಸೋದರಮಾವನ ಮಗಳು. ಲಕ್ಷಣ ಎಂಬ ಹುಡುಗಿಯ ಜೊತೆಗೂ, ಭದ್ರಾ ಎಂಬ ಹುಡುಗಿಯ ಜೊತೆಗೂ ಕೃಷ್ಣನ ವಿವಾಹವಾಯಿತು. ರುಗ್ಮಿಣಿಭಾಮೆಯರು ಹೊರತು ಉಳಿದ ಆರು ನಾರಿಯರು ಬೇರೆ ಜೀವರು. ರುಗ್ಮಿಣಿಭಾಮೆಯರು ಸಾಕ್ಷಾತ್ ರಮಾದೇವಿ. ಆರುಜನ ಗರುಡಶೇಷರುದ್ರರಿಗಿಂತ ಕಿರಿಯರು. ಪಾರ್ವತ್ಯಾದಿಗಳಿಗಿಂತ ಹಿರಿಯರು. ಇವರಲ್ಲಿ ರಮೆಯ ಸನ್ನಿಧಾನ ಇರುವಾಗ ಕೃಷ್ಣನು ಅವರ ಜೊತೆ ಇರುತ್ತಿದ್ದ. ಈ ಆರು ನಾರಿಯರೂ ಒಳ್ಳೆಯ ಲಕ್ಷಣಗಳಿಂದ ಕೂಡಿದವರು. ಎಲ್ಲರೂ ಶಶಿಮುಖಿಯರು. ಕೋಗಿಲೆಯಂತೆ ಇಂಪಾದ ಧ್ವನಿ ಉಳ್ಳವರು; ಕಪ್ಪಾದ ಮುಂಗುರುಳುಳ್ಳವರು. ಇವರೆಲ್ಲಾ ಕೃಷ್ಣನಿಗೆ ಸೇರಿದವರು.

ಇಷ್ಟೇ ಅಲ್ಲದೆ, ಬೇರೆ ನಾರಿಯರು ಪತ್ನಿಯರಾಗಿದ್ದರು. ಇವರನ್ನೆಲ್ಲಾ ನರಕಾಸುರ ತನ್ನ ಅರಮನೆಯಲ್ಲಿ ಒಯ್ದು ಇಟ್ಟಿದ್ದ. ಕೃಷ್ಣನು ನರಕನನ್ನು ಕೊಂದ. ಈ ನಾರಿಯರ ಅಪೇಕ್ಷೆಮೇರೆಗೆ ಅವರನ್ನು ಮದುವೆಯಾದ. ಈ ಶಕ್ತಿ ದೇವರಿಗೆ ಮಾತ್ರ ಇರುವುದು. ಇಂತಹ ಕೃಷ್ಣನು ದ್ವಾರಕೆಯಲ್ಲಿ ವಾಸಮಾಡಿಕೊಂಡಿದ್ದನು.

**ಕಸ್ಮಾನ್ಮುಹ್ಯಥ ಮಾನವಾಃ ಮುರಭಿದಃ ಸರ್ವೋತ್ತಮತ್ವೇ ಪುರಾ**
**ಯಃ ಪದ್ಮಾಸನಧೂರ್ಜಟಪ್ರಭೃತಿಭಿಃ ಕಾರ್ಯಾರ್ಕ್ಷಮೈಃ ಪ್ರಾರ್ಥಿತಃ ।**
**ಗರ್ಭೇ ಗೀರ್ಭಿರಭಿಷ್ಟುತಃ ಫಣಿಫಣೇ ನೃತ್ಯಂಶ್ಚ ಯಃ ಸೇವಿತಃ**
**ಸದ್ವೇಣುಂ ರಣಯಂಶ್ಚ ನಮ್ರತನುಭಿರ್ಯೋ ವಿಸ್ಮಿತೈಃ ಈಕ್ಷಿತಃ ॥ ೧೩ ॥**

ಮಾನವಾಃ=ಮಾನವರೇ; ಮುರಭಿದಃ=ಮುರನನ್ನು ಸೀಳಿದವನ; ಸರ್ವೋತ್ತ ಮತ್ವೇ=ಸರ್ವೋತ್ತಮತ್ವ ವಿಷಯದಲ್ಲಿ; ಕಸ್ಮಾತ್=ಯಾಕಾಗಿ; ಮುಹ್ಯಥ=ಮೋಹಗೊಳ್ಳು

ತ್ರೀಃ; ಪುರಾ=ಹಿಂದೆ; ಯಃ=ಯಾರು; ಪದ್ಮಾಸನ=ಬ್ರಹ್ಮನು; ಧೂರ್ಜಟಿ=ರುದ್ರನು; ಪ್ರಭೃತಿಭಿಃ=ಮೊದಲಾದವರಿಂದ; ಕಾರ್ಯೆ=ಕೆಲಸದಲ್ಲಿ; ಅಕ್ಷಮ್ಯೈಃ= ಅಸಮರ್ಥರಿಂದ; ಪ್ರಾರ್ಥಿತಃ=ಹೊಗಳಲ್ಪಟ್ಟನು; ಗರ್ಭೇ=ಗರ್ಭದಲ್ಲಿ; ಗೀಭಿಃ=ಮಾತುಗಳಿಂದ; ಅಭಿಷ್ಟುತಃ= ಹೊಗಳಲ್ಪಟ್ಟನು; ಫಣಿ=ಶೇಷನ; ಫಣೇ=ಹೆಡೆಯಲ್ಲಿ; ನೃತ್ಯನ್ ಚ=ನರ್ತಿಸುತ್ತಾ; ಯಃ= ಯಾರು; ಸೇವಿತಃ=ಸೇವಿಸಲ್ಪಟ್ಟನೋ; ಸತ್=ಒಳ್ಳೆಯ; ವೇಣುಂ= ಕೊಳಲನ್ನು; ರಣಯನ್ ಚ=ಊದುತ್ತಿ; ನಮ್ರ=ಬಗ್ಗಿದ; ತನುಭಿಃ=ದೇಹವುಳ್ಳವರಿಂದ; ವಿಸ್ಮಿತೈಃ=ಆಶ್ಚರ್ಯಗೊಂಡವರಿಂದ; ಈಕ್ಷಿತಃ=ನೋಡಲ್ಪಟ್ಟನೋ.

ಈ ಶ್ಲೋಕದಲ್ಲಿ ರಾಜರು ಕೃಷ್ಣನ ಸರ್ವೋತ್ತಮತ್ವವನ್ನು ಸಾಧಿಸುತ್ತಾರೆ. ದೇವರ ಉತ್ತಮತ್ವವಿಷಯದಲ್ಲಿ ಸಂಶಯ ಕೂಡದು. ಭೂಮಿಯಲ್ಲಿ ದೈತ್ಯರ ಉಪಟಳ ಬಹಳವಾಗಿತ್ತು. ಇದನ್ನು ಪರಿಹರಿಸಲು ಬ್ರಹ್ಮಾದಿದೇವತೆಗಳು ಅಶಕ್ತರಾದರು. ಕೂಡಲೇ ಕ್ಷೀರಸಮುದ್ರದ ಬಳಿಗೆ ಹೋದರು; ದೇವನನ್ನು ಪ್ರಾರ್ಥಿಸಿದರು. ದೇವರು ಕೃಷ್ಣನಾಗಿ ಬಂದನು. ಅದಕ್ಕಾಗಿ ದೇವಕಿಯ ಗರ್ಭವನ್ನು ಪ್ರವೇಶಿಸಿದನು. ಆಗ ಈ ಎಲ್ಲಾ ದೇವತೆಗಳೂ ಗರ್ಭವನ್ನು ಪ್ರವೇಶಿಸಿ ದೇವನನ್ನು ಹೊಗಳಿದರು; ನಮಸ್ಕರಿಸಿದರು.

ತನ್ನ ಬಾಲಲೀಲೆಗಳಲ್ಲಿ ಕಾಳಿಂಗಮರ್ದನವೂ ಒಂದು. ಅದನ್ನು ಮಾಡುವಾಗ ಈ ದೇವತೆಗಳು ಹೂಮಳೆಗೆರೆದು ಸ್ತುತಿಸಿದರು. ಕೃಷ್ಣನು ಕೊಳಲನ್ನೂದುವ ಮೂಲಕ ಎಲ್ಲಾ ದೇವತೆಗಳನ್ನೂ ತನ್ನತ್ತ ಸೆಳೆದನು. ಅವರೆಲ್ಲಾ ಮೂಕರಾಗಿ ಈ ನಾದವನ್ನು ಆಲಿಸಿದರು. ಈ ರೀತಿಯಾಗಿ ಪ್ರತಿಯೊಂದು ಘಟನೆಯಿಂದಲೂ ದೇವರ ಸರ್ವೋತ್ತಮತ್ವವೂ ಸ್ಪಷ್ಟವಾಗುತ್ತದೆ. ಆದ್ದರಿಂದ ಸಾತ್ವಿಕರಾರೂ ಈ ವಿಷಯದಲ್ಲಿ ಸಂಶಯಪಡಬಾರದು.

**ಕೃಷ್ಣಾಯಾಮಪಿ ತೈರ್ನತೈಃ ಪರಿವೃತಂ ದೃಷ್ಟ್ವಾ ಶ್ವಫಲ್ಕಾತ್ಮಜಃ**
**ಯಂ ತುಷ್ಟಾವ ಗುಣೈರಬದ್ಧಮಿತರಾನ್ ಬದ್ಧಾನುದೀರ್ಯ ಸ್ಫುಟಮ್ ।**
**ಸೇವಾತುಷ್ಟಹೃದೋಽಪಿ ದೇವನಿಕರಾದಪ್ರಾಪ್ತಮುಕ್ತಿಂ ಪ್ರಭುಃ**
**ಯಃ ಪ್ರಾದಾನ್ಮುಚುಕುಂದಭೂಮಿಪತಯೇ ತೈರ್ನಿದ್ರಿತಾಯಾಪ್ಯಲಮ್ ॥ ೧೪ ॥**

ಶ್ವಫಲ್ಕ=ಶ್ವಫಲ್ಕನ; ಆತ್ಮಜಃ=ಮಗನು; ಕೃಷ್ಣಾಯಾಂ ಅಪಿ=ಯಮುನೆಯಲ್ಲಿಯೂ; ನತೈಃ=ಬಗ್ಗಿದ; ತೈಃ=ಅವರಿಂದ; ಪರಿವೃತಂ=ಕೂಡಿದ್ದನ್ನು; ದೃಷ್ಟ್ವಾ=ನೋಡಿ; ಯಂ= ಯಾರನ್ನು; ಗುಣೈಃ=ಗುಣಗಳಿಂದ; ಅಬದ್ಧಂ=ಕಟ್ಟಲ್ಪಡದವನನ್ನಾಗಿ; ಇತರಾನ್= ಬೇರೆಯವರನ್ನು; ಬದ್ಧಾನ್=ಬದ್ಧರನ್ನಾಗಿ; ಉದೀರ್ಯ=ಹೇಳಿ; ಸ್ಫುಟಂ=ಚೆನ್ನಾಗಿ; ತುಷ್ಟಾವ=ಹೊಗಳಿದನೋ; ಸೇವಾ=ಸೇವೆಯಿಂದ; ತುಷ್ಟ=ಸಂತೋಷ ಗೊಂಡ; ಹೃದಃ ಅಪಿ=ಮನವುಳ್ಳವರಾದರೂ; ದೇವ=ದೇವತೆಗಳ; ನಿಕರಾತ್=ಸಮೂಹ ದಿಂದ; ಅಪ್ರಾಪ್ತ= ಹೊಂದದಿರುವ; ಮುಕ್ತಿಂ=ಮೋಕ್ಷವನ್ನು; ಪ್ರಭುಃ=ಶಕ್ತನಾದ; ಯಃ=ಯಾರು; ತೈಃ=

ಅವರಿಂದ; ಅಲಂ=ಚೆನ್ನಾಗಿ; ನಿದ್ರಿತಾಯ ಅಪಿ=ಮಲಗಿಸಲ್ಪಟ್ಟರೂ; ಮುಚುಕುಂದ= ಮುಚುಕುಂದನೆಂಬ; ಭೂಮಿ=ಭೂಮಿಯ; ಪತಯೇ=ಒಡೆಯನಿಗೆ; ಪ್ರಾದಾತ್=ಕೊಟ್ಟನು.

ಪುನಃ ಹರಿಸರ್ವೋತ್ತಮತ್ವದ ಸಮರ್ಥನೆ– ಅಕ್ರೂರನು ಕಂಸನ ಆಣತಿಯಂತೆ ಕೃಷ್ಣನನ್ನು ಗೋಕುಲದಿಂದ ಮಧುರೆಗೆ ಒಯ್ಯುತ್ತಿದ್ದನು. ದಾರಿಯಲ್ಲಿ ಸಂಧ್ಯಾಕಾಲ ಬಂತು. ಅಕ್ರೂರನು ರಥದಿಂದ ಇಳಿದು ಯಮುನೆಯಲ್ಲಿ ಮುಳುಗಿದನು. ನೀರಿನ ಒಳಗೆ ಶೇಷಶಾಯಿಯನ್ನು ಕಂಡನು. ಅವನ ಸುತ್ತ ಬ್ರಹ್ಮಾದಿದೇವತೆಗಳನ್ನೂ ಕಂಡನು. ಅವರೆಲ್ಲಾ ಈ ಕೃಷ್ಣನನ್ನು ಹೊಗಳುತ್ತ ನಮಸ್ಕರಿಸುತ್ತಿದ್ದರು. ತಾನೂ ಕೂಡ ಅದೇ ರೀತಿ ಹೊಗಳಿದನು. ಇತರ ಎಲ್ಲಾ ದೇವತೆಗಳು ಅಸ್ವತಂತ್ರರು; ಸಂಸಾರಿಗಳು. ಈತನೊಬ್ಬನೇ ಸ್ವತಂತ್ರನು ಹಾಗೂ ಮುಕ್ತನು ಎಂದು. ಈ ಒಂದು ಘಟನೆಯಿಂದ ದೇವರ ಉತ್ತಮತ್ವವು ಸಿದ್ಧವಾಯಿತು. ಇದೇ ರೀತಿ ಇನ್ನೊಂದು ಘಟನೆ–

ದೇವ–ದೈತ್ಯರಿಗೆ ಒಮ್ಮೆ ಯುದ್ಧವಾಯಿತು. ಆಗ ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಭೂಮಿಯ ರಾಜನಾದ ಮುಚುಕುಂದನು ದೇವತೆಗಳ ಪಕ್ಷ ವಹಿಸಿದನು. ಯುದ್ಧದಲ್ಲಿ ದೇವತೆಗಳಿಗೆ ಜಯವನ್ನು ಗಳಿಸಿಕೊಟ್ಟನು. ಸಂತುಷ್ಟರಾದ ದೇವತೆಗಳು ವರವನ್ನು ಬೇಡು ಎಂದರು. ಮೋಕ್ಷವನ್ನು ಒಂದು ಕೇಳಬೇಡ. ಅದನ್ನು ಕೊಡಲು ನಾರಾಯಣನೊಬ್ಬನೇ ಶಕ್ತ ಎಂದು ಸ್ಪಷ್ಟೀಕರಿಸಿದರು. ಮುಚುಕುಂದನು ನಿದ್ರೆ ಬೇಕೆಂದು ಕೇಳಿದನು. ದೇವತೆಗಳು ಅಸ್ತು ಎಂದರು. ಈ ಕ್ಷುಲ್ಲಕವಾದ ವರವನ್ನು ಸಾರ್ಥಕಗೊಳಿಸಿದ್ದು ದೇವರು. ಹೇಗೆಂದರೆ ಆತನಿಗೆ ಮುಕ್ತಿಯನ್ನು ಕೊಡುವ ಮೂಲಕ.

**ಯಃ ಕಲ್ಪಾಂಘ್ರಿಪಮಾಹರನ್ ಸುರವರಾನ್ ವ್ಯದ್ರಾವಯತ್ ಸೇಶ್ವರಾನ್**
**ಯೋ ಭಸ್ಮೀಕೃತಭಸ್ಮದಾನವಪತಿಃ ಶಂಭುಂ ಪುರಾ ಪಾಲಯತ್ ।**
**ಯೋಗೀಂದ್ರಾದೃತವೈಭವೋ ಭೃಗುಮುನಿರ್ಯಚ್ಛ್ರೈಷ್ಠ್ಯಮಸ್ಪಷ್ಟಯತ್**
**ತಂ ಭಕ್ತ್ಯಾ ಭಜತಾಜಿತಂ ಮಧುಜಿತಂ ಕೈವಲ್ಯಕಾಮಾಃ ಜನಾ ॥ ೧೫ ॥**

ಯಃ=ಯಾರು; ಕಲ್ಪಾಂಘ್ರಿಪಂ=ಕಲ್ಪವೃಕ್ಷವನ್ನು; ಆಹರನ್=ಅಪಹರಿಸುವವನಾಗಿ; ಸೇಶ್ವರಾನ್=ರುದ್ರನಿಂದ ಕೂಡಿದ; ಸುರವರಾನ್=ದೇವಶ್ರೇಷ್ಠರನ್ನು; ವ್ಯದ್ರಾವಯತ್= ಓಡಿಸಿದನೋ; ಯಃ=ಯಾರು; ಪುರಾ=ಮೊದಲು; ಭಸ್ಮೀಕೃತ=ಭಸ್ಮ ಮಾಡಲ್ಪಟ್ಟ; ಭಸ್ಮದಾನವಪತಿಃ=ಭಸ್ಮಾಸುರವುಳ್ಳವನಾಗಿ; ಶಂಭುಂ=ರುದ್ರನನ್ನು; ಅಪಾಲಯತ್=ರಕ್ಷಿಸಿ ದನೋ; ಯೋಗೀಂದ್ರ=ಶ್ರೇಷ್ಠ ಋಷಿಗಳಿಂದ; ಆದೃತ=ಸತ್ಕರಿಸಲ್ಪಟ್ಟ; ವೈಭವಃ=ವೈಭವವುಳ್ಳ; ಭೃಗುಮುನಿಃ=ಭೃಗುಮುನಿಯು; ಯತ್=ಯಾರ; ಶ್ರೈಷ್ಠ್ಯಂ=ಉತ್ತಮತ್ವವನ್ನು; ಅಸ್ಪಷ್ಟಯತ್=ಸಮರ್ಥಿಸಿದನೋ; ಅಜತಂ=ಸೋಲಿಲ್ಲದ; ಮಧುಜಿತಂ=ಮಧುವನ್ನು ಕೊಂದಿರುವ; ತಂ=ಆ ಕೃಷ್ಣನನ್ನು; ಕೈವಲ್ಯ=ಮೋಕ್ಷದ; ಕಾಮಾಃ=ಆಸೆವುಳ್ಳ; ಜನಾಃ=ಜನರೇ; ಭಕ್ತ್ಯಾ=ಭಕ್ತಿಯಿಂದ; ಭಜತ್=ಸೇವಿಸಿರಿ.

ಈ ಶ್ಲೋಕದಲ್ಲಿಯೂ ಹರಿಸರ್ವೋತ್ತಮತ್ವದ ಸಮರ್ಥನೆ– ಸ್ವರ್ಗದಲ್ಲಿದ್ದ ಪಾರಿಜಾತಮರವನ್ನು ಸತ್ಯಭಾಮೆಯು ಲೌಕಿಕವಾಗಿ ಆಶಿಸಿದಳು. ಕೃಷ್ಣನು ಅದನ್ನು ಇಂದ್ರನ ಉದ್ಯಾನದಿಂದ ಕಿತ್ತನು. ವಿಷಯ ತಿಳಿದ ಇಂದ್ರನು ದೇವತೆಗಳಿಂದ ಕೂಡಿಕೊಂಡು ಕೃಷ್ಣನಲ್ಲಿ ಕಾದಾಡಿದನು. ಇಂದ್ರನ ಪ್ರಾರ್ಥನೆ ಮೇರೆಗೆ ರುದ್ರದೇವರು ಸಹಾಯಕ್ಕಾಗಿ ಬಂದರು. ಇವರೆಲ್ಲರಿಗೂ ಆಗ ಅಸುರಾವೇಶ ಆಗಿತ್ತು. ಆ ಯುದ್ಧದಲ್ಲಿ ಎಲ್ಲರೂ ಕೃಷ್ಣನಿಂದ ಸೋತರು. ಭಸ್ಮಾಸುರನನ್ನು ಕೊಂದು ರುದ್ರದೇವರನ್ನು ಕಾಪಾಡಿದ ವಿಷಯ ಎಲ್ಲರಿಗೂ ತಿಳಿದೇ ಇದೆ. ಋಷಿಗಳೆಲ್ಲಾ ಸೇರಿ ಒಂದು ಯಾಗ ಮಾಡಿದರು. ಇದರ ಫಲವನ್ನು ತ್ರಿಮೂರ್ತಿಗಳಲ್ಲಿ ಯಾರಿಗೆ ಅರ್ಪಿಸುವುದು ಎಂದು ವಿಚಾರ ಆರಂಭವಾಯಿತು. ಸರ್ವೋತ್ತಮನಿಗೆ ಅರ್ಪಿಸೋಣವೆಂದು ತೀರ್ಮಾನಿಸಲಾಯಿತು. ಸರ್ವೋತ್ತಮನು ಯಾರೆಂದು ತಿಳಿಯಲು ಭೃಗುಋಷಿಗಳು ಮೂರು ಲೋಕಕ್ಕೂ ಹೋದರು. ವಿಷ್ಣುವಿನ ಸರ್ವೋತ್ತಮತ್ವವನ್ನು ಮೂರು ಲೋಕಕ್ಕೂ ಸಾರಿದರು. ಈ ರೀತಿಯಾಗಿ ಸರ್ವತ್ರ ಹರಿಯ ಸರ್ವೋತ್ತಮತ್ವವೇ ಸಿದ್ಧವಾಗಿದೆ. ಮೋಕ್ಷಾಪೇಕ್ಷಿಗಳು ಎಲ್ಲರೂ ಮಧುವೈರಿಯಾದ ಸೋಲಿಲ್ಲದ ಕೃಷ್ಣನನ್ನೇ ಸರ್ವೋತ್ತಮತ್ವೇನೈವ ಭಜಿಸಬೇಕು.

**ಕೈಲಾಸಯಾತ್ರಾದಿಭಿರೂನಭಾವೋ**
**ಯದ್ಯಸ್ಯ ತರ್ಹ್ಯೈಕ್ಯವಚೋ ವೃಥಾ ಸ್ಯಾತ್ ।**
**ಲೀಲೇತಿ ವಾಚ್ಯಂ ಭವತಾ ವಯಂ ತು**
**ಪೌತ್ರಾಲಯಪ್ರಾಪ್ತಿಮುಪೇಕ್ಷಯಾಮಃ** ॥ ೧೬ ॥

ಕೈಲಾಸ=ಕೈಲಾಸದ; ಯಾತ್ರಾ=ಯಾತ್ರೆಯೇ; ಆದಿಭಿಃ=ಮೊದಲಾದವುಗಳಿಂದ; ಯದಿ=ಒಂದುವೇಳೆ; ಅಸ್ಯ=ಇವನಿಗೆ; ಊನಭಾವಃ=ನೀಚತ್ವವು; ತರ್ಹಿ=ಆ ಪಕ್ಷದಲ್ಲಿ; ಐಕ್ಯ=ಐಕ್ಯದ; ವಚಃ=ಮಾತು; ವೃಥಾ=ವ್ಯರ್ಥವು; ಸ್ಯಾತ್=ಆಗುತ್ತದೆ; ಭವತಾಂ=ನಿನ್ನಿಂದ; ಲೀಲಾ=ಲೀಲೆಯು; ಇತಿ=ಎಂದು; ವಾಚ್ಯಂ=ಹೇಳಲ್ಪಡಬೇಕು; ವಯಂ ತು=ನಾವಾದರೂ; ಪೌತ್ರ=ಮೊಮ್ಮಗನ; ಆಲಯ=ಮನೆಯ; ಪ್ರಾಪ್ತಿಂ=ಹೊಂದುವಿಕೆಯನ್ನು; ಉಪೇಕ್ಷಯಾಮಃ= ಕಡೆಗಣಿಸುತ್ತೇವೆ.

ಶ್ರೀಕೃಷ್ಣನನ್ನು ಸರ್ವೋತ್ತಮನನ್ನಾಗಿ ಪುನಃ ತಿಳಿಸುತ್ತಾರೆ– ಹರಿಸರ್ವೋತ್ತಮತ್ವವನ್ನು ಸಹಿಸಲಾರದ ಕೆಲವರು ಐಕ್ಯವಾದಿಗಳು ಹೀಗೆ ಹೇಳುತ್ತಾರೆ: ಪುರಾಣಗಳಲ್ಲಿ ಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದ. ರುದ್ರದೇವರು ತಪಸ್ಸುಮಾಡಿದ. ಪುತ್ರಸಂತತಿಯನ್ನು ಬೇಡಿದ. ಪ್ರೀತರಾದ ರುದ್ರದೇವರು 'ತಥಾಸ್ತು' ಎಂದರು ಎಂದು ಇದೆ. ಈ ಚರಿತ್ರೆಯಿಂದಾಗಿ ಕೃಷ್ಣನಿಗಿಂತ ರುದ್ರದೇವರೇ ದೊಡ್ಡವರು ಎಂದಾಗುತ್ತದೆ ಎಂದು. ಇದಕ್ಕೆ ರಾಜರು ಹೀಗೆ ಉತ್ತರಿಸುತ್ತಾರೆ– ಹಾಗಾದರೆ ನಿನ್ನ ಸಿದ್ಧಾಂತವಾದ ಹರಿಹರರ ಐಕ್ಯವೂ ಸಿದ್ಧವಾಗುವುದಿಲ್ಲ. ಯಾಕೆಂದರೆ ನೀಚೋಚ್ಚರಿಗೆ, ಸ್ವಾಮಿಭೃತ್ಯರಿಗೆ ಎಂದೂ ಐಕ್ಯ ಇರಲು

ಸಾಧ್ಯವಿಲ್ಲ. ವೀರಧರ್ಮವುಳ್ಳವರಿಗೆ ಐಕ್ಯ ಹೇಗೆ? ಎಂದು. ಇದಕ್ಕೆ ಮಾಯಾವಾದಿಯು ಅವರಿಬ್ಬರಿಗೆ ನಿಜವಾಗಿ ಐಕ್ಯ ಇದೆ. ಕೃಷ್ಣನು ವಿನೋದಕ್ಕಾಗಿ ಕೈಲಾಸಕ್ಕೆ ಹೋದಂತೆ ನಟಿಸಿದ. ವಿನೋದಕ್ಕಾಗಿ ಅಥವಾ ನಾಟಕೀಯವಾಗಿ ಏನಾದರೂ ಮಾಡಿದರೆ ನೈಜಚಿತ್ರಣಕ್ಕೆ ತೊಂದರೆ ಬರುವುದಿಲ್ಲವೆಂದು ಹೇಳುತ್ತಾರೆ. ಇದಕ್ಕೆ ಪ್ರತಿಯಾಗಿ ವಾದಿರಾಜರು ಹೇಳುತ್ತಾರೆ– ಕೃಷ್ಣನ ಕೈಲಾಸಗಮನವು ನಾಟಕ ಎಂದು ನೀನು ಹೇಳುತ್ತಿ. ಮೊಮ್ಮಗನ ಮನೆಗೆ ಗಮನ ಎಂದು ನಾನು ಹೇಳುತ್ತೇನೆ. ಕೃಷ್ಣನು ದೇವರ ಅವತಾರ. ದೇವರ ಮಗ ಬ್ರಹ್ಮ; ಬ್ರಹ್ಮನ ಮಗ ರುದ್ರ. ರುದ್ರನು ಕೃಷ್ಣನಿಗೆ ಮೊಮ್ಮಗನಾದ. ಅಜ್ಜನು ಮೊಮ್ಮಗನ ಮೇಲೆ ಪ್ರೀತಿಯಿಂದ ಅವನ ಮನೆಗೆ ಹೋಗುವುದು ಲೋಕದಲ್ಲಿಯೂ ಇದೆ. ಹಾಗೆ ಹೋದದ್ದರಿಂದ ಮೊಮ್ಮಗನು ದೊಡ್ಡವನಾಗುವುದಿಲ್ಲ. ಆದ್ದರಿಂದ ಕೈಲಾಸಯಾತ್ರೆಯಿಂದ ರುದ್ರದೇವರ ಪಾರಮ್ಯವನ್ನು ಸಿದ್ಧಮಾಡಲು ಆಗುವುದಿಲ್ಲ ಎಂದು.

**ಯುಧಿಷ್ಠಿರಸ್ಯಾಲಯಮೇವ ಗಚ್ಛನ್**
**ತಥಾ ದ್ವಿಜಾದೀನ್ಯಮಿನಃ ಸಮರ್ಚನ್ ।**
**ತತೋಽಪಿ ನೀಚಃ ಕಿಮಯಂ ನೃಲೋಕೇ**
**ನರಾನುಕಾರಾರ್ಥಮಿದಂ ಹಿ ಸರ್ವಮ್** ॥ ೧೭ ॥

ಯುಧಿಷ್ಠಿರಸ್ಯ=ಧರ್ಮಜನ; ಆಲಯಂ=ಮನೆಯನ್ನು; ಗಚ್ಛನ್ ಏವ= ಹೋದ ಮಾತ್ರಕ್ಕೆ; ತಥಾ=ಹಾಗೆಯೇ; ದ್ವಿಜಾದೀನ್=ಬ್ರಾಹ್ಮಣಾದಿಗಳನ್ನು; ಯಮಿನಃ=ಸನ್ಯಾಸಿಗಳನ್ನು; ಸಮರ್ಚನ್=ಅರ್ಚಿಸಿದ್ದಕ್ಕೆ; ಅಯಂ=ಕೃಷ್ಣನು; ತತಃ ಅಪಿ=ಅವರಿಗಿಂತಲೂ; ನೀಚಃ ಕಿಂ=ಕಮ್ಮಿಯೇನು?; ಇದಂ=ಈ; ಸರ್ವಂ=ಎಲ್ಲವೂ; ನೃಲೋಕೇ=ಮಾನವ ಲೋಕದಲ್ಲಿ; ನರ=ಜನರ; ಅನುಕಾರಾರ್ಥಂ=ಅನುಕರಣೆಗೋಸ್ಕರ.

ಮಾಯಾವಾದಿಗಳು ಹೇಳುತ್ತಾರೆ– ಹರಿಹರರಿಗೆ ಐಕ್ಯ ಬೇಡ. ಕೃಷ್ಣನಿಗೆ ನೀಚತ್ವ ಬರುತ್ತದೆ. ಹೇಗೆಂದರೆ ಕೃಷ್ಣನು ಕೈಲಾಸಕ್ಕೆ ಯಾತ್ರೆ ಮಾಡಿದ; ರುದ್ರದೇವರ ಪೂಜೆ ಮಾಡಿದ. ಪೂಜಕರು ಚಿಕ್ಕವರು. ಪೂಜ್ಯರು ದೊಡ್ಡವರು. ಹೀಗಿರುವಾಗ ಕೃಷ್ಣನ ಸರ್ವೋತ್ತಮತ್ವವು ಹೇಗೆ ಸಿದ್ಧವಾಗುವುದು ಎಂದು. ಈ ವಿಷಯಕ್ಕೆ ವಾದಿರಾಜರು ಈ ರೀತಿ ಉತ್ತರಿಸುತ್ತಾರೆ– ಎಲೋ ಮಾಯವಾದಿಯೇ, ಕೃಷ್ಣನು ದೊಡ್ಡವನೋ, ಧರ್ಮಜನು ದೊಡ್ಡವನೋ? ವಯಸ್ಸಿನ ವಿಷಯದಲ್ಲಿ ಅಲ್ಲ; ಪೂಜ್ಯತ್ವದ ವಿಷಯದಲ್ಲಿ. ಹಾಗೆಯೇ ಬ್ರಾಹ್ಮಣರು, ಸಂನ್ಯಾಸಿಗಳು ಇವರ ಸಭೆಯಲ್ಲಿ ಕೃಷ್ಣನು ಇದ್ದರೆ ಇಲ್ಲಿ ಕೃಷ್ಣನು ಬ್ರಾಹ್ಮಣರನ್ನು ಸನ್ಯಾಸಿಗಳನ್ನು ಪೂಜಿಸುತ್ತಿದ್ದನೋ? ಎಂದು ಎರಡು ಪ್ರಶ್ನೆಗಳನ್ನು ಕೇಳಿದರು. ಇದಕ್ಕೆ ಮಾಯಾವಾದಿಗಳ ಉತ್ತರ– ಪೂಜ್ಯತ್ವ ವಿಷಯದಲ್ಲಿ ಕೃಷ್ಣನೇ ದೊಡ್ಡವನು. ಹಾಗೆಯೇ ತುಂಬಿದ ಸಭೆಯಲ್ಲಿ ಮಾತ್ರವಲ್ಲ ಎಲ್ಲೆಲ್ಲಿ ಬ್ರಾಹ್ಮಣರು, ಋಷಿಗಳು ಕೃಷ್ಣನನ್ನು ಭೇಟಿಮಾಡುತ್ತಾರೋ ಅಲ್ಲೆಲ್ಲ ಕೃಷ್ಣನೇ ಅವರನ್ನು ಪೂಜಿಸುತ್ತಿದ್ದ. ಆದರೂ

ಇವರೆಲ್ಲರಿಗಿಂತಲೂ ಕೃಷ್ಣನೇ ದೊಡ್ಡವನು ಎಂದು. ರಾಜರು ಪುನಃ ಕೇಳಿದರು– ಕೃಷ್ಣನು ಧರ್ಮಜನ ಮನೆಗೆ ಪದೇ ಪದೇ ಹೋಗುತ್ತಿದ್ದ. ಬ್ರಾಹ್ಮಣಾದಿಗಳನ್ನು ಯಾವಾಗಲೂ ಅರ್ಚಿಸುತ್ತಿದ್ದ. ಆದರೂ ಕೃಷ್ಣನೇ ದೊಡ್ಡವನಾಗುವುದಾದರೆ, ಇಲ್ಲಿಯೂ ಕೃಷ್ಣನು ಕೈಲಾಸಯಾತ್ರೆ ಮಾಡಿದರೂ ರುದ್ರದೇವರನ್ನು ಅರ್ಚಿಸಿದರೂ ಕೃಷ್ಣನೇ ಯಾಕೆ ದೊಡ್ಡವನಾಗಬಾರದು ಎಂದು. ಇದಕ್ಕೆ ಮಾಯಾವಾದಿಯ ಉತ್ತರ ಇಲ್ಲ. ಇಲ್ಲಿ ಒಂದು ಪ್ರಶ್ನೆ ಬರುವುದು– ಹಾಗಾದರೆ ಕೃಷ್ಣ ಯಾಕೆ ಯಾತ್ರಾದಿಗಳನ್ನು ಮಾಡಿದ? ಇದಕ್ಕೆ ಉತ್ತರ– ಜಗತ್ತಿಗೆ ಒಂದು ಪಾಠ ತಿಳಿಸಲು. ನಾವು ಯಾವಾಗಲೂ ಚಿಕ್ಕವರಿಗೆ ಹಾಗೆ ಮಾಡು, ಹೀಗೆ ಮಾಡಬೇಡ ಎಂದು ಉಪದೇಶ ಮಾಡುವುದಕ್ಕಿಂತ ನಾವು ಮಾಡಿ ತೋರಿಸಿದರೆ ಬೇಗನೆ ಮಾಡುತ್ತಾರೆ. ಸಾಧಕರೆಲ್ಲರೂ ರುದ್ರಾದಿ ದೇವತಾಕ್ಷೇತ್ರಕ್ಕೆ ಯಾತ್ರೆ ಮಾಡಬೇಕು, ಬ್ರಾಹ್ಮಣಾದಿ ಹಿರಿಯರನ್ನು ಅರ್ಚಿಸಬೇಕು. ಹೀಗಾದಾಗ ಮಾತ್ರ ಬಂಧನದಿಂದ ಬಿಡುಗಡೆಗಾಗಿ ದೇವರ ಪ್ರಸಾದವಾಗುವುದು ಎಂಬುದನ್ನು ತಿಳಿಸಲು.

**ಯದೀಹ ಶಂಕಾ ವಿಪರೀತಭಾವೇ ತದಾ ನರಾಃ ಸಂತಿ ಕಿಮಾತ್ಮಲೋಕಾತ್ ।**
**ಪಯೋಬ್ಧಿತೀರಂ ವ್ರಜತೋ ವಿಧಾತುಃ ಶಿವಸ್ಯ ಚ ಸ್ವಾಲಯತೋ ಗತಸ್ಯ ॥ ೧೮ ॥**

ಇಹ=ಈ ವಿಷಯದಲ್ಲಿ; ವಿಪರೀತಭಾವೇ=ವೈಪರೀತ್ಯದಲ್ಲಿ; ಯದಿ=ಒಂದುವೇಳೆ; ಶಂಕಾ=ಸಂಶಯವು; ತದಾ=ಆಗ; ಆತ್ಮ=ತನ್ನ; ಲೋಕಾತ್=ಲೋಕದಿಂದ; ಪಯೋಬ್ಧಿ=ಕ್ಷೀರಸಮುದ್ರದ; ತೀರಂ=ದಡವನ್ನು; ವ್ರಜತಃ=ಹೋಗತಕ್ಕ; ವಿಧಾತುಃ=ಬ್ರಹ್ಮನಿಗೆ; ಸ್ವ=ತನ್ನ; ಆಲಯತಃ=ಮನೆಯಿಂದ; ಗತಸ್ಯ=ಹೊರಟಿರುವ; ಶಿವಸ್ಯ ಚ=ರುದ್ರನಿಗೂ ಕೂಡಾ; ನರಾಃ=ಜನರು; ಸಂತಿ ಕಿಂ=ಇದ್ದಾರೇನು?

ಋಷಿಮುನಿಗಳ ಅರ್ಚನೆಯನ್ನು ಕೃಷ್ಣ ಮಾಡಿದ್ದು ಮಾನವರ ಅನುಕರಣೆ ಎಂದು ಹಿಂದಿನ ಶ್ಲೋಕದಲ್ಲಿ ತಿಳಿಸಿದ್ದಾರೆ. ಪೂರ್ವಪಕ್ಷಿಯು ಹೇಳುತ್ತಾನೆ– ಹಾಗಾದರೆ ಬ್ರಹ್ಮರುದ್ರಾದಿಗಳೂ ಕೂಡ ದೇವರ ಪ್ರಾರ್ಥನಾದಿಗಳನ್ನು ಮಾಡಿದ್ದು ನರನಟನೆ ಎಂದು ಯಾಕೆ ಹೇಳಬಾರದು ಎಂದು. ಈ ಯುಕ್ತಿಗೆ ರಾಜರು ಈ ರೀತಿ ಉತ್ತರಿಸುತ್ತಾರೆ– ನರನಟನೆ ಅಂದರೆ ಮಾನವರ ಮಧ್ಯದಲ್ಲಿ ಇದ್ದುಕೊಂಡು ಮಾನವರು ನೋಡುವಂತೆ ಮಾಡುವ ನಟನೆ. ಕೃಷ್ಣನು ದ್ವಾರಕೆಯಲ್ಲೋ ಮಧುರೆಯಲ್ಲೋ ಋಷ್ಯಾದಿಗಳಿಗೆ ನಮನಾದಿಗಳನ್ನು ಮಾಡುತ್ತಿದ್ದನು. ಆಗ ಇದನ್ನೆಲ್ಲಾ ಮಾನವರು ನೋಡುತ್ತಿದ್ದರು. ಕೃಷ್ಣನು ಮಾನವರ ಮಧ್ಯದಲ್ಲಿ ಅವರ ಜೊತೆಗೇ ವ್ಯವಹರಿಸುತ್ತಿದ್ದನು. ಆದ್ದರಿಂದ ಕೃಷ್ಣನು ಮಾಡಿದ್ದು ನರನಟನೆ ಎಂದು ಹೇಳಬಹುದು. ಆದರೆ ಬ್ರಹ್ಮಾದಿದೇವತೆಗಳು ತಮಗೆ ಸಂಕಟ ಒದಗಿದಾಗ ತಮ್ಮ ತಮ್ಮ ಲೋಕದಿಂದ ಕ್ಷೀರಸಮುದ್ರದ ಬಳಿಗೆ ಹೊರಟರು. ದೇವರನ್ನು ಪರಿಪರಿಯಾಗಿ ಬೇಡಿದರು. ಇದೆಲ್ಲಾ ನಡೆದದ್ದು ದೇವಲೋಕದಲ್ಲಿ. ಅಲ್ಲಿ ಮಾನವರು ಇಲ್ಲ. ಇವರು ಇರುವುದು ಭೂಲೋಕದಲ್ಲಿ. ಈ ರೀತಿಯಾಗಿ

ದೇವಲೋಕದಲ್ಲಿ ನರರೇ ಇಲ್ಲವಾದಮೇಲೆ ದೇವತೆಗಳು ಮಾಡಿದ್ದು ನರನಟನೆ ಆಗಲು ಹೇಗೆ ಸಾಧ್ಯ? ಆದ್ದರಿಂದ ದೇವತೆಗಳು ನಾಟಕ ಮಾಡಿದ್ದಲ್ಲ. ಸಹಜವಾಗಿಯೇ ಮಾಡಿದ್ದು. ಈ ರೀತಿಯಾಗಿ ಇಲ್ಲಿಯೂ ಹರಿಸರ್ವೋತ್ತಮತ್ವವೇ ಸಿದ್ಧವಾಗುತ್ತದೆ.

**ಉಕ್ತಾಃ ಕಿಮರ್ಥಾ ನರದೃಷ್ಟಿಗಮ್ಯಾಃ ಸ್ವಸ್ಥಾನಸಂಸ್ಥೈಃ ರಚಿತಾಃ ಸಮಸ್ತಾಃ ।**
**ಅತ್ರಾಪ್ಯದೃಶ್ಯಾ ಕೃತಿಭಿರ್ಮುನೀಂದ್ರವಿಜ್ಞಾನದೃಷ್ಟೇರಪಿ ದೂರದೂರೈಃ ॥ ೧೯ ॥**

ಸ್ವ=ತಮ್ಮ; ಸ್ಥಾನ=ಜಾಗಗಳಲ್ಲಿ; ಸಂಸ್ಥೈಃ=ಇರುವವರಿಂದ; ರಚಿತಾಃ=ಮಾಡಲ್ಪಟ್ಟ; ಉಕ್ತಾಃ=ಹೇಳಿದ; ಸಮಸ್ತಾಃ=ಎಲ್ಲಾ; ಅರ್ಥಾಃ=ವಿಷಯಗಳು; ನರ=ಮಾನವರ; ದೃಷ್ಟಿ= ಕಣ್ಣಿಗೆ; ಗಮ್ಯಾಃ=ವಿಷಯಗಳು; ಕಿಂ=ಏನು?; ಅತ್ರಾಪಿ=ಇಲ್ಲಿಯೂ ಕೂಡಾ; ವಿಜ್ಞಾನ= ಋಷಿಗಳ; ದೃಷ್ಟೇಃ ಅಪಿ=ದೃಷ್ಟಿಗೂ; ದೂರದೂರೈಃ=ದೂರಗಳಾದ; ಅದೃಶ್ಯ=ಕಾಣದಿರುವ; ಆಕೃತಿಭಿಃ=ಶರೀರವುಳ್ಳವರಿಂದ.

ಸತ್ಯಲೋಕಾದಿಗಳಲ್ಲಿ ಮಾನವರು ಇಲ್ಲ. ಆದ್ದರಿಂದ ದೇವತೆಗಳು ಮಾಡಿದ್ದು ನರನಟನೆ ಅಲ್ಲ. ಆದರೆ ಅಲ್ಲಿ ದೇವತೆಗಳು ಮಾಡುವ ಕೆಲಸಗಳನ್ನು ಮಾನವರು ಭೂಮಿಯಲ್ಲಿ ಇದ್ದುಕೊಂಡೇ ಯಾಕೆ ನೋಡಬಾರದು? ಈ ಪ್ರಶ್ನೆಯು ಸರಿ ಇಲ್ಲ. ಮಾನವರದ್ದು ಚರ್ಮಚಕ್ಷುಸ್; ದಿವ್ಯದೃಷ್ಟಿಯಲ್ಲ. ಚರ್ಮದೃಷ್ಟಿಗೆ ದೇವಲೋಕವೇ ಕಾಣಿಸುವುದಿಲ್ಲ. ದೇವತೆಗಳು ಕಾಣಿಸುವುದು ಹೇಗೆ ಸಾಧ್ಯ. ಆದ್ದರಿಂದ ಇಲ್ಲಿಂದಲೇ ಮಾನವರು ದೇವತೆಗಳ ಚಟುವಟಿಕೆಗಳನ್ನು ಕಾಣುತ್ತಾರೆ ಎನ್ನಲು ಸಾಧ್ಯವಿಲ್ಲ.

ಪೂರ್ವಪಕ್ಷಿಯು ಇನ್ನೊಂದು ಪ್ರಶ್ನೆಯನ್ನು ಮಾಡುತ್ತಾನೆ– ದೇವಕಿಯು ಮಧುರೆಯಲ್ಲಿ ಕೃಷ್ಣನನ್ನು ಗರ್ಭದಲ್ಲಿ ಧರಿಸಿದ್ದಳು. ಆಗ ದೇವತೆಗಳೆಲ್ಲರೂ ಭೂಮಿಗೆ ಬಂದರು. ದೇವಕಿಯ ಗರ್ಭವನ್ನು ಪ್ರವೇಶಿಸಿದರು. ಕೃಷ್ಣನನ್ನು ಹೊರಳಿದರು ಎಂದು ಪುರಾಣಗಳಲ್ಲಿ ಇದೆ. ಇದನ್ನು ಇಲ್ಲಿರುವ ಮಾನವರು ಕಾಣಬಹುದು. ಆದ್ದರಿಂದ ಈ ಘಟನೆಯು ನರನಟನೆ ಆಗಬಹುದು ಎಂದು. ಇದಕ್ಕೆ ಉತ್ತರ– ದೇವತೆಗಳು ಎಲ್ಲರಿಗೂ ಕಾಣುವಂತೆ ಭೂಮಿಗೆ ಬಂದಿಲ್ಲ. ಹಾಗೆ ಬಂದಿದ್ದರೆ ದೇವಕಿಯ ಗರ್ಭವನ್ನು ಪ್ರವೇಶಿಸಲು ಸಾಧ್ಯವಿಲ್ಲ. ಆದ್ದರಿಂದ ದೇವತೆಗಳು ಭೂಮಿಗೆ ಬಂದದ್ದು ಯಾರಿಗೂ ಕಾಣದಂತೆಯೇ. ಮಾನವರಿಗೆ ಮಾತ್ರವಲ್ಲ. ಮುನಿಗಳಿಗೂ ಕಾಣದಂತೆಯೇ ಬಂದವರು. ಯದ್ಯಪಿ ಮುನಿಗಳ ದೃಷ್ಟಿ ಬಹಳ ಸೂಕ್ಷ್ಮ. ಆದರೂ ಅವರ ಕಣ್ಣುಗಳಿಗೂ ಕಾಣಿಸಲಿಲ್ಲ. ಇನ್ನು ಮಾನವರ ಕಣ್ಣಿಗೆ ಕಾಣಿಸಿಲ್ಲ ಎಂದು ಏನು ಹೇಳುವುದು. ಈ ರೀತಿಯಾಗಿಯೂ ನರನಟನೆ ಎಂದು ಹೇಳಲು ಸಾಧ್ಯವಿಲ್ಲ.

**ಪುರೋಗ್ರಭಸ್ಮಾಸುರಘಾತಕಾಲೇ ನರಾನುಕಾರಸ್ಯ ಹಿ ಕಾಸ್ತಿ ಯುಕ್ತಿಃ ।**
**ಮುನೇಶ್ಚ ಸತ್ತತ್ವವಿಚಾರಹೇತೋರ್ಗತಸ್ಯ ಮರ್ತ್ಯಾನುಕೃತಿಃ ಕಿಮರ್ಥಾ ॥ ೨೦ ॥**

ಪುರಾ=ಹಿಂದೆ; ಉಗ್ರ=ದುಷ್ಟನಾದ; ಭಸ್ಮಾಸುರ=ಭಸ್ಮಾಸುರನ; ಘಾತ=ನಾಶದ; ಕಾಲೇ=ಸಮಯದಲ್ಲಿ; ನರ=ನರರ; ಅನುಕಾರಸ್ಯ=ಅನುಸರಣೆಗೆ; ಯುಕ್ತಿಃ=ಯುಕ್ತಿಯು; ಕಾ=ಏನು?; ಅಸ್ತಿ=ಇದೆ; ಸತ್=ಒಳ್ಳೆಯ; ತತ್ವ=ತತ್ವದ; ವಿಚಾರ=ವಿಮರ್ಶೆಯ; ಹೇತೋಃ=ಕಾರಣದಿಂದ; ಗತಸ್ಯ=ಹೊರಟಿರುವ; ಮುನೇಃ ಚ=ಮುನಿಗಾದರೂ; ಮರ್ತ್ಯ= ಮಾನವರ; ಅನುಕೃತಿಃ=ಅನುಸರಣೆಯು; ಕಿಮರ್ಥಾ=ಯಾತಕ್ಕಾಗಿ.

ಪೂರ್ವಪಕ್ಷಿಯು ಇನ್ನೊಂದು ಬಾಣವನ್ನು ಎಸೆಯುತ್ತಾನೆ– ಭಸ್ಮಾಸುರ ಪ್ರಸಂಗದಲ್ಲಿ ರುದ್ರದೇವರು ಭೂಮಿಯಲ್ಲಿ ಎಲ್ಲರಿಗೂ ಕಾಣುವಂತೆ ಇದ್ದರು. ಭಸ್ಮಾಸುರ ರುದ್ರದೇವರನ್ನು ಅಟ್ಟಿಸಿಕೊಂಡು ಹೋದ. ರುದ್ರದೇವರು ಓಡುತ್ತಿರುವುದನ್ನು ಎಲ್ಲರೂ ನೋಡಿದ್ದರು. ಇದನ್ನು ನರನಟನೆ ಎನ್ನಬಹುದಲ್ಲ? ಎಂದು.

ಉತ್ತರ– ಇಲ್ಲಿ ನರನಟನೆಯ ಪ್ರಸಂಗ ಎಲ್ಲಿ ಬಂತು? ತನ್ನ ಪ್ರಾಣಕ್ಕೇ ಕುತ್ತು ಬರುವಾಗ ಯಾರಾದರೂ ನಟನೆ ಮಾಡಿಕೊಂಡು ಇರುತ್ತಾರಾ? ಪ್ರಾಣರಕ್ಷಣೆಗಾಗಿ ತನ್ನ ಶಕ್ತಿಯನ್ನು ಪ್ರದರ್ಶನ ಮಾಡುತ್ತಾರೆ ಅಷ್ಟೆ. ಶಕ್ತಿಪ್ರದರ್ಶನ ಮಾಡದೆ ನೇರವಾಗಿ ಓಡಿ ದೇವರಲ್ಲಿ ಮೊರೆಹೊಂದಿದರು ಅಂದರೆ ಶಕ್ತಿ ಇಲ್ಲ ಎಂದು ಅರ್ಥ. ದೇವರನ್ನು ಮೊರೆಹೊಂದಿ ಪಾರಾದರು ಅಂದರೆ ದೇವರೇ ದೊಡ್ಡವನು ಆಗುತ್ತದೆ.

ಇನ್ನೊಂದು ರೀತಿಯಿಂದಲೂ ಸಿದ್ಧವಾಗುತ್ತದೆ– ಮುನಿಗಳೆಲ್ಲಾ ಸೇರಿ ಯಾಗ ಮಾಡುತ್ತಿದ್ದರು. ಯಾರಿಗೆ ಅರ್ಪಿಸುವುದು ಎಂಬ ವಿಚಾರ ಆರಂಭವಾಯಿತು. ದೊಡ್ಡವರಿಗೆ ಅರ್ಪಿಸೋಣ ಎಂದು ತೀರ್ಮಾನವಾಯಿತು. ದೊಡ್ಡವರು ಯಾರು ಎಂದು ಪ್ರಶ್ನೆ ಬಂದಾಗ ಭೃಗು ಋಷಿಗಳು ನಿರ್ಣಯ ಮಾಡಲು ಹೊರಟರು. ಹರಿ ದೊಡ್ಡವನು ಎಂದು ನಿರ್ಣಯಿಸಿಕೊಂಡು ಬಂದರು. ಇಲ್ಲಿ ನೈಜವಿಷಯದ ನಿರ್ಣಯ. ಇಲ್ಲಿ ನರನಟನೆಗೆ ಅವಕಾಶ ಇಲ್ಲ. ನರನಟನೆ ಎಂದರೆ ನರರಂತೆ ಮಾಡುವುದು ಎಂದು ಅರ್ಥ. ನರರು ವ್ಯರ್ಥವಾಗಿ ಸುಳ್ಳಾಗಿ ಮಾಡುತ್ತಾರೆ. ಹಾಗೆ ಮಾಡುವುದು ಎಂದರ್ಥ. ತತ್ವದ ವಿಚಾರ ಬಂದಾಗ ಇದೆಲ್ಲಾ ಕೂಡದು. ತತ್ವ ಏನಾಯಿತು ಅಂದರೆ ಹರಿಯೇ ಸರ್ವೋತ್ತಮ ಎಂದು ತೀರ್ಮಾನವಾಯಿತು.

> **ಮರ್ತ್ಯಾನುಕಾರೋಽಪಿ ಹಿ ಮರ್ತ್ಯಲೋಕಂ**
> **ಪ್ರಾಪ್ತಸ್ಯ ಯುಕ್ತೋ ನರದೃಷ್ಟಿಮಾರ್ಗೇ ।**
> **ಕೈಲಾಸಶೈಲಂ ಸ್ವಜನಸ್ಯ ಮಧ್ಯೇ**
> **ವಿಜ್ಞಾಪ್ಯ ಕೃಷ್ಣೋಗಮದಾಗಮಚ್ಚ** ॥ ೨೧ ॥

ಮರ್ತ್ಯ=ಮಾನವರ; ಅನುಕಾರಃ ಅಪಿ=ಅನುಕರಣೆಯಾದರೂ; ಮರ್ತ್ಯಲೋಕಂ= ಮಾನವಲೋಕವನ್ನು; ಪ್ರಾಪ್ತಸ್ಯ=ಹೊಂದಿದವನಿಗೆ; ಯುಕ್ತಃ=ಯೋಗ್ಯವು; ಸ್ವ=ತನ್ನ;

ಜನಸ್ಯ=ಜನರ; ಮಧ್ಯೇ=ಮಧ್ಯದಲ್ಲಿ; ನರ=ಜನರ; ದೃಷ್ಟಿ=ಕಣ್ಣಿನ; ಮಾರ್ಗೇ=ದಾರಿಯಲ್ಲಿ; ವಿಜ್ಞಾಪ್ಯ=ತಿಳಿಸಿ; ಕೃಷ್ಣಃ=ಕೃಷ್ಣನು; ಕೈಲಾಸಶೈಲಂ=ಕೈಲಾಸಬೆಟ್ಟವನ್ನು; ಅಗಮತ್=ಹೋದನು; ಆಗಮತ್ ಚ=ಬಂದನೂ ಕೂಡಾ.

ಕೃಷ್ಣನಾದರೂ ಮಾನವರಂತೆ ನಟಿಸುವುದು ಯೋಗ್ಯವಾಗಿದೆ. ಯಾಕೆಂದರೆ ಆತನು ಮಾನವಲೋಕದಲ್ಲಿ ಅವತರಿಸಿದನು. ಮಾನವರ ಮಧ್ಯದಲ್ಲಿ ಕಾಣಿಸಿಕೊಂಡನು. ಜನರಿಗೆ ಕಾಣಿಸುವಂತೆ ಕೈಲಾಸಯಾತ್ರೆಗೆ ಹೊರಟನು. ಹೊರಡುವ ಮೊದಲು ಪಂಡಿತರಲ್ಲಿ ಜಾತಕವನ್ನು ವಿಮರ್ಶಿಸುವಂತೆ ನಟಿಸಿದನು. ಅವರ ಆದೇಶದಂತೆ ಸಂತತಿಗಾಗಿ ರುದ್ರದೇವರ ತಪಸ್ಸಿಗಾಗಿ ಹೊರಟನು. ಹೊರಡುವಾಗ ತನ್ನವರನ್ನು ಕರೆದನು. ತನ್ನ ವಿಚಾರವನ್ನು ತಿಳಿಸಿದನು. ತಾನು ಹೋಗಿಬರುವ ತನಕ ದ್ವಾರಕೆಯನ್ನು ರಕ್ಷಿಸಬೇಕೆಂದು ಯಾದವರನ್ನು ಆಜ್ಞಾಪಿಸಿದನು.

**ಯದಾ ಸ ಪುತ್ರಂ ನಿಜನಾಭಿಜಾತಕುಶೇಶಯಾತ್ ಪ್ರಾಗ್ಜನಯಾಂಬಭೂವ ।**
**ತದಾ ಶಿವಃ ಕುತ್ರ ವರಸ್ಯ ದಾತಾ ತದೀಯಫಾಲಾಂತರಜನ್ಮಭೂಮಿಃ ॥ ೨೨ ॥**

ಸಃ=ಕೃಷ್ಣನು; ಪ್ರಾಕ್=ಮೊದಲು; ಯದಾ=ಯಾವಾಗ; ನಿಜ=ತನ್ನ; ನಾಭಿ=ಹೊಕ್ಕಳಿನಿಂದ; ಜಾತ=ಹುಟ್ಟಿದ; ಕುಶೇಶಯಾತ್=ಕಮಲದಿಂದ; ಪುತ್ರಂ=ಮಗನನ್ನು; ಜನಯಾಂ ಬಭೂವ=ಹುಟ್ಟಿಸಿದನೋ; ತದಾ=ಆಗ; ತದೀಯ=ಬ್ರಹ್ಮನ; ಫಾಲ=ಹಣೆಯ; ಅಂತರ=ಮಧ್ಯವೇ; ಜನ್ಮಭೂಮಿಃ=ಉತ್ಪತ್ತಿಸ್ಥಾನವಾದ; ವರಸ್ಯ=ವರದ; ದಾತಾ=ಕೊಡತಕ್ಕ; ಶಿವಃ=ರುದ್ರನು; ಕುತ್ರ=ಎಲ್ಲಿ?

ರುದ್ರದೇವರಿಗೆ ಭಸ್ಮಾಸುರನಿಂದ ಸಂಕಟಬಂದಂತೆ ಕೃಷ್ಣನು ಸಂತತಿ ಇಲ್ಲವಾದ್ದರಿಂದ ಕೊರಗುತಿದ್ದ. ಇಂತಹ ಸಂಕಟ ಸಮಯದಲ್ಲಿ ನಟನೆಗೆ ಎಲ್ಲಿಯ ಅವಕಾಶ? ಎಂದು ಕೃಷ್ಣನ ವಿಷಯದಲ್ಲಿಯೂ ರುದ್ರದೇವರಂತೆ ಪ್ರಶ್ನೆ ಬರುತ್ತದೆ.

ಉತ್ತರ ಈ ರೀತಿ ಇದೆ– ರುದ್ರದೇವರಿಗೆ ನಿಜವಾಗಿಯೂ ಸಂಕಟ ಬಂದಿತ್ತು. ಆದರೆ ಕೃಷ್ಣನು ಸಂತತಿಗಾಗಿ ಕೊರಗಿದ್ದೂ ಕೂಡಾ ನಟನೆ. ನಟನೆ ಎಂದಮೇಲೆ ಶಕ್ತಿಪ್ರದರ್ಶನದ ಅಗತ್ಯ ಬರುವುದಿಲ್ಲ. ರುದ್ರದೇವರಿಗೆ ಈ ಸಮಸ್ಯೆ ಬಂದಿತ್ತು. ಆದರೆ ಶಕ್ತಿ ಪ್ರದರ್ಶಿಸಲು ಬೇಕಾದ ಭಕ್ತಿಯೇ ಅವರಲ್ಲಿ ಇರಲಿಲ್ಲ. ಕೃಷ್ಣನದ್ದು ಸಮಸ್ಯೆಗಳ ನಾಟಕ. ಆದ್ದರಿಂದ ಶಕ್ತಿಪ್ರದರ್ಶನ ಉಚಿತವೆನಿಸಲಿಲ್ಲ.

ಕೃಷ್ಣನಿಗೆ ಸಂತತಿಯಾಗಲು ರುದ್ರದೇವರ ಅನುಗ್ರಹವು ಅಗತ್ಯ ಎನ್ನುವ ಮಾತು ಹಾಸ್ಯಾಸ್ಪದ. ಪ್ರಳಯ ಮುಗಿದು ಸೃಷ್ಟಿಯು ಬಂದಾಗ ಕೃಷ್ಣನು ನಾರಾಯಣ ರೂಪದಿಂದ ಶೇಷನ ಮೇಲೆ ಪವಡಿಸಿದ. ಆತನ ನಾಭಿಯಿಂದ ಒಂದು ಕಮಲವು ಅರಳಿತು. ಅದರಲ್ಲಿ ಬ್ರಹ್ಮನನ್ನು ಮಗನನ್ನಾಗಿ ಪಡೆದನು. ಇದಕ್ಕಾಗಿ ರುದ್ರದೇವರ ತಪಸ್ಸನ್ನು

ಮಾಡಲಿಲ್ಲ. ಸ್ವಶಕ್ತಿಯಿಂದಲೇ ಪಡೆದಿದ್ದನು. ರುದ್ರದೇವರೇ ಆ ಸಮಯದಲ್ಲಿ ಇರಲಿಲ್ಲ. ಅವರ ಉತ್ಪತ್ತಿ ಆದದ್ದೇ ಅನಂತರ. ಅವರು ಬ್ರಹ್ಮನ ಹಣೆಯಿಂದ ಹುಟ್ಟಿದವರು. ಬ್ರಹ್ಮನಂತೂ ರುದ್ರನಿಂದ ಕೂಡಿದ ಇಡೀ ಜಗತ್ತಿನ ಜನಕ. ಇಂತಹ ಬ್ರಹ್ಮನನ್ನೇ ಹುಟ್ಟಿಸುವ ತಾಕತ್ತು ಕೃಷ್ಣನದ್ದು. ಹೀಗಿರುವಾಗ ಕೃಷ್ಣನಿಗೆ ರುದ್ರನ ಅನುಗ್ರಹ ಯಾಕೆ? ಬೇಕೂಂತ ಹೇಳಿದರೂ ರುದ್ರನು ಇರಬೇಕಲ್ಲಾ? ಆದ್ದರಿಂದ ಸರ್ವಶಕ್ತನಾದ ಕೃಷ್ಣನು ರುದ್ರನಿಂದ ವರಪಡೆದದ್ದು ನಾಟಕವೇ ಆಗಿದೆ.

**ಯದ್ವಾಹನೀಭೂತಗರುತ್ಮದೋಜೋ ವಿದ್ರಾವಯಾಮಾಸ ಪಿನಾಕಪಾಣಿಮ್ ।**
**ತಸ್ಯ ಪ್ರಸಾದಾತ್ಸಸುತಂ ಜಗಾಮೇತ್ಯುಕ್ತಿರ್ನ ವಿದ್ವಜ್ಜನಮಾನನೀಯಾ ॥ ೨೩ ॥**

ಯತ್=ಯಾರ; ವಾಹನೀಭೂತ=ವಾಹನವಾದ; ಗರುತ್ಮತ್=ಗರುಡನ; ಓಜಃ= ಶಕ್ತಿಯು; ಪಿನಾಕ=ಪಿನಾಕವು; ಪಾಣಿಂ=ಕೈಯವನನ್ನು; ವಿದ್ರಾವಯಾಮಾಸ= ಓಡಿಸಿತು; ತಸ್ಯ=ಅವನ; ಪ್ರಾಸಾದಾತ್=ಅನುಗ್ರಹದಿಂದ; ಸಃ=ಅವನು; ಸುತಂ= ಮಗನನ್ನು; ಜಗಾಮ=ಹೊಂದಿದನು; ಇತಿ=ಎಂಬ; ಉಕ್ತಿಃ=ಮಾತು; ವಿದ್ವತ್=ವಿದುಷರಾದ; ಜನ= ಜನರಿಂದ; ಮಾನನೀಯಾ=ಆದೃತವಾದದ್ದು; ನ=ಅಲ್ಲ.

ರುದ್ರದೇವರು ಉತ್ತಮರಲ್ಲ ಎನ್ನುವುದಕ್ಕೆ ಇನ್ನೊಂದು ಕಾರಣ– ಕೃಷ್ಣನು ಸ್ವರ್ಗದಿಂದ ಪಾರಿಜಾತವನ್ನು ಅಪಹರಿಸಿದ ಪ್ರಸಂಗ. ಈ ವಿಷಯದಲ್ಲಿ ಕೃಷ್ಣನಿಗೂ ಇಂದ್ರನಿಗೂ ಯುದ್ಧವೇ ಆಯಿತು. ಇಂದ್ರನಿಗೆ ಸಹಾಯಕ್ಕಾಗಿ ಎಲ್ಲಾ ದೇವತೆಗಳೂ ಬಂದರು. ಕೃಷ್ಣನ ಪಕ್ಷದಲ್ಲಿ ಭಾಮೆ ಹಾಗೂ ಗರುಡ ಮಾತ್ರ. ರುದ್ರದೇವರು ಇಂದ್ರನ ಸಹಾಯಕ್ಕಾಗಿ ಬಂದಿದ್ದರು. ಆಗ ಕೃಷ್ಣನು ಬಾಣಪ್ರಯೋಗದಿಂದ ರುದ್ರದೇವನನ್ನು ಹೊಡೆದನು. ಗರುಡನು ಬಂದು ಈ ರುದ್ರನನ್ನೂ ಹಾಗೆಯೇ ಆತನ ವಾಹನವಾದ ನಂದಿಯನ್ನೂ ಒಟ್ಟಿಗೆ ದೂರಕ್ಕೆ ಅಟ್ಟಿದನು. ರುದ್ರದೇವರು ಅಲ್ಲಿಂದಲೇ ಕೈಲಾಸಕ್ಕೆ ಹೋದರು. ತಿರುಗಿ ಸ್ವರ್ಗಕ್ಕೆ ಬರಲಿಲ್ಲ. ಇದನ್ನು ಮಾಡಿದವ ಕೃಷ್ಣನ ವಾಹನವಾದ ಗರುಡನು. ಹೀಗೆ ಗರುಡನನ್ನೇ ಎದುರಿಸಲು ಸಾಧ್ಯವಾಗದವರು ರುದ್ರದೇವರು. ಇಂತಹ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡವ ಕೃಷ್ಣನು. ಆದ್ದರಿಂದ ಕೃಷ್ಣನಿಗೆ ಗರುಡನಿಗಿಂತ ಅನಂತಶಕ್ತಿ. ಇಂತಹ ಕೃಷ್ಣನು ತನಗಿಂತ ಅನಂತಪಾಲು ನಿಕೃಷ್ಟನಾದ ರುದ್ರನಿಂದ ವರವನ್ನು ಪಡೆಯುವುದು ಅಸಂಭಾವಿತ. ಜ್ಞಾನಿಗಳ ಮುಂದೆ ಈ ವಿಷಯವನ್ನು ಹೇಳಿದರೆ ಅವರು ಪರಿಹಾಸ ಮಾಡುತ್ತಾರೆ.

**ಮದನ್ಯಸೇವೈಹಿಕಕಾಮದಾತ್ರೀತ್ಯುದೀರಯನ್ ಸರ್ವಗುಣಾಗ್ರಗಣ್ಯಃ ।**
**ಸ್ವಪೌತ್ರಯಾತ್ರಾಂ ವಿರಚಯ್ಯ ಸೂನುಮವಾಪ ಪಾಪೌಘತಮಿಸ್ರಭಾನುಃ ॥ ೨೪ ॥**

ಮತ್=ನನ್ನಕ್ಕಿಂತ; ಅನ್ಯ=ಬೇರೆಯವರ; ಸೇವಾ=ಸೇವೆಯು; ಐಹಿಕ=ಈ ಲೋಕದ;

ಕಾಮ=ಆಸೆಯನ್ನು; ದಾತ್ರೀ=ಕೊಡತಕ್ಕದ್ದು; ಇತಿ=ಎಂದು; ಉದೀರಯನ್=ತಿಳಿಸುತ್ತಾ; ಸರ್ವ=ಎಲ್ಲಾ; ಗುಣ=ಗುಣಗಳಿಂದ; ಅಗ್ರಗಣ್ಯಃ=ಉತ್ತಮನಾದ; ಪಾಪ=ಪಾಪಗಳ; ಓಘ=ಸಮೂಹವೆಂಬ; ತಮಿಸ್ರ=ಕತ್ತಲೆಗೆ; ಭಾನುಃ=ಸೂರ್ಯನಂತಿರುವ ಕೃಷ್ಣನು; ಸ್ವ=ತನ್ನ; ಪೌತ್ರ=ಮೊಮ್ಮಗನ; ಯಾತ್ರಾಂ=ಯಾತ್ರೆಯನ್ನು; ವಿರಚಯ್ಯ=ಮಾಡಿ; ಸೂನುಂ=ಮಗನನ್ನು; ಅವಾಪ=ಪಡೆದನು.

ನರರಂತೆ ನಟಿಸಿ ವರವನ್ನು ಕೃಷ್ಣನು ಯಾಕೆ ಪಡೆದನು? ಉತ್ತರ– ಫಲಗಳಲ್ಲಿ ನಿತ್ಯ ಅನಿತ್ಯ ಎಂದು ಎರಡು ವಿಧ. ದೇವರಲ್ಲಿ ಬೇಡಿದರೆ ನಿತ್ಯಫಲ. ಇತರ ದೇವತೆಗಳಲ್ಲಿ ಬೇಡಿದರೆ ಅನಿತ್ಯಫಲ. ಸುತಾದಿ ಸಂಪತ್ತುಗಳೆಲ್ಲಾ ಅನಿತ್ಯಫಲಗಳು. ಇತರ ದೇವತೆಗಳು ಇಂತಹ ಫಲಗಳನ್ನು ಮಾತ್ರ ಕೊಡಲು ಶಕ್ತರು. ನಿತ್ಯಫಲವಾದ ಮೋಕ್ಷಸುಖವನ್ನು ದೇವರು ಮಾತ್ರ ಕೊಡಲು ಶಕ್ತನು. ಈ ಒಂದು ಗುಣ ದೇವರಲ್ಲಿ ಮಾತ್ರ ಇರುವುದು. ಇದನ್ನು ತಿಳಿಸಲು ಸರ್ವಗುಣಾಗ್ರಗಣ್ಯಃ ಎಂಬ ವಿಶೇಷಣವನ್ನು ಹೇಳಿದ್ದಾರೆ. ಈ ತತ್ವವನ್ನು ತಿಳಿಸಲು ರುದ್ರದೇವರ ಆರಾಧನೆಯನ್ನು ನಟಿಸಿದನು. ಇನ್ನು ಕೆಲವರು ಹೇಳುತ್ತಾರೆ– ಕೃಷ್ಣನು ಬಾಲ್ಯದಲ್ಲಿ ಮಾಡಿದ ಕೆಲಸಗಳಿಂದ ಆತನಿಗೆ ಪಾಪವು ಬಂದಿತ್ತು. ಅದರ ಮಾರ್ಜನೆಗಾಗಿ ತಪಸ್ಸುಮಾಡಿದ ಎಂದು. ಇದೂ ಸರಿಯಲ್ಲ. ಕತ್ತಲೆಗೂ ಸೂರ್ಯನಿಗೂ ಇರುವಂತೆ ಕೃಷ್ಣನಿಗೂ ಪಾಪಗಳಿಗೂ ಅಂತರವಿದೆ. ಪಾಪಗಳು ಕೃಷ್ಣನ ಬಳಿ ಸುಳಿಯಲು ಸಾಧ್ಯವೇ ಇಲ್ಲ. ಇಷ್ಟೇ ಅಲ್ಲದೆ ತನ್ನ ಪಾಪಗಳನ್ನೇ ತೊಳೆದುಕೊಳ್ಳಲು ಸಾಧ್ಯವಿಲ್ಲದ ರುದ್ರದೇವರು ಇನ್ನೊಬ್ಬರ ಪಾಪವನ್ನು ಪರಿಹರಿಸಲು ಹೇಗೆ ಶಕ್ತರಾಗುತ್ತಾರೆ?

**ಆನಂದಾಂಬುಧಿಮಗ್ನಮೂರ್ತಿರುದಯನ್ಮೋದಾಶ್ರುಧಾರಾಜಲಂ**
**ಭರ್ತ್ರುಂಘ್ರೌ ಪ್ರಣಿಧಾಯ ಕಾಯಕನಕಂ ಕೃಷ್ಣಾರ್ಪಿತಂ ಯೋಽತನೋತ್ ।**
**ಯಾ ತದ್ಗಾತ್ರಹರಿನ್ಮಣಿಂ ಕರವಶಂ ಚಕ್ರೇ ನವಾಪ್ತೋನಯಾ**
**ಕೋಽರ್ಥೋ ಯಾ ಕಮಲಾ ವಿಮುಕ್ತಕಬರೀ ಗರ್ಭೇ ದಧಾರ ಸ್ಮರಮ್ ॥ ೨೫ ॥**

ಆನಂದ=ಸುಖವೆಂಬ; ಅಂಬುಧಿ=ಸಾಗರದಲ್ಲಿ; ಮಗ್ನ=ಮುಳುಗಿದ; ಮೂರ್ತಿಃ= ಶರೀರವುಳ್ಳ; ಯಾ=ಯಾರು; ಉದಯನ್=ಉಂಟಾದ; ಮೋದ=ಸಂತೋಷದ; ಆಶ್ರುಧಾರಾ=ಕಣ್ಣೀರಿನ; ಜಲಂ=ನೀರನ್ನು; ಭರ್ತೃ=ಗಂಡನ; ಅಂಘ್ರೌ=ಪಾದದಲ್ಲಿ; ಪ್ರಣಿಧಾಯ=ಇಟ್ಟು; ಕಾಯ=ದೇಹವೆಂಬ; ಕನಕಂ=ಚಿನ್ನವನ್ನು; ಕೃಷ್ಣ=ಕೃಷ್ಣನಿಗೆ; ಅರ್ಪಿತಂ= ಅರ್ಪಿತವಾಗಿ; ಅತನೋತ್=ಮಾಡಿದಳೋ; ಯಾ=ಯಾರು; ತತ್=ಅವನ; ಗಾತ್ರ= ಶರೀರವೆಂಬ; ಹರಿನ್ಮಣಿಂ=ನೀಲಮಣಿಯನ್ನು; ಕರವಶಂ=ಅಧೀನವನ್ನಾಗಿ; ಚಕ್ರೇ= ಮಾಡಿದಳೋ; ಯಾ=ಯಾವ; ಕಮಲಾ=ರುಗ್ಮಿಣಿಯು; ವಿಮುಕ್ತ=ಬಿಚ್ಚಲ್ಪಟ್ಟ; ಕಬರಾ= ಕೂದಲುಳ್ಳವಳಾಗಿ; ಗರ್ಭೇ=ಉದರದಲ್ಲಿ; ಸ್ಮರಂ=ಕಾಮನನ್ನು; ದಧಾರ=ಧರಿಸಿದಳೋ; ಅನಯಾ=ಇವಳಿಂದ; ಕಃ=ಯಾವ; ಅರ್ಥಃ=ಪುರುಷಾರ್ಥವು; ಅನವಾಪ್ತಃ=ಹೊಂದಲ್ಪಡಲಿಲ್ಲ.

ರುಗ್ಮಿಣಿಯು ಕೃಷ್ಣನಿಂದ ನಾಕು ರೀತಿಯ ಪುರುಷಾರ್ಥಗಳನ್ನು ಪಡೆದಳು. ಕೃಷ್ಣನ ಜೊತೆ ರಮಿಸಿದಳೂ ಕೂಡಾ ಎಂಬುದನ್ನು ರಾಜರು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ.

ನಾಲ್ಕು ರೀತಿಯ ಪುರುಷಾರ್ಥಗಳಲ್ಲಿ ಮೊದಲನೆಯದ್ದು ಧರ್ಮ. ಕೃಷ್ಣನನ್ನು ಮದುವೆಯಾದ ಇವಳಿಗೆ ಬಹಳ ಆನಂದ. ಸ್ವಯಂ ಆನಂದಸ್ವರೂಪಳೂ ಕೂಡಾ. ಆನಂದಸಮುದ್ರದಲ್ಲಿ ಸದಾ ಮುಳುಗಿದವಳು. ಇವಳು ಕೃಷ್ಣನ ಪಾದಗಳಲ್ಲಿ ತಲೆ ಇಟ್ಟು ನಮಸ್ಕರಿಸಿದಳು. ಕಣ್ಣುಗಳಿಂದ ಆನಂದಜಲವು ಪಾದಗಳ ಮೇಲೆ ಬಿತ್ತು. ಅನಂತರ ಎದ್ದು ನಾಚಿಕೆಯಿಂದ ನಿಂತಳು. ಆಗ ಕೃಷ್ಣನು ಆಕೆಯನ್ನು ತನ್ನ ಕರಗಳಿಂದ ಆಲಿಂಗಿಸಿದನು. ಈಕೆಯು ತನ್ನ ದೇಹವನ್ನು ಆತನ ಕೈಗೆ ಒಪ್ಪಿಸಿದಳು. ಇದು ರಮಣದ ಪ್ರಥಮಹಂತ. ಈ ಘಟನೆಯನ್ನು ಆಕೆಯ ಧರ್ಮಾಚರಣೆಗೆ ಹೋಲಿಸುತ್ತಾರೆ. ಪ್ರಕೃತ ಈಗ ರುಗ್ಮಿಣಿಯು ದಾನರೂಪ ಧರ್ಮವನ್ನು ಆಚರಿಸಿದಳು. ದಾನಮಾಡುವ ವ್ಯಕ್ತಿ ಮೊದಲು ಸ್ನಾನಮಾಡಬೇಕು. ಹಾಗೆಯೇ ಸಂತೋಷದಿಂದಲೂ ಇರಬೇಕು. ಈಕೆಯು ಆನಂದದಿಂದ ಇದ್ದಾಳೆ. ಎಷ್ಟು ಆನಂದ ಅಂದರೆ ಆನಂದಸಮುದ್ರದಲ್ಲಿ ಮುಳುಗಿದ್ದಾಳೆ ಎಂದು ಹೇಳಿದರೂ ಸರಿಯಾಗುತ್ತದೆ. ತಥಾ ಚ ಈಕೆ ಸ್ನಾನಮಾಡಿದಳು ಎಂದು ಹೇಳಿದಂತಾಯಿತು. ಹಸ್ತದಲ್ಲಿ ಜಲವನ್ನು ಕೊಟ್ಟು ದಾನಮಾಡಬೇಕು. ಈಕೆಯ ಆನಂದಭಾಷ್ಪವೇ ಜಲ. ವಸ್ತುತಃ ಜಲವನ್ನು ಕೈಯಲ್ಲಿ ಕೊಡಬೇಕು. ಸಾಮಾನ್ಯ ಜನರಿಗೆ ದಾನಕೊಡುವಾಗ ಈ ನಿಯಮ. ನಮ್ಮಕ್ಕಿಂತ ತುಂಬಾ ದೊಡ್ಡವರಿಗೆ ಕೊಡುವುದಾದರೆ ಆಗ ಜಲವನ್ನು ಪಾದಗಳಿಗೆ ಕೊಡುವುದು ಯೋಗ್ಯ. ಆದ್ದರಿಂದ ಈಕೆ ಪಾದಗಳಿಗೆ ಜಲವನ್ನು ಅರ್ಪಿಸಿದಳು. ದಾನದ ವಸ್ತು ಚಿನ್ನ. ಯಾವ ಚಿನ್ನ ಅಂದರೆ ತಾನೇ. ಈಕೆಯ ಮೈಬಣ್ಣ ಚಿನ್ನದ್ದು. ಈಕೆ ತನ್ನನ್ನು ಕೃಷ್ಣನಿಗೆ ಅರ್ಪಿಸಿದಳು. ಕೃಷ್ಣನು ಈಕೆಯ ಸಮ್ಮತಿಯಿಂದಲೇ ಈಕೆಯನ್ನು ತನ್ನ ಕೈಗಳಿಂದ ಸ್ವೀಕರಿಸಿ ಆಲಿಂಗಿಸಿದನು. ಈ ರೀತಿ ರುಗ್ಮಿಣಿಯು ತಾನೆಂಬ ಚಿನ್ನವನ್ನು ಕೃಷ್ಣನ ಕೈಯಲ್ಲಿ ಆನಂದಾಶ್ರುಪೂರ್ವಕ ದಾನಮಾಡುವ ಮೂಲಕ ಧರ್ಮವನ್ನು ಆಚರಿಸಿದಳು.

ಎರಡನೇ ಪುರುಷಾರ್ಥ ಅರ್ಥ –ಅಂದರೆ ಸಂಪತ್ತು. ಕೃಷ್ಣನು ಈಕೆಯನ್ನು ಆಲಿಂಗಿಸಿದ್ದು. ಅನಂತರ ಈಕೆಯು ಕೃಷ್ಣನನ್ನು ಆಲಿಂಗಿಸಿದಳು. ಕೃಷ್ಣನು ಇಂದ್ರನೀಲ ಮಣಿಯಂತೆ ಇದ್ದಾನೆ. ಕೃಷ್ಣನೆಂಬ ಇಂದ್ರನೀಲಮಣಿಯನ್ನು ಪಡೆದಳು. ದೇವರಿಂದ ಸಂಪತ್ತನ್ನು ಪಡೆಯುವವರು ಬಹಳ ಮಂದಿ. ಈಕೆಯು ದೇವರನ್ನೇ ಸಂಪತ್ತನ್ನಾಗಿ ಪಡೆಯುವ ಮೂಲಕ ಅರ್ಥವೆಂಬ ಎರಡನೆ ಪುರುಷಾರ್ಥವನ್ನು ಪಡೆದಳು. ಈಕೆಯೂ ಕೃಷ್ಣನನ್ನು ಆಲಿಂಗಿಸಿದಳು. ಪರಸ್ಪರ ಆಲಿಂಗನೆಯು ರಮಣದ ಎರಡನೆ ಹಂತ.

ಮೂರನೆ ಪುರುಷಾರ್ಥ ಕಾಮ. ಕೃಷ್ಣನು ರುಗ್ಮಿಣಿಯಲ್ಲಿ ಗರ್ಭಾದಾನ ಮಾಡಿದನು.

ರುಗ್ಮಿಣಿಯ ಗರ್ಭದಲ್ಲಿ ಪ್ರದ್ಯುಮ್ನನು ಪ್ರವೇಶಿಸಿದನು. ಈತನು ಕಾಮನ ಅವತಾರ. ರುಗ್ಮಿಣಿಯು ಕೃಷ್ಣನಿಂದ ಕಾಮವೆಂಬ ಪುರುಷಾರ್ಥವನ್ನು ಹೊಂದಿದಳು.

ಕೊನೆಯದ್ದು ಮೋಕ್ಷ. ಕೃಷ್ಣನ ಜೊತೆ ರಮಿಸುವಾಗ ತಲೆಕೂದಲು ಸಹಜವಾಗಿ ಬಿಚ್ಚುತ್ತದೆ. ಜೀವನಿಗೆ ಲಿಂಗದೇಹದ ಬಂಧನವೇ ಸಂಸಾರ. ಲಿಂಗದೇಹದ ಗಂಟುಬಿಚ್ಚಿ ಅದು ದೂರ ಹೋಗುವುದೇ ಮೋಕ್ಷ. ಕಟ್ಟಿಕೊಂಡಿದ್ದ ತಲೆ ಸೂಡಿಯು ಬಿಚ್ಚಿಕೊಂಡದ್ದು ಬಿಡುಗಡೆಯ ಸಂಕೇತ. ಇದು ಆದದ್ದು ಕೃಷ್ಣನಿಂದಲೇ. ಈ ರೀತಿ ರುಗ್ಮಿಣಿಯು ದೇವರ ಜೊತೆ ರಮಿಸುವ ಮೂಲಕ ನಾಲ್ಕು ರೀತಿಯ ಪುರುಷಾರ್ಥಗಳನ್ನು ಪಡೆದಳು.

**ಗರ್ಭಂ ಬಭಾರ ಗಜರಮ್ಯಗತಿಃ ಸ್ವಕಾಂತಾತ್**
**ಮಧ್ಯೇ ಮನೋಜ್ಞಮದನಾತ್ಮಕಮಬ್ಧಿಪುತ್ರೀ ।**
**ಹೃದ್ಯಪ್ಯಯೋಗಚಕಿತೇ ಹೃದಯಂಗಮಸ್ಯ**
**ಮರ್ತ್ಯಾನುಕಾರಿಚರಿತಸ್ಯ ತಮೇವ ತನ್ವೀ** ॥ ೨೬ ॥

ಗಜ=ಆನೆಯಂತೆ; ರಮ್ಯ=ಚಂದದ; ಗತಿಃ=ಗಮನವುಳ್ಳ; ತನ್ವೀ=ಕೃಶಳಾದ; ಅಬ್ಧಿ= ಸಮುದ್ರದ; ಪುತ್ರೀ=ಮಗಳು; ಸ್ವ=ತನ್ನ; ಕಾಂತಾತ್=ಪತಿಯಿಂದ; ಮಧ್ಯೇ=ಉದರದಲ್ಲಿ; ಮನೋಜ್ಞ=ಚಂದದ; ಮದನಾತ್ಮಕಂ=ಕಾಮನನ್ನು; ಗರ್ಭಂ=ಗರ್ಭವನ್ನಾಗಿ; ಬಭಾರ= ಧರಿಸಿದಳು; ಹೃದಯಂಗಮಸ್ಯ=ಚಂದದ; ಮರ್ತ್ಯ=ಮಾನವರ; ಅನುಕಾರಿ= ಅನುಕರಣೀಯ; ಚರಿತಸ್ಯ=ಚರಿತ್ರವುಳ್ಳವನ; ಅಯೋಗ=ವಿರಹದಿಂದ; ಚಕಿತೇ= ಕಳವಳಗೊಂಡ; ಹೃದಿ ಅಪಿ=ಮನದಲ್ಲಿಯೂ; ತಂ ಏವ=ಅವನನ್ನೇ; ಬಭಾರ=ಧರಿಸಿದಳು.

ರುಗ್ಮಿಣಿಯು ಕೃಷ್ಣನಿಂದ ಗರ್ಭವನ್ನು ಧರಿಸಿದಳು. ಕಾಮನೆಂಬ ದೇವತೆಯು ಗರ್ಭವನ್ನು ಪ್ರವೇಶಿಸಿದನು. ಸಮುದ್ರನ ಮಗಳಾದ್ದರಿಂದ ಸಮುದ್ರದಂತೆ ತನ್ನ ಗಾಂಭೀರ್ಯವನ್ನು ಉಳಿಸಿಕೊಂಡವಳು. ಆದ್ದರಿಂದಲೇ ಯಾವ ಕೆಲಸದಲ್ಲಿಯೂ ಅವಸರವನ್ನು ತೋರಿಸುತ್ತಿರಲಿಲ್ಲ. ಸಾವಧಾನವಾಗಿ ಆನೆಯಂತೆ ನಿಧಾನವಾದ ಚಂದದ ನಡಿಗೆ ಉಳ್ಳವಳಾಗಿಯೇ ಪತಿಯನ್ನು ಸಮೀಪಿಸುತ್ತಿದ್ದಳು. ಸ್ಥೂಲ ಶರೀರದವರಿಗೆ ಓಡಲಾಗುವುದಿಲ್ಲ. ಆ ರೀತಿ ಅಲ್ಲ ಇವಳು. ಕೃಶಾಂಗಿಯಾದರೂ ಘನತೆಯನ್ನು ಕಾಪಾಡಿಕೊಂಡಿದ್ದಳು. ಗರ್ಭವನ್ನು ಧರಿಸಿದನಂತರ ಪತಿಯೊಡನೆ ರಮಿಸಬಾರದು ಎಂದು ನಿಯಮವಿದೆ. ಈ ದಂಪತಿಗಳು ಮಾನವರ ಮಧ್ಯದಲ್ಲಿ ಅವತರಿಸಿದ್ದರಿಂದ ಮಾನವರ ನಿಯಮಗಳನ್ನು ಪಾಲಿಸುತ್ತಿದ್ದಾರೆ. ಆದ್ದರಿಂದ ಇವಳು ಪತಿಯ ಜೊತೆ ಸಮಾಗಮವನ್ನು ಅನಂತರ ಮಾಡಲಿಲ್ಲ. ಆದರೆ ಪತಿಯ ವಿರಹವನ್ನು ಸಹಿಸಲೂ ಆಗುತ್ತಿರಲಿಲ್ಲ. ಆದ್ದರಿಂದ ಮನದಲ್ಲಿ ಸದಾ ಕೃಷ್ಣನನ್ನೇ ಕಾಮಿಸುತ್ತಿದ್ದಳು. ಅಂದರೆ ಕಾಮನು ಇವಳ ಉದರವನ್ನು ಮಾತ್ರ ಪ್ರವೇಶಿಸಿದ್ದಲ್ಲ. ಮನವನ್ನೂ ಪ್ರವೇಶಿಸಿದನು. ಒಂದೇ ಮಗುವನ್ನು ಎರಡು ಕಡೆ ಧರಿಸಿದಳು.

ಮಾರಂ ಕುಮಾರಂ ಸುಷುವೇಽಥಭೈಷ್ಮೀ
ಶೌರೇರ್ಜಿತಾರೇರನುರೂಪರೂಪಮ್ ।
ಪ್ರಾಚೀನರೋಚಿಃ ಶತಪೂರಿತಾಶಂ
ಪ್ರಾಚಾಂ ಸುವಾಚಾಂ ವಿಷಯಂ ನಿಶೇಶಮ್ ॥ ೨೭ ॥

ಅಥ=ಅನಂತರ; ಭೈಷ್ಮೀ=ರುಗ್ಮಿಣಿಯು; ಪ್ರಾಚೀ=ಪೂರ್ವದಿಕ್ಕು; ರೋಚಿ=ಕಿರಣಗಳ; ಶತ=ನೂರರಿಂದ; ಪೂರಿತ=ತುಂಬಿದ; ಆಶಂ=ದಿಕ್ಕುಳ್ಳ; ಪ್ರಾಚಾಂ=ಪ್ರಾಚೀನರ; ಸುವಾಚಾಂ=ಒಳ್ಳೆಯ ಮಾತಿಗೆ; ವಿಷಯಂ=ವಿಷಯನಾದ; ನಿಶಾ=ರಾತ್ರಿಗೆ; ಈಶಂ ಇವ=ಒಡೆಯನಂತೆ; ಜಿತ=ಸೋತಿರುವ; ಅರೇಃ=ಶತ್ರುಗಳುಳ್ಳ; ಶೌರೇಃ=ಕೃಷ್ಣಿಗೆ; ಅನುರೂಪ=ಯೋಗ್ಯವಾದ; ರೂಪಂ=ರೂಪವುಳ್ಳ; ಮಾರಂ=ಕಾಮನನ್ನು; ಕುಮಾರಂ= ಮಗನನ್ನಾಗಿ; ಸುಷುವೇ=ಹಡೆದಳು.

ತುಂಬು ಗರ್ಭಿಣಿಯಾದ ರುಗ್ಮಿಣಿಯು ಒಂದು ದಿನ ಕಾಮನನ್ನು ಹಡೆದಳು. ಪೂರ್ವದಿಕ್ಕಿನಿಂದ ಚಂದ್ರನು ಉದಿಸುವಂತೆ ಹುಟ್ಟಿದನು. ಚಂದ್ರನು ತನ್ನ ಕಿರಣಗಳಿಂದ ದಶದಿಕ್ಕುಗಳನ್ನು ಬೆಳಗುವವನು. ಒಬ್ಬನು ಕವಿಯಾಗಬೇಕಾದರೆ ಚಂದ್ರನನ್ನು ಪರಿಪರಿಯಾಗಿ ಹೊಗಳಲೇಬೇಕು. ಇಂತಹ ಚಂದ್ರನು ಪೂರ್ವದಿಕ್ಕಿನಲ್ಲಿ ಉದಿಸುತ್ತಾನೆ. ಹಾಗೆಯೇ ಈ ಕಾಮನೂ ಕೂಡ. ಎಲ್ಲಾ ಚೇತನರ ಮನವನ್ನೂ ಪ್ರವೇಶಮಾಡುತ್ತಾನೆ. ಅವರಲ್ಲಿ ನಾನಾ ರೀತಿಯ ಕಾಮನೆಗಳನ್ನು ಉಂಟುಮಾಡುತ್ತಾನೆ. ಜೀವಿಗಳಲ್ಲಿ ಚೈತನ್ಯವನ್ನು ಉಂಟುಮಾಡಿ ತಾನು ಚೆನ್ನಾಗಿ ಬೆಳಗುತ್ತಾನೆ; ಜೀವಿಗಳನ್ನೂ ಬೆಳಗಿಸುತ್ತಾನೆ. ಆದ್ದರಿಂದಲೇ ಜ್ಞಾನಿಗಳೆಲ್ಲಾ ಈತನನ್ನು ಚೆನ್ನಾಗಿ ಸ್ತುತಿಸುತ್ತಾರೆ. ಕೃಷ್ಣನಂತೆ ತೋರುತ್ತದೆ ಈ ಮಗು. ಲೋಕದಲ್ಲಿ ಮಗು ತಂದೆಯಂತೆ ತೋರಲು ಕಾರಣ ಮಗುವಿನ ದೇಹ ತಂದೆಯ ದೇಹದ ಧಾತುವಿನಿಂದ ಹುಟ್ಟಿದ್ದು. ದೇವರದ್ದು ಆನಂದಮಯ ದೇಹ. ಈ ದೇಹದ ಭಾಗದಿಂದ ಯಾರ ದೇಹವೂ ಆಗುವುದಿಲ್ಲ. ಆದರೂ ಪ್ರದ್ಯುಮ್ನನು ಕೃಷ್ಣನಂತೆ ತೋರುತ್ತಿದ್ದಾನೆ. ಇದಕ್ಕೆ ಕಾರಣ ಜೀವರಿಗೂ ದೇವರಿಗೂ ಇರುವ ಬಿಂಬಪ್ರತಿಬಿಂಬ ಭಾವ.

ಯಃ ಕರ್ಣೇ ನಿಜಚಿಹ್ನಮುನ್ನತಶರಾನ್ ದಂತೋಷ್ಠದೃಗ್ದೋಃ ಪದೇ
ಸ್ವಾಂಗಂ ಮಧ್ಯತನೌ ಭ್ರುವೋರ್ವರಧನುರ್ಮೌರ್ವೀಂ ಅಸತ್ಕುಂತಲೇ ।
ಮಾಲ್ಯೇ ಮಂತ್ರಿಣಮಾನನೇ ಚ ಸುಹೃದಂ ವಾಕ್ಯೇರ್ಷಯಿತ್ವಾ ಶುಕಂ
ತದ್ಗಾತ್ರಂ ರಚಯಾಂಬಭೂವ ಸ ಸುತಸ್ತಸ್ಯ ಸ್ಮರೋಽಭೂತ್ಕಿಲ ॥ ೨೮ ॥

ಯಃ=ಯಾರು; ಕರ್ಣೇ=ಕಿವಿಯಲ್ಲಿ; ನಿಜ=ತನ್ನ; ಚಿಹ್ನಂ=ಚಿಹ್ನೆಯನ್ನು; ದಂತ= ಹಲ್ಲುಗಳ; ಓಷ್ಠ=ತುಟಿಗಳ; ದೃಕ್=ಕಣ್ಣುಗಳ; ದೋಃ=ಕೈಗಳ; ಪದೇ=ಕಾಲುಗಳಲ್ಲಿ;

ಉನ್ನತ=ಉತ್ತಮವಾದ; ಶರಾನ್=ಬಾಣಗಳನ್ನು; ಮಧ್ಯ=ಮಧ್ಯದ; ತನೌ=ಶರೀರದಲ್ಲಿ; ಸ್ವಾಂಗಂ=ತನ್ನ ದೇಹವನ್ನು; ಭ್ರುವೋಃ=ಹುಬ್ಬುಗಳಲ್ಲಿ; ವರ=ಉತ್ತಮವಾದ; ಧನುಃ=ಬಿಲ್ಲನ್ನು; ಲಸತ್=ಶೋಭಿಸುವ; ಕುಂತಲೇ=ಕೂದಲಲ್ಲಿ; ಮೌರ್ವೀಂ=ಹಗ್ಗವನ್ನು; ಮಾಲ್ಯೇ=ಮಾಲಿಕೆಯಲ್ಲಿ; ಮಂತ್ರಿಣಂ=ಮಂತ್ರಿಯನ್ನು; ಆನನೋ=ಮುಖದಲ್ಲಿ; ಸುಹೃದಂ=ಗೆಳೆಯುನನ್ನು; ವಾಕ್ಯೇಷು=ಮಾತುಗಳಲ್ಲಿ; ಶುಕಂ=ಗಿಳಿಯನ್ನು; ಅರ್ಪಯಿತ್ವಾ=ಇಟ್ಟು; ತತ್=ಅವನ; ಗಾತ್ರಂ=ದೇಹವನ್ನು; ರಚಯಾಂ ಬಭೂವ= ಮಾಡಿದನೋ; ಸಃ=ಅಂತಹ; ಸ್ಮರಃ=ಕಾಮನು; ತಸ್ಯ=ಅವನ; ಸುತಃ=ಮಗನು; ಅಭೂತ್ ಕಿಲ=ಆದನಷ್ಟೇ.

ಪ್ರದ್ಯುಮ್ನನಿಗೆ ದೇಹವನ್ನು ಕೃಷ್ಣನು ಕೊಟ್ಟನು ಎಂದರೆ ಪ್ರದ್ಯುಮ್ನನನ್ನು ಸೃಷ್ಟಿಸಿದವನು ಕೃಷ್ಣನು ಎಂದು ಹಿಂದಿನ ಶ್ಲೋಕದಲ್ಲಿ ರಾಜರು ಹೇಳಿದ್ದಾರೆ. ಈ ಶ್ಲೋಕದಲ್ಲಿ ಕೃಷ್ಣನಿಗೆ ದೇಹವನ್ನು ಪ್ರದ್ಯುಮ್ನನು ಕೊಟ್ಟವನು ಎಂದು ಚಮತ್ಕಾರವಾಗಿ ವರ್ಣಿಸುತ್ತಾರೆ.

ಕೃಷ್ಣದೇಹ ಹೇಗಿದೆ ಎಂಬುದನ್ನು ಮೊದಲು ನೋಡೋಣ. ಈತನ ಕಿವಿಯಲ್ಲಿ ಮೊಸಳೆಯ ಆಕಾರದ ಕುಂಡಲಗಳಿವೆ. ಕವಿಗಳು ಈ ಆಭರಣವನ್ನು ಸೇರಿಸಿಕೊಂಡು ಕಿವಿಗಳನ್ನೇ ಮೊಸಳೆಯ ಆಕಾರವುಳ್ಳದ್ದನ್ನಾಗಿ ವರ್ಣಿಸುತ್ತಾರೆ. ಕೃಷ್ಣನ ಹಲ್ಲುಗಳು ಮಲ್ಲಿಗೆಯ ಮೊಗ್ಗಿನಂತೆ ಇದೆ. ತುಟಿಗಳು ಮಾವಿನ ಚಿಗುರಿನಂತೆ ಕೆಂಪಗಿದೆ. ಕಣ್ಣುಗಳು ನೈದಿಲೆಯಂತೆ ಕಪ್ಪಗಿವೆ. ಕೈಗಳು ದಂಟಿನಿಂದ ಕೂಡಿದ ಕಮಲದಂತೆ ಉದ್ದವಾಗಿವೆ. ಕಾಲುಗಳು ಅಶೋಕಪುಷ್ಪಗಳಂತೆ ಇವೆ. ಈ ಮರದಲ್ಲಿ ಹೂಗಳು ಆಗಬೇಕಾದರೆ ಕಾಲಿಂದ ಮರವನ್ನು ಒದೆಯಬೇಕು. ಈ ರೀತಿ ಕಾಲಿಗೂ ಈ ಮರಕ್ಕೂ ಸಂಬಂಧ ಇರುವುದರಿಂದ ಪಾದವು ಅಶೋಕ ಹೂವಿನಂತೆ ಇದೆ. ಉದರವು ತುಂಬ ಕೃಶವಾಗಿದೆ. ಎಷ್ಟು ಕೃಶ ಅಂದರೆ ಕಾಣಿಸುವುದೇ ಇಲ್ಲ. ಎರಡು ಹುಬ್ಬುಗಳು ಬಿಲ್ಲಿನಂತೆ ಚೆನ್ನಾಗಿ ಬಾಗಿವೆ. ತಲೆಕೂದಲುಗಳು ಬಿಲ್ಲಿನ ಹಗ್ಗದಂತೆ ಇವೆ. ಕೊರಳಲ್ಲಿ ಒಂದು ವನಮಾಲೆ ಇದೆ. ಇದರಲ್ಲಿ ನಾನಾ ರೀತಿಯ ಹೂಗಳಿವೆ. ವಸಂತಮಾಸದಲ್ಲಿ ನಾನಾರೀತಿಯ ಹೂಗಳು ಅರಳುತ್ತವೆ. ಆದ್ದರಿಂದ ಕೊರಳಲ್ಲಿ ವಸಂತಮಾಸವೇ ಇರುವಂತೆ ತೋರುತ್ತದೆ. ಮುಖವು ಚಂದ್ರನಂತೆ ಉರುಟಾಗಿದೆ. ಮನೋಹರವೂ ಆಗಿದೆ. ಮಾತು ಗಿಳಿಯಂತೆ ಇಂಪಾಗಿವೆ. ಇವಿಷ್ಟು ಕೃಷ್ಣನ ಚಿತ್ರಣ.

ಇನ್ನು ಕಾಮನ ಚಿತ್ರಣವನ್ನು ನೋಡೋಣ– ಇವನಿಗೆ ಮಕರಧ್ವಜವೆಂದು ಹೆಸರಿದೆ. ಅಂದರೆ ಇವನ ಧ್ವಜದಲ್ಲಿ ಮೀನಿನ ಚಿತ್ರ. ಆ ಮೀನನ್ನು ಕೃಷ್ಣನ ಕಿವಿಗಳನ್ನಾಗಿ ಮಾಡಿದ. ಕಮಲ, ನೈದಿಲೆ, ಮಾವಿನ ಚಿಗುರು, ಅಶೋಕ ಹಾಗೂ ಮೊಗ್ಗುಮಲ್ಲಿಗೆ ಈತನ ಬಾಣಗಳು. ಇವುಗಳನ್ನು ಕೃಷ್ಣನ ಕೈ, ಕಾಲು, ಹಲ್ಲುಗಳು, ಕಣ್ಣು ಹಾಗೂ ತುಟಿಗಳನ್ನಾಗಿ ಮಾಡಿದನು. ಈ ಕಾಮನನ್ನು ಅನಂಗ ಎಂದೂ ಕರೆಯುವರು. ಅಂದರೆ ಇವನ

ಶರೀರ ಯಾರಿಗೂ ಕಾಣಿಸುವುದಿಲ್ಲ. ಆದ್ದರಿಂದ ಶರೀರ ಇಲ್ಲದವನು ಎಂದು ಹೆಸರು. ಅಂತಹ ದೇಹವನ್ನು ಕೃಷ್ಣನ ಉದರವನ್ನಾಗಿಸಿದನು. ನಾರಿಯರ ಹುಬ್ಬುಗಳು ಬಹಳ ಮೋಹಕಗಳು. ಆ ಹುಬ್ಬುಗಳ ಮೂಲಕ ಕಾಮನು ಬಾಣಗಳನ್ನು ಪ್ರಯೋಗಿಸುವುದು. ಅವುಗಳನ್ನೇ ತನ್ನ ಬಿಲ್ಲನ್ನಾಗಿ ಮಾಡಿಕೊಳ್ಳುತ್ತಾನೆ. ಆ ಬಿಲ್ಲನ್ನು ಕೃಷ್ಣನ ಹುಬ್ಬುಗಳನ್ನಾಗಿ ಮಾಡಿದನು. ಈ ಬಿಲ್ಲಿನ ಹಗ್ಗ ಭ್ರಮರಗಳು. ಭ್ರಮರಗಳು ಸಾಲಾಗಿ ಇದ್ದರೆ ನೋಡಲು ತುಂಬಾ ಚೆಂದ. ನೈಯ್ದ ಜಡೆಯಂತೆ ಕಾಣುತ್ತದೆ. ಈ ಕಾಮನು ತನ್ನ ಬಿಲ್ಲಿನ ಹಗ್ಗವಾದ ಈ ಭ್ರಮರಗಳನ್ನು ಕೃಷ್ಣನ ತಲೆಕೂದಲನ್ನಾಗಿ ಮಾಡಿದ್ದಾನೆ. ವಸಂತ ಋತುವು ಕಾಮನ ಮಂತ್ರಿಯು. ಈ ಮಂತ್ರಿಯನ್ನು ಕೃಷ್ಣನ ಕೊರಳಿನ ಮಾಲಿಕೆಯನ್ನಾಗಿ ಮಾಡಿದನು. ಗೆಳೆಯನಾದ ಚಂದ್ರನನ್ನು ಕೃಷ್ಣನ ಮುಖವನ್ನಾಗಿ ಮಾಡಿ ಸಹಾಯಕನಾದ ಗಿಳಿಯನ್ನು ಮಾತಿನಲ್ಲಿ ಇರಿಸಿದನು. ಈ ರೀತಿ ತನ್ನಲ್ಲಿರುವ ಸಲಕರಣೆಗಳಿಂದ ಕೃಷ್ಣನ ದೇಹವನ್ನು ರಚಿಸಿದ ಕಾಮನು ಕೃಷ್ಣನ ಮಗನಾಗಲು ಹೇಗೆ ಸಾಧ್ಯ. ಒಂದು ಉತ್ತಮವಾದ ದೇಹ ಅಂದರೆ ಇಷ್ಟೆಲ್ಲಾ ಲಕ್ಷಣಗಳಿಂದ ಕೂಡಿರಬೇಕು. ಇಂತಹ ದೇಹದ ರಚನೆಗೆ ಇಷ್ಟೆಲ್ಲಾ ಸಲಕರಣೆಗಳು ಬೇಕು. ಇವೆಲ್ಲಾ ಇರುವುದು ಕಾಮನಲ್ಲಿ ಮಾತ್ರ.

ರಾಜರು ಮಾಡಿದ ಈ ರೀತಿಯ ವರ್ಣನೆಯಿಂದ ಕೃಷ್ಣ ಹಾಗೂ ಕಾಮ ಈ ಎರಡು ವ್ಯಕ್ತಿಗಳ ಚಿತ್ರಣವೂ ಸಿಕ್ಕಿದೆ. ಇದು ರಾಜರ ಕೌಶಲ್ಯ.

**ತಾರುಣ್ಯಲಾವಣ್ಯಸುವೀರ್ಯಧೈರ್ಯ-**
**ಕಾರುಣ್ಯಮುಖ್ಯೈಃ ದ್ರವಿಣೈಃ ಪ್ರಕೃಷ್ಟಃ ।**
**ಪ್ರದ್ಯುಮ್ನನಾಮಾರ್ಥಮಸೌ ಕುಮಾರಃ**
**ಪ್ರದ್ಯುಮ್ನಮುಖ್ಯಾಂಶಯುತಃ ಪಿಪರ್ತಿ** ॥ ೨೯ ॥

ತಾರುಣ್ಯ=ಯೌವನವು; ಲಾವಣ್ಯ=ಸೌಂದರ್ಯವು; ಸುವೀರ್ಯ=ಶಕ್ತಿಯು; ಧೈರ್ಯ =ಧೈರ್ಯವು; ಕಾರುಣ್ಯ=ದಯೆಯು; ಮುಖ್ಯೈಃ=ಮೊದಲಾದ; ದ್ರವಿಣೈಃ=ಸಂಪತ್ತಿನಿಂದ; ಪ್ರಕೃಷ್ಟಃ=ಉತ್ತಮನಾದ; ಪ್ರದ್ಯುಮ್ನಃ=ಪ್ರದ್ಯುಮ್ನನಾಮಕ ದೇವರ; ಮುಖ್ಯ=ಉತ್ತಮವಾದ; ಅಂಶ=ಅಂಶದಿಂದ; ಯುತಃ=ಕೂಡಿದ; ಅಸೌ=ಈ; ಕುಮಾರಃ=ಹುಡುಗನು; ಪ್ರದ್ಯುಮ್ನ= ಪ್ರದ್ಯುಮ್ನ ಎಂಬ; ನಾಮ=ಹೆಸರಿನ; ಅರ್ಥಂ=ಅರ್ಥವನ್ನು; ಪಿಪರ್ತಿ=ಪಾಲಿಸುತ್ತಾನೆ.

ಈ ಹುಡುಗನು ಯಾವಾಗಲೂ ತರುಣನು. ಮನೋಹರನು, ವೀರನು, ಧೈರ್ಯವಂತನು, ದಯಾಮಯಿ. ಹೀಗೆಯೇ ಇನ್ನೂ ಅನೇಕ ಗುಣಗಳೆಂಬ ಸಂಪತ್ತಿನಿಂದ ಕೂಡಿದವನು. ಭಗವಂತನ ಚತುರ್‌ರೂಪಗಳಲ್ಲಿ ಮೂರನೇ ರೂಪ ಪ್ರದ್ಯುಮ್ನ. ಈ ರೂಪದ ಸನ್ನಿಧಾನವೂ ಈತನಲ್ಲಿ ಬಹಳ ಇದೆ. ಈ ಮಗುವಿಗೆ ಪ್ರದ್ಯುಮ್ನ ಎಂಬ ಹೆಸರಿನ್ನಿಟ್ಟರು. ದ್ಯುಮ್ನ ಎಂದರೆ ಸಂಪತ್ತು. ಯೌವನವೇ ಮೊದಲಾದ ಸಂಪತ್ತು ಈ ಮಗುವಿನಲ್ಲಿ ಬಹಳ ಇರುವುದರಿಂದ ಪ್ರದ್ಯುಮ್ನ ಎಂಬ ಹೆಸರು ಸಾರ್ಥಕವಾಯಿತು.

**ಸರುಗ್ಮವತ್ಯಾಂ ಕಿಲ ರುಗ್ಮಿಪುತ್ರ್ಯಾಂ ಹರೇಃ ಸುತೋಜೀಜನದಾತ್ಮಜಾತಮ್ ।**
**ಅಸೂತ ತಂ ಯಾಮಲಹೇಮಕಲ್ಪಂ ಅಸೌ ಸ್ವನಾಮೋಚಿತಮೇವ ಬಭ್ರೇಃ ॥ ೩೦ ॥**

ಹರೇಃ=ಕೃಷ್ಣನ; ಸುತಃ=ಮಗನಾದ; ಸಃ=ಅವನು; ರುಗ್ಮ=ರುಗ್ಮನ; ಪುತ್ರ್ಯಾಂ= ಮಗಳಾದ; ರುಗ್ಮವತ್ಯಾಂ=ರುಗ್ಮವತಿಯಲ್ಲಿ; ಆತ್ಮಜಾತಂ=ತನ್ನ ಮಗನನ್ನು; ಅಜೀಜನತ್=ಪಡೆದನು; ಯಾ=ಯಾರು; ಅಮಲ=ಸ್ವಚ್ಛವಾದ; ಹೇಮ=ಬಂಗಾರಕ್ಕೆ; ಕಲ್ಪಂ=ಸಮನಾದ; ತಂ=ಅವನನ್ನು; ಅಸೂತ=ಹಡೆದಳೋ; ಅಸೌ=ಅವಳು; ಸ್ವ=ತನ್ನ; ನಾಮಾ=ಹೆಸರಿಗೆ; ಉಚಿತಂ ಏವ=ಯೋಗ್ಯವಾದದ್ದನ್ನೇ; ಬಭ್ರೇಃ=ಧರಿಸಿದಳು.

ಈ ಪ್ರದ್ಯುಮ್ನನಿಗೆ ಲಗ್ನವಾಯಿತು. ಪತಿಯ ಹೆಸರು ರುಗ್ಮವತೀ. ಈಕೆ ರುಗ್ಮಿಣಿಯ ಸಹೋದರನಾದ ರುಗ್ಮನ ಮಗಳು. ಪ್ರದ್ಯುಮ್ನನು ಈಕೆಯಲ್ಲಿ ಒಂದು ಮಗುವನ್ನು ಪಡೆದನು. ಈ ಮಗುವಿನ ಮೈ ಬಂಗಾರದಂತೆ ಹೊಳೆಯುತ್ತಿತ್ತು. ಇಂತಹ ಮಗನಿಂದ ಈಕೆಯ ಹೆಸರು ಸಾರ್ಥಕವಾಯಿತು. ರುಗ್ಮವತಿ ಎಂದರೆ ಬಂಗಾರ ಉಳ್ಳವಳು ಎಂದರ್ಥ. ಬಂಗಾರಬಣ್ಣದ ಮೈ ಬಂಗಾರದಂತಹ ಮನಸ್ಸು. ಒಟ್ಟಿಗೆ ಈ ಮಗು ಬಂಗಾರ. ಇಂತಹ ಮಗುವನ್ನು ಹೊಂದಿದ್ದರಿಂದ ಈಕೆ ಬಂಗಾರ ಉಳ್ಳವಳು ಎಂದು ಅನ್ವರ್ಥಕವಾಗಿ ಹೆಸರು ಬಂತು.

ಸಂದೇಶ : **ಮಕ್ಕಳು ತಂದೆತಾಯಿಗಳ ಬದುಕಿಗೆ ಸಾರ್ಥಕತೆಯನ್ನು ಕೊಡಬೇಕು.**

**ಸಪತ್ನಸೈನ್ಯೈರನಿರುದ್ಧಮಾಜೌ ಯಮಾಮನಂತಿ ಹ್ಯನಿರುದ್ಧ ಸಂಜ್ಞಮ್ ।**
**ಸದಾಶ್ರಿತಾಭೀಪ್ಸಿತವಿತ್ತರಾಶಿಪ್ರದಾನಕಾಲೇಪ್ಯನಿರುದ್ಧಮನ್ಯೈಃ ॥ ೩೧ ॥**

ಆಜೌ=ಯುದ್ಧದಲ್ಲಿ; ಸಪತ್ನ=ಶತ್ರುಗಳ; ಸೈನ್ಯೈಃ=ಸೈನ್ಯಗಳಿಂದ; ಅನಿರುದ್ಧಂ= ತಡೆಯಿಲ್ಲದ; ಸದಾ=ಯಾವಾಗಲೂ; ಆಶ್ರಿತ=ನಂಬಿದವರಿಗೆ; ಅಭೀಪ್ಸಿತ=ಇಷ್ಟದ; ವಿತ್ತ=ಸಂಪತ್ತಿನ; ರಾಶಿ=ರಾಶಿಯ; ಪ್ರದಾನ=ಕೊಡುವ; ಕಾಲೇ ಅಪಿ=ಸಮಯದಲ್ಲಿಯೂ; ಅನ್ಯೈಃ=ಬೇರೆಯುವರಿಂದ; ಅನಿರುದ್ಧಂ=ತಡೆಯಿಲ್ಲದ; ಯಂ=ಯಾರನ್ನು; ಅನಿರುದ್ಧ=ಅನಿರುದ್ಧ ಎಂಬ; ಸಂಜ್ಞಂ=ಹೆಸರುಳ್ಳವನನ್ನು; ಆಮನಂತಿ=ಹೇಳುತ್ತಾರೆ.

ಈ ಮಗುವಿಗೆ ಅನಿರುಧ್ಧ ಎಂಬ ಹೆಸರನ್ನಿಟ್ಟರು. ಈ ಶಬ್ದದ ಅರ್ಥ ತಡೆಯಿಲ್ಲದವ ಎಂದು. ಶತ್ರುಗಳ ಜೊತೆ ಕಾದಾಡುವ ಪ್ರಸಂಗ ಇರುತ್ತದೆ. ಯಾವ ಶತ್ರುವಿಗೂ ಇವನನ್ನು ಎದುರಿಸುವ ಶಕ್ತಿ ಇಲ್ಲ. ತಾನು ಮುನ್ನುಗ್ಗುತ್ತ ಹೋಗಿ ಶತ್ರುಗಳನ್ನು ಸೋಲಿಸುತ್ತಾನೆ. ಆದ್ದರಿಂದ ಇವನಿಗೆ ಅನಿರುದ್ಧ ಎಂಬ ಹೆಸರು. ಈ ರೀತಿ ಮುನ್ನುಗ್ಗಲು ಈತನ ಸೈನ್ಯದ ಸಹಾಯವೂ ಕಾರಣ. ಯುದ್ಧ ಮುಗಿದ ಮೇಲೆ ತನ್ನ ಸೈನಿಕರ ಆಸೆಗಳನ್ನೆಲ್ಲ ಪೂರೈಸುತ್ತಿದ್ದ. ಈ ಸಂದರ್ಭದಲ್ಲಿಯೂ ಇವನು ಮಾಡುವ ದಾನವನ್ನು ಯಾರೂ ತಡೆಯುತ್ತಿರಲಿಲ್ಲ. ತಡೆದರೂ ಇವನು ಕೇಳುತ್ತಿರಲಿಲ್ಲ. ಆದ್ದರಿಂದಲೂ ಇವನ ಹೆಸರು ಸಾರ್ಥಕವಾಗಿದೆ.

<u>ಸಂದೇಶ</u> : **ಮಕ್ಕಳು ತಂದೆತಾಯಿಗಳ ಬದುಕಿಗೆ ಸಾರ್ಥಕತೆಯನ್ನು ಮಾತ್ರ ಕೊಡುವುದಲ್ಲ; ತನ್ನ ಹೆಸರನ್ನೂ ಸಾರ್ಥಕಗೊಳಿಸಬೇಕು.**

**ಉಷಾಭಿಧಾಯಾಂ ಸ ಚ ವಜ್ರಸಂಜ್ಞ-**
**ಮಜೀಜನದ್ವೈರಿನಗೌಘವಜ್ರಮ್ ।**
**ತಮಃ ಸಮುನ್ಮೂಲನಮುಜ್ವಲಂ ತಂ**
**ಉಷಸ್ಯಶೀತಾಂಶುಮಿವೋದಯಾದ್ರಿಃ** ॥ ೩೨ ॥

ಸಃ ಚ=ಅನಿರುದ್ಧನಾದರೂ; ಉದಯಾದ್ರಿಃ=ಉದಯ ಪರ್ವತವು; ತಮಃ=ಕತ್ತಲೆಯ; ಸಮುನ್ಮೂಲನಂ=ನಾಶಕನಾದ; ಉಜ್ವಲಂತಂ=ಉರಿಯುವ; ಅಶೀತ=ಬಿಸಿಯಾದ; ಅಂಶುಂ=ಕಿರಣವುಳ್ಳವನನ್ನು; ಉಷಸಿ ಇವ=ಬೆಳಗಿನ ಜಾವದಂತೆ; ವೈರಿ=ಶತ್ರುಗಳೆಂಬ; ನಗ=ಬೆಟ್ಟಗಳು; ಓಘ=ಸಮೂಹಕ್ಕೆ; ವಜ್ರಂ=ವಜ್ರಾಯುಧನಾದ; ವಜ್ರ=ವಜ್ರನೆಂಬ; ಸಂಜ್ಞಂ=ಹೆಸರುಳ್ಳವನನ್ನು; ಉಷಾ=ಉಷಾ ಎಂಬ; ಅಭಿಧಾಯಾಂ=ಹೆಸರಿನವಳಲ್ಲಿ; ಅಜೀಜನತ್=ಪಡೆದನು.

ಈ ಅನಿರುದ್ಧನ ಪತ್ನಿಯ ಹೆಸರು ಉಷಾ. ಇವಳಲ್ಲಿ ಅನಿರುದ್ಧನು ವಜ್ರನೆಂಬ ಮಗನನ್ನು ಪಡೆದನು. ವಜ್ರ ಶಬ್ದಕ್ಕೆ ವಜ್ರಾಯುಧ ಎಂಬ ಅರ್ಥವೂ ಇದೆ. ಇಂದ್ರನು ಒಂದು ಸಂದರ್ಭದಲ್ಲಿ ತನ್ನ ಈ ಆಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ ಅವುಗಳ ಸೊಕ್ಕನ್ನು ಅಡಗಿಸಿದ್ದನು. ಅದೇ ರೀತಿ ಈ ಹುಡುಗನು ಶತ್ರುಗಳೆಂಬ ಬೆಟ್ಟಗಳ ದರ್ಪವನ್ನು ಪರಿಹರಿಸುವವನು. ಬೆಳಗಿನ ಜಾವದಲ್ಲಿ ಸೂರ್ಯನು ಉದಿಸುತ್ತಾನೆ. ಕತ್ತಲೆಯನ್ನು ಬೇರುಸಹಿತವಾಗಿ ನಾಶಮಾಡುತ್ತಾನೆ. ಸೂರ್ಯನಂತೆ ಇದ್ದಾನೆ ಈ ಹುಡುಗನು.

**ಯಃ ಪೃಥ್ವೀಪತಿಮೌಲಿರತ್ನಘಟಿತಶ್ರೀಪಾದಪೀಠಃ ಕ್ಷಿತೌ**
**ಯಃ ಸ್ವರ್ಗೀಶ್ವರಫಾಲಮಂಡನಕರಶ್ರೀಪಾದರೇಣುರ್ದಿವಿ ।**
**ಯಃ ಶ್ರೇಯಪಥಪಾಂಥಸಜ್ಜನಮನಃ ಪಾಥೇಯಗೇಯೋದಯ**
**ಸ್ತಸ್ಯ ದ್ವಾರವತೀ ಪುರೀ ಪ್ರಿಯತಮಾ ಸೇಯಂ ಬಭೂವಾಸಮಾ** ॥ ೩೩ ॥

ಯಃ=ಯಾರು; ಕ್ಷಿತೌ=ಭೂಮಿಯಲ್ಲಿ; ಪೃಥ್ವೀ=ಭೂಮಿಯ; ಪತಿ=ರಾಜರ; ಮೌಲಿ=ಕಿರೀಟಗಳ; ರತ್ನ=ರತ್ನಗಳಿಂದ; ಘಟಿತ=ತಾಡಿತವಾದ; ಪಾದ=ಚರಣದ; ಪೀಠಃ=ಪೀಠವುಳ್ಳವನೋ; ಯಃ=ಯಾರು; ದಿವಿ=ಸ್ವರ್ಗದಲ್ಲಿ; ಸ್ವರ್ಗಿ=ಸ್ವರ್ಗದ; ಈಶ್ವರ=ಒಡೆಯರ; ಫಾಲ=ಹಣೆಗೆ; ಮಂಡನ=ಅಲಂಕಾರವನ್ನು; ಕರ=ಮಾಡುವ; ಶ್ರೀ=ಕಾಂತಿಯುಕ್ತವಾದ; ಪಾದ=ಕಾಲಿನ; ರೇಣುಃ=ಧೂಳುಳ್ಳವನೋ; ಯಃ=ಯಾರು; ಶ್ರೇಯಃ=ಮೋಕ್ಷದ; ಪಥ=ಮಾರ್ಗದಲ್ಲಿ; ಪಾಂಥ=ಹೋಗುವವರ; ಮನಃ=ಮನಸ್ಸಿಗೆ; ಪಾಥೇಯ=ಬುತ್ತಿಯಂತೆ; ಗೇಯ=ಸ್ತುತ್ಯವಾದ; ಉದಯಃ=ಉದಯವುಳ್ಳವನೋ;

ತಸ್ಯ=ಅಂತಹವನ; ಸಾ ಇಯಂ=ಆ ಈ; ದ್ವಾರವತೀ=ದ್ವಾರಾವತೀ ಎಂಬ; ಪುರೀ=ಊರು; ಪ್ರಿಯತಮಾ=ಇಷ್ಟವಾದದ್ದು; ಅಸಮಾ=ಅಸದೃಶವಾದದ್ದು; ಬಭೂವ=ಆಯಿತು.

ಈ ಶ್ಲೋಕದಲ್ಲಿ ಕೃಷ್ಣ–ದ್ವಾರಕೆಯನ್ನು ವರ್ಣಿಸುತ್ತಾರೆ. ಕೃಷ್ಣನು ದ್ವಾರಕೆಯಲ್ಲಿ ವಾಸವಾಗಿದ್ದಾನೆ. ಭೂಮಿಯಲ್ಲಿರುವ ಎಲ್ಲಾ ಸಾತ್ವಿಕ ರಾಜರು ದ್ವಾರಕೆಗೆ ಬರುತ್ತಿದ್ದರು. ಕೃಷ್ಣನು ಪಾದಗಳನ್ನು ಇಡುವ ಪೀಠಗಳಿಗೆ ನಮಸ್ಕರಿಸುತ್ತಿದ್ದರು. ಈ ರಾಜರುಗಳು ಸಾಮಾನ್ಯರಲ್ಲ. ಉತ್ತಮ ರತ್ನಗಳಿಂದ ಖಚಿತವಾದ ಕಿರೀಟಗಳಿಂದ ಅಲಂಕೃತರಾದವರು. ಆದರೂ ಯಾವ ಅಹಂಕಾರಾದಿಗಳೂ ಇಲ್ಲದವರು. ಕೃಷ್ಣನ ವ್ಯಕ್ತಿತ್ವದ ಮುಂದೆ ಇವರು ನಗಣ್ಯರು. ಆದ್ದರಿಂದಲೇ ಕೃಷ್ಣನ ಪಾದಗಳ ಮೇಲೆ ತಡೆಯಿಡುವ ಯೋಗ್ಯತೆ ಇಲ್ಲ. ಆತನ ಪಾದಪೀಠಕ್ಕಷ್ಟೇ ನಮಸ್ಕಾರ. ದೇವತೆಗಳೂ ಇಲ್ಲಿಗೆ ಬರುತ್ತಿದ್ದರು. ಇವರು ಕೃಷ್ಣನ ಪಾದಗಳ ಮೇಲೆ ತಮ್ಮ ತಲೆಗಳನ್ನಿಡುತ್ತಿದ್ದರು. ಆಗ ಕೃಷ್ಣನ ಪಾದಗಳ ಧೂಳು ಇವರ ಹಣೆಗಳಲ್ಲಿ ಅಂಟುತ್ತಿತ್ತು.

ಮೋಕ್ಷಮಾರ್ಗದಲ್ಲಿ ನಿರತರಾದ ಸಾತ್ವಿಕರು ಬಹಳ. ವಿರಕ್ತರು ಸಾಮಾನ್ಯ ದಾರಿಹೋಕರಿಗೆ ಉದರ ತುಂಬಿಸಲು ಬುತ್ತಿಯ ಅಗತ್ಯವಿದೆ. ಮೋಕ್ಷಮಾರ್ಗದಲ್ಲಿ ಹೋಗುವವರಿಗೆ ಮಾನಸಿಕಹಸಿವೆ ಬಹಳ. ಇದನ್ನು ನೀಗಿಸಲು ಈ ಕೃಷ್ಣನು ಬುತ್ತಿಯಂತೆ ಇದ್ದಾನೆ. ಇವರ ಸಂಶಯಗಳನ್ನು ಪರಿಹರಿಸಿ ತತ್ವನಿಶ್ಚಯವನ್ನು ಮಾಡುತ್ತಾನೆ. ಆಗ ಈ ವಿರಕ್ತರು ಕೃಷ್ಣನನ್ನು ದೃಢವಾಗಿ ಸ್ತುತಿಸುತ್ತಾರೆ. ಇಂಥವನು ಶ್ರೀಕೃಷ್ಣನು. ಯಾರ ಜೊತೆಗೂ ಹೋಲಿಕೆ ಇಲ್ಲ. ಆದ್ದರಿಂದ ಇಂಥ ಕೃಷ್ಣನಿರುವ ದ್ವಾರಕೆಗೂ ಹೋಲಿಕೆ ಇಲ್ಲ.

**ಮಧ್ಯೇ ಸಮುದ್ರಂ ಮಣಿಮಂಜುಮೌಲಿ–**
**ವಿದ್ಯೋತಿತಾಶಾದಶಕಃ ಸ ದೇವಃ ।**
**ಅದ್ಯಾಪಿ ಭೈಷ್ಮ್ಯಾಃ ಸಹ ಭಾಸಯಂಸ್ತಾ–**
**ಮಾದ್ಯಃ ಪುಮಾನಾರ್ಯವೃತಃ ಕಿಲಾಸ್ತೇ** ॥ ೩೪ ॥

ಮಣಿ=ಮಣಿಗಳಿಂದ; ಮಂಜು=ಚಂದದ; ಮೌಲಿ=ಕಿರೀಟದಿಂದ; ವಿದ್ಯೋತಿತ=ಶೋಭಿಸುವ; ಆಶಾ=ದಿಕ್ಕುಗಳ; ದಶಕಃ=ಹತ್ತುಳ್ಳ; ದೇವಃ=ದೇವನಾದ; ಸಃ=ಅವನು; ಆದ್ಯಃ=ಮೊದಲಿಗನಾದ, ಪುಮಾನ್=ಪುರುಷನು; ಆರ್ಯ=ಪೂಜ್ಯರಿಂದ; ವೃತಃ=ಕೂಡಿ; ಭೈಷ್ಮ್ಯಾ=ರುಗ್ಮಿಣಿಯಿಂದ; ಸಹ=ಕೂಡಿ; ತಾಂ=ಅದನ್ನು; ಭಾಸಯನ್=ಬೆಳಗಿಸುತ್ತಾ; ಅದ್ಯ ಅಪಿ=ಈಗಲೂ ಕೂಡಾ; ಮಧ್ಯೇ ಸಮುದ್ರಂ=ಸಮುದ್ರದ ಮಧ್ಯದಲ್ಲಿ; ಆಸ್ತೇ ಕಿಲ=ಇದ್ದಾನಷ್ಟೇ.

ನಾವು ಸಂದರ್ಶಿಸುವ ದ್ವಾರಕೆಯಲ್ಲಿ ಕೃಷ್ಣರುಗ್ಮಿಣಿಯರ ಸನ್ನಿಧಾನ ಇನ್ನೂ ಇದೆ. ರಾಜಮಹಾರಾಜರುಗಳು ಮರಣ ಹೊಂದಿರಬಹುದು. ಆದರೆ ಋಷಿಗಳು ಅದೃಶ್ಯ

ರಾಗಿಕೊಂಡು ಕೃಷ್ಣನ ಜೊತೆಗಿದ್ದಾರೆ. ಕೃಷ್ಣನ ತನ್ನಲ್ಲಿರುವ ಕಿರೀಟವೇ ಮೊದಲಾದ ಆಭರಣಗಳಿಂದ ಎಲ್ಲ ದಿಕ್ಕುಗಳನ್ನು ಬೆಳಗಿಸುತ್ತಿದ್ದಾನೆ. ಈ ಬೆಳಕು ದಿವ್ಯದೃಷ್ಟಿಗೆ ಮಾತ್ರ ಗೋಚರ. ನಿಜವಾದ ದ್ವಾರಕೆ ನೀರಲ್ಲಿ ಮುಳುಗಿದ್ದರೂ ಈಗ ನಾವು ಯಾತ್ರಿಗಳಾಗಿ ಸಂದರ್ಶಿಸುವ ದ್ವಾರಕೆಯಲ್ಲಿಯೂ ಕೃಷ್ಣನ ಸನ್ನಿಧಾನ ಇದೆ.

**ಕುಶಸ್ಥಲೀ ಸಾ ಕುಶಲೈಕಗಮ್ಯಾ ಪ್ರಶಸ್ತಕೀರ್ತೇಃ ಪ್ರಥಿತಾ ಪುರೀಯಮ್ ।**
**ಶರೀರಿಣಂ ಸರ್ವಪುಮರ್ಥಸಾರ್ಥಕರೀ ನರೀನರ್ತು ಮದಂತರಂಗೇ ॥ ೩೫ ॥**

ಪ್ರಶಸ್ತ=ಉಚಿತವಾದ; ಕೀರ್ತೇಃ=ಕೀರ್ತಿವುಳ್ಳ; ಕುಶಲ=ಚತುರರಿಂದ; ಏಕ=ಮುಖ್ಯವಾಗಿ; ಗಮ್ಯಾ=ಗಮ್ಯವಾದ; ಪ್ರಥಿತಾ=ಪ್ರಸಿದ್ಧವಾದ; ಶರೀರಿಣಂ=ಜನರಿಗೆ; ಸರ್ವ=ಎಲ್ಲಾ; ಪುಮರ್ಥ=ಪುರುಷಾರ್ಥಗಳ; ಸಾರ್ಥ=ಸಮೂಹವನ್ನು; ಕರೀ=ಮಾಡುವ; ಸಾ ಇಯಂ=ಆ ಈ; ಕುಶಸ್ಥಲೀ=ದ್ವಾರಕೆ ಎಂಬ; ಪುರೀಃ=ಊರು; ಮತ್=ನನ್ನ; ಅಂತರಂಗೇ=ಮನದಲ್ಲಿ; ನರೀನರ್ತು=ಕುಣಿಯಲಿ.

ಗುರ್ಜರ ದೇಶದಲ್ಲಿ ಈ ದ್ವಾರಕೆ ಇದೆ. ಇಲ್ಲಿಗೆ ಹೋಗಲು ಬೇಕಾದ ಚಾತುರ್ಯವೇ ಬೇರೆ. ಈ ಊರು ದೇಶವಿದೇಶಗಳಲ್ಲಿ ಪ್ರಸಿದ್ಧವಾಗಿದೆ. ಯಾವ ವ್ಯಕ್ತಿಯು ಯಾವ ಅಪೇಕ್ಷೆಯಿಂದ ಅಲ್ಲಿಗೆ ಹೋಗುತ್ತಾನೋ ಆ ಎಲ್ಲಾ ಅಪೇಕ್ಷೆಗಳು ಅಲ್ಲಿ ಪೂರ್ಣವಾಗುತ್ತವೆ. ಇಂತಹ ಕ್ಷೇತ್ರ ಒಂದಿದ್ದರೆ ಸಾಲದು. ನಮ್ಮ ಮನದಲ್ಲಿಯೂ ಇರಲಿ.

**ವಂದಾರುದ್ವಿಜವರ್ಯವಾಂಛಿತನಿಜಧ್ಯಾನಕ್ಷಮಾ ಶಂಕರಃ**
**ಸ್ವರ್ವಾಗ್ಮಿವ್ರಜವರ್ಣ್ಯದಿಗ್ವಿತತಿಕೃತ್‌ಕರ್ಮೌಘರಾಜತ್ ಕರೀ ।**
**ರುದ್ರಾಣೀಪತಿ ಮಾನ್ಯರಾಜಿತಗತಿಃ ಸತ್ಯಾಸಹಾಯಃ ಸತಾಂ**
**ತಾಂ ರೇಮೇ ವರದಃ ಸ್ವಬಂಧುರುಚಿರಾಂ ರಕ್ಷನ್ಪುರೀಮದ್ಭುತಾಮ್ ॥ ೩೬ ॥**

ವಂದಾರು=ವಂದನಶೀಲರಾದ; ದ್ವಿಜ=ಬ್ರಾಹ್ಮಣರ; ವರ್ಯ=ಶ್ರೇಷ್ಠರಿಂದ; ವಾಂಛಿತ=ಅಪೇಕ್ಷಿತವಾದ; ನಿಜ=ತನ್ನ; ಧ್ಯಾನಃ=ಧ್ಯಾನವುಳ್ಳ; ಕ್ಷಮಾ=ಭೂಮಿಗೆ; ಶಂ=ಸುಖವನ್ನು; ಕರಃ=ಮಾಡುವ; ಸ್ವಃ=ಸ್ವರ್ಗದ; ವಾಗ್ಮಿ=ವಾಗ್ಮಿಗಳ; ವ್ರಜ=ಸಮೂಹದಿಂದ; ವರ್ಣ್ಯ=ವರ್ಣಿಸಲ್ಪಡುವ; ದಿಕ್=ದಿಕ್ಕುಗಳಲ್ಲಿ; ವಿತತಿ=ಪ್ರಸಿದ್ಧಿಯನ್ನು; ಕೃತ್=ಮಾಡುವ; ಕರ್ಮ=ಕೆಲಸಗಳ; ಓಘ=ಸಮೂಹದಿಂದ; ರಾಜತ್=ಶೋಭಿಸುವ; ಕರೀ=ಕೈವುಳ್ಳ; ರುದ್ರಾಣಿ=ಪಾರ್ವತಿಯ; ಪತಿ=ಪತಿಯಿಂದ; ಮಾನ್ಯ=ಆದೃತವಾದ; ರಾಜಿತ=ಶೋಭಿಸುವ; ಗತಿಃ=ಗಮನವುಳ್ಳ; ಸತಾಂ=ಸಜ್ಜನರಿಗೆ; ವರ=ವರವನ್ನು; ದಃ=ಕೊಡುವ; ಸ್ವ=ತನ್ನ ಬಂಧುಗಳಿಗೆ; ರುಚಿರಾಂ=ಚಂದವಾದ; ಅದ್ಭುತಾಂ=ಆಶ್ಚರ್ಯವಾದ; ತಾಂ=ಆ; ಪುರೀಂ=ಊರನ್ನು; ಸತ್ಯಾ=ಸತ್ಯಭಾಮೆಗೆ; ಸಹಾಯಃ=ಸಹಾಯಕನಾದ ಕೃಷ್ಣನು; ರೇಮೇ=ಶೋಭಿಸಿದನು.

ದ್ವಾರಕೆಯಲ್ಲಿ ಬ್ರಾಹ್ಮಣರು ಸದಾ ಕೃಷ್ಣನನ್ನು ನಮಸ್ಕರಿಸುತ್ತಿದ್ದರು. ನಿಷ್ಕಾಮನೆಯಿಂದ ಕೃಷ್ಣನನ್ನು ನೆಮ್ಮದಿಯಿಂದ ಚಿಂತಿಸುತ್ತಿದ್ದರು. ದೈತ್ಯರ ಉಪಟಳವನ್ನು ಪೂರ್ಣವಾಗಿ ಪರಿಹರಿಸಿದನು. ಇದರಿಂದಾಗಿ ಭೂಮಿಯು ನೆಮ್ಮದಿಯಿಂದ ಇದ್ದಳು. ಕೃಷ್ಣರೂಪವು ಜ್ಞಾನ-ಕರ್ಮಗಳ ಮೇಲನ. ಇವನು ಮಾಡಿದ ವಿಚಿತ್ರ ಕರ್ಮಗಳನ್ನು ದೇವತೆಗಳು ತಮ್ಮ ಸಭೆಗಳಲ್ಲಿ ಮನಸಾರೆ ಹೊಗಳುತ್ತಿದ್ದರು. ಭೂಮಿಯಲ್ಲಿಯೂ ಎಲ್ಲರ ಬಾಯಿಯಲ್ಲಿಯೂ ಕೃಷ್ಣನ ಕೆಲಸಗಳ ಬಗ್ಗೆಯೇ ಶ್ಲಾಘನೆ. ಕೃಷ್ಣನ ಕೈಗಳಿಗೆ ಅವಿರತವಾದ ದುಡಿತ. ಕೃಷ್ಣನು ನಾಟಕೀಯವಾಗಿ ಕೈಲಾಸಯಾತ್ರೆ ಮಾಡಿದ್ದನು. ಆಗ ರುದ್ರದೇವರು ಸಪತ್ನೀಕರಾಗಿ ಕೃಷ್ಣನನ್ನು ಎದುರುಗೊಂಡಿದ್ದರು. ರುದ್ರದೇವರೇ ಕೃಷ್ಣನನ್ನು ಆರಾಧಿಸಿದರು. ಇಂತಹ ಕೃಷ್ಣನು ಭಾಮೆಯಿಂದ ಕೂಡಿಕೊಂಡು ದ್ವಾರಕೆಯನ್ನು ಆಳಿದನು. ಕೃಷ್ಣನ ಬಂಧುಗಳಾದ ಯಾದವರಿಗೆ ಈ ಊರು ಒಳ್ಳೆಯ ರಕ್ಷಣೆಯನ್ನು ಕೊಟ್ಟಿತ್ತು. ಸಾತ್ವಿಕರು ಯಾವಾಗ ಬಂದರೂ, ಏನನ್ನು ಕೇಳಿದರೂ ಕೃಷ್ಣನು ಅದನ್ನು ಅವರಿಗೆ ಕೊಡುತ್ತಿದ್ದ.

**ಕೃಷ್ಣಸ್ಯೋದಯವರ್ಣನೈಃ ಸುಚರಿತಸ್ತೋಮಸ್ತವೈಸ್ಸೂಕ್ತಿಭಿಃ**
**ಸುಶ್ಲೋಕೈಃ ಸುಭಗಾರಸೈಶ್ಚ ವಿವಿಧೈಃ ಸ್ವಾನಂದಸರ್ಗೈರ್ವೃತಾ ।**
**ದುಷ್ಟಾಗಮ್ಯ ನಿಜಾರ್ಥತೋಷಿತಖಗಾ ಸಾಽಸ್ಯಾಃ ಕೃತೇ ವೈಖರೀಂ**
**ಬಿಭ್ರಾಣೇವ ವಿಭಾತಿ ವಿಠ್ಠಲಪುರೀ ವಿಷ್ವಕ್ಸುವರ್ಣೋಜ್ಜ್ವಲಾ ॥ ೩೭ ॥**

ಕೃಷ್ಣಸ್ಯ=ಕೃಷ್ಣನ; ಉದಯ=ಅಭಿವೃದ್ಧಿಯ; ವರ್ಣನೈಃ=ವರ್ಣನೆಯಿಂದ; ಸುಚರಿತ= ಒಳ್ಳೆಯ ಚರಿತ್ರೆಗಳ; ಸ್ತೋಮ=ಸಮೂಹಗಳ; ಸ್ತವೈಃ=ಹೊಗಳುವಿಕೆಯಿಂದ; ಸೂಕ್ತಿಭಿಃ= ಒಳ್ಳೆಯ ಮಾತುಗಳಿಂದ; ಸುಶ್ಲೋಕೈಃ=ಒಳ್ಳೆಯ ಕೀರ್ತಿಗಳಿಂದ; ಸುಭಗಾ= ಚಂದವಾದ; ಸು=ಒಳ್ಳೆಯ ಆನಂದವನ್ನು; ಸರ್ಗೈಃ=ಉಂಟುಮಾಡುವ; ವಿವಿಧೈಃ=ನಾನಾ ರೀತಿಯ; ರಸೈಃ=ಮಧುರಾದಿ ರಸಗಳಿಂದ; ವೃತಾ=ಕೂಡಿದ; ದುಷ್ಟ=ದುಷ್ಟರಿಂದ; ಅಗಮ್ಯ= ಹೊಂದಲಸಾಧ್ಯವಾದ; ನಿಜ=ತನ್ನ; ಅರ್ಥ=ಫಲಗಳಿಂದ; ತೋಷಿತ=ಆನಂದಿಸಲ್ಪಟ್ಟ; ಖಗಾ=ಪಕ್ಷಿಗಳುಳ್ಳ; ವಿಷ್ವಕ್=ಸುತ್ತಲೂ; ಸುವರ್ಣ=ಬಂಗಾರದಿಂದ; ಉಜ್ಜ್ವಲಾ= ಶೋಭಿಸುವ; ವಿಠ್ಠಲ=ಕೃಷ್ಣನ; ಪುರೀ=ಊರು; ಅಸ್ಯಾಃ=ಈ; ಕೃತೇಃ=ಗ್ರಂಥದ; ವೈಖರೀಂ=ಕ್ರಮವನ್ನು; ಬಿಭ್ರಾಣಾ ಇವ=ಹೊತ್ತಂತೆ; ವಿಭಾತಿ=ಶೋಭಿಸುತ್ತದೆ.

ಕೃಷ್ಣನ ದ್ವಾರಕೆಯು ತುಂಬಾ ಚಂದ. ಈ ಚಂದಕ್ಕೆ ತುಂಬಾ ಕಾರಣಗಳಿವೆ. ಇಂದ್ರನ ಮನೆಯ ಧರ್ಮಸಭೆಯೂ ಇಲ್ಲದೆ. ಕುಬೇರನ ನವನಿಧಿಗಳು ಹಾಗೂ ಇತರ ರಾಜರುಗಳು ಕೃಷ್ಣನಿಗಾಗಿ ಅರ್ಪಿಸಿದ ಕಾಣಿಕೆಗಳೂ ಇಲ್ಲಿವೆ. ಕೃಷ್ಣನು ಈ ಊರಲ್ಲಿದ್ದು ನಾನಾ ರೀತಿಯಾದ ದಾನಗಳನ್ನು, ಯಾಗಗಳನ್ನು, ವ್ರತಗಳನ್ನು, ಇನ್ನೂ ಬಗೆಬಗೆಯ ಕರ್ಮಗಳನ್ನು ಮಾಡಿದ್ದಾನೆ. ಇವುಗಳನ್ನು ಎಲ್ಲರೂ ಸದಾ ಹೊಗಳುತ್ತಾರೆ. ತನ್ನ ದರ್ಶನಕ್ಕೆ ಬಂದವರ ಜೊತೆ ಕೃಷ್ಣನು ಇಂಪಾಗಿ ಮಾತಾಡುತ್ತಿದ್ದನು. ಕೃಷ್ಣನು

ಸಾಮಾಜಿಕವಾಗಿಯೂ ತುಂಬಾ ಕೆಲಸ ಮಾಡಿದ್ದನು. ಪೂತನಿಯೇ ಮೊದಲಾದವರನ್ನು ಕೊಂದದ್ದು. ದ್ವಾರಕೆಯ ಸುತ್ತ ಇರುವ ಸಮುದ್ರದ ನೀರನ್ನು ಸಿಹಿಯಾಗಿಸಿದ್ದು ಇತ್ಯಾದಿ ಅನೇಕ ಕೆಲಸಗಳನ್ನು ಮಾಡಿದ್ದಾನೆ. ಇಂತಹ ಕೃಷ್ಣನು ದ್ವಾರಕೆಯಲ್ಲಿ ಇರುವುದರಿಂದ ದ್ವಾರಕೆಗೆ ಶೋಭೆ. ಈ ಊರಲ್ಲಿ ನಾನಾರೀತಿಯ ಉದ್ಯಾನಗಳಿವೆ. ಅಲ್ಲಿ ಮರಗಳಲ್ಲಿ ನಾನಾ ರೀತಿಯ ಫಲಗಳು ಆಗುತ್ತವೆ. ಒಂದೊಂದು ಫಲದಲ್ಲಿ ಒಂದೊಂದು ರುಚಿ. ಇಂತಹ ರಸಭರಿತವಾದ ಹಣ್ಣುಗಳನ್ನು ತಿಂದು ಎಲ್ಲರೂ ಬಹಳ ನೆಮ್ಮದಿಯಿಂದ ಇದ್ದಾರೆ. ಬಹಳ ಬೆಳೆದ ಮರಗಳೂ ಇದ್ದಾವೆ. ಅವುಗಳೂ ಫಲಭರಿತಗಳಾಗುತ್ತವೆ. ಸ್ವಾರ್ಥಿಗಳಿಗೆ ಅಂತಹ ಮರಗಳನ್ನು ಏರಲು ಸಾಧ್ಯವಿಲ್ಲ. ಅಂತಹ ಮರಗಳ ಹಣ್ಣುಗಳನ್ನು ಪಕ್ಷಿಗಳು ತಿಂದು ನೆಮ್ಮದಿಯಿಂದ ಇರುತ್ತವೆ. ಗೋಡೆಗಳು, ಬಾಗಿಲುಗಳು, ನೆಲಗಳು ಹೀಗೆ ಎಲ್ಲವೂ ಚಿನ್ನಮಯ.

ಈ ರೀತಿ ದ್ವಾರಕೆಯನ್ನು ನೋಡಿದಾಗ ಶ್ರೀ ವಾದಿರಾಜರ ರುಗ್ಮಿಣೀಶವಿಯ ಕಾವ್ಯದ. ಹೋಲಿಕೆಯನ್ನು ಕೊಡಬಹುದೆಂದು ತೋರುತ್ತದೆ.

ಈ ಕಾವ್ಯದಲ್ಲಿಯೂ ಕೃಷ್ಣನ ಉದಯದ ವರ್ಣನೆ ಇದೆ. ದ್ವಾರಕೆಯಲ್ಲಿ ಕೃಷ್ಣನ ಉದಯದ ವರ್ಣನೆ ಅಂದರೆ ಅಭ್ಯುದಯದ ಅಂದರೆ ಸಂಪತ್ತಿನ ವರ್ಣನೆ. ಕಾವ್ಯದಲ್ಲಿ ಕೃಷ್ಣನ ಉದಯದ ವರ್ಣನೆ, ಭೂಮಿಗೆ ಬಂದ ಕ್ರಮದ ವರ್ಣನೆ. ಸಾಮಾನ್ಯ ಮಾನವರಂತೆ ಬಂದದ್ದಲ್ಲ. ಮೊದಲೇ ತನ್ನ ದೇವತ್ವವನ್ನು ಪ್ರದರ್ಶಿಸಿದವನು. ಇವನ ಉದಯವು ಪೂರ್ವದಿಕ್ಕಿನಲ್ಲಿ ಸೂರ್ಯನು ಉದಿಸಿದಂತೆ ಎಂಬಿತ್ಯಾದಿ ವಿಚಾರಗಳನ್ನು ಕೆಲವು ಸರ್ಗಗಳಲ್ಲಿ ವರ್ಣಿಸುತ್ತಾರೆ. ಕೃಷ್ಣನು ದೇವಕೀವಸುದೇವರ ಜೊತೆ ನಡೆಸಿದ ಸಂಭಾಷಣೆ. ಹಾಗೆಯೇ ಗೋಪಿಕಾಸ್ತ್ರೀಯರೇ ಮೊದಲಾದವರ ಜೊತೆಗೂ ನಡೆಸಿದ ಸಂಭಾಷಣೆಗಳ ವರ್ಣನೆ ಕೆಲವು ಸರ್ಗಗಳಲ್ಲಿವೆ. ಈ ಕಾವ್ಯದಲ್ಲಿ ಸುಶ್ಲೋಕಗಳು ಅಂದರೆ ಬೇರೆಬೇರೆ ವೃತ್ತಗಳಿಂದ ಕೂಡಿದ ಅನುಪ್ರಾಸಾದಿ ಅಲಂಕಾರಗಳಿಂದ ಕೂಡಿದ ಶ್ಲೋಕಗಳಿಂದ ಈ ಕಾವ್ಯವು ಚಂದವಾಗಿದೆ. ಶೃಂಗಾರಾದಿ ನವರಸಗಳಿಂದ ಆನಂದದಾಯಕ ಈ ಕಾವ್ಯ. ರುಗ್ಮಿಣೀಶವಿಜಯವು ಕೇವಲ ಕಾವ್ಯವಲ್ಲ; ಇದು ಶಾಸ್ತ್ರಕಾವ್ಯ. ಮಧ್ವಸಿದ್ಧಾಂತದ ನವರತ್ನಗಳು ಇಲ್ಲಿವೆ. ಆದರೆ ದುಷ್ಟರಿಗೆ ಇದು ಅರ್ಥವಾಗುವುದಿಲ್ಲ. ತತ್ವಗಳು ಸದಾ ರಹಸ್ಯವಾಗಿರಬೇಕು. ಅಯೋಗ್ಯರಿಗೆ ಸಿಗಬಾರದು. ರಹಸ್ಯವಾಗಿದ್ದಷ್ಟು ದೇವತೆಗಳಿಗೆ ಆನಂದ. ಈ ಕಾವ್ಯವು ಅಂತಹ ಕೆಲಸವನ್ನು ಮಾಡಿದೆ. ದ್ವಾರಕೆಯು ಸುವರ್ಣಗಳಿಂದ ಶೋಭಿಸಿದರೆ ಈ ಕಾವ್ಯವು ಸು-ವರ್ಣಗಳಿಂದ ಅಂದರೆ ಒಳ್ಳೆಯ ಅಕ್ಷರಗಳಿಂದ ಶೋಭಿಸುತ್ತಿದೆ. ಎರಡೂ ಕೂಡಾ ಕೃಷ್ಣನನ್ನು ಒಳಗೊಂಡಿದೆ. ಅಜ್ಞಾನಿಗಳಾದ ಜನರು ಜ್ಞಾನದ ಆಸೆವುಳ್ಳವರಾದರೆ ಅಂತಹವರನ್ನು ಸ್ವೀಕರಿಸಿ ಅವರಿಗೆ ತಿಳುವಳಿಕೆಯನ್ನು ಕೊಡುವುದು ಕೃಷ್ಣನ ದ್ವಾರಕೆ ಹಾಗೂ ಈ ಕಾವ್ಯ.

**ಯಸ್ಮಿನ್ಮಂಗಲದೇವತಾಽಖಿಲಜಗನ್ಮಾತಾ ರಮಾ ನಾಯಿಕಾ**
**ಪದ್ಮಾಪದ್ಮಭವಾದಿಸೇವ್ಯಚರಣಸ್ತದ್ವಲ್ಲಭೋ ನಾಯಕಃ ।**
**ಅಶ್ವಗ್ರೀವದಯಾ ಪಯೋಬ್ಧಿಫಲಿತಪ್ರಾಗ್ರ್ಯೋಕ್ತಿರತ್ನೋಜ್ವಲಂ**
**ತದ್ದಾಸಾನುಗವಾದಿರಾಜರಚಿತಂ ಕಾವ್ಯಂ ವಿಭಾವ್ಯಂ ಬುಧೈಃ ॥ ೩೮ ॥**

ಯಸ್ಮಿನ್=ಎಲ್ಲಿ; ಮಂಗಲದೇವತಾ=ಮಂಗಲದೇವತೆಯಾದ; ಅಖಿಲ=ಎಲ್ಲಾ; ಜಗತ್=ಲೋಕಕ್ಕೆ; ಮಾತಾ=ತಾಯಿಯಾದ; ರಮಾ=ರಮೆಯು; ನಾಯಿಕಾ=ನಾಯಕಿಯು; ಪದ್ಮಾ=ರಮೆಯು; ಪದ್ಮಭವ=ಬ್ರಹ್ಮನು; ಆದಿ=ಮೊದಲಾದವರಿಂದ; ಸೇವ್ಯ=ಸೇವಿಸಲ್ಪಡುವ; ಚರಣಃ=ಪಾದವುಳ್ಳ; ತತ್=ರಮೆಯ; ವಲ್ಲಭಃ=ಪತಿಯು; ನಾಯಕಃ=ನಾಯಕನು; ಅಶ್ವ=ಕುದುರೆಯ; ಗ್ರೀವ=ಕುತ್ತಿಗೆವುಳ್ಳವನ; ದಯಾ=ದಯೆಯೆಂಬ; ಪಯೋಬ್ಧಿ=ಕ್ಷೀರಸಮುದ್ರದಿಂದ; ಫಲಿತ=ಉಂಟಾದ; ಪ್ರಾಗ್ರ್ಯ=ಉತ್ತಮಗಳಾದ; ಉಕ್ತಿ=ಮಾತುಗಳೆಂಬ; ರತ್ನ=ರತ್ನಗಳಿಂದ; ಉಜ್ವಲಂ=ಉತ್ತಮವಾದ; ತತ್=ಅವರ; ದಾಸ=ದಾಸರ;

ಈ ಗ್ರಂಥವು ಅಧ್ಯಯನಕ್ಕೆ ಯೋಗ್ಯ ಎಂದು ರಾಜರು ತಿಳಿಸುತ್ತಾರೆ– ರಮೆಯು ಈ ಗ್ರಂಥದಲ್ಲಿ ನಾಯಕಿಯು. ಇವಳು ಎಲ್ಲರಿಗೂ ತಾಯಿಯಾಗಿದ್ದಾಳೆ. ಶುಭಶಕುನದ ದೇವತೆಯೂ ಆಗಿದ್ದಾಳೆ. ಕೃಷ್ಣನು ನಾಯಕನು. ರಮಾದಿ ಸಮಸ್ತಪ್ರಪಂಚವು ಇವರ ಚರಣವನ್ನು ಆಶ್ರಯಿಸಿದೆ. ಇವರಿಬ್ಬರನ್ನು ಪ್ರಮುಖರನ್ನಾಗಿಸಿ ರಾಜರು ಈ ಗ್ರಂಥವನ್ನು ರಚಿಸಿದ್ದಾರೆ. ಈ ಒಂದು ಗ್ರಂಥವನ್ನು ಚೆನ್ನಾಗಿ ಅಧ್ಯಯನ ಮಾಡಿದರೆ ಮಧ್ವಸಿದ್ಧಾಂತ ತಿಳುವಳಿಕೆ ಚೆನ್ನಾಗಿ ಆಗುತ್ತದೆ. ಕಾವ್ಯ ಸಾಹಿತ್ಯಗಳ ಪರಿಚಯವೂ ಆಗುತ್ತದೆ. ಅಷ್ಟು ಸಂಗ್ರಹ ಈ ಗ್ರಂಥದಲ್ಲಿದೆ. ಇದಕ್ಕೆಲ್ಲಾ ಕಾರಣ ಹಯವದನನ ಕರುಣೆ. ಇದನ್ನು ರಚಿಸಿದವರು ಶ್ರೀ ವಾದಿರಾಜರು. ಇವರು ಹರಿದಾಸರ ದಾಸರು. ಈ ಗ್ರಂಥವನ್ನು ಜ್ಞಾನತೃಷಾವುಳ್ಳ ಪ್ರತಿಯೊಬ್ಬರೂ ಸ್ವೀಕರಿಸಬೇಕು.

**ಕೃಷ್ಣಃ ಕಾವ್ಯಕೃತೇ ಸ್ವಹಸ್ತಕಮಲಛತ್ರಂ ಪ್ರದದ್ಯಾತ್ ಪ್ರಭುಃ**
**ಸಚ್ಛಾಸ್ತ್ರಾಭಿಧರಮ್ಯರಾಜ್ಯಪದವೀಂ ಸುಜ್ಞಾನಯಾನಂ ಮುದಾ ।**
**ಸ್ವಾಂಘ್ರ್ಯಾರಾಧನಕಂಕಣಂ ಕರಯುಗೇ ಕೈಂಕರ್ಯಹಾರಂ ಗತೀ**
**ಸ್ವಾತ್ಮಾನಂ ಹೃದಿ ನಿತ್ಯಚಿಂತನಧನಂ ಸದ್ಯುಕ್ತಿರತ್ನಾನ್ಯಪಿ ॥ ೩೯ ॥**

ಪ್ರಭುಃ=ಶಕ್ತನಾದ; ಕೃಷ್ಣಃ=ಕೃಷ್ಣನು; ಕಾವ್ಯ=ಕಾವ್ಯವನ್ನು; ಕೃತೇ=ಮಾಡಿದವನಿಗೆ; ಸ್ವ=ತನ್ನ; ಹಸ್ತ=ಕೈ ಎಂಬ; ಕಮಲ=ಕಮಲದ; ಛತ್ರಂ=ಕೊಡೆಯನ್ನು; ಸತ್=ಒಳ್ಳೆಯ; ಶಾಸ್ತ್ರ=ಶಾಸ್ತ್ರವೆಂಬ; ಅಭಿಧ=ಹೆಸರುಳ್ಳ; ರಮ್ಯ=ಚಂದದ; ರಾಜ್ಯ=ರಾಜ್ಯದ; ಪದವೀಂ=

ಸ್ಥಾನವನ್ನು; ಮುದಾ=ಸಂತೋಷದಿಂದ; ಸುಜ್ಞಾನ=ಜ್ಞಾನವೆಂಬ; ಯಾನಂ=ರಥವನ್ನು; ಕರ=ಕೈಗಳ; ಯುಗೇ=ಎರಡರಲ್ಲಿ; ಸ್ವ=ತನ್ನ; ಅಂಘ್ರಿ=ಪಾದಗಳ; ಆರಾಧನ=ಪೂಜೆ ಎಂಬ; ಕಂಕಣಂ=ಬಳೆಯನ್ನು; ಗತೀ=ಕುತ್ತಿಗೆಯಲ್ಲಿ; ಕೈಂಕರ್ಯ=ಸೇವೆ ಎಂಬ; ಹಾರಂ=ಹಾರವನ್ನು; ಹೃದಿ=ಮನದಲ್ಲಿ; ಸ್ವಾತ್ಮಾನಂ=ತನ್ನನ್ನು; ನಿತ್ಯ=ಯಾವಾಗಲೂ; ಚಿಂತನ=ಸ್ಮರಣೆ ಎಂಬ; ಧನಂ=ಸಂಪತ್ತನ್ನು; ಸತ್=ಒಳ್ಳೆಯ; ಯುಕ್ತಿ=ತರ್ಕಗಳೆಂಬ; ರತ್ನಾನಿ ಅಪಿ=ರತ್ನಗಳನ್ನು; ಪ್ರದದ್ಯಾತ್=ಕೊಡಲಿ.

ರಾಜರು ಕೃಷ್ಣನಿಗೆ ಕಾವ್ಯವನ್ನು ಅರ್ಪಿಸಿದರು. ಕೃಷ್ಣನಿಂದ ತನಗೆ ಏನನ್ನೋ ಪ್ರಾರ್ಥಿಸುತ್ತಾರೆ. ಇವರು ಯತಿಗಳು. ಹಾಗೆಯೇ ನಿಷ್ಕಾಕಕರ್ಮವನ್ನು ಮಾಡುವವರು. ಆದರೂ ದೇವರಿಂದ ರಾಜ್ಯಾದಿ ಸಂಪತ್ತನ್ನು ಬೇಡುತ್ತಾರೆ. ಅವು ಈ ರೀತಿ ಇವೆ– ಛತ್ರದ ಅಡಿಯಲ್ಲಿ ಇರುವವನಿಗೆ ಯಾವ ತಾಪದ ಭಯವೂ ಇಲ್ಲ. ಇವರು ರಾಜರು. ರಾಜನಿಗೆ ಒಂದು ಕೊಡೆಯ ಅಗತ್ಯ ಇದೆ. ಕೃಷ್ಣನ ಹಸ್ತಕಮಲವೆಂಬ ಛತ್ರವು ತನಗೆ ಬೇಕೆಂದು ಪ್ರಾರ್ಥಿಸುತ್ತಾರೆ. ಇವರ ತಲೆಯಮೇಲೆ ದೇವರ ಅಭಯಹಸ್ತವನ್ನು ಪ್ರಾರ್ಥಿಸುತ್ತಾರೆ. ಒಂದು ರಾಜ್ಯವನ್ನೂ ಬೇಡುತ್ತಾರೆ. ಅದು ವೇದಾಂತಸಾಮ್ರಾಜ್ಯ. ಸನ್ಯಾಸಿಗಳಲ್ಲಿ ರಾಜಸನ್ಯಾಸಿಗಳಿದ್ದಾರೆ. ಅವರಿಗೆ ಭೂಪತಿಗಳಂತೆ ವೈಭವಗಳಿರುತ್ತವೆ. ಅವರ ರಾಜ್ಯ ಮಾತ್ರ ವೇದಾಂತಶಾಸ್ತ್ರಗಳು. ಇದರಲ್ಲಿ ಇದ್ದುಕೊಂಡು ಪಾಠಪ್ರವಚನಗಳ ಮೂಲಕ ಇದನ್ನು ಪಾಲಿಸಿಕೊಂಡು ಬರಬೇಕು. ಇನ್ನು ಒಂದು ರಥ– ಅದು ಜ್ಞಾನರಥ. ತಿಳುವಳಿಕೆಯ ವ್ಯಕ್ತಿ ಎಲ್ಲಿಂದೆಲ್ಲಿಗೂ ನಿಶ್ಚಿಂತೆಯಿಂದ ಪ್ರಯಾಣಿಸಬಹುದು. ರಥದ ಮೂಲಕ ಅನಾಯಾಸವಾಗಿ ಪ್ರಯಾಣಿಸುವಂತೆ. ಇಂತಹ ರಥವನ್ನು ಕೃಷ್ಣನಿಂದ ಬೇಡಿದರು. ಕೈಗೆ ಕಡಗ. ಕಡಗಳಿಂದ ಕರಗಳಿಗೆ ಭೂಷಣ. ದೇವರ ಪಾದಗಳ ಸೇವೆಗಳಿಂದಲೇ ಸಾತ್ವಿಕರ ಕೈಗಳು ಅಲಂಕೃತಗಳಾಗುವುದು. ಪಾದಸೇವೆ ಎಂಬ ಕಡಗವನ್ನು ಬೇಡಿದರು. ಕೊರಳಿಗೆ ಒಂದು ಹಾರ. ದೇವರ ಮುಂದೆ ಬಹಳ ವಿನೀತನಾಗಿ ವರ್ತಿಸಬೇಕು. ಆಗ ದೇಹವು ಸಹಜವಾಗಿ ಬಾಗುತ್ತದೆ. ಕೊರಳಿಗೆ ಹಾಕಿದ ಹಾರದ ಭಾರದಿಂದ ದೇಹವು ಬಾಗುವಂತೆ ಕೈಂಕರ್ಯಭಾವದಿಂದ ಸದಾ ವಿನೀತರಾಗಬೇಕು. ಈ ರೀತಿಯ ಕೈಂಕರ್ಯಭಾವವೇ ಒಂದು ಹಾರ. ಸಂಪತ್ತನ್ನೂ ಪ್ರಾರ್ಥಿಸುತ್ತಾರೆ. ಅದು ದೇವರ ಧ್ಯಾನ. ರಾಜನ ಖಜಾನೆ ಖಾಲಿಯಾಗಬಾರದು. ಅದೇ ರೀತಿ ಹೃದಯ ಎಂಬ ಖಜಾನೆಯಲ್ಲಿ ದೇವರ ಧ್ಯಾನ ಸದಾ ಇರಬೇಕು. ರಾಜನು ತನ್ನ ಪ್ರಿಯಸೇವಕನ ಮನೆಯಲ್ಲಿ ಸದಾ ಇರುವಂತೆ. ಇನ್ನು ಚಿನ್ನಾಭರಣಗಳು, ರತ್ನಗಳು. ರತ್ನಗಳಲ್ಲಿ ಒಂಭತ್ತು ವಿಧ. ಈ ರತ್ನಗಳಿಂದ ರಾಜನ ಮಹತ್ವವು ತಿಳಿಯುವುದು. ದೇವರ ಪಾರಮ್ಯವನ್ನು ಯುಕ್ತಿಗಳಿಂದಲೂ ಸಾಧಿಸಬೇಕು. ನಾನಾ ರೀತಿಯಾದ ಯುಕ್ತಿಗಳಿವೆ. ಒಬ್ಬ ಸಾಧಕನಲ್ಲಿ ಇಂತಹ ಯುಕ್ತಿಗಳು ಬಹಳ ಇದ್ದರೆ ಆತನು ರಾಜರುಗಳಂತೆ ವೈದಿಕಸಮಾಜದಲ್ಲಿ ಚೆನ್ನಾಗಿ ಶೋಭಿಸುತ್ತಾನೆ.

ಲೋಕದಲ್ಲಿ ಹೆಚ್ಚುಹೆಚ್ಚು ರತ್ನಗಳಿದ್ದರೆ ರಾಜರುಗಳ ಮಹತ್ವವೂ ಹೆಚ್ಚುವಂತೆ ದೇವರ ಪಾರಮ್ಯದ ವಿಷಯದಲ್ಲಿಯೂ ಹೆಚ್ಚು ಹೆಚ್ಚು ಯುಕ್ತಿಗಳು ಯಾರಲ್ಲಿವೆಯೋ ಆತನು ಚೆನ್ನಾಗಿ ಬೆಳಗುತ್ತಾನೆ. ಈ ರೀತಿಯಾಗಿ ರಾಜರು ತಾನು ಆಧ್ಯಾತ್ಮಿಕ ರಾಜನಾಗಲು ಬೇಕಾದ್ದನ್ನು ದೇವರಿಂದ ಪ್ರಾರ್ಥಿಸಿದರು. ಆದರೂ ಇದು ನಿಷ್ಕಾಮಸೇವೆ.

ಹಂಸಾನಾಂ ಹೃದಯಂಗಮಂ ಕವಿಲಸದ್ಭೃಂಗಾದೃತಂ ಮೌಕ್ತಿಕ-
ಪ್ರಖ್ಯಾಗ್ರ್ಯೋಕ್ತಿನವಂ ಪ್ರಬಂಧಜಲಜಂ ಪಾದೇಽರ್ಪಿತಂ ಸ್ಯಾದ್ಧರೇಃ ।
ಲಕ್ಷ್ಮೀರಮ್ಯಕರೀ ವರಾಮರತತೇಃ ಸನ್ಮಾನಸೇ ಶಾರದಾ-
ನಂದಂ ತತ್ಪವನಃ ಸ್ವಹೃತ್ಕೃತಗುಣಂ ವಿಸ್ತಾರಯತ್ವಂಜಸಾ ॥ ೪೦ ॥

ಹಂಸಾನಾಂ=ಹಂಸಪಕ್ಷಿಗಳಿಗೆ. ಸನ್ಯಾಸಿಗಳಿಗೆ; ಹೃದಯಂಗಮಂ=ಪ್ರಿಯವಾದ; ಕವಿ=ಕವಿಗಳೆಂಬ; ಲಸತ್=ಶೋಭಿಸುವ; ಭೃಂಗ=ಭ್ರಮರಗಳಿಂದ; ಆದೃತಂ=ಸತ್ಕೃತವಾದ; ಮೌಕ್ತಿಕ=ಮುತ್ತುಗಳಿಗೆ; ಪ್ರಖ್ಯ=ಸಮಗಳಾದ; ಅಗ್ರ್ಯ=ಉತ್ತಮವಾದ; ಉಕ್ತಿ=ಮಾತುಳ್ಳ; ನವಂ=ನೂತನವಾದ; ಪ್ರಬಂಧ=ಈ ಗ್ರಂಥವೆಂಬ; ಜಲಜಂ=ಕಮಲವು; ಹರೇಃ=ಕೃಷ್ಣನ; ಪಾದೇ=ಚರಣದಲ್ಲಿ; ಅರ್ಪಿತಂ=ಅರ್ಪಿತವು; ಸ್ಯಾತ್=ಆಗಲಿ; ಲಕ್ಷ್ಮೀ=ರಮೆಯ; ರಮ್ಯ=ಚಂದದ; ಕರೇ=ಕೈಯಲ್ಲಿ; ವರ=ಉತ್ತಮರಾದ; ಅಮರ=ದೇವತೆಗಳ; ತತೇಃ=ಸಮೂಹದ; ಸತ್=ಒಳ್ಳೆಯ; ಮಾನಸೇ=ಮನದಲ್ಲಿ; ಸ್ಯಾತ್=ಇರಲಿ; ಶಾರದಾ=ಸರಸ್ವತಿಗೆ; ಆನಂದಂ=ನೆಮ್ಮದಿಯನ್ನು ಕೊಡುವ; ಸ್ವ=ತನ್ನ; ಹೃತ್=ಮನಕ್ಕೆ; ಕೃತ=ಒಪ್ಪುವ; ಗುಣಂ=ಗುಣವುಳ್ಳ; ತತ್=ಅದನ್ನು; ಪವನಃ=ಗಾಳಿಯು; ಅಂಜಸಾ=ಚೆನ್ನಾಗಿ; ವಿಸ್ತಾರಯತು=ವಿಸ್ತರಿಸಲಿ.

ರಾಜರು ತನ್ನ ಈ ಕೃತಿಯನ್ನು ದೇವರಿಗೆ ಅರ್ಪಿಸುತ್ತಾರೆ. ದೇವರ ಪ್ರಸಾದರೂಪವಾಗಿ ಮತ್ತೆ ಎಲ್ಲರಿಗೂ ಕೂಡಾ. ತನ್ನ ಈ ಗ್ರಂಥವನ್ನು ಕಮಲಕ್ಕೆ ಹೋಲಿಸುತ್ತಾರೆ. ಹಂಸಪಕ್ಷಿಗಳು ಕಮಲಗಳನ್ನು ತುಂಬಾ ಆಶ್ರಯಿಸುತ್ತವೆ. ಅವುಗಳಿಗೂ ಕಮಲಗಳಿಗೂ ತುಂಬಾ ನಂಟು. ಈ ಕಾವ್ಯವನ್ನು ಪರಮಹಂಸರೂ ಇಷ್ಟಪಡುತ್ತಾರೆ. ಇದರಲ್ಲಿ ಹರಿಸರ್ವೋತ್ತಮತ್ವಾದಿ ಎಲ್ಲಾ ತತ್ವಗಳೂ ಅಡಗಿದ್ದರಿಂದ. ಭ್ರಮರಗಳು ಇವುಗಳ ರಸಕ್ಕಾಗಿ ಹಾತೊರೆಯುತ್ತವೆ. ಹಾಗೆಯೇ ಕವಿಗಳು ಶೃಂಗಾರಾದಿ ರಸಪ್ರಿಯರು. ಈ ಗ್ರಂಥದಲ್ಲಿ ಇಂತಹ ರಸಗಳು ಬಹಳಿವೆ. ಆದ್ದರಿಂದ ಕವಿಗಳೆಂಬ ದುಂಬಿಗಳು ಇದರ ಸುತ್ತಮುತ್ತ ಹಾರಾಡುತ್ತವೆ. ಕಮಲ ಅಂದರೆ ಪದ್ಮ. ನವನಿಧಿಗಳಲ್ಲಿ ಪದ್ಮ ಎಂಬ ನಿಧಿಯೂ ಒಂದು. ನವನಿಧಿಗಳಲ್ಲಿಯೂ ನವರತ್ನಗಳಿರುತ್ತವೆ. ಅವುಗಳ ಪ್ರಮಾಣದಲ್ಲಿ ಹೆಚ್ಚುಕಮ್ಮಿ ಇರಬಹುದು. ತಥಾ ಚ ಕಮಲದಲ್ಲಿ ಮುತ್ತುಗಳೂ ಇವೆ. ಈ ಗ್ರಂಥದಲ್ಲಿ ಮುತ್ತಿನಂತಹ ಮಾತುಗಳಿವೆ. ದೇವರ ಉತ್ತಮತ್ವವನ್ನು ಸಾಧಿಸುವ ಅನೇಕ ಯುಕ್ತಿಗಳು ಈ ಗ್ರಂಥದಲ್ಲಿ ಇವೆ. ಹೊಸ ಕಮಲದಂಏ

ಈ ಗ್ರಂಥ ಎಂದೂ ಹಳತಾಗುವುದಿಲ್ಲ. ಕಮಲವು 'ಶಾರದಾನಂದ- ಶರದೃತುವಿನಲ್ಲಿ ಚೆನ್ನಾಗಿ ಅರಳುವ ಮೂಲಕ ಆನಂದದಾಯಕ. ಗ್ರಂಥವು ಸರಸ್ವತಿಗೆ ಆನಂದದಾಯಕ.

ಕಮಲದ ಹೋಲಿಕೆ ಕೊಟ್ಟ ರಾಜರ ಉದ್ದೇಶ ತುಂಬಾ ಚಂದ. ದೇವರ ಪಾದಪೂಜೆಗೆ ಕಮಲವು ಬಹಳ ಶ್ರೇಷ್ಠ. ಕಮಲವು ಪುಷ್ಪಗಳ ರಾಜ. ಉತ್ತಮ ಹೂಗಳಿಂದ ದೇವರನ್ನು ಅರ್ಚಿಸಬೇಕು. ದೇವರ ಪಾದಗಳನ್ನು ನಾವು ಕಮಲಗಳಿಗೇ ಹೋಲಿಸುವುದು. ಈ ಗ್ರಂಥಕ್ಕೆ ಕಮಲದ ಹೋಲಿಕೆಯನ್ನು ಕೊಟ್ಟರೆ ದೇವರ ಪಾದಕ್ಕೆ ಅರ್ಪಿಸಲು ಬೇಕಾದ ಯೋಗ್ಯತೆ ಈ ಗ್ರಂಥಕ್ಕಿದೆ ಎಂದಾಯಿತು. ಶಾಸ್ತ್ರನಿಷಿದ್ಧ ಪುಷ್ಪದ ಹೋಲಿಕೆ ಕೊಟ್ಟರೆ ದೇವರಿಗೆ ಅರ್ಪಿಸಲು ಆಗುವುದಿಲ್ಲ ತಾನೆ.

ಶ್ರೀಸೂಕ್ತದಲ್ಲಿ 'ನಿತ್ಯಂ ಸಾ ಪದ್ಮಹಸ್ತಾ' ಎಂದು ಇದೆ. ದೇವರ ಪಾದಕ್ಕೆ ಅರ್ಪಿಸಿದ ಈ ಕಮಲವನ್ನು ರಮೆಯ ಕೈಗಳಿಗೆ ಅರ್ಪಿಸುತ್ತಾರೆ. ದೇವರ ಪ್ರಸಾದವನ್ನು ನಾವು ಕಾಲಿಂದ ಧರಿಸಬಾರದು. ಶ್ರದ್ಧೆಯಿಂದ ಕೈಯಿಂದ ಸ್ವೀಕರಿಸಬೇಕು. ಶ್ರೀಸೂಕ್ತದ ನುಡಿಯಂತೆ ರಮೆಗೆ ಪದ್ಮವು ಇಷ್ಟ. ಈ ಕಾವ್ಯವನ್ನು ಕಮಲಗಳಿಗೆ ಹೋಲಿಸಿದರೆ ಆಕೆ ತುಂಬಾ ಸಂತೋಷದಿಂದ ಇದನ್ನು ಕೈಯಿಂದ ಸ್ವೀಕರಿಸುತ್ತಾಳೆ. ಈ ದೃಷ್ಟಿಯಿಂದ ಕಮಲದ ಹೋಲಿಕೆಯನ್ನು ಕೊಟ್ಟಿದ್ದಾರೆ.

ಕಮಲಗಳ ವಾಸಸ್ಥಳ ಕೊಳಗಳು. ತತ್ರಾಪಿ ವಿಶೇಷವಾಗಿ ಮಾನಸಸರೋವರದಲ್ಲಿ. ಬ್ರಹ್ಮಾದಿ ಸಮಸ್ತದೇವತೆಗಳ ಮನಸ್ಸೇ ಒಂದು ಮಾನಸಸರೋವರ. ಈ ಕಾವ್ಯವನ್ನು ಕಮಲದಂತೆ ಎಂದು ಹೇಳಿದ್ದರಿಂದ ಬ್ರಹ್ಮಾದಿ ದೇವತೆಗಳ ಮನದಲ್ಲಿ ಚೆನ್ನಾಗಿ ನೆಲೆಯೂರಿ ಇರುತ್ತದೆ. ಅಂದರೆ ಬ್ರಹ್ಮಾದಿ ದೇವತೆಗಳಿಗೂ ಈ ಗ್ರಂಥವನ್ನು ಅರ್ಪಿಸಿದಂತಾಯಿತು. ಬಲಾತ್ಕಾರವಾಗಿ ಅಲ್ಲ. ಅವರೇ ಇದನ್ನು ಆದರದಿಂದ ತಮ್ಮ ಮನದಲ್ಲಿ ಇಟ್ಟುಕೊಂಡರು. ಕಮಲಗಳಿಗೂ ಕೊಳಕ್ಕೂ ಅನ್ಯೋನ್ಯವಾಗಿ ಸಂಬಂಧ ಇದೆ.

ಈ ದೇವತೆಗಳ ಗುಂಪಲ್ಲಿ ಶಾರದೆಯೂ ಬಂದಳು. ಆದರೂ ಅವಳಿಗೆ ಪ್ರತ್ಯೇಕವಾಗಿ ಅರ್ಪಿಸುತ್ತಾರೆ. ಅವಳು ಮಾಲೆಗೆ ಅಭಿಮಾನಿನಿ. ಅವಳಿಗೆ ವಿಶೇಷವಾದ ಸ್ಥಾನಮಾನ. ಆದ್ದರಿಂದ ಅವಳಿಗೂ ನೆಮ್ಮದಿ ಕೊಡತಕ್ಕದ್ದು ಎಂದು ಪ್ರತ್ಯೇಕವಾಗಿ ಹೇಳಿದ್ದಾರೆ.

ಕಮಲದ ಮಧ್ಯದಲ್ಲಿ ಮಕರಂದ ಇದೆ. ಪರಿಮಳ ಇದೆ. ಗಾಳಿ ಈ ಪರಿಮಳವನ್ನು ಹಿಡಿದುಕೊಂಡು ಎಲ್ಲರಿಗೂ ಕೊಳದಲ್ಲಿ ಅರಳಿದ ಕಮಲದ ಬಗ್ಗೆ ತಿಳಿಸುತ್ತದೆ. ಎಲ್ಲರೂ ಕಮಲದ ಕಡೆಗೆ ಬರುವಂತೆ ಮಾಡುತ್ತದೆ.

ಈ ಕಾವ್ಯದ ಪ್ರಸಿದ್ಧಿ ಆಗಬೇಕಿದೆ. ಅದಕ್ಕಾಗಿ ಗಾಳಿಯ ಅವತಾರರಾದ ಮಧ್ವರನ್ನು ಪ್ರಾರ್ಥಿಸುತ್ತಾರೆ. ಈ ಕಮಲದಲ್ಲಿ ಹರಿಸರ್ವೋತ್ತಮತ್ವಾದಿ ಪರಿಮಳಗಳು ಬಹಳ ಇವೆ.

ಈ ಪರಿಮಳ ಈ ಗಾಳಿಗೆ ತುಂಬಾ ಇಷ್ಟವೂ ಆಗಿದೆ. ತನಗಿಷ್ಟವಾದ ಪರಿಮಳ ಇದ್ದರೆ ಅದನ್ನು ಹಿಡಿದುಕೊಂಡು ಗಾಳಿಯು ಎಲ್ಲಾ ಕಡೆ ಸಂಚರಿಸುತ್ತದೆ. ಈ ರೀತಿ ಕೊನೆಗೆ ಮಧ್ವರಲ್ಲಿ ಈ ಗ್ರಂಥದ ಪ್ರಚಾರವನ್ನು ಪ್ರಾರ್ಥಿಸಿ ಉಪಸಂಹಾರ ಮಾಡುತ್ತಾರೆ. ಈ ಕಮಲವನ್ನು ರಮಾದಿಗಳು ಬಹಳ ಸಂತೋಷದಿಂದ ಸ್ವೀಕರಿಸುತ್ತಾರೆ. ಇದರಿಂದ ಹರಿಸರ್ವೋತ್ತಮತ್ವವು ಇವರಿಗೆ ಸಮ್ಮತವೇ ಆಗಿದೆ ಎಂದು ತಿಳಿಯುತ್ತದೆ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸರ್ಗೋऽಭೂತ್ ಸುರಮಂಡಲೇಷು ಸುತರಾಮೇಕೋನವಿಂಶೋ ಮುದಾಮ್**

**॥ ೪೧ ॥**

**॥ ಇತಿ ಏಕೋನವಿಂಶತಿಃ ಸರ್ಗಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

ಪುತ್ರೋ ಯಸ್ಯ ಸ ಪದ್ಮಭೂಃ ಫಣಪತಿಃ ಶಯ್ಯಾ ಖಗೇಶೋ ರಥಃ
ಶಂಭುರ್ಯಚ್ಚರಣಾಂಬುಮೌಲಿರಗಭಿತ್ತದ್ದತ್ತಸಾಮ್ರಾಜ್ಯಭುಕ್ ।
ನಿತ್ಯಂ ಯತ್ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂಃ
ತಂ ವರ್ಯಂ ವರಯಾಂಬಭೂವ ಸುದತೀ ಸಾ ದ್ವಾರಕಾನಾಯಕಮ್॥

- ಪದ್ಮನಾಭನ ನಾಭಿಯ ಪದ್ಮದಲ್ಲಿ ಆವಿರ್ಭೂತನಾದ ಚತುರ್ಮುಖ ಯಾರ ಪುತ್ರನಾಗಿರುವನೋ,
- ನಾಗಗಳ ಒಡೆಯ ಶೇಷ ಯಾರ ಹಾಸಿಗೆ ಆಗಿರುವನೋ,
- ಪಕ್ಷೀಶ ಗರುಡ ಯಾರ ರಥ ಆಗಿರುವನೋ,
- ರುದ್ರದೇವ ಯಾರ ಪಾದೋದಕವಾದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರುವನೋ,
- ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ದೇವೇಂದ್ರ ಉಪೇಂದ್ರರೂಪದ ಯಾರಿಂದ ಕೊಡಲ್ಪಟ್ಟ ಸಾಮ್ರಾಜ್ಯವನ್ನು ಅನುಭವಿಸುತ್ತಿರುವನೋ,
- ಸೂರ್ಯಚಂದ್ರರು ಯಾವಾಗಲೂ 'ವಿಷ್ಣುಪದ' ಎನಿಸಿ ಯಾರ ಸನ್ನಿಧಾನಕ್ಕೆ ಪಾತ್ರವಾದ ಆಗಸದಲ್ಲಿ ಮೆರೆಯುತ್ತಿರುವರೋ,
- ಶ್ರೀದೇವಿ ಯಾರ ಪ್ರಿಯತಮೆ ಆಗಿರುವಳೋ,
- ಅಂತಹ ಶ್ರೇಷ್ಠನಾದ ದ್ವಾರಕೆಗೆ ಒಡೆಯನಾದ ಶ್ರೀಕೃಷ್ಣನನ್ನು ಸುಂದರ ಹಲ್ಲುಗಳಿಂದ ಕೂಡಿದ ರುಗ್ಮಿಣೀದೇವಿ ವರಿಸಿದಳು.

ISBN:978-93-81807-43-9